ಭಾಗ-9

ತತ್ವಪ್ರಕಾಶಿಕಾ

ಸತ್ತರ್ಕದೀಪಾವಳಿ ತತ್ವಪ್ರದೀಪ

# ಭಾವದೀಪ







ಅಧ್ಯಕ್ಷರು :

ಪರಮಪೂಜ್ಯ || ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ|| ರಾಜಾ ಎಸ್. ಗಿರಿ ಆಚಾರ್ಯ
ಮಂತ್ರಾಲಯ.

ಸಂಪಾದನೆ ಮತ್ತು ಅನುವಾದ :
ವಿ|| ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

|| ಶ್ರೀಮನ್ ಮೂಲರಾಮೋ ವಿಜಯತೇ ||　　　　　　|| ಶ್ರೀ ಗುರುರಾಜೋ ವಿಜಯತೇ ||

## ಭಾಗ - ೯

ಶ್ರೀಪದ್ಮನಾಭತೀರ್ಥಮುನಿ ವಿರಚಿತ **ಸತ್ತರ್ಕದೀಪಾವಳಿ**

ಶ್ರೀತ್ರಿವಿಕ್ರಮಪಂಡಿತಾಚಾರ್ಯ ವಿರಚಿತ **ತತ್ವಪ್ರದೀಪ**

ಶ್ರೀಜಯತೀರ್ಥಮುನಿ ವಿರಚಿತ

## ತತ್ವಪ್ರಕಾಶಿಕಾ

# ಭಾವದೀಪ

ಶ್ರೀವೇದವ್ಯಾಸರ ಬ್ರಹ್ಮಸೂತ್ರ, ಶ್ರೀಮಧ್ವಾಚಾರ್ಯರ ಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಟೀಕೆಗಳೊಂದಿಗೆ
ಶ್ರೀಮಂತ್ರಾಲಯಪ್ರಭುಗಳ ಭಾವದೀಪ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

॥

'ಭಾವದೀಪ-ಸಂಪುಟ-9' : ಮಂತ್ರಾಲಯಕ್ಷೇತ್ರದಲ್ಲಿ ದುರ್ಮುಖ ॥ ಮಾರ್ಗಶಿರಮಾಸ ॥ ಕೃಷ್ಣಪಕ್ಷ ದ್ವಿತೀಯಾ (ದಿನಾಂಕ: 15-12-2016) ಶ್ರೀರಾಘವೇಂದ್ರಸ್ವಾಮಿಗಳ ಪವಿತ್ರಕ್ಷೇತ್ರವಾದ ಮಂತ್ರಾಲಯದಲ್ಲಿ ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ಹದಿನೆಂಟು ವಿದ್ಯಾರ್ಥಿಗಳಿಗೆ 25 ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮನ್ನ್ಯಾಯಸುಧಾಗ್ರಂಥದ ಪಾಠ ಮಾಡಿ ಸುಧಾಮಂಗಳ ಮಾಡುವ ಶುಭಕ್ಷಣಗಳಲ್ಲಿ ಈ ಕೃತಿಯನ್ನು ಲೋಕೇಶಾರ್ಪಣೆ ಹಾಗೂ ಲೋಕಾರ್ಪಣೆ ಮಾಡಿದರು.


ಪ್ರಕಾಶನ : ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345
ಆಂಧ್ರಪ್ರದೇಶ.

ಸಂಪಾದನೆ ಮತ್ತು ಅನುವಾದ : ವಿ ॥ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು.
ದೂರವಾಣಿ : 914149120

ಪ್ರಥಮಮುದ್ರಣ : 2016

ಬೆಲೆ : 600 ರೂ

ಪ್ರತಿಗಳು : 1000







ಅಕ್ಷರಜೋಡಣೆ :

ಶ್ರೀ ಬೆಮ್ಮತ್ತಿ ಶ್ರೀನಿವಾಸ
ಶ್ರೀಮತಿ ಎಸ್. ನಾಗಲತಾ

ಮುದ್ರಣ :

ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

## Vol. - 9

**SRI PADMANABHATIRTHAMUNI'S**
**SATTARKADIPAVALI**

**SRIJAYATIRTHAMUNI'S**
**TATVAPRAKAASHIKAA**

**SRI TRIVIKRMAPANDITAACHARYA'S**
**TATVAPRADIPA**

# BHAVADIPA

**Sri Vedavyasa's Brahmasutra,**
**Sri Madhvacharya's Bhashya,**
**Teekas - Sattarkadipawali, Tatvapradipa,**
**Tatvaprakaashikaa**

**Bhavadipa by Sri Mantrayala Prabhu**

**Sanskrit Original Text with Kannada Translation**

**with special debate from many commentaries & overall critisism**

**Published by :**

**Sri Gurusarvabhouma Samshodhana Mandira,**
Jagadguru Srimanmadhvacharya Mula Mahasamsthana,
Sri Raghavendraswamy Mutt, Mantralayam - 518 345 A.P.

'BHAVADIPA' : HH Sri Sri Subhudendra Thirta sripada has submitted this 9th volume to Sri Raghavendraswamiji at Mantralaya.

Publication : Sri Gurusarvabhouma Sanshodhana Mandira, Jagadguru Srimanmadhvacharya Mula Mahasamsthana, Sri Raghavendraswamy mutt, Mantralayam. A.P.

Edited & Translated by : Vidwan Bemmatti Venkateshacharya,

Bangalore. Ph : 9141495120

First Edition : 2016

Price : Rs. 600

Copies : 1000



Type set :

Smt. S. Nagalatha, Bangalore.
Sri Sri Bemmatti Srinivasa

Printed at :

Muktipatha Mudranalaya, Bangalore.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಬ್ರಹ್ಮಸೂತ್ರ ಭಾಷ್ಯ

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ

* * * *

ಅಧ್ಯಕ್ಷರು :

## ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ॥ ರಾಜಾ ಎಸ್. ಗಿರಿಆಚಾರ್ಯ
ಮಂತ್ರಾಲಯ

ಸಂಪಾದನೆ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

॥ Srimanmoola Ramo Vijayate ॥ ॥ Sri Gururajo Vijayate ॥

**Brahmasutra Bhashya**

**Sattrakadipavali Tatvaprakaashikaa**

**Tatvapradipa**

# BHAVADIPA

******

**President:**

**HH Sri Subhudhendratirtha Sripadaru**

**PeeTadhipati of Sri Raghavendraswamy Mutt, Mantralayam.**

**Honorary Editor:**

**Sri Vidwan Raja S. Giri Acharya**

**Mantralayam.**

**Edited & Translated by :**

**Vidwan Bemmatti Venkateshacharya,**

**Bangalore.**

ಒಂಬತ್ತನೆಯ

# ವಾಙ್ಮಯ- ಕುಸುಮಹಾರ

## ಸಮರ್ಪಣೆ



ಶ್ರೀರಾಘವೇಂದ್ರಸ್ವಾಮಿಗಳ ಮಠಾಧೀಶರಾದ

ಪರಮಪೂಜ್ಯ ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು

ಶ್ರೀರಾಘವೇಂದ್ರತೀರ್ಥಶ್ರೀಪಾದರ ಅಂತರ್ಯಾಮಿಗಳಾದ ಶ್ರೀಮನ್ಮಧ್ವಾಚಾರ್ಯರ

ಅಂತರ್ಯಾಮಿಗಳಾದ ಶ್ರೀಮನ್‌ಮೂಲರಾಮಚಂದ್ರದೇವರಿಗೆ ಈ ಕೃತಿಯನ್ನು

ಒಂಬತ್ತನೆಯ ವಾಙ್ಮಯ ಕುಸುಮಹಾರವನ್ನಾಗಿ ಸಮರ್ಪಣೆ ಮಾಡಿದ್ದಾರೆ.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ನಾವು ಮಾಡುತ್ತಿರುವ ಸುಧಾಮಂಗಳ ಮಹೋತ್ಸವದಲ್ಲಿ ಭಾವದೀಪದ ಒಂಬತ್ತನೆಯ ಸಂಪುಟವು ಶ್ರೀರಾಘವೇಂದ್ರಗುರುಸಾರ್ವಭೌಮರ ಅಂತರ್ಯಾಮಿಗಳಿಗೆ ಸಮರ್ಪಣೆ-ಯಾಗುತ್ತಿದೆ. ಇಪತ್ತೈದು ವ್ಯಾಖ್ಯಾನಗಳ ಜೊತೆ ನ್ಯಾಯಸುಧಾಗ್ರಂಥದ ಪಾಠವನ್ನು ಮೂರು ತಂಡದ ವಿದ್ಯಾರ್ಥಿಗಳಿಗೆ ಮಾಡಿ ಅದರ ಮಂಗಳಮಹೋತ್ಸವವನ್ನು ಮಾಡುತ್ತಿದ್ದೇವೆ. ಬ್ರಹ್ಮಸೂತ್ರಭಾಷ್ಯವು ಬ್ರಹ್ಮಸೂತ್ರಗಳಿಗೆ ಹೇಗೆ ವ್ಯಾಖ್ಯಾನವೋ, ಅದರಂತೆ ಅನುವ್ಯಾಖ್ಯಾನ ಗ್ರಂಥವೂ ಕೂಡ ಬ್ರಹ್ಮಸೂತ್ರಗಳ ವ್ಯಾಖ್ಯಾನವೇ ಆಗಿದೆ. ಕೇವಲ ಬ್ರಹ್ಮಸೂತ್ರಭಾಷ್ಯದ ಅಧ್ಯಯನದಿಂದ ಅಥವಾ ಕೇವಲ ಅನುವ್ಯಾಖ್ಯಾನಗ್ರಂಥದ ಅಧ್ಯಯನದಿಂದ ಬ್ರಹ್ಮಸೂತ್ರಗಳ ಸಮಸ್ತ ಅರ್ಥವನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಎರಡೂ ಗ್ರಂಥಗಳನ್ನು ಶ್ರೀಜಯತೀರ್ಥರ ಟೀಕೆಗಳ ಜೊತೆ ಅಧ್ಯಯನ ಮಾಡಿದರೆ ಮಾತ್ರ ಸೂತ್ರಗಳ ನಿಜವಾದ ಅರ್ಥವನ್ನು ತಿಳಿಯಲು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಅನುವ್ಯಾಖ್ಯಾನ ಟೀಕೆಯೆನಿಸಿದ

ಶ್ರೀಮನ್ನ್ಯಾಯಸುಧಾ ಗ್ರಂಥಾಧ್ಯಯನದ ಮಂಗಳದಲ್ಲಿ ಬ್ರಹ್ಮಸೂತ್ರಭಾಷ್ಯದ ಟೀಕೆಯೆನಿಸಿದ ತತ್ವಪ್ರಕಾಶಿಕೆಯ ಬಿಡುಗಡೆಯನ್ನು ನಾವು ಮಾಡುತ್ತಿದ್ದೇವೆ.

ಎರಡನೆಯ ಅಧ್ಯಾಯಕ್ಕೆ ಅವಿರೋಧಾಧ್ಯಾಯ ಎಂದು ಹೆಸರು. ಅದರಲ್ಲಿ ಮೊದಲನೆಯದ್ದು ಯುಕ್ತಿಪಾದ. ಯುಕ್ತಿಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳಿವೆ. ಪ್ರಾರಂಭದ ಮೂರು ಅಧಿಕರಣಗಳ ಅನುವಾದ ಕಾರ್ಯವು ಹಿಂದಿನ ಸಂಪುಟದಲ್ಲಿ ಪ್ರಕಾಶನಗೊಂಡಿದೆ. ಈ ಸಂಪುಟದಲ್ಲಿ ಅಸದಧಿಕರಣದಿಂದ ಪ್ರಾರಂಭವಾಗಿ ಸರ್ವಧರ್ಮೋಪಪತ್ತ್ಯಧಿಕರಣದ ತನಕ ಎಂಟು ಅಧಿಕರಣಗಳು ಸೇರಿವೆ. ಈ ಪಾದದಲ್ಲಿ ಪ್ರಧಾನವಾಗಿ ಯುಕ್ತಿಗಳ ವಿರೋಧವನ್ನು ಪರಿಹರಿಸುವ ಮೂಲಕ ಜಗಜ್ಜನ್ಮಾದಿಕರ್ತೃತ್ವವನ್ನು ಪರಮಾತ್ಮನಲ್ಲಿ ಸಮರ್ಥನೆ ಮಾಡಲಾಗಿದೆ. ಒಟ್ಟು ಮೂರು ಪ್ರಮೇಯಗಳನ್ನು ಈ ಪಾದದಲ್ಲಿ ತಿಳಿಯಬೇಕು. ೧. ಆಗಮಪ್ರಾಮಾಣ್ಯ, ೨. ಜೀವಕರ್ತೃತ್ವ, ೩. ಭಗವಂತನಲ್ಲಿ ವೈಷಮ್ಯಾದಿ-ದೋಷಗಳ ಪರಿಹಾರ. ಪ್ರಾರಂಭದ ಅಧಿಕರಣಗಳಲ್ಲಿ ಆಗಮಪ್ರಾಮಾಣ್ಯವನ್ನು ಸಮರ್ಥನೆ ಮಾಡಿದ್ದಾರೆ. ಮಧ್ಯದಲ್ಲಿ ಜೀವಕರ್ತೃತ್ವದ ಬಗ್ಗೆ ವಿಮರ್ಶೆ ಮಾಡಿದ್ದಾರೆ. ಕೊನೆಯಲ್ಲಿ ಭಗವಂತನಿಗೆ ವೈಷಮ್ಯಾದಿದೋಷಗಳಿಲ್ಲ ಎಂಬುದನ್ನು ಸಮರ್ಥನೆ ಮಾಡಿದ್ದಾರೆ.

ಜೀವನಿಗೆ ಕರ್ತೃತ್ವ ಇದೆಯೋ, ಇಲ್ಲವೋ ? ಎಂಬ ಪ್ರತಿಯೊಬ್ಬರ ಪ್ರಶ್ನೆಗೂ ಈ ಪಾದದಲ್ಲಿ ಉತ್ತರವಿದೆ. ಇತರವ್ಯಪದೇಶಾಧಿಕರಣದಲ್ಲಿ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಸಮರ್ಥನೆ ಮಾಡಿದ್ದಾರೆ. ಇದಕ್ಕೆ ಒಟ್ಟು ಎರಡು ಪ್ರಧಾನಕಾರಣಗಳಿವೆ. ೧. ಹಿತಾಕರಣಾದಿ ದೋಷಪ್ರಸಕ್ತಿ, ೨. ಜೀವನಿಗೆ ಅಂಶಗಳಿಲ್ಲದೇ ಇರುವುದು. ಪ್ರತಿಯೊಬ್ಬರೂ ಕೂಡ ತಮಗೆ ಯಾವುದು ಹಿತವೋ, ಅದರಲ್ಲೇ ತೊಡಗಬೇಕು. ಅಹಿತವಾದದ್ದರಲ್ಲಿ ಪ್ರವೃತ್ತಿ ಮಾಡಬಾರದು. ಆದರೆ ಅನೇಕ ಸಂದರ್ಭಗಳಲ್ಲಿ ಯಾವುದನ್ನು ಮಾಡಬಾರದೋ, ಅದನ್ನೇ ಮಾಡಿ, ಸಂಕಷ್ಟಕ್ಕೆ ತುತ್ತಾಗುತ್ತಿದ್ದಾರೆ. ಒಂದುವೇಳೆ ಜೀವನೇ ಕರ್ತೃವಾಗಿದ್ದಲ್ಲಿ ಇಂಥ ಪರಿಸ್ಥಿತಿ ಏಕೆ ಬರುತ್ತಿತ್ತು? ಪ್ರತಿಯೊಬ್ಬರಿಗೂ ಅನಿಷ್ಟವಾದ ರೋಗರುಜಿನಗಳು, ಮರಣಾದಿಗಳು ಏಕೆ ಬರುತ್ತಿದ್ದವು ? ಬೇಡವಾದ ಮೇಲೆ ಅದನ್ನು ತಡೆಯುವ ಶಕ್ತಿ ಇರಬೇಕಲ್ಲವೇ ? ಇದರಿಂದ ನಮ್ಮ ನಿಯಂತ್ರಣವನ್ನು ಮೀರಿ ಬೇರೆಯವರ ನಿಯಂತ್ರಣದ ಅಧೀನವಾಗಿ ನಮ್ಮ ಪ್ರವೃತ್ತಿಗಳು

ಉಂಟಾಗುತ್ತವೆ ಎಂಬುದು ಮನದಟ್ಟಾಗುತ್ತದೆ. ಇದರಿಂದ ಜೀವನಿಗೆ ಕರ್ತೃತ್ವವಿಲ್ಲವೆಂದು ನಿರ್ಣಯವಾಗುತ್ತದೆ.

ಮತ್ತು ಜೀವನು ಕರ್ತೃವಾದರೆ ಪ್ರತಿಯೊಂದು ಕ್ರಿಯೆಯಲ್ಲೂ ತನ್ನನ್ನು ಪೂರ್ಣವಾಗಿ ತೊಡಗಿಸಿಕೊಳ್ಳಬೇಕು. ಅಥವಾ ಭಾಗಶಃ ತೊಡಗಿಸಿಕೊಳ್ಳಬೇಕು. ಸಣ್ಣ ಕೆಲಸವನ್ನು ಮಾಡುವಾಗ ಪೂರ್ಣವಾಗಿ ತೊಡಗಿಸಿಕೊಳ್ಳಲು ಸಾಧ್ಯವಿಲ್ಲ. ಒಂದು ಹುಲ್ಲುಕಡ್ಡಿಯನ್ನು ಎತ್ತುವಾಗ ತನ್ನಲ್ಲಿರುವ ಪೂರ್ಣವಾದ ಸಾಮರ್ಥ್ಯವನ್ನು ಉಪಯೋಗಿಸುವುದು ಅನುಭವಕ್ಕೆ ವಿರುದ್ಧವಾದ ವಿಷಯ. ತನ್ನ ಸಾಮರ್ಥ್ಯದಲ್ಲಿ ಏಕದೇಶವನ್ನಷ್ಟೇ ಉಪಯೋಗಿಸಿ ಹುಲ್ಲುಕಡ್ಡಿಯನ್ನು ಎತ್ತುತ್ತಾನೆಂದು ಹೇಳಲೂ ಕೂಡ ಸಾಧ್ಯವಿಲ್ಲ. ಏಕೆಂದರೆ ಆ ಸಾಮರ್ಥ್ಯ ಬೇರೆಯಲ್ಲ. ಜೀವಸ್ವರೂಪ ಬೇರೆಯಲ್ಲ. ಜೀವಸ್ವರೂಪ ಅಖಂಡವಾದ ವಸ್ತುವಾಗಿರು-ವುದರಿಂದ ಏಕದೇಶವು ಹೇಗಿಲ್ಲವೋ, ಅದರಂತೆ ಸಾಮರ್ಥ್ಯದಲ್ಲೂ ಕೂಡ ಏಕದೇಶವನ್ನು ಹೇಳಲಾಗದು.

ಈ ಎರಡು ಕಾರಣಗಳಿಂದ ಜೀವನಿಗೆ ಕರ್ತೃತ್ವವಿಲ್ಲವಂದು ಸೂತ್ರಕಾರರು ನಿಖರವಾಗಿ ಹೇಳುತ್ತಾರೆ.

ಕೆಲವೊಮ್ಮೆ ನಾವು ಅಂದುಕೊಂಡ ಕೆಲಸವನ್ನು ಮಾಡಿ ಮುಗಿಸುತ್ತೇವೆ. ಇದರಿಂದ ಕರ್ತೃತ್ವವಿದೆ ಎಂದು ತಿಳಿಯುತ್ತದಲ್ಲವೇ? ಈ ಪ್ರಶ್ನೆಗೆ 'ಕ್ಷೀರವದ್ಧಿ' ಎಂಬುದರಿಂದ ಸೂತ್ರಕಾರರು ಉತ್ತರಿಸಿದ್ದಾರೆ. ಹಸು ಹಾಲು ಕೊಡುತ್ತದೆ. ಹಾಲಿನ ತಯಾರಿಕೆಯಲ್ಲಿ ಹಸುವಿನ ಪಾತ್ರವಿಲ್ಲ. ಅದು ಒಳಗಿರುವ ಪ್ರಾಣವಾಯುವಿನ ಕಾರ್ಯವಾಗಿದೆ. ಇದರಂತೆ ನಾವು ಅಂದುಕೊಂಡ ಕೆಲಸವನ್ನು ನಾವೇ ಮಾಡಿಮುಗಿಸಿದಂತೆ ಕಾಣಿಸುತ್ತದೆ. ಆದರೆ ಪ್ರಾರಂಭ ಮಾಡಿದ್ದು, ಅಥವಾ ಮುಗಿಸಿದ್ದು ನಾವಲ್ಲ. ಅಂತರ್ಯಾಮಿಯಾದ ಭಗವಂತನೇ ಆಗಿದ್ದಾನೆ. ಆದ್ದರಿಂದ ಹಾಲಿನ ತಯಾರಿಕೆಯಲ್ಲಿ ಹಸುವಿನ ಪಾತ್ರ ಹೇಗಿಲ್ಲವೋ, ನಾವು ಮಾಡುವ ಕೆಲಸದಲ್ಲೂ ನಮ್ಮ ಪಾತ್ರವಿಲ್ಲ, ಜೀವನಿಗೆ ಕರ್ತೃತ್ವವಿಲ್ಲ.

ಹಾಗಾದರೆ ಇದು ಅದ್ವೈತ ಸಿದ್ಧಾಂತವಾಯಿತು. ಜೀವನಿಗೆ ಕರ್ತೃತ್ವವೇ ಇಲ್ಲ. ಪರಮಾತ್ಮನಿಗಷ್ಟೇ ಕರ್ತೃತ್ವವಿದೆ ಎಂದರೆ ಜೀವಬ್ರಹ್ಮೈಕ್ಯವನ್ನು ಹೇಳಿದಂತಾಯಿತಲ್ಲವೇ? ಎಂಬ

ಪ್ರಶ್ನೆಗೆ 'ನ ಚ ಅನ್ಯತ್‌ಕಲ್ಪ್ಯಮ್' ಎಂಬುದರಿಂದ ಉತ್ತರಿಸಿದ್ದಾರೆ. ಯಾವುದು ಯುಕ್ತಿವಿರುದ್ಧ-ವಾಗಿದೆಯೋ, ಅದು ಪ್ರಮಾಣಸಿದ್ಧವಾಗಿದ್ದರೆ ಪರಮಾತ್ಮನ ಶಕ್ತಿವಿಶೇಷದಿಂದಲೇ ಅದು ಆಗಿದೆ ಎಂಬುದಾಗಿ ಒಪ್ಪಬೇಕು. ಜೀವಕರ್ತೃತ್ವವು ಯುಕ್ತಿವಿರುದ್ಧವಾಗಿದೆ. ಆದರೆ ಅನುಭವ-ಪ್ರಮಾಣದಿಂದ ಸಿದ್ಧವಾಗಿದೆ. ಆದ್ದರಿಂದ ಇದನ್ನು ಪರಮಾತ್ಮನ ಅಚಿಂತ್ಯಾದ್ಭುತಶಕ್ತಿಯಿಂದಲೇ ಕೂಡಿಸಬೇಕು. ಎರಡನೆಯ ಅಧ್ಯಾಯದ ಮೂರನೆಯ ಪಾದದ ಕರ್ತ್ರಧಿಕರಣವೂ ಕೂಡ ಈ ದೃಷ್ಟಿಯಿಂದಲೇ ಜೀವಕರ್ತೃತ್ವವನ್ನು ಸಮರ್ಥನೆ ಮಾಡಿದೆ. ನಾವು ತುಂಬಾ ದೊಡ್ಡ ಜ್ಞಾನಿಗಳಾಗಬೇಕೆಂದು ಅಪೇಕ್ಷಿಸುತ್ತೇವೆ. ಆದರೆ ಅಂಥ ಜ್ಞಾನಪಡೆದುಕೊಳ್ಳಲು ನಮಗೆ ಸಾಧ್ಯವಾಗುತ್ತಿಲ್ಲ. ಇದರಿಂದ ಜ್ಞಾನಸ್ವಾತಂತ್ರ್ಯವಿಲ್ಲವೆಂದು ಅನುಭವಸಿದ್ಧವಾಗುತ್ತದೆ. ಇದರಂತೆ ಕ್ರಿಯಾಸ್ವಾತಂತ್ರ್ಯವೂ ಕೂಡ ನಮಗಿಲ್ಲ ಎಂದು ತಿಳಿಯಬೇಕು. ಹಾಗಾದರೆ ವಿಧಿನಿಷೇಧಗಳೆಲ್ಲವೂ ಕೂಡ ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಅಸ್ವತಂತ್ರವಾದ ಕರ್ತೃತ್ವಶಕ್ತಿ ಜೀವನಲ್ಲಿರುವುದರಿಂದ ವಿಧಿನಿಷೇಧಗಳು ಸಾರ್ಥಕವಾಗುತ್ತವೆ. ಹೀಗೆ ಜೀವನಿಗೆ ಪರಮಾತ್ಮನ ಅಧೀನವಾದ ಕರ್ತೃತ್ವ ಇದೆಯೇ ಹೊರತು, ಸ್ವತಂತ್ರವಾದ ಕರ್ತೃತ್ವವಿಲ್ಲ ಎಂಬ ವಿಷಯವನ್ನು ಈ ಪಾದದಲ್ಲಿ ಸಮರ್ಥನೆ ಮಾಡಿದ್ದಾರೆ. ಹೀಗೆ ಅನೇಕ ಪ್ರಮೇಯಗಳಿಂದ ಈ ಪಾದವು ತುಂಬಿದೆ.

ಸತ್ತರ್ಕದೀಪಾವಳಿ, ತತ್ವಪ್ರದೀಪ ಹಾಗೂ ತತ್ವಪ್ರಕಾಶಿಕೆ ಈ ಮೂರು ಟೀಕೆಗಳಿಂದ ಸಹಿತವಾಗಿ ಬ್ರಹ್ಮಸೂತ್ರಭಾಷ್ಯವನ್ನು ಸರಿಯಾಗಿ ಅಧ್ಯಯನ ಮಾಡಬೇಕು. ಆಗ ಮಾತ್ರ ಈ ಯುಕ್ತಿಪಾದದ ಪರಿಪೂರ್ಣವಾದ ಪರಿಚಯ ನಮಗಾಗುತ್ತದೆ. ಜೊತೆಯಲ್ಲಿ ತತ್ವಪ್ರಕಾಶಿಕೆಯ ಸಂಪೂರ್ಣ ಅಭಿಪ್ರಾಯವನ್ನು ಅರ್ಥಮಾಡಿಕೊಳ್ಳಲು ಗುರುಸಾರ್ವಭೌಮರು ರಚನೆ ಮಾಡಿದ ಭಾವದೀಪಗ್ರಂಥವನ್ನು ಅಧ್ಯಯನ ಮಾಡಲೇ ಬೇಕು. ಈ ದೃಷ್ಟಿಯಿಂದ ಎರಡನೆಯ ಅಧ್ಯಾಯದ ಯುಕ್ತಿಪಾದವನ್ನು ಈ ಸಂಪುಟದಲ್ಲಿ ಅನುವಾದ ಮಾಡಲಾಗಿದೆ.

ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರು ಈ ಯುಕ್ತಿಪಾದದ ಅನುವಾದದ ಜೊತೆ ಈಗ ಶ್ರೀಮನ್ನ್ಯಾಯಸುಧಾಗ್ರಂಥದ ಪರಿಮಳವನ್ನೂ ಕೂಡ ಅನುವಾದ ಮಾಡುತ್ತಿದ್ದಾರೆ. ಒಂಬತ್ತನೆಯ ಸಂಪುಟದ ಪ್ರಕಾಶನಗೊಳ್ಳುವ ಸಮಯದಲ್ಲಿ ಪರಿಮಳಗ್ರಂಥದ ಪ್ರಕಾಶನವೂ ಕೂಡ ಜೊತೆಯಲ್ಲೇ ನಡೆಯುತ್ತಿದೆ. ಹೀಗೆ ಭಾವದೀಪದ ಜೊತೆ ಪರಿಮಳಗ್ರಂಥವನ್ನೂ ಕೂಡ ಅಮೂಲಾಗ್ರವಾಗಿ ಅನುವಾದ ಮಾಡಬೇಕು. ಇತರ ಟಿಪ್ಪಣಿಗಳಲ್ಲಿರುವ ವಿಶೇಷವಿಚಾರಗಳನ್ನು

ಅವಶ್ಯವಾಗಿ ಗಮನಕ್ಕೆ ತಂದು ಅನುವಾದ ಮಾಡಬೇಕು. ಇಂಥ ಶಕ್ತಿ ಶ್ರೀಹರಿವಾಯುಗುರುಗಳು ಅವರಿಗೆ ನೀಡಿ ಮತ್ತಷ್ಟು ಜ್ಞಾನಕಾರ್ಯವನ್ನು ನಡೆಸಲಿ ಎಂದು ಅಪೇಕ್ಷಿಸುತ್ತೇವೆ. ಹಾಗೂ ಈ ಸಂಪುಟಕ್ಕೆ ಶ್ರಮವಹಿಸಿದ ಎಲ್ಲ ಗುರುರಾಯರ ಭಕ್ತರಿಗೂ ಹಾಗೂ ಅನುವಾದಕರಾದ ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರಿಗೂ ಶ್ರೀಮನ್ ಮೂಲರಘುಪತಿ ರಾಮಚಂದ್ರದೇವರು ಹಾಗೂ ಹರಿವಾಯುಗುರುಗಳು ವಿಶೇಷ ಅನುಗ್ರಹವನ್ನು ಮಾಡಿ ಇನ್ನು ಹೆಚ್ಚಿನ ಅನುವಾದ ಕಾರ್ಯದ ಸಾಮರ್ಥ್ಯವನ್ನು ನೀಡಲಿ ಎಂದು ಪ್ರಾರ್ಥಿಸುತ್ತೇವೆ.

ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ -
ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್‌ಮೂಲರಘುಪತಿ -
ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳು.

# Brahmasutra Bhashya With Select Commentaries including Bhavadipa of Sri Raghavendra Tirtha

*By*

**Vachaspati Dr. V. R. Panchamukhi**

At the outset, I would like to express our sincere respectful danda pranams, to His Holiness Sri Subudhendra Tirtha for his encouragement to publish this Series of Volumes on Sutra Bjhashya, Tatvaprakasika, and other commentaries with Focus on Bhavadipa, with Kannada Translations.

We would also express our gratitude to Mahamahopadhyaya, Pandita Kesari, Vidwan Sri Raja .S. Giri Acharya, for his guidance, support and encouragement in the finalisation of the different Volumes.

The present Volume is concerned with the Adhikaranas of the First Pada of the Second Adhyaya.

As done in the other Volumes, Vidwan Venkateshacharya has provided translations, with critical notes and discussions, of other commentaries on Sutra Bhashya, such as Sattarkadipavali, Tatva prakasika, Tatvapradipa, along with the Translation of Bhavadipa of Sri Raghavendra Swamigalu. He has also given the account of Tantradipika of Sri Raghavendra Tirtha, whenever necessary.

The present Volume - Volume No. 9 in the series of Volumes on Sri Madhva Bhashya and the Commentaries/Tippanis, thereupon, consists of the Kannada Translation and Notes, pertaining to the following Nine Adhikaranas:

1. *Asadadhikarna (the Fourth Adhikarana of the First Pada of the Second Adhyaya);*
2. *Bhoktradhikarna, (the Fifth Adhikarana of the First Pada of the Second Adhyaya);*
3. *Arambhanadhikarana, (the Sixth Adhikarana of the First Pada of the Second Adhyaya)*
4. *Itaravyapadeshadikarna (theSeventhAdhikaranaoftheFirstPadaofthe Second Adhyaya) ;*
5. *Shrutestu shabhamulatwadhikarana (the Eighth Adhikarana of the First Pada of the Second Adhyaya) ;*
6. *Na prayojanahikarana (the Nineth Adhikarana of the First Pada of the Second Adhyaya);*
7. *Vyshamyanaigruhnyadhikarana (the Tenth Adhikarana of the First Pada of the Second Adhyaya)*
8. *Sarvadharmopapatyadhikarna (the Eleventh Adhikarana of the First Pada of the Second Adhyaya).*

Thus, this Ninth Volume deals with, eight Adhikaranas, belonging to the First Pada of the Second Adhyaya.

Vidwan Sri Bemmatti Venkateshacharya, has covered the detailed explanations given in all the commentaries stated above, in the sequential manner. He has very competently presented the main arguments of Pur-

vapaksha and Siddhanta, and has upheld the superiority of Siddhanta of Madhvacharya, as the final interpretation.

Sri Venkateshacharya, presents, in a succinct manner, the summaries of arguments, developed in the different Adhikaranas listed above.

In order to facilitate the understanding of the main themes dealt with in the different Brahmasutras, covered in this Volume, I have ventured to present brief English Translations of the Brahmasutras. These translations are based upon one of my earlier Books, published by Rashtriya Sanskrita Vidyapeetha, (deemed University) Tirupati.

**Asadadhikarna**

**।। असदिति चेन्न प्रतिषेधमात्रत्वात् ।।**

We cannot argue that non-existence-Asat (the status prior to existence) is the cause for creation and hence it is the the Master, because non-existence is essentially a Negative entity and it signifies negation and as such it cannot be the cause of creation.

**।। अपीतौ तद्वत्प्रसङ्गादसमञ्जसम् ।।**

If we accept the thesis that Non-existence-Asat-is the cause of all creation then it would mean that at the time of deluge everything will have to assume the status of Negation and hence this thesis cannot be regarded as appropriate. It is generally believed that even if the effect is destroyed, its Upadana Karana has to remain intact and hence everything as non-existent is an incredible situation.

**।। न तु दृष्टान्तभावात् ।।**

We cannot argue that the thesis of total non-existence after deluge, is not undesirable, because we have deductive logic to prove that something

should exist after destruction. Creation is dependent on some-prior existence because it is creation and the example is the creation of pot with the use of mud which exists prior to the creation of pot. Similarly destruction is dependent on something remaining as residue because it is destruction like that of a pot.

।। स्वपक्षदोषाच्च ।।

Further, the thesis that there is non-existence after destruction is subject to flaws because we do not have any example to corroborate it. There is no evidence available either from visible perception (Pratyaksha) or from the Srutis.

।। तर्काप्रतिष्ठानादप्यन्यथानुमेयमिति चेदेवमप्यनिर्मोक्षप्रसङ्गः ।।

In the previous two Sutras, deductive logic has been forcefully used in establishing the thesis that Non-existence cannot be the cause of creation and that some existing entity should be the cause of creation. However, one may argue that since deductive logic is highly volatile and it cannot be confirmative. We could perhaps develop deductive reasoning to prove that non-existence is indeed the cause of creation and existence is not the cause of creation. This reasoning for rejecting Tarks as a basis of knowledge is not correct. If Tarka were to be totally ruled out then even the existence of Moksha may not be proved and there may not be Moksha at all. Hence Tarka supported by Sruit should be accepted as Pramana.

।। एतेन शिष्टा अपरिग्रहा अपि व्याख्याताः ।।

Thus we note that there is the absence of any corroborative example (Drstanta) in regard to the thesis the Jiva or Non-existence (Asat) could be the cause of creation. On the contrary, there are examples to prove that Sat is the cause of all creation. On the basis of a similar reasoning, all the remaining theses-considering Jiva, Pradhana, Void (Sunya), Time or

Nautre (Swabhava) as the cause of creation, which do not have the corroboration with the Srutis -become discarbed.

**Bhoktradhikarna**

।। भोक्त्रापत्तेरविभागश्चेत्स्याल्लोकवत् ।।

It appears that in some parts of Sruti, it is stated that in Moksha, Jiva becomes one with Brahma and hence there is not distinctions between Jiva and Brahma. We may argue that since Jiva has very limited capabilities and hence Brahma, indistinguished from him, cannot be regarded as the cause of the Universe. All this thesis is incorrect because the statement of 'becoming one' should be interpreted to mean 'residing at one place', 'having similar views'. In common parlance in the world, we often say that they have all become one when we mean that those who were earlier residing at different places have come to a single place or when we mean that those who were opposed in their views; have now become united in their views. It is in the same manner, the statement of oneness in Mukti should be interpreted.

**Arambhanadhikarna**

।। तदनन्यत्वमारम्भणशब्दादिभ्यः ।।

Lord Brahman is an independent cause of creation (Ananya) without desiring the support of any other entity because there are many statements in the Sruti which clearly doubt the availability of any other means or resort (Adhisthana) in the process of creation by Lord Brahma and which also clearly state that Brahma is not sub-servient to anybody else and that he himself grants the causatory capabilities to all other entities.

।। भावे चोपलब्धेः ।।

If there was any independent cause other than Brahma then it should have perceived by different Pramanas. However, it is not perceived either

by visual perception (Pratyaksha) or Sruti and the applicability of an independent deductive logic is discarded in thin context.

॥ सत्त्वाच्चावरस्य ॥

On the contrary, there is evidence to believe that there are certain causal instruments wihch are sub-servient to the independent Brahma.

॥ असद्व्यपदेशान्नेति चेन्न धर्मान्तरेण वाक्यशेषात् ॥

We cannot argue that in some Srutis non-existence of any instrumental entity has been stated. However, the statement of enity has been stated. However, the statement of non-existence is in relation to certain special attributes such as independence, manifestation, transformation etc. Such an interpretation is obvious because in the same Sruti later it is stated that darkness existed and Prakrti existed. Further, in the latter part of the same Sruti there is a statement negating independence to Prakrti existing prior to the creation.

॥ युक्तेः शब्दान्तराच्च ॥

There is a question here as to why Brahma who is totally independent, should require the use of any other means. The answer to this is that Brahma uses these means of creation only in a casual way and as a sport and not out of any special necessity for the same. It is almost like an able legged person using a walking stick just for his amusement. This indicated by the clear statements that existed in some part of the Sruti.

॥ पटवच्च ॥

The process of creation is simliar to that of cloth. Just as in the latter, there is the use of yarn as a means of producing cloth here also there is the use of the material which is different from the creator.

।। यथा प्राणादिः ।।

The material of production is not independent just as the Prana and the body which have the inner pervasion of Brahma in them and are not independent.

**Itaravyapadeshadhikarna**

।। इतरव्यपदेशाद्धिताकरणादिदोषप्रसक्तिः ।।

It appears that in some part of the Sruti, it is stated that Jiva is an independent cause of creation. This is incorrect because if Jiva was an independent cause he would not have indulged in action which are against his own interest and also in such actions as would cause him damage. It is observed that Jiva indulges himself in many irrational activities as he is not Swatantra.

।। अधिकं तु भेदनिर्देशात् ।।

On the other hand, Brahma is described to possess many attributes which make hims superior to Jiva.

।। अश्मादिवच्च तदनुपपत्तिः ।।

Even though Jiva is a Chetana in regard to his ability to act independently, he is like an inanimate object such as stone, pillar etc. We have to accept that he is subservient to Brahma.

।। उपसंहारदर्शनान्नेति चेन्न क्षीरवद्धि ।।

We cannot argue that Jiva can function on his own since he is often found to complete the work that he has begun. We should recognise that his ability to complete the work begun earlier is also bestowed on him by Brahma himself just as the milk found in the cows is not their own creation but is the job of Mukhya Prana.

॥ देवादिवदपि लोके ॥

Brahma the basic cause of creation can remain unavailable and invisible. Brahma has this special capability in the same manner as the Gods. In our worldly experiences, we find that even the devils and the spirits have the special prowess of being invisible.

॥ कृत्स्नप्रसक्तिर्निरवयवत्वशब्दकोपो वा ॥

If Jiva were to be an independent performer, either he may put his entire lot even on a small job like bringing a blade of grass or he may use only part of his full effort. The former is ridiculous and it is not seen so in reality. The latter invokes contradiction and anger with the Sruti which states that Jiva is eternal and he does not have divisibility in himself. Thus Jiva cannot be an independent performer.

**Shrutestu Shabdhamulatwadhikarna**

॥ श्रुतेस्तु शब्दमूलत्वात् ॥

The thesis that Brahma is the independent cause of all creation does not suffer the same anamolies as in the case of the thesis that Jivas is the independent cause of creation. Because in the Sruti it is clearly stated that Brahma could possess, at the same time, different attributes which apparently appear to be mutually contradictory. Further, the features of Brahma can be understood only through Vedas and not by deductive logic.

॥ आत्मनि चैवं विचित्राश्च हि ॥

It is only in Brahma, that such peculiar capabilities exist that could eliminate the contradictions stated above. This is well established by the various statements in the Sruti.

।। स्वपक्षदोषाच्च ।।

In the case of Jiva, the contradictions derived from deductive logic are not eliminated from the words of Sruti because no such attributes are described for Jiva as are described for Brahma.

।। सर्वोपेता च तद्दर्शनात् ।।

Brahma is endowed with very comprehensive special prowess valid at all times and covering all subjects. This is known from the relevant Srutis.

।। विकरणत्वान्नेति चेत्तदुक्तम् ।।

Brahma is described in the Srutis as the one without the organs like eyes, ears etc. We cannot argue that in view of this, Brahma cannot be the cuase of creation. The negation of the organs like eyes and ears is with reference to the Prakrta organs similar to those of humans beings. Brahma does not possess such Prakrta organs and this is clearly stated in part of Sruti.

**Na proyonadhikarna**

।। न प्रयोजनवत्त्वात् ।।

The activities like creation etc. are not meant for any selfish motive of Brahma because all objectives are always already realised by him. These activities are meant for the benefit of the others.

।। लोकवत्तु लीलाकैवल्यम् ।।

The activities of creation etc. are simply meant as sports. They resemble the actions like dancing and singing by an intoxicated person as found in the world. Such actions have neither any reason nor purpose

for the intoxicated person. The creation-activities of Brahma are just the functions of his nature (Swabhava). They may, of course, bring him some exuberance of pleasure but that is not his purpose.

**Vyshamyanaighrunyadhikarna**

।। वैषम्यनैर्घृण्ये न सापेक्षत्वात्तथा हि दर्शयति ।।

Brahma does not have the weaknesses of partiality and being unscrupulous because he gives the fruits to the Jiva as per the latter's deeds. For this, there is corroborative evidence of the Srutis.

।। न कर्माविभागादिति चेन्नानादित्वात् ।।

One may put forth the arguments that since Karma-individual's deeds-belongs to the group of entities that are subservient to Brahma (Aswatantra), it cannot independently be the cause of all fruits. But this is incorrect because Karmas are eternal not having any beginning, and hence the chain of the Karmas-one leading to the other would be responsible for the fruits and thus Brahma is free from the blemishes of partiality and ruthlessness.

।। उपपद्यते चाप्युपलभ्यते च ।।

Even though Brahma awards the fruits by resorting to the individual's Karmas, this does not adversely affect his attribute of being Swatantra. This is so because the eternal Karmas are also subservient to thim. They always exist as per his desire. In view of the eternality of the Karmas this does not imply that Brahma has the blemishes of partiality and ruthlessness. Srutis have clearly stated so.

**Sarvadharmopapatyadhikarna**

।। सर्वधर्मोपपत्तेश्च ।।

Thus, it is justified to assert that Brahma is endowed with all the

good attributes (Gunas) and he is free from all blemishes (Doshas). In this regard the conflict with deductive logic can prove to be contrary.

The Jijnasus are indeed grateful to Vidwan Sri Bemmatti Venkateshacharya, for preparing such an extremely useful Volume on Brahmasutra Bhashya, covering several Commentaries and providing good critical comparative discussions.

We pray the the scholar author continues his pains-taking exercise to complete all the Four Adhyayas of Brahmasutras, in a similar manner with useful details.

**Vachaspati Dr. V. R. Panchamukhi**
Chancellor, Sri Gurusarvabhouma Sanskrit Vidyapeeth and
Executive Director,
Sri Gurusarvabhouma Samsodhan Mandir
Mantralayam

# ಮುನ್ನುಡಿ

ಒಂದೆಡೆ ಶ್ರೀರಾಮದೇವರಿಗೆ ಎಷ್ಟೋ ಕೋಟಿಗಳ ಬೆಲೆ ಬಾಳುವ ಸುವರ್ಣಮಂಟಪದ ಸಮರ್ಪಣೆ. ಮತ್ತೊಂದೆಡೆ ಇಪ್ಪತ್ತೈದು ವ್ಯಾಖ್ಯಾನಗಳಿಂದ ಸಹಿತವಾದ ನ್ಯಾಯಸುಧಾಮಂಗಳದ ಮಹೋತ್ಸವ, ಮಗದೊಂದೆಡೆ ಭಾವದೀಪಕೃತಿಯ ಒಂಬತ್ತನೆಯ ಸಂಪುಟದ ಪ್ರಕಾಶನ. ಇನ್ನೊಂದೆಡೆ ಇಪ್ಪತ್ತೈದು ಟಿಪ್ಪಣಿಗಳ ಸಾರಭಾಗದಿಂದ ಕೂಡಿದ ಪರಿಮಳಗ್ರಂಥದ ಆಮೂಲಾಗ್ರ ಕನ್ನಡಾನುವಾದದ ಪ್ರಕಾಶನ. ಶ್ರೀಪಾದಂಗಳವರ ಈ ವಿಭೂತಿಕಾರ್ಯಗಳು ಇಷ್ಟೇ ಅಲ್ಲ. ಇವುಗಳು ಕೇವಲ ಒಂದು ಮುಖ. ಇನ್ನು ಹಲವಾರು ಮುಖಗಳಿಂದ ರಾಯರ ಸೇವೆಯಲ್ಲಿಯೇ ತೊಡಗಿದ್ದಾರೆ. ಅದರಲ್ಲೂ ವಿಶೇಷವಾಗಿ ನಿರಂತರ ಜ್ಞಾನಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತತ್ವಪ್ರಚಾರದ ಮೂಲಕ ಸಮಾಜದಲ್ಲಿ ಜ್ಞಾನಸಂದೇಶವನ್ನು ನಿರಂತರ ನೀಡುತ್ತಿದ್ದಾರೆ.

ಈ ಸಂಪುಟದಲ್ಲಿ ಒಂದು ವೈಶಿಷ್ಟ್ಯವಿದೆ. ಪ್ರತಿಯೊಂದು ಅಧಿಕರಣಗಳಲ್ಲೂ ಭಾವದೀಪದ- ವೈಶಿಷ್ಟ್ಯವನ್ನು ಗುರುತಿಸಲಾಗಿದೆ. ಪರಮಪೂಜ್ಯ ಶ್ರೀಪಾದರ ಆಜ್ಞೆಯಂತೆ ಈ ಬೆಳವಣಿಗೆ ಪ್ರಾರಂಭವಾಗಿದೆ. ಇದರಂತೆ ಮತ್ತಷ್ಟು ಉತ್ತಮ ಮಾರ್ಗದರ್ಶನಗಳನ್ನು ನೀಡಿ ಶ್ರೀಪಾದರು ನಮಗೆ ಅನುಗ್ರಹ ಮಾಡಬೇಕು. ಏತನ್ಮೂಲಕ ಜ್ಞಾನಪಿಪಾಸುಗಳಿಗೆ ಜ್ಞಾನದಾನವನ್ನು ಮಾಡಿ ಆಶೀರ್ವದಿಸಬೇಕೆಂದು ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಣೆ ಮಾಡುವ ಮೂಲಕ ಶ್ರೀಪಾದಂಗಳವರಲ್ಲಿ ಪ್ರಾರ್ಥಿಸುತ್ತೇನೆ.

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಎರಡನೆಯ ಅಧ್ಯಾಯದ ಪ್ರಥಮಪಾದದಲ್ಲಿ ಬರುವ ವಿಚಾರವು ಈ ಸಂಪುಟದಲ್ಲಿ ಅಡಗಿದೆ. ಎರಡನೆಯ ಅಧ್ಯಾಯಕ್ಕೆ ಅವಿರೋಧಾಧ್ಯಾಯ ಎಂದು ಹೆಸರು. ಈ ಅವಿರೋಧಾಧ್ಯಾಯದ ಮೊದಲನೆಯ ಪಾದಕ್ಕೆ 'ಯುಕ್ತಿಪಾದ' ಎಂದು ಹೆಸರು.

ಅದ್ವೈತಮತದ ಪ್ರಕಾರ ಈ ಪಾದದಲ್ಲಿ ಒಟ್ಟು ಹದಿಮೂರು ಅಧಿಕರಣಗಳಿವೆ. ಮೂವತ್ತೇಳು ಸೂತ್ರಗಳಿವೆ. ಹಾಗೂ ಅವರ ಪ್ರಕಾರ ಅಧಿಕರಣಗಳ ಹೆಸರುಗಳಲ್ಲೂ ಕೆಲವೆಡೆ ವ್ಯತ್ಯಾಸವಿದೆ. ೧. ಸ್ಮೃತ್ಯಧಿಕರಣ, ೨. ಯೋಗಪ್ರತ್ಯುಕ್ತ್ಯಧಿಕರಣ, ೩. ವಿಲಕ್ಷಣತ್ವಾಧಿಕರಣ, ೪. ಶಿಷ್ಟಾಪರಿಗ್ರಹಾಧಿಕರಣ, ೫. ಭೋಕ್ತ್ರಾಪತ್ತ್ಯಧಿಕರಣ, ೬. ಆರಂಭಣಾಧಿಕರಣ, ೭. ಇತರವ್ಯಪದೇಶಾಧಿಕರಣ, ೮. ಉಪಸಂಹಾರದರ್ಶನಾಧಿಕರಣ, ೯. ಕೃತ್ಸ್ನಪ್ರಸಕ್ತ್ಯಧಿಕರಣ, ೧೦. ಸರ್ವೋಪೇತಾಧಿಕರಣ, ೧೧. ಪ್ರಯೋಜನವತ್ತ್ವಾಧಿಕರಣ, ೧೨. ವೈಷಮ್ಯ-ನೈರ್ಘೃಣ್ಯಾಧಿಕರಣ, ೧೩. ಸರ್ವಧರ್ಮೋಪಪತ್ತ್ಯಧಿಕರಣ.

ರಾಮಾನುಜಮತದ ಪ್ರಕಾರ ಕೇವಲ ಹತ್ತು ಅಧಿಕರಣಗಳು ಈ ಪಾದದಲ್ಲಿವೆ. ಮೂವತ್ತಾರು ಸೂತ್ರಗಳಿವೆ. ಅಧಿಕರಣಗಳ ಯಾದಿ ಹೀಗಿದೆ - ೧. ಸ್ಮೃತ್ಯಧಿಕರಣ, ೨. ಯೋಗಪ್ರತ್ಯುಕ್ತ್ಯಧಿಕರಣ, ೩. ವಿಲಕ್ಷಣತ್ವಾಧಿಕರಣ, ೪. ಶಿಷ್ಟಾಪರಿಗ್ರಹಾಧಿಕರಣ, ೫. ಭೋಕ್ತ್ರಾಪತ್ತ್ಯಧಿಕರಣ, ೬. ಆರಂಭಣಾಧಿಕರಣ, ೭. ಇತರವ್ಯಪದೇಶಾಧಿಕರಣ, ೮. ಉಪಸಂಹಾರದರ್ಶನಾಧಿಕರಣ, ೯. ಕೃತ್ಸ್ನಪ್ರಸಕ್ತ್ಯಧಿಕರಣ, ೧೦. ಪ್ರಯೋಜನವತ್ತ್ವಾಧಿಕರಣ.

ನಮ್ಮ ಸಿದ್ಧಾಂತದ ಪ್ರಕಾರ ಈ ಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳಿವೆ. ಹಾಗೂ ಮೂವತ್ತೆಂಟು ಸೂತ್ರಗಳಿವೆ. ಅಧಿಕರಣಗಳ ಯಾದಿ ಹಾಗೂ ಹೆಸರು ಹೀಗಿದೆ - ೧. ಸ್ಮೃತ್ಯಧಿಕರಣ, ೨. ನ ವಿಲಕ್ಷಣತ್ವಾಧಿಕರಣ, ೩. ಅಭಿಮಾನ್ಯಧಿಕರಣ, ೪. ಅಸದಧಿಕರಣ, ೫. ಭೋಕ್ತ್ರಧಿಕರಣ, ೬. ಆರಂಭಣಾಧಿಕರಣ, ೭. ಇತರವ್ಯಪದೇಶಾಧಿಕರಣ, ೮. ಶ್ರುತ್ಯಧಿಕರಣ, ೯. ನ ಪ್ರಯೋಜನವತ್ತ್ವಾಧಿಕರಣ, ೧೦. ವೈಷಮ್ಯನೈರ್ಘೃಣ್ಯಾಧಿಕರಣ, ೧೧. ಸರ್ವಧರ್ಮೋಪಪತ್ತ್ಯಧಿಕರಣ ಎಂದು.

ನಮ್ಮ ಸಿದ್ಧಾಂತದಂತೆ ನವಿಲಕ್ಷಣತ್ವಾಧಿಕರಣದಲ್ಲಿ ಕೇವಲ ಎರಡು ಸೂತ್ರಗಳಿವೆ. ಆದರೆ ರಾಮನುಜಮತದಲ್ಲಿ ಒಂಬತ್ತು ಸೂತ್ರಗಳು, ಅದ್ವೈತಮತದಲ್ಲಿ ಎಂಟು ಸೂತ್ರಗಳಿವೆ. ಹಾಗೂ ಪ್ರಾರಂಭದ ಸ್ಮೃತ್ಯಧಿಕರಣದಲ್ಲೇ 'ಏತೇನ ಯೋಗಃ ಪ್ರತ್ಯುಕ್ತಃ' ಎಂಬ ಸೂತ್ರವನ್ನು ನಮ್ಮ ಮತದ ಪ್ರಕಾರ ಸೇರಿಸಲಾಗಿದೆ. ಆದರೆ ಈ ಒಂದು ಸೂತ್ರವನ್ನು ರಾಮಾನುಜಮತದವರು ಹಾಗೂ ಅದ್ವೈತಮತದವರು ಪ್ರತ್ಯೇಕ ಅಧಿಕರಣವೆನ್ನುತ್ತಾರೆ. ಅದಕ್ಕೆ ಯೋಗಪ್ರತ್ಯುಕ್ತ್ಯಧಿಕರಣ ಎಂಬ ಹೆಸರನ್ನೂ ಕೂಡ ಇಟ್ಟಿದ್ದಾರೆ. ಇದರಂತೆ ಅಭಿಮಾನ್ಯಧಿಕರಣ, ಅಸದಧಿಕರಣ, ಶಬ್ದಮೂಲತ್ವಾಧಿಕರಣ ಇವುಗಳನ್ನು ಅಧಿಕರಣವನ್ನಾಗಿಯೇ ರಾಮನುಜಮತದಲ್ಲಿ ಮತ್ತು ಅದ್ವೈತಮತದಲ್ಲಿ ಅಂಗೀಕರಿಸಿಲ್ಲ. ಅದ್ವೈತಮತದಲ್ಲಿ ಹಾಗೂ ರಾಮನುಜಮತದಲ್ಲಿ ಅನೇಕ ಕಡೆ ಪೂರ್ವಪಕ್ಷ ಸೂತ್ರಗಳೆಂದು ಹೇಳುತ್ತಾರೆ. 'ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್' ಎಂಬ ಸೂತ್ರವು ವೇದಾಪೌರುಷೇಯತ್ವವನ್ನು ಸಾಧಿಸುತ್ತಿದೆ. ವೇದವು ಪೌರುಷೇಯಗ್ರಂಥಗಳಿಗಿಂತ ವಿಲಕ್ಷಣವಾಗಿದೆ. ಆದ್ದರಿಂದ 'ವಾಚಾ ವಿರೂಪನಿತ್ಯಯಾ' ಇತ್ಯಾದಿ ಪ್ರಮಾಣಕ್ಕೆ ಅನುಸಾರಿಯಾಗಿ ವೇದಾಪೌರುಷೇಯತ್ವವು ಸಿದ್ಧವಾಗುತ್ತದೆ ಎಂದು ನಾವು ಸಮರ್ಥಿಸುತ್ತಿದ್ದೇವೆ. ಆದರೆ ಅದ್ವೈತಮತ ಹಾಗೂ ರಾಮಾನುಜಮತದಲ್ಲಿ ಸಾಂಖ್ಯರ ಅಭಿನ್ನನಿಮಿತ್ತೋಪಾದನತ್ವವನ್ನು ಈ ಸೂತ್ರವು ಆಕ್ಷೇಪ ಮಾಡುತ್ತಿದೆ ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಮುಂದಿನ 'ದೃಶ್ಯತೇ ತು' ಎಂಬ ಸೂತ್ರದಲ್ಲಿ ಸಿದ್ಧಾಂತ ಮಾಡುತ್ತಾರೆಂದು ಹೇಳುತ್ತಾರೆ. ಬ್ರಹ್ಮನು ಜಗದ್ವಿಲಕ್ಷಣನಾಗಿದ್ದಾನೆಂದು 'ನ ವಿಲಕ್ಷಣತ್ವಾತ್' ಇತ್ಯಾದಿ ಸೂತ್ರದ ಅಭಿಪ್ರಾಯವೆನ್ನುತ್ತಾರೆ. ಈ ಎಲ್ಲಾ ಪಕ್ಷಗಳಲ್ಲಿ ಅನೇಕ ಅಸ್ವಾರಸ್ಯಗಳಿವೆ. ಅನುಭವಕ್ಕೆ ಅತ್ಯಂತ

ದೂರದಲ್ಲಿವೆ. ಇತರರ ಭಾಷ್ಯದಲ್ಲಿ ಅನೇಕ ಗೊಂದಲಗಳು ಕಾಣಿಸುತ್ತಿವೆ ಇತ್ಯಾದಿಯಾಗಿ ಪ್ರತಿಯೊಂದು ಅಧಿಕರಣಗಳನ್ನು ಸಮರ್ಥನೆ ಮಾಡಲಾಗಿದೆ.

ಅದ್ವೈತಮತದ ಪ್ರಕಾರ ಪ್ರಥಮಪಾದವು ಸಾಂಖ್ಯಸ್ಮೃತಿಗಳ ವಿರೋಧವನ್ನು ಮಾಡುತ್ತಿದೆ. ಹಾಗೂ ಸಾಂಖ್ಯಸ್ಮೃತ್ಯನ್ವಿತವಾದ ತರ್ಕವನ್ನು ಪರಿಹಾರ ಮಾಡುತ್ತಿದೆ ಎಂದು ಹೇಳುತ್ತಾರೆ. ಹಾಗೂ ಎರಡನೆಯ ಪಾದವು ಸಾಂಖ್ಯಾದಿಮತಗಳಲ್ಲಿರುವ ದೋಷಗಳನ್ನು ಎತ್ತಿ ತೋರಿಸುತ್ತಿದೆ. ಮೂರನೆಯ ಪಾದವು ಎರಡು ಭಾಗಗಳಿಂದ ಕೂಡಿದೆ. ಎರಡನೆಯ ಪಾದವು ಪಂಚಮಹಾಶ್ರುತಿಗಳಿಗೆ ವಿರೋಧವನ್ನು ಪರಿಹರಿಸುತ್ತಿದೆ. ಉತ್ತರಭಾಗವು ಜೀವಪ್ರತಿಪಾದಕ- ಶ್ರುತಿಗಳಿಗೆ ವಿರೋಧವನ್ನು ಪರಿಹರಿಸುತ್ತಿದೆ ಎಂದು ಹೇಳುತ್ತಾರೆ. ನಾಕನೆಯ ಪಾದವು ಲಿಂಗಶರೀರಶ್ರುತಿಗಳಿಗೆ ಪರಸ್ಪರವಿರೋಧವನ್ನು ಪರಿಹರಿಸುತ್ತಿದೆ. ಹೀಗೆ ಎರಡನೆಯ ಪಾದದ ನಾಕು ಪಾದಾರ್ಥಗಳನ್ನು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಪ್ರಥಮ ಪಾದದಲ್ಲಿ ಹಾಗೂ ಎರಡನೆಯ ಪಾದದಲ್ಲಿ ಸ್ವೀಕರಿಸಿದ ಅವರ ಉಪಾಧಿಯೇ ಅಯುಕ್ತವಾಗಿದೆ. ಪ್ರಥಮಪಾದದಲ್ಲೂ ಕೂಡ 'ಏತೇನ ಯೋಗಃ ಪ್ರತ್ಯುಕ್ತಃ' ಇತ್ಯಾದಿ ಸೂತ್ರಗಳಿಂದ ಇತರ ಮತಗಳಲ್ಲಿ ಇರುವ ದೋಷಗಳನ್ನು ಎತ್ತಿತೋರಿಸಲಾಗಿದೆ. ಆದ್ದರಿಂದ ಅದ್ವೈತಿಗಳ ಪಾದಭೇದಕ್ರಮವೇ ಅಯುಕ್ತವಾಗುತ್ತದೆ.

ರಾಮಾನುಜಮತದಲ್ಲಿ ಪಾದಭೇದವ್ಯವಸ್ಥೆ ಹೀಗಿದೆ - ಪ್ರಥಮಪಾದವು ಸ್ವಮತದಲ್ಲಿ ಕಾರಣವಿಷಯದಲ್ಲಿ ದೋಷವನ್ನು ಪರಿಹರಿಸುತ್ತಿದೆ. ಎರಡನೆಯ ಪಾದವು ಕಾರಣವಿಷಯದಲ್ಲಿ ಪರಪಕ್ಷದಲ್ಲಿರುವ ದೋಷವನ್ನು ಎತ್ತಿತೋರಿಸುತ್ತಿದೆ. ಮೂರು ಹಾಗೂ ನಾಕನೆಯ ಪಾದದಲ್ಲಿ ಸ್ವಪಕ್ಷದ ಪ್ರಕಾರ ಕಾರ್ಯನಿಷೇಧದೋಷವನ್ನು ಪರಿಹರಿಸಲಾಗಿದೆ ಎಂದು ಹೇಳುತ್ತಾರೆ. ಇವರ ಈ ಪಾದಭೇದವ್ಯವಸ್ಥೆಯೂ ಕೂಡ ತಪ್ಪು. ಏಕೆಂದರೆ ಪ್ರಥಮಪಾದದಲ್ಲಿ 'ಸ್ವಪಕ್ಷದೋಷಾಚ್ಚ' ಇತ್ಯಾದಿ ಸೂತ್ರಗಳು ಪರಪಕ್ಷದಲ್ಲಿರುವ ದೋಷವನ್ನೂ ಕೂಡ ಹೇಳುತ್ತಿವೆ. ಅಷ್ಟೇ ಅಲ್ಲದೇ, ಎರಡನೆಯ ಪಾದದಲ್ಲಿ 'ಉತ್ಪತ್ತ್ಯಸಂಭವಾತ್' ಇತ್ಯಾದಿ ಸೂತ್ರಗಳು ಸ್ವಪಕ್ಷದಲ್ಲಿರುವ ದೋಷವನ್ನೂ ಕೂಡ ಪರಿಹರಿಸುತ್ತಿವೆ. ಆದ್ದರಿಂದ ಮೊದಲೆರಡು ಪಾದಭೇದವ್ಯವಸ್ಥೆಯು ಅಯುಕ್ತವಾಯಿತು. ಮೂರನೆಯ ಪಾದದಲ್ಲಿ 'ನಾತ್ಮಾ ಪ್ರಕರಣಾತ್' ಇತ್ಯಾದಿ ಸೂತ್ರಗಳನ್ನು ಕಾರ್ಯನಲ್ಲದ ಜೀವನ ವಿಷಯದಲ್ಲಿರುವ ದೋಷವನ್ನೂ ಕೂಡ ಪರಿಹರಿಸಿದೆ. ಆದ್ದರಿಂದ

ಕಾರ್ಯವಿಷಯದಲ್ಲಿರುವ ದೋಷೋದ್ಧಾರವು ಮೂರನೆಯ ಪಾದದ ಪ್ರಮೇಯವೆಂದು ಹೇಳಲು ಅವರಿಗೆ ಸಾಧ್ಯವಾಗುವುದಿಲ್ಲ. ಹಾಗೂ ಮೂರು ಮತ್ತು ನಾಕನೆಯ ಪಾದಭೇದಕ್ಕೆ ಕಾರಣವನ್ನೇ ಅವರಿಂದ ಸಮರ್ಥಿಸಲು ಸಾಧ್ಯವಾಗಿಲ್ಲ.

ನಮ್ಮ ಸಿದ್ಧಾಂತದ ಪ್ರಕಾರ ಈ ಪಾದದಲ್ಲಿರುವ ಅಧಿಕರಣಗಳ ಪ್ರಮೇಯವನ್ನು ತಿಳಿಯೋಣ. ವಾಸ್ತವಿಕವಾಗಿ ಈ ಸಂಪುಟದಲ್ಲಿ ಅಸದಧಿಕರಣದಿಂದ ಪಾದ ಮುಗಿಯುವ ತನಕ ಅಧಿಕರಣಗಳು ಇರುತ್ತವೆ. ಪ್ರಾರಂಭದ ಸ್ಮೃತ್ಯಧಿಕರಣ, ನ ವಿಲಕ್ಷಣತ್ವಾಧಿಕರಣ ಹಾಗೂ ಅಭಿಮಾನ್ಯಧಿಕರಣಗಳು ಹಿಂದಿನ ಸಂಪುಟದಲ್ಲಿಯೇ ಸೇರಿವೆ. ಆದರೂ ಕೂಡ ಸಮಸ್ತ ಯುಕ್ತಿಪಾದದಲ್ಲಿ ಏನು ಹೇಳಿದ್ದಾರೆಂಬುದನ್ನು ಒಂದೆಡೆಯೇ ತಿಳಿಯಲು ಈ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ಪ್ರಮೇಯವನ್ನು ಸಂಗ್ರಹಿಸಲಾಗಿದೆ -

ಸ್ಮೃತ್ಯಧಿಕರಣ - ಒಂದೆಡೆ ಸಮಸ್ತ ಶ್ರುತಿಗಳು ವಿಷ್ಣುವೇ ಸರ್ವೋತ್ತಮ, ಅವನೇ ಜಗನ್ನಿರ್ಮಾತೃ ಇತ್ಯಾದಿಯಾಗಿ ಹೊಗಳುತ್ತಿವೆ. ಮತ್ತೊಂದೆಡೆ ಪಾಶುಪತಾದ್ಯಾಗಮಗಳು ಶಿವನೇ ಜಗನ್ನಿರ್ಮಾತೃ ಇತ್ಯಾದಿಯಾಗಿ ಶಿವನನ್ನು ಹೊಗಳುತ್ತಿವೆ. ಮತ್ತೊಂದೆಡೆ ಕಾಪಿಲಾದಿಸ್ಮೃತಿಗಳು ಪ್ರಕೃತಿಯನ್ನೇ ಜಗತ್ಕರ್ತೃವೆಂದು ಪ್ರತಿಪಾದಿಸುತ್ತಿದೆ. ಹೀಗೆ ವಾಙ್ಮಯಪ್ರಪಂಚದಲ್ಲಿ ಪೌರುಷೇಯ ಹಾಗೂ ಅಪೌರುಷೇಯಗ್ರಂಥಗಳನ್ನು ನೋಡಿದಾಗ ನಿಜವಾದ ಜಿಜ್ಞಾಸುವಿಗೆ ದೊಡ್ಡ ಗೊಂದಲವೇ ಹುಟ್ಟುತ್ತದೆ. ಅಪೌರುಷೇಯವಾದ ವೇದ ಹೇಳುವಂತೆ ವಿಷ್ಣುವೇ ಜಗತ್ಕರ್ತೃ ಎನ್ನೋಣವೋ? ಪಾಶುಪತಾದಿ ಆಗಮಗಳು ಹೇಳುವಂತೆ ಶಿವನನ್ನು ಜಗತ್ಕಾರಣವೆಂದು ಹೇಳೋಣವೋ? ಅಥವಾ ಕಾಪಿಲಾದಿಸ್ಮೃತಿಗಳು ಹೇಳುವಂತೆ ಪ್ರಕೃತಿಯೇ ಜಗತ್ತಿಗೆ ಕಾರಣವೆಂದು ಹೇಳಬೇಕೋ? ಇತ್ಯಾದಿ ಗೊಂದಲಗಳನ್ನು ಸ್ಮೃತ್ಯಧಿಕರಣವು ಪರಿಹರಿಸುತ್ತಿದೆ.

ಮೇಲಿನ ಗೊಂದಲಗಳು ಬಂದಾಗ ಮೊದಲು ಬರುವ ಪೂರ್ವಪಕ್ಷ ಹೀಗಿದೆ - ಶ್ರುತಿಯು ವಿಷ್ಣುವನ್ನೇ ಜಗತ್ಕಾರಣನೆಂದು ಹೇಳುತ್ತಿರಬಹುದು. ಆದರೆ ಅದು ಪುರುಷನಿರ್ಮಿತವಲ್ಲ. ಯಾರೂ ನಿರ್ಮಾಣ ಮಾಡದ ವೇದ ಹೇಳುವುದನ್ನು ನಾವು ಹೇಗೆ ಒಪ್ಪಬೇಕು ? ಅದು ನಿರ್ಮೂಲವಾದ್ದರಿಂದ ಅಪ್ರಮಾಣವೆಂದೇ ಅನಿಸುತ್ತದೆ. ಪಾಶುಪತಾದ್ಯಾಗಮಗಳು ಅತ್ಯಂತ ಆಪ್ತನಾದ ಶಿವನಿಂದ ರಚಿತವಾಗಿದೆ. ಲೋಕದಲ್ಲಿ ಆಪ್ತರು

ಹೇಳಿದ್ದನ್ನು ನಾವು ನಂಬುತ್ತೇವೆ. ಎಲ್ಲ ಆಪ್ತರಿಗೂ ಶ್ರೇಷ್ಠ ಆಪ್ತನೆನಿಸಿದ ಸಾಕ್ಷಾತ್ ರುದ್ರದೇವನೇ ಪಾಶುಪತಶಾಸ್ತ್ರದ ಮೂಲಕ ತತ್ವವನ್ನು ನಮಗೆ ಉಪದೇಶಿಸಿದ್ದಾನೆ. ಆ ಪಾಶುಪತಾಗಮದಲ್ಲಿ ರುದ್ರನು ಜಗತ್ತಿಗೆ ಕಾರಣ ಹೊರತು, ವಿಷ್ಣುವಲ್ಲ ಇತ್ಯಾದಿಯಾಗಿ ನಿರೂಪಣೆ ಮಾಡಲಾಗಿದೆ. ಆದ್ದರಿಂದ ಶಿವನನ್ನೇ ಜಗತ್ಕರ್ತೃ ಎಂಬ ಪೂರ್ವಪಕ್ಷವು ಎದುರಾಗುತ್ತದೆ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡಲು ಸ್ಮೃತ್ಯಧಿಕರಣದಲ್ಲಿ ಮೂರು ಸೂತ್ರಗಳು ಹೊರಟಿವೆ ೧. 'ಸ್ಮೃತ್ಯನವಕಾಶದೋಷಪ್ರಸಂಗಃ ಇತಿ ಚೇನ್ನಾನ್ಯಸ್ಮೃತ್ಯನವದೋಷ-ಪ್ರಸಂಗಾತ್', ೨. 'ಇತರೇಷಾಂ ಚಾನುಪಲಬ್ಧೇಃ', ೩. 'ಏತೇನ ಯೋಗಃ ಪ್ರತ್ಯುಕ್ತಃ'. ಈ ಮೂರು ಸೂತ್ರಗಳ ನಿಜ ಹೃದಯ ಹೀಗಿದೆ - ಪಾಶುಪತಸ್ಮೃತಿಯು ಆಪ್ತನೆನಿಸಿದ ರುದ್ರನಿಂದ ಉಪದೇಶಿಸಲ್ಪಟ್ಟಿದೆ. ಆದ್ದರಿಂದ ಅದು ಹೇಳಿದ್ದನ್ನು ಒಪ್ಪಬೇಕೆಂದು ಪೂರ್ವಪಕ್ಷದಲ್ಲಿ ಹೇಳಿದಿರಿ. ಹಾಗಾದರೆ ಪಾಶುಪತಶಾಸ್ತ್ರಕ್ಕೆ ಸಮಾನವಾದ ಮತ್ತೊಂದು ಶಾಸ್ತ್ರವಿದೆ. ಅದನ್ನು ಪಂಚರಾತ್ರಸ್ಮೃತಿ ಎಂದು ಕರೆಯುತ್ತಾರೆ. ಈ ಪಂಚರಾತ್ರಸ್ಮೃತಿಯಲ್ಲಿ ವಿಷ್ಣುವೇ ಜಗತ್ ಕಾರಣ, ರುದ್ರನಲ್ಲ ಎಂದು ನಿರ್ಣಯ ಮಾಡಿದ್ದಾರೆ. ಅಪೌರುಷೇಯವಾದ ವೇದದಂತೆ ಈ ಪಂಚರಾತ್ರಸ್ಮೃತಿಯು ನಿರ್ಮೂಲವಲ್ಲ. ಪರಮಾಪ್ತನಾದ ವಿಷ್ಣುವಿನಿಂದಲೇ ಪ್ರಣೀತವಾಗಿದೆ. ಇಲ್ಲಿ ಮತ್ತೊಂದು ಗೊಂದಲವುಂಟಾಗಬಹುದು. ಹಾಗಾದರೆ ಪಾಶುಪತಸ್ಮೃತಿಯು ರುದ್ರನನ್ನು ಜಗತ್ಕಾರಣನೆನ್ನುತ್ತಿದೆ. ಪಂಚರಾತ್ರಸ್ಮೃತಿಯು ವಿಷ್ಣುವನ್ನು ಜಗತ್ಕಾರಣ ಎನ್ನುತ್ತಿದೆ. ಎರಡನ್ನೂ ಕೂಡ ಒಪ್ಪೋಣ ಏನು ತಪ್ಪು ಎಂದು. ಪಾಶುಪತಸ್ಮೃತಿಗೆ ವೇದಗಳ ಬೆಂಬಲವಿಲ್ಲ. ಪಂಚರಾತ್ರಸ್ಮೃತಿಗೆ ವೇದದ ಬೆಂಬಲವಿದೆ. ವೇದಕ್ಕೆ ಪಂಚರಾತ್ರಸ್ಮೃತಿಯ ಬೆಂಬಲವಿದೆ. ಹಾಗಾಗಿ ರುದ್ರಾದಿಗಳಿಗಿಂತಲೂ ಹೆಚ್ಚಿನ ಆಪ್ತತ್ವವನ್ನು ಹೊಂದಿರುವ ಸರ್ವಜ್ಞತಮನಾದ ವಿಷ್ಣುವಿನಿಂದ ಪ್ರಣೀತವಾದ ಪಂಚರಾತ್ರಸ್ಮೃತಿಯ ಬೆಂಬಲವುಳ್ಳ ಶ್ರುತಿಗಳು ಯಾವುದೇ ಬೆಂಬಲವಿಲ್ಲದ ಪಾಶುಪತಶಾಸ್ತ್ರವನ್ನು ನಿರಾಕರಿಸುತ್ತದೆ. ಪಾಶುಪತಸ್ಮೃತಿಯಲ್ಲಿ ಹೇಳಿದ್ದು ಕೇವಲ ಆಪಾತತಃ ಅರ್ಥವಾಗಿದೆ. ಅದರ ಆಂತರ್ಯವೂ ಕೂಡ ವಿಷ್ಣುವಿನ ಜಗತ್ಕರ್ತೃತ್ವದಲ್ಲೇ ಇದೆ ಹೊರತು, ರುದ್ರನ ಜಗತ್ಕರ್ತೃತ್ವದಲ್ಲಿ ಅಲ್ಲ ಎಂಬುದಾಗಿ ಶ್ರುತಿಯು ಪಾಶುಪತಸ್ಮೃತಿಯನ್ನೇ ವ್ಯಾಖ್ಯಾನ ಮಾಡುತ್ತದೆ.

ಪಾಶುಪತಾದ್ಯಾಗಮಗಳಿಂದ ಆಪಾತತಃ ತಿಳಿಯುವ ಅರ್ಥವನ್ನೇ ಸ್ವೀಕರಿಸಿದರೆ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಯಾವುದನ್ನು ಅನುಷ್ಠಾನ ಮಾಡಿದರೆ ಫಲ ಸಿಗುತ್ತದೆಂದು

ಪಾಶುಪತಾಗಮದಲ್ಲಿ ಹೇಳಿದೆಯೋ, ಆ ಅನುಷ್ಠಾನವನ್ನು ಮಾಡಿದರೂ ಕೂಡ ಫಲ ದೊರೆಯುತ್ತಿಲ್ಲ. ಆದ್ದರಿಂದ ಆಪಾತತಃ ತೋರುವ ಅರ್ಥದಲ್ಲಿ ಪಾಶುಪತಸ್ಮೃತಿಗಳು ಅಪ್ರಮಾಣವೇ ಆಗುತ್ತವೆ. ಪಾಶುಪತಶಾಸ್ತ್ರವಷ್ಟೇ ಅಪ್ರಮಾಣವಲ್ಲ. ವಿಷ್ಣುವಿನ ಜಗತ್ ಕಾರಣತ್ವವನ್ನು ನಿರಾಕರಣೆ ಮಾಡುವ ಯೋಗಶಾಸ್ತ್ರವೂ ಕೂಡ ಅಪ್ರಮಾಣವೇ ಆಗಿದೆ. ಯೋಗಶಾಸ್ತ್ರದಲ್ಲೂ ಕೂಡ ಯಾವ ಅನುಷ್ಠಾನವನ್ನು ಮಾಡಿದರೆ ಫಲ ಲಭಿಸುತ್ತದೆ ಎಂದು ಹೇಳಿದೆಯೋ, ಅಂಥ ಫಲಗಳು ದೊರೆಯುತ್ತಿಲ್ಲ. ಪಾಶುಪತಶಾಸ್ತ್ರದಂತೆ ಯೋಗಶಾಸ್ತ್ರವೂ ಕೂಡ ಅಪ್ರಮಾಣವಾಗುತ್ತದೆ.

ಹೀಗೆ ಪಂಚರಾತ್ರಸ್ಮೃತಿಯನ್ನು ಪ್ರಮಾಣವೆಂದು ಸಮರ್ಥನೆ ಮಾಡಿ, ಅದರ ಬೆಂಬಲವಿರುವುದರಿಂದ ಶ್ರುತಿಗಳು ಪರಮಪ್ರಮಾಣವಾಗಿವೆ. ಇಂಥ ಶ್ರುತಿಗಳ ವಿರೋಧ-ವಿರುವುದರಿಂದ ಉಳಿದೆಲ್ಲಾ ಆಗಮಗಳು ಅಪ್ರಮಾಣವಾಗುತ್ತವೆಂಬ ಸಮರ್ಥನೆಯನ್ನು ಸ್ಮೃತ್ಯಧಿಕರಣದಲ್ಲಿ ಮಾಡಲಾಗಿದೆ.

ನ ವಿಲಕ್ಷಣತ್ವಾಧಿಕರಣ - ಈ ಅಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳಿವೆ. ಶ್ರುತಿ ಹಾಗೂ ಶ್ರುತಿಗೆ ಅನುಸಾರಿಯಾದ ಸ್ಮೃತಿಯು ಪಾಶುಪತಶಾಸ್ತ್ರದಂತೆ ಅಪ್ರಮಾಣ-ವಾಗಬಹುದಲ್ಲವೇ? ಎಂಬ ಗೊಂದಲ ಮೂಡುತ್ತದೆ. ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಈ ಆಕ್ಷೇಪವು ಅಧಿಕವಾಗಿ ಪ್ರಾಪ್ತವಾಗಿದೆ. ಇದರ ಪರಿಹಾರಕ್ಕಾಗಿ ನ ವಿಲಕ್ಷಣತ್ವಾಧಿ-ಕರಣವು ಹೊರಟಿದೆ. ಶ್ರುತಿಯು ಅಪೌರುಷೇಯವಾಗಿದ್ದರೂ ಕೂಡ ಪಾಶುಪತಸ್ಮೃತಿಯಂತೆ ಏಕೆ ಅಪ್ರಮಾಣವಾಗಬಾರದು? ಅದಕ್ಕನುಸಾರಿಯಾದ ಸ್ಮೃತಿಯೂ ಕೂಡ ಏಕೆ ಅಪ್ರಮಾಣವಾಗಬಾರದು? ಎಂಬ ಪೂರ್ವಪಕ್ಷವು ಪ್ರಾಪ್ತವಾದರೆ, 'ವಾಚಾ ವಿರೂಪನಿತ್ಯಯಾ' ಇತ್ಯಾದಿ ಶ್ರುತಿವಾಕ್ಯಗಳಿಂದ, ಹಾಗೂ ಯುಕ್ತಿಗಳಿಂದ ಶ್ರುತಿಯಲ್ಲಿ ದೋಷಶಂಕೆಗೆ ಅವಕಾಶವಿರುವುದಿಲ್ಲ. ಶ್ರುತಿ ಹಾಗೂ ಶ್ರುತ್ಯನುಸಾರಿಯಾದ ಸ್ಮೃತಿಗಳು ಹೇಗೆ ಸ್ವತಃಪ್ರಮಾಣವಾಗಿವೆಯೋ, ಅದರಂತೆ.ಶ್ರುತಿಗಳಲ್ಲಿ ಕಾರೀರ್ಯಾದಿಯಾಗಗಳನ್ನು ಅನುಷ್ಠಾನಮಾಡಿದರೆ ಮಳೆ ಬರುತ್ತದೆಂದು ಹೇಳಿದೆ. ಆದರೆ ಕೆಲವೊಮ್ಮೆ ಕಾರೀರ್ಯಾದಿ-ಯಾಗಗಳನ್ನು ಅನುಷ್ಠಾನ ಮಾಡಿದರೂ ಕೂಡ ಮಳೆ ಬರುತ್ತಿಲ್ಲ. ಆದ್ದರಿಂದ ಅಪ್ರಮಾಣವೆಂದು ಹೇಳಬೇಕಲ್ಲವೇ? ಹೀಗೆ ಆಕ್ಷೇಪ ಮಾಡಬಾರದು. ಶ್ರುತಿಗಳಲ್ಲಿ ಹೇಳಿದ ಅನುಷ್ಠಾನವನ್ನು ಮಾಡಿದರೆ ಫಲವು ಖಂಡಿತವಾಗಿಯೂ ದೊರಕುತ್ತದೆ. ಇದರಲ್ಲಿ

ಸಂದೇಹವಿಲ್ಲ. ಕೆಲವೊಮ್ಮೆ ಫಲವು ದೊರಕುತ್ತಿಲ್ಲವೆಂದರೆ ಅದಕ್ಕೆ ಕರ್ತೃವಿನಲ್ಲಿರುವ ವೈಗುಣ್ಯವೇ ನಿಮಿತ್ತ ಹೊರತು, ಶ್ರುತಿಯಲ್ಲಿರುವ ಅಪ್ರಾಮಾಣ್ಯವು ನಿಮಿತ್ತವಲ್ಲ. ಆದ್ದರಿಂದ ಅಪೌರುಷೇಯವಾಗಿವೆ. ಮತ್ತು ಸ್ವತಃಪ್ರಮಾಣವಾಗಿವೆ. ಅದಕ್ಕನುಸಾರಿಯಾದ ಸ್ಮೃತಿಗಳೂ ಕೂಡ ಪ್ರಮಾಣವೇ ಆಗಿವೆ.

ಅಭಿಮಾನ್ಯಧಿಕರಣ - ಅಪೌರುಷೇಯವಾದ ವೇದವನ್ನು ಸ್ವತಃಪ್ರಮಾಣ ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಸಮರ್ಥನೆ ಮಾಡಲಾಯಿತು. ಆದರೆ ವೇದದಲ್ಲಿ ನಂಬಲಾಗದ ಯುಕ್ತಿಗೆ ವಿರುದ್ಧವಾದ ಅನೇಕ ಮಾತುಗಳು ಕಾಣಸುತ್ತಿವೆ. 'ಮೃದಬ್ರವೀತ್' 'ಆಪೋ ಅಬ್ರುವನ್' 'ಮಣ್ಣು ಮಾತನಾಡಿತು' 'ನೀರು ಹೇಳಿತು' ಈ ಎಲ್ಲ ವಾಕ್ಯಗಳನ್ನು ನೋಡಿದಾಗ ಯುಕ್ತಿವಿರುದ್ಧವಾದ ವೇದವು ಅಪ್ರಮಾಣವೆಂದೇ ಹೇಳಬೇಕು ಎಂಬ ಸಂಶಯ ಬರುತ್ತದೆ. ಇದರ ಪರಿಹಾರವನ್ನು ಮಾಡಲು ಅಭಿಮಾನ್ಯಧಿಕರಣದಲ್ಲಿ 'ಅಭಿಮಾನಿ ವ್ಯಪದೇಶಸ್ತು ವಿಶೇಷಾನುಗತಿಭ್ಯಾಂ' ಮತ್ತು 'ದೃಶ್ಯತೇ ಚ' ಎಂಬೆರಡು ಸೂತ್ರಗಳು ಹೊರಟಿವೆ. ಇಂದ್ರಿಯರಹಿತವಾದ ಜಡವಾದ ಮಣ್ಣು ಮೊದಲಾದವುಗಳಿಗೆ ವಕ್ತೃತ್ವಾದಿಗಳನ್ನು ಹೇಳುವುದು ಶ್ರುತಿಯ ಉದ್ದೇಶವಲ್ಲ. ಜಡಪದಾರ್ಥದ ಒಳಗೆ ಅಭಿಮಾನಿದೇವತೆಗಳಿದ್ದಾರೆ. ಅವರು ಮಾತನಾಡಿದರು, ನೋಡಿದರು ಇತ್ಯಾದಿಯಾಗಿ ಶ್ರುತಿಯು ಹೇಳುತ್ತಿದೆ. ಹೀಗೆ ಶ್ರುತಿಯ ಅಭಿಪ್ರಾಯವನ್ನು ಅರ್ಥ ಮಾಡಿಕೊಂಡಾಗ ಪರಮಪ್ರಮಾಣವೆಂಬುದು ಮನದಟ್ಟಾಗುತ್ತದೆ. ಈ ಜಡಪದಾರ್ಥಗಳಲ್ಲಿ ಅಂತರ್ಯಾಮಿಗಳಾದ ದೇವತೆ-ಗಳಿದ್ದಾರೆಂಬುದನ್ನು ಹಾಗೂ ಅವರಲ್ಲಿ ಅದ್ಭುತವಾದ ಅಚಿಂತ್ಯವಾದ ಶಕ್ತಿಗಳಿವೆ ಎಂಬುದನ್ನು ಅಪರೋಕ್ಷಜ್ಞಾನಿಗಳಾದ ಯೋಗಿಗಳು ಸ್ವತಃ ಕಣ್ಣಾರೆ ಕಂಡಿದ್ದಾರೆ. ಆದ್ದರಿಂದ ಶ್ರುತಿ ಹೇಳುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಹೀಗಿರುವಾಗ ವೇದಕ್ಕೆ ಸರ್ವಥಾ ಅಪ್ರಾಮಾಣ್ಯವನ್ನು ಹೇಳಬಾರದು.

ಅಸದಧಿಕರಣ - ಈ ಅಧಿಕರಣದಲ್ಲಿ ಒಟ್ಟು ಆರು ಸೂತ್ರಗಳಿವೆ. ಬ್ರಹ್ಮನು ಈ ಜಗತ್ತಿಗೆ ಕಾರಣನಾಗಿದ್ದಾನೆ ಎಂಬುದನ್ನು ಅಪೌರುಷೇಯವಾದ ವೇದವು ಪ್ರತಿಪಾದನೆ ಮಾಡುತ್ತಿದೆ. ಇಂಥ ಅಪೌರುಷೇಯವಾದ ವೇದವಾಕ್ಯದಲ್ಲಿ ಯಾವ ವಾಕ್ಯಗಳೂ ಕೂಡ ಅಪ್ರಮಾಣವಾಗಿಲ್ಲ ಎಂಬುದನ್ನು ಈ ಹಿಂದಿನ ಅಧಿಕರಣದ ತನಕ ಉಪಪಾದನೆ ಮಾಡಿದ್ದಾಯಿತು. ಪ್ರಕೃತ ಬ್ರಹ್ಮನ ಜಗತ್ಕಾರಣತ್ವವಿಷಯದಲ್ಲಿ ಯಾವ ಯುಕ್ತಿವಿರೋಧವು ಪ್ರಾಪ್ತವಾಗುತ್ತದೋ,

ಆದರ ಪರಿಹಾರಕ್ಕಾಗಿ ಈ ಅಸದಧಿಕರಣವು ಹೊರಟಿದೆ. ಪ್ರಳಯಕಾಲದಲ್ಲಿ ಸಮಸ್ತ ಪ್ರಪಂಚದ ಪ್ರಾಗಭಾವವಿರುತ್ತದೆ. ಈ ಪ್ರಾಗಭಾವವೇ ಜಗತ್ತಿಗೆ ಉಪಾದಾನಕಾರಣವಾಗಿದೆ. ಹಾಗೂ ಕರ್ತೃವಾಗಿದೆ. 'ಅಸದೇವೇದಮಗ್ರ ಆಸೀತ್' 'ಅಸತಃ ಸದಜಾಯತ' ಇತ್ಯಾದಿ ವೇದವಾಕ್ಯವು ಅಭಾವವೇ ಜಗತ್ಕಾರಣವೆಂದು ಹೇಳುತ್ತಿದೆ. ಶ್ರುತಿ ಸಹಾಯವಿರುವ ಯುಕ್ತಿಗೆ ವಿರುದ್ಧವಾದ ಕಾರಣ ಬ್ರಹ್ಮಕಾರಣತ್ವವನ್ನು ಹೇಳುವ ವೇದವಾಕ್ಯಗಳಿಗೆ ಅಪ್ರಾಮಾಣ್ಯವನ್ನೇ ಒಪ್ಪಬೇಕು ಎಂಬ ಆಕ್ಷೇಪವು ಪ್ರಾಪ್ತವಾಗುತ್ತದೆ.

ಪ್ರಾಗಭಾವವನ್ನು ಉಪಾದಾನವೆಂದಾಗಲೀ, ಕರ್ತೃವೆಂದಾಗಲೀ ಹೇಳಲು ಸಾಧ್ಯವಿಲ್ಲ. ಕರ್ತೃ ಆಗಬೇಕಾದರೆ, ಜ್ಞಾನ, ಇಚ್ಛಾ, ಪ್ರಯತ್ನಗಳು ಇರಲೇ ಬೇಕು. ಬ್ರಹ್ಮನು ಈ ಜ್ಞಾನ ಇಚ್ಛಾ ಪ್ರಯತ್ನಗಳುಳ್ಳವನಾಗಿರುವುದರಿಂದ ಜಗತ್ಕರ್ತೃವಾಗುತ್ತಾನೆ. ಅಚೇತನವಾದ ಮತ್ತು ನಿಷೇಧರೂಪವಾದ ಅಭಾವದಲ್ಲಿ ಜ್ಞಾನ, ಇಚ್ಛಾ, ಪ್ರಯತ್ನಗಳು ಇರಲು ಸಾಧ್ಯವೇ ಇಲ್ಲ. ಆದ್ದರಿಂದ ಅಭಾವವು ಜಗತ್ಕಾರಣವಾಗುವುದಿಲ್ಲ. ಬ್ರಹ್ಮನೇ ಜಗತ್ಕಾರಣನಾಗುತ್ತಾನೆ.

ಅಭಾವದಿಂದ ಜಗತ್ತು ಹುಟ್ಟುತ್ತದೆ ಎಂದು ಹೇಳುವುದಾದರೆ, ಪ್ರಳಯಕಾಲದಲ್ಲಿ ಯಾವುದೇ ಭಾವಪದಾರ್ಥಗಳು ಇರುವುದಿಲ್ಲ ಎಂದು ಒಪ್ಪಬೇಕಾಗುತ್ತದೆ. ಆದರೆ ಪ್ರಳಯಕಾಲದಲ್ಲಿ ಅನೇಕ ಭಾವಪದಾರ್ಥಗಳಿವೆ. ಈ ವಿಷಯದಲ್ಲಿ ಅನುಮಾನಪ್ರಮಾಣವಿದೆ. ಆದ್ದರಿಂದ ಪ್ರಳಯಕಾಲದಲ್ಲಿ ಯಾವುದೇ ತತ್ವಗಳಿಲ್ಲ ಎಂದು ಹೇಳಬಾರದು. ಪ್ರಳಯಕಾಲದಲ್ಲಿ ಏನೂ ಇರಲಿಲ್ಲ ಎನ್ನಲು ಯಾವುದೇ ದೃಷ್ಟಾಂತಗಳಿಲ್ಲ. ಆದ್ದರಿಂದ ಅಭಾವದಿಂದ ಜಗತ್ತು ಹುಟ್ಟುತ್ತದೆ ಎಂದು ಹೇಳುವುದು ತಪ್ಪು.

ಪ್ರಳಯಕಾಲದಲ್ಲಿ ಭಾವಪದಾರ್ಥಗಳಿದ್ದವು ಎಂಬ ವಿಷಯದಲ್ಲಿ ಅನುಮಾನವನ್ನು ಆಧಾರವನ್ನಾಗಿ ಹೇಗೆ ಹೇಳುತ್ತೀರಿ ? ಅನುಮಾನವು ಅಪ್ರಮಾಣವಲ್ಲವೇ? ಎಂಬ ಪ್ರಶ್ನೆಯು ಬಂದರೆ ಯಾವ ವಿಷಯವು ಪ್ರಮಾಣದಿಂದ ಸಿದ್ಧವಾಗಿದೆಯೋ, ಅದನ್ನು ಅನುಮಾನದಿಂದ ನಿರ್ಣಯಿಸುವುದು ತಪ್ಪಲ್ಲ. ಅದಕ್ಕೆ ವಿರುದ್ಧವಾದ ವಿಷಯವನ್ನು ಅನುಮಾನದಿಂದ ಸಾಧಿಸಿದರೆ ಮಾತ್ರ ತಪ್ಪಾಗುತ್ತದೆ. ಆದ್ದರಿಂದ ಪ್ರಳಯಕಾಲದಲ್ಲಿ ಅನೇಕ ಭಾವಪದಾರ್ಥಗಳಿವೆ ಎಂಬುದು ಪ್ರಮಾಣಸಿದ್ಧವಾಗಿರುವುದರಿಂದ ಈ ವಿಷಯದಲ್ಲಿ ಮಾಡುವ ಅನುಮಾನ-ಪ್ರಯೋಗವು ಅಸಾಧುವಲ್ಲ. ಹೀಗೆ ಪ್ರಾಗಭಾವಕ್ಕೆ ಜಗತ್ಕಾರಣತ್ವವನ್ನು ನಿರಾಕರಣೆ

ಮಾಡುವ ಮೂಲಕ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಅಸದಧಿಕರಣವು ಸಮರ್ಥನೆ ಮಾಡುತ್ತದೆ.

ಭೋಕ್ತ್ರಧಿಕರಣ - ಪ್ರಾಗಭಾವವು ಜಗತ್ತಿಗೆ ಕಾರಣವಲ್ಲ. ಬ್ರಹ್ಮನೇ ಜಗತ್ ಕಾರಣನಾಗಿದ್ದಾನೆ ಎಂಬ ಹಿಂದಿನ ಅಧಿಕರಣದ ಸಿದ್ಧಾಂತದ ಮೇಲೆ ಪುನಃ ಯುಕ್ತಿವಿರೋಧವನ್ನು ಆಕ್ಷೇಪ ಮಾಡಲಾಗುತ್ತದೆ. ಮೋಕ್ಷದಲ್ಲಿ ಜೀವಬ್ರಹ್ಮರಿಗೆ ಅಭೇದವಿದೆ. ಆದ್ದರಿಂದ ಸಂಸಾರದಲ್ಲೂ ಕೂಡ ಅಭೇದವೇ ಇರಬೇಕು. ಜೀವಬ್ರಹ್ಮರಿಗೆ ಅಭೇದವಿರುವುದರಿಂದ ಬ್ರಹ್ಮನು ಜಗತ್ಕಾರಣನಾದರೆ, ಬ್ರಹ್ಮನಿಂದ ಅಭಿನ್ನನಾದ ಜೀವನೂ ಕೂಡ ಜಗತ್ಕಾರಣನಾಗುತ್ತಾನೆ. ಆದರೆ ಜೀವನು ಜಗತ್ಕಾರಣನಾಗುವುದು ಅನುಭವಕ್ಕೆ ವಿರುದ್ಧ. ಜೀವನು ಜಗತ್ಕಾರಣನಲ್ಲದ್ದರಿಂದ ಬ್ರಹ್ಮನೂ ಕೂಡ ಜಗತ್ಕಾರಣನಲ್ಲ ಎಂದೇ ಒಪ್ಪಬೇಕು. ಹಾಗಾಗಿ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಯಾವ ಜಗತ್ ಕಾರಣತ್ವಲಕ್ಷಣವನ್ನು ಹೇಳಲಾಯಿತೋ, ಅದು ಅಸಾಧುವಾಯಿತು. ಹೀಗೆ ಅಭ್ಯಧಿಕಾ-ಶಂಕೆಯು ಪ್ರಾಪ್ತವಾದರೆ ಅದರ ಪರಿಹಾರಕ್ಕಾಗಿ 'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್' ಎಂಬ ಸೂತ್ರವು ಹೊರಟಿದೆ.

ಮೋಕ್ಷದಲ್ಲೂ ಕೂಡ ಜೀವಬ್ರಹ್ಮರಿಗೆ ಅಭೇದವು ಇರುವುದಿಲ್ಲ. 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಮೋಕ್ಷದಲ್ಲಿ ಜೀವಬ್ರಹ್ಮರಿಗೆ ಅಭೇದವನ್ನು ಹೇಳುತ್ತಿದೆಯಲ್ಲವೇ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. ಬ್ರಹ್ಮನ ಜೊತೆ ಸ್ಥಾನೈಕ್ಯವನ್ನು ಅಥವಾ ಮತ್ಯೈಕ್ಯವನ್ನು ಹೊಂದುತ್ತಾನೆ ಎಂಬುದಷ್ಟೇ ಶ್ರುತಿಯ ಅಭಿಪ್ರಾಯ. ಸ್ವರೂಪೈಕ್ಯವನ್ನು ಹೊಂದುತ್ತಾನೆಂಬುದು ಶ್ರುತಿಯ ಅಭಿಪ್ರಾಯವಲ್ಲ. ಏಕೆಂದರೆ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಗೆ 'ಪರಮಂ ಸಾಮ್ಯಂ ಉಪೈತಿ' ಎನ್ನುವ ಭೇದಪ್ರತಿಪಾದಕವಾದ ಪೂರ್ವವಾಕ್ಯದಿಂದ ವಿರೋಧ ಬರುತ್ತದೆ. 'ಪರಾತ್ಪರಂ ಪುರುಷಮುಪೈತಿ ದಿವ್ಯಂ' ಎಂಬ ಉತ್ತರವಾಕ್ಯದಿಂದ ವಿರೋಧ ಬರುತ್ತದೆ. 'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ' ಎಂಬ ವಾಕ್ಯಾಂತರದಿಂದಲೂ ವಿರೋಧ ಬರುತ್ತದೆ. ಹಾಗಾಗಿ ಮತ್ಯೈಕ್ಯ ಪರವಾಗಿಯೇ ಜೀವೈಕ್ಯವನ್ನು ಕೂಡಿಸಬೇಕು. ಹಸುಗಳೆಲ್ಲವೂ ಸಾಯಂಕಾಲದಲ್ಲಿ ಒಟ್ಟಾದವು ಎಂದು ಹೇಳಿದರೆ ಒಂದೇ ಸ್ಥಾನದಲ್ಲಿ ಸೇರಿದವು ಎಂಬುದಾಗಿ ಹೇಗೆ ಅರ್ಥವಾಗುತ್ತದೋ, ಅದರಂತೆ ಮೋಕ್ಷದಲ್ಲಿ ಎಲ್ಲರೂ ಒಂದಾದರು ಎಂಬ ಶಬ್ದಕ್ಕೆ

ಒಂದೇ ಸ್ಥಾನವನ್ನು ಹೊಂದಿದರು ಎಂದರ್ಥ. ಹೀಗೆ ಮೋಕ್ಷದಲ್ಲಿ ಭೇದವನ್ನು ಸ್ಥಾಪನೆ ಮಾಡುವ ಮೂಲಕ ಭೋಕ್ತ್ರಧಿಕರಣವು ಸಮಾಪ್ತಿಗೊಳ್ಳುತ್ತದೆ.

ಆರಂಭಣಾಧಿಕರಣ - ಹಿಂದಿನ ಅಧಿಕರಣದಲ್ಲಿ ಪರಮಾತ್ಮನು ಜಗತ್ಕರ್ತೃವೇ ಅಲ್ಲ ಎಂಬ ಆಶಂಕೆಯನ್ನು ನಿರಾಕರಣೆ ಮಾಡಿದರು. ಪ್ರಕೃತ ಈ ಅಧಿಕರಣದಲ್ಲಿ ಪರಮಾತ್ಮನು ಜಗತ್ಕರ್ತೃವಾಗಿದ್ದಾನೆಂಬುದನ್ನು ಅಂಗೀಕರಿಸಿ, ಯಾವ ಸಾಧನ ಪರಿಕರಗಳನ್ನು ಅಪೇಕ್ಷಿಸುತ್ತಾನೋ, ಆ ಸಾಧನಗಳು ಸ್ವತಂತ್ರವಾಗಿವೆ ಎಂಬ ಆಶಂಕೆಯನ್ನು ಪರಿಹರಿಸುತ್ತಿದ್ದಾರೆ. ಲೋಕದಲ್ಲಿ ನಾವು ಯಾವುದೇ ವಸ್ತುವನ್ನು ತಯಾರು ಮಾಡಬೇಕೆಂದರೆ ಸಲಕರಣೆಗಳನ್ನು ಅಪೇಕ್ಷಿಸುತ್ತೇವೆ. ಆ ಸಲಕರಣೆಗಳು ನಮ್ಮ ಅಧೀನವಾಗಿರುವುದಿಲ್ಲ. ಸ್ವತಂತ್ರವಾಗಿರುತ್ತದೆ. ಅದರಂತೆ ಪರಮಾತ್ಮನು ಸೃಷ್ಟಿಯ ಪ್ರಾರಂಭದಲ್ಲಿ ಜಗತ್ತನ್ನು ನಿರ್ಮಾಣ ಮಾಡಬೇಕಾದರೆ ಯಾವ ಪರಿಕರಗಳನ್ನು ಅಪೇಕ್ಷಿಸುತ್ತಾನೋ, ಅವುಗಳು ಸ್ವತಂತ್ರವಾಗಿವೆ ಅಂಥ ಸ್ವತಂತ್ರವಾದ ಸಲಕರಣೆಗಳನ್ನು ಅಪೇಕ್ಷಿಸುವ ಕಾರಣ ವಿಷ್ಣುವಿನಲ್ಲಿ ಸ್ವಾತಂತ್ರ್ಯವು ಯುಕ್ತವಾಗುವುದಿಲ್ಲ. ಸ್ವತಂತ್ರನಲ್ಲದ ಮಹಾವಿಷ್ಣುವು ಸಕಲಗುಣಪರಿಪೂರ್ಣನೂ ಕೂಡ ಆಗುವುದಿಲ್ಲ.

ಈ ಆಕ್ಷೇಪವನ್ನು ಪರಿಹರಿಸಲು ಆರಂಭಣಾಧಿಕರಣವು ಹೊರಟಿದೆ. ಈ ಅಧಿಕರಣದಲ್ಲಿ ಒಟ್ಟು ಏಳು ಸೂತ್ರಗಳಿವೆ. 'ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕಥಮಸ್ವಿತ್ಕಥಾಸೀತ್' ಎಂಬ ಶ್ರುತಿಯು ಪರಮಾತ್ಮನಿಗೆ ಸೃಷ್ಟಿ ಮಾಡಲು ಬೇಕಾಗುವ ಆಶ್ರಯ ಸಾಮಗ್ರಿಗಳು ಏನೂ ಇರಲಿಲ್ಲ ಎಂದು ಹೇಳುತ್ತಿದೆ. ಈ ಶ್ರುತಿಯಲ್ಲಿರುವ 'ಕಿಂ' ಶಬ್ದವು ಆಕ್ಷೇಪಾರ್ಥದಲ್ಲಿದೆ ಹೊರತು, ಪ್ರಶ್ನಾರ್ಥದಲ್ಲಿಲ್ಲ. ಸರ್ವತಂತ್ರಸ್ವತಂತ್ರನಾದವನಿಗೆ ಮತ್ತೊಂದರ ಅಪೇಕ್ಷೆಯೇ ಇರುವುದಿಲ್ಲ. ಅಸ್ವತಂತ್ರನಾದವನಷ್ಟೇ ಮತ್ತೊಂದು ಪದಾರ್ಥವನ್ನು ಅಪೇಕ್ಷಿಸುತ್ತಾನೆ. ಮತ್ತು ಪ್ರಳಯಕಾಲದಲ್ಲಿ ಪರಮಾತ್ಮನ ಅತಿರಿಕ್ತವಾಗಿ ಮತ್ತೊಂದು ಸ್ವತಂತ್ರಸಾಧನವಿತ್ತು ಎನ್ನಲು ಯಾವುದೇ ಪ್ರಮಾಣಗಳಿಲ್ಲ. ಮತ್ತು ಸೃಷ್ಟಿಯ ಆದಿಯಲ್ಲಿ ಈಶ್ವರನು ಯಾವ ಸಾಧನವನ್ನು ಅಪೇಕ್ಷಿಸುತ್ತಾನೋ, ಅವುಗಳು ಈಶ್ವರನ ಅಧೀನವೇ ಆಗಿವೆ. ಇದನ್ನು 'ಕಾಲ ಆಸೀತ್' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. 'ನಾಸದಾಸೀತ್' ಎಂಬ ಶ್ರುತಿಯು 'ತಮ ಆಸೀತ್' ಎಂಬುದಾಗಿ ಜಡಪ್ರಕೃತಿಯು ಇತ್ತು ಎಂದು ಹೇಳುತ್ತಿದೆ. ಆದ್ದರಿಂದ ಬ್ರಹ್ಮನಿಗಿಂತ ಇತರವಾದ ಆಕಾಶ, ಕಾಲ, ಪ್ರಕೃತಿ ಮೊದಲಾದ ಸೃಷ್ಟಿಕಾರಣ ಪದಾರ್ಥಗಳು ಪ್ರಳಯಕಾಲದಲ್ಲಿ ಇದ್ದವು ಎಂದು ತಿಳಿಯುತ್ತದೆ. ಆದರೂ ಕೂಡ ಈಶಾಧೀನವಾಗಿ ಇದ್ದುದ್ದರಿಂದ

'ನಾಸದಾಸೀತ್' ಎಂಬ ಶ್ರುತಿಯು ಅವುಗಳನ್ನು ಇಲ್ಲವೆಂದು ಹೇಳುತ್ತಿದೆ. ಹೊರತು, ಯಾವುದೇ ಪದಾರ್ಥಗಳು ಇಲ್ಲವೆಂದು ಶ್ರುತಿಯು ಹೇಳುತ್ತಿಲ್ಲ. ಮತ್ತು ಸೃಷ್ಟಿಸಾಧನೆಗಳಲ್ಲಿ ಯಾವ ಸಾಧನತ್ವವಿದೆಯೋ, ಅದೂ ಕೂಡ ಭಗವಂತನ ಅಧೀನವೇ ಆಗಿದೆ. ಅನೇಕ ಕಡೆ ಪೃಥಿವ್ಯಾದಿ ಪಂಚಭೂತಾದಿ ಸಹಾಯಗಳಿಂದ ಪರಮಾತ್ಮನು ಸೃಷ್ಟಿಯನ್ನು ಮಾಡುತ್ತಾನೆಂದು ಹೇಳಲಾಗಿದೆ. ಆದ್ದರಿಂದ ತನ್ನ ಅಧೀನವೇ ಆದ ಪ್ರಕೃತ್ಯಾದಿ ಸಾಧನೆಗಳಿಂದ ಪರಮಾತ್ಮನು ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂಬುದಾಗಿ ಅಂಗೀಕಾರ ಮಾಡಬೇಕು.

ಲೋಕದಲ್ಲಿ 'ತಂತು' ಮೊದಲಾದ ಸಾಧನೆಗಳಿಂದ ಪಟ ಮೊದಲಾದ ಕಾರ್ಯಗಳು ಹುಟ್ಟುವುದು ಕಾಣಿಸುತ್ತಿದೆ. ಈ ಉದಾಹರಣೆಯಂತೆ ಪರಮಾತ್ಮನು ಬೇರೆ ಸಾಧನೆಗಳನ್ನು ಅಪೇಕ್ಷಿಸಿ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂದು ಹೇಳಿದರೆ ಆ ಸಾಧನೆಗಳ ಒಳಗಡೆ ತಾನು ಅಂತರ್ಯಾಮಿಯಾಗಿದ್ದು ಅವುಗಳ ಅಪೇಕ್ಷೆಯಿಂದ ಜಗತ್ತನ್ನು ಸೃಷ್ಟಿ ಮಾಡುತ್ತಾನೆಂದು ಅರ್ಥಮಾಡಿಕೊಳ್ಳಬೇಕು. ಹೀಗೆ ಆರಂಭಣಾಧಿಕರಣವು ಪರಮಾತ್ಮನು ಮತ್ತೊಂದು ಸ್ವತಂತ್ರಸಾಧನೆಯನ್ನು ಅಪೇಕ್ಷಿಸುವುದಿಲ್ಲ ಎಂಬುದಾಗಿ ಸಮರ್ಥನೆ ಮಾಡಿ ಸ್ವತಃ ತಾನೇ ಸರ್ವತಂತ್ರಸ್ವತಂತ್ರನಾಗಿದ್ದಾನೆ. ತನ್ನ ಶಕ್ತಿಯಿಂದಲೇ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಎಂಬ ಪ್ರಮೇಯವನ್ನು ಸಾಧಿಸಿದೆ.

ಇತರವ್ಯಪದೇಶಾಧಿಕರಣ - ಈ ಅಧಿಕರಣದಲ್ಲಿ ಜೀವನೇ ಕರ್ತೃವಾಗಿದ್ದಾನೆ ಎಂಬುದು ಯುಕ್ತಿಯಿಂದ ಸಿದ್ಧವಾಗಿದೆ. ಆದ್ದರಿಂದ ಪರಮಾತ್ಮನು ಸ್ವತಂತ್ರಕರ್ತೃವಾಗಿದ್ದಾನೆಂಬುದು ಯುಕ್ತಿವಿರುದ್ಧವಾಯಿತು. 'ಜೀವಃ ಕರ್ತಾ ಚೇತನತ್ವಾತ್ ಈಶವತ್' ಎಂಬ ಯುಕ್ತಿಯಿಂದ ವಿಷ್ಣುವೊಬ್ಬನೇ ಸ್ವತಂತ್ರಕರ್ತೃವಾಗಿದ್ದಾನೆಂಬುದು ವಿರುದ್ಧವಾಗುತ್ತದೆ. 'ಜೀವಾದ್ಭವಂತಿ ಭೂತಾನಿ' ಇತ್ಯಾದಿ ಶ್ರುತಿಗಳು ಈ ವಿಷಯದಲ್ಲಿ ಆಧಾರವಾಗಿವೆ. 'ಅಹಂ ಇದಂ ಕರೋಮಿ' ಎಂಬುದರ ಸಂವಾದವೂ ಕೂಡ ಇದಕ್ಕಿದೆ. ಈ ಆಕ್ಷೇಪವನ್ನು ಪರಿಹರಿಸಲು ಇತರವ್ಯಪದೇಶಾಧಿಕರಣವು ಹೊರಟಿದೆ. ಈ ಅಧಿಕರಣದಲ್ಲಿ ಒಟ್ಟು ಆರು ಸೂತ್ರಗಳಿವೆ.

ಮೊದಲನೆಯ ಸೂತ್ರವು ಜೀವನೇ ಕರ್ತೃವೆಂದು ಹೇಳಿದರೆ, ತನಗೆ ಹಿತವಾದದ್ದನ್ನು ಮಾಡದಿರುವುದು, ಅಹಿತವಾದದ್ದನ್ನು ಮಾಡುವುದು ಎಂಬುದು ಅನುಭವಸಿದ್ಧವಾಗಿದೆ. ಇದು ಕೂಡದೇ ಇರಬೇಕಾದೀತು ಎಂಬುದಾಗಿ ಸಮರ್ಥನೆ ಮಾಡಿದ್ದಾರೆ. ಪ್ರಪಂಚವನ್ನು

ಭಗವಂತನು ನಿರ್ಮಾಣ ಮಾಡುವಾಗ ಆಯಾಸವಾಗುತ್ತದೆ. ತನ್ನ ಸಂಕಲ್ಪದಂತೆ ಮಾಡಲು ಸಾಧ್ಯವಾಗದೇ ಇದ್ದಾಗ ದುಃಖವೂ ಕೂಡ ಆಗುತ್ತದೆ. ಇಂಥ ದೋಷಗಳು ವಿಷ್ಣುವಿನಲ್ಲೂ ಕೂಡ ಬರುತ್ತದಲ್ಲವೇ? ಎಂಬ ಆಕ್ಷೇಪವನ್ನು ಎರಡನೆಯ ಸೂತ್ರವು ಪರಿಹರಿಸುತ್ತಿದೆ. ಭಗವಂತನು ನಮ್ಮಂತೆ ಸಾಮಾನ್ಯನಲ್ಲ. ಅವನಲ್ಲಿ ಅನಂತವಾದ ಶಕ್ತಿಯಿದೆ ಜೊತೆಯಲ್ಲಿ ಸರ್ವಜ್ಞ, ಸರ್ವಶಕ್ತಿಗಳೂ ಕೂಡ ಇವೆ. ಕರ್ತೃತ್ವನಿಮಿತ್ತವಾದ ಯಾವುದೇ ದೋಷಗಳು ಅವನಿಗೆ ಬರಲು ಸಾಧ್ಯವಿಲ್ಲ.

ಭಗವಂತನಂತೆ ಜೀವನೂ ಕೂಡ ಚೇತನನೇ ಆಗಿದ್ದಾನೆ. ಆದರೂ ಕೂಡ ಭಗವಂತನಂತೆ ಸ್ವತಂತ್ರನಾಗುವುದಿಲ್ಲ. ಕಲ್ಲು ಮೊದಲಾದ ಜಡಪದಾರ್ಥಗಳು ಹೇಗೆ ಸ್ವಾತಂತ್ರ್ಯವನ್ನು ಹೊಂದಿಲ್ಲವೋ, ಅದರಂತೆ ಈ ಜೀವರೂ ಕೂಡ ಸ್ವಾತಂತ್ರ್ಯವನ್ನು ಹೊಂದಿರುವುದಿಲ್ಲ. ಈ ಬಗ್ಗೆ ಮಹಾಭಾರತದಲ್ಲಿ ಒಂದು ಸುಂದರ ಶ್ಲೋಕವಿದೆ - 'ಯಥಾ ದಾರುಮಯೀಂ ಯೋಷಾಂ ನರಃ ಸ್ಥಿರಸಮಾಹಿತಃ । ಇಂಗಯತ್ಯಂಗಮಂಗಾನಿ ತಥಾ ರಾಜನ್ನಿಮಾಃ ಪ್ರಜಾಃ' ಓ ಜನಮೇಜಯ ರಾಜನೇ ! ಮರದ ಒಂದು ಹೆಣ್ಣು ಬೊಂಬೆಯನ್ನು ಮಾನವನು ಹೇಗೆ ಕುಣಿಸುತ್ತಾನೋ, ಕೈಕಾಲು ಮೊದಲಾದ ಆ ಬೊಂಬೆಯ ಅಂಗಗಳನ್ನು ತನ್ನ ಇಚ್ಛೆ ಬಂದಂತೆ ಅಲ್ಲಾಡಿಸುತ್ತಾನೋ, ಅದರಂತೆ ಪರಮಾತ್ಮನೂ ಕೂಡ ಎಲ್ಲ ಜೀವರನ್ನು ನಿಯಂತ್ರಿಸುತ್ತಾನೆ ಎಂದು.

ಜೀವನು ಯಾವ ಕಾರ್ಯವನ್ನು ಮಾಡಬೇಕೆಂದು ಸಂಕಲ್ಪಿಸುತ್ತಾನೋ, ಆ ಕಾರ್ಯವನ್ನು ಮಾಡಿ ಮುಗಿಸುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಸ್ವತಂತ್ರಕರ್ತೃ ಎಂದು ಹೇಳಬಹುದಲ್ಲವೇ? ಎಂಬ ಮುಂದಿನ ಪ್ರಶ್ನೆಗೆ 'ಉಪಸಂಹಾರದರ್ಶನಾತ್ ಇತಿಚೇತ್ ಕ್ಷೀರವದ್ಧಿ' ಎಂಬ ಸೂತ್ರವು ಉತ್ತರಿಸುತ್ತಿದೆ. ಹಸುವಿನ ಕೆಚ್ಚಲಲ್ಲಿ ಬೇಕಾದಷ್ಟು ಹಾಲಿದೆ. ಆದರೆ ಅದನ್ನು ತಾನೇ ನಿರ್ಮಾಣ ಮಾಡಿಕೊಂಡಿರುವುದಿಲ್ಲ. ದೇಹದಲ್ಲಿ ಅಂತರ್ಯಾಮಿಯಾದ ಪ್ರಾಣವಾಯುವು ತಿಂದ ಆಹಾರವನ್ನು ಹಾಲಿನ ರೂಪದಲ್ಲಿ ಪರಿಣಾಮ ಮಾಡಿರುತ್ತಾನೆ. ಅದರಂತೆ ಜೀವನೂ ಕೂಡ ತಾನು ಆರಂಭಿಸಿದ ಕಾರ್ಯವನ್ನು ಮಾಡಿ ಮುಗಿಸಿದಂತೆ ಆಪಾತತಃ ಕಾಣುತ್ತದೆ. ಆದರೆ ಅಂತರ್ಯಾಮಿಯಾದ ಪರಮಾತ್ಮನದ್ದೇ ಈ ವ್ಯಾಪಾರ, ಜೀವನದ್ದಲ್ಲ. ಜೀವನು ಅಸ್ವತಂತ್ರನಾದ್ದರಿಂದ ಸಂಕಲ್ಪ ಮಾಡಲೂ ಕೂಡ ಅಸಮರ್ಥನು ಕೆಲಸವನ್ನು ಮಾಡುವುದರಲ್ಲೂ ಅಸಮರ್ಥನು. ಅದರ ಸಮಾಪ್ತಿ-

ಗೊಳಿಸುವುದರಲ್ಲೂ ಕೂಡ ಅಸಮರ್ಥನೇ ಆಗಿದ್ದಾನೆ. ಛಾಂದೋಗ್ಯೋಪನಿಷತ್ತು 'ನಾಹಂ ಕರ್ತಾ ನಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುಃ' ಇದನ್ನೇ ಸ್ಪಷ್ಟಪಡಿಸುತ್ತಿದೆ.

ಈಶನು ಸ್ವತಂತ್ರಕರ್ತೃವಾದರೆ ಕಾಣಿಸಬೇಕಲ್ಲವೇ? ಕಾಣಿಸದೇ ಇರುವುದರಿಂದ ಜೀವನಿಗಿಂತ ಭಿನ್ನನಾದ ಅಂಥ ಈಶ್ವರನನ್ನು ಏಕೆ ಒಪ್ಪಬೇಕು ? ಮತ್ತು ಅವನಲ್ಲಿ ಕರ್ತೃತ್ವವನ್ನು ಏಕೆ ಒಪ್ಪಬೇಕು? ಕಣ್ಣಿಗೆ ಕಾಣಿಸುವ ಜೀವನಲ್ಲೇ ಸ್ವತಂತ್ರಕರ್ತೃತ್ವವನ್ನು ಒಪ್ಪುವುದು ಉಚಿತವಲ್ಲವೇ? ಈ ಪ್ರಶ್ನೆಗೂ ಕೂಡ ಅವಕಾಶವಿಲ್ಲ. ದೇವತೆಗಳು ಕಣ್ಣಿಗೆ ಕಾಣಿಸುತ್ತಿಲ್ಲ. ಆದರೂ ಕೂಡ ಅಂತರ್ಧಾನಶಕ್ತಿಯಿಂದ ಅಸ್ತಿತ್ವವನ್ನು ಪಡೆದಿದ್ದಾರೆ. ನಮ್ಮ ವ್ಯಾವಹಾರಿಕ ಪ್ರಪಂಚದಲ್ಲಿ ಪಿಶಾಚ ಮೊದಲಾದ ದುಷ್ಟಶಕ್ತಿಗಳಿವೆ. ಅವುಗಳು ಕಣ್ಣಿಗೆ ಕಾಣಿಸುತ್ತಿಲ್ಲ. ಈ ಎಲ್ಲದಕ್ಕಿಂತ ಮಿಗಿಲಾದ ಭಗವಂತನು ವಿಚಿತ್ರಶಕ್ತಿಯನ್ನು ಹೊಂದಿರುವುದರಿಂದಲೇ ಕಣ್ಣಿಗೆ ಕಾಣಿಸುತ್ತಿಲ್ಲ. ಹಾಗಾಗಿ ಕಣ್ಣಿಗೆ ಕಾಣಿಸುತ್ತಿಲ್ಲ ಎಂಬ ಕಾರಣದಿಂದ ಸ್ವತಂತ್ರಶಕ್ತಿಯನ್ನು ಅಲ್ಲಗಳೆಯಬಾರದು.

ಜೀವನೇ ಕರ್ತೃ ಎಂದು ಹೇಳಿದರೆ ಒಂದು ಬೆರಳಿನಿಂದ ಹುಲ್ಲುಕಡ್ಡಿಯನ್ನು ಎತ್ತುವಾಗ ತನ್ನಲ್ಲಿರುವ ಪೂರ್ಣಕರ್ತೃತ್ವಶಕ್ತಿಯನ್ನು ಉಪಯೋಗಿಸಬೇಕು. ಆದರೆ ಯಾರೂ ಕೂಡ ಉಪಯೋಗಿಸುವುದಿಲ್ಲ. ತನ್ನ ಸಾಮರ್ಥ್ಯದ ಏಕದೇಶವನ್ನಷ್ಟೇ ಉಪಯೋಗಿಸಿ ಹುಲ್ಲುಕಡ್ಡಿಯನ್ನು ಮೇಲೆತ್ತುತ್ತಾನೆ. ಆದರೆ ಜೀವನು ನಿರವಯವನಾದ್ದರಿಂದ ಏಕದೇಶಸಾಮರ್ಥ್ಯವನ್ನು ಉಪಯೋಗಿಸಿ, ಹುಲ್ಲುಕಡ್ಡಿಯನ್ನು ಎತ್ತುತ್ತಾನೆಂಬುದೂ ಕೂಡ ತಪ್ಪಾಗುತ್ತದೆ. ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಿ ತೃಣವನ್ನು ಎತ್ತಲು ಸಾಧ್ಯವಿಲ್ಲ. ಏಕದೇಶಸಾಮರ್ಥ್ಯವನ್ನು ಉಪಯೋಗಿಸಿಯೂ ಕೂಡ ತೃಣವನ್ನು ಎತ್ತಲು ಸಾಧ್ಯವಿಲ್ಲ. ಒಟ್ಟಾರೆ ಜೀವನಲ್ಲಿ ಕರ್ತೃತ್ವವೇ ಕೂಡುವುದಿಲ್ಲ. ಇಂಥ ಸಂದರ್ಭದಲ್ಲಿ ಪರಮಾತ್ಮನನ್ನು ಸ್ವತಂತ್ರಕರ್ತೃ ಎಂದು ಒಪ್ಪುವುದು ತೀರಾ ಅನಿವಾರ್ಯ. ಸ್ವತಂತ್ರಕರ್ತೃವಾದ ಪರಮಾತ್ಮನೇ ಅಂತರ್ಯಾಮಿಯಾಗಿದ್ದು, ಜೀವನ ಮೂಲಕ ಇಂಥ ತೃಣೋತ್ಪಾದನಾದಿಕಾರ್ಯವನ್ನು ಮಾಡಿಸುತ್ತಾನೆ. ಜೀವನು ವಾಸ್ತವಿಕವಾಗಿ ನಿರಂಶನೇ ಆಗಿರುತ್ತಾನೆ. ಆದರೂ ಕೂಡ ತನ್ನಲ್ಲಿರುವ ಅಚಿಂತ್ಯಾದ್ಭುತಶಕ್ತಿಯಿಂದ ಸಾಮರ್ಥ್ಯೈಕದೇಶವನ್ನು ಉಪಯೋಗಿಸಿಕೊಂಡು ತೃಣೋದ್ಧರಣಾದಿಗಳ ಕಾರ್ಯದಲ್ಲಿ ತೊಡಗುವಂತೆ ಅನುಗ್ರಹಿಸುತ್ತಾನೆ. ಈ ಎಲ್ಲಾ

ಕಾರಣಗಳಿಂದ ಪರಮಾತ್ಮನೊಬ್ಬನೇ ಸ್ವತಂತ್ರಕರ್ತೃ ಎಂದು ಸಿದ್ಧವಾಗುತ್ತದೆ. ಜೀವನಲ್ಲಿ ಸ್ವತಂತ್ರಕರ್ತೃತ್ವವಿಲ್ಲವೆಂಬುದು ನಿರ್ಣಯವಾಗುತ್ತದೆ.

ಶಬ್ದಮೂಲತ್ವಾಧಿಕರಣ - ವಿಷ್ಣುವಿಗೆ ಸರ್ವಕರ್ತೃತ್ವವನ್ನೂ ಕೂಡ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ತೃಣೋದ್ಧರಣಾದಿಕಾರ್ಯಗಳಲ್ಲಿ ವಿಷ್ಣುವು ಕೃತ್ಸ್ನಪ್ರಸಕ್ತಿಯಿಂದ ಪ್ರವೃತ್ತಿ ಮಾಡುವುದಾದರೆ, ಅವನಿಗೆ ಪ್ರೇಕ್ಷಾವತ್ವವೇ ಭಂಗವಾಗುತ್ತದೆ. ಏಕದೇಶದಿಂದ ಪ್ರವೃತ್ತಿ ಮಾಡುವುದಾದರೆ, 'ನೇಹಾ ನಾನಾಸ್ತಿ ಕಿಂಚನ' ಇತ್ಯಾದಿ ನಿರಂಶತ್ವಪ್ರತಿಪಾದಕವಾದ ಶ್ರುತಿವಿರೋಧವು ಪ್ರಾಪ್ತವಾಗುತ್ತದೆ. ಒಟ್ಟಾರೆ ವಿಷ್ಣುವಿಗೆ ಕರ್ತೃತ್ವವೇ ಕೂಡುವುದಿಲ್ಲ. ಈ ಆಕ್ಷೇಪಕ್ಕೆ ಉತ್ತರವನ್ನು ನೀಡಲು ಶಬ್ದಮೂಲತ್ವಾಧಿಕರಣವು ಹೊರಟಿದೆ. ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ. ಮೊದಲನೆಯ 'ಶ್ರುತೇಸ್ತು ಶಬ್ದಮೂಲತ್ವಾತ್' ಎಂಬ ಸೂತ್ರದಲ್ಲಿ ಹೀಗೆ ಹೇಳಿದೆ - ಪರಮಾತ್ಮನು ವೇದದಿಂದಷ್ಟೇ ತಿಳಿಯಲು ಸಾಧ್ಯ. ನಮ್ಮಲ್ಲಿ ಇಲ್ಲದ ಅದ್ಭುತಶಕ್ತಿಯು ಪರಮಾತ್ಮನಿಗೆ ಇರುವುದರಿಂದ ನಿರಂಶನಾದರೂ ಕೂಡ ಅಂಶತಃ ಪ್ರವೃತ್ತಿಯನ್ನು ಅವನು ಮಾಡುತ್ತಾನೆ. ಆದ್ದರಿಂದ ನಮ್ಮ ಬುದ್ಧಿಕಲ್ಪಿತವಾದ ಯುಕ್ತಿವಿರೋಧವನ್ನು ಪರಮಾತ್ಮನ ವಿಷಯದಲ್ಲಿ ಮಾಡಬಾರದು. ಪರಮಾತ್ಮನಿಗೆ ಮಾತ್ರ ಅಂಥ ವಿಚಿತ್ರಶಕ್ತಿಯಿದೆ. ಬೇರೆ ಯಾರಲ್ಲೂ ಕೂಡ ಆ ಶಕ್ತಿ ಇರುವುದಿಲ್ಲ. ಶಕ್ತಿಯ ಏಕದೇಶವನ್ನು ಉಪಯೋಗಿಸುತ್ತಾನೆ ಎಂದ ಮಾತ್ರಕ್ಕೆ ಭಿನ್ನಾಂಶಗಳನ್ನು ಹೊಂದಿದ್ದಾನೆಂದು ಸರ್ವಥಾ ತಿಳಿಯಬಾರದು. ತನ್ನ ಅಚಿಂತ್ಯಾದ್ಭುತಶಕ್ತಿಯಿಂದ ಸೃಷ್ಟಿಗೋಸ್ಕರ ಶಕ್ತಿಯ ಒಂದಂಶವನ್ನಷ್ಟೇ ಅವನು ಉಪಯೋಗಿಸುತ್ತಾನೆ. ಯುಕ್ತಿವಿರೋಧದೋಷವು ಜೀವಕರ್ತೃತ್ವ-ಪಕ್ಷದಲ್ಲಿ ಮಾತ್ರ ಪ್ರಾಪ್ತವಾಗುತ್ತದೆ. ಈಶಕರ್ತೃತ್ವಪಕ್ಷಕ್ಕೆ ಯುಕ್ತಿಯವಿರೋಧವು ಬರುವುದೇ ಇಲ್ಲ. ಪರಮಾತ್ಮನಲ್ಲಿ ಭಿನ್ನಾಂಶಗಳಿಲ್ಲದಿದ್ದರೂ ತನ್ನ ಶಕ್ತಿಯ ಒಂದಂಶವನ್ನಷ್ಟೇ ಉಪಯೋಗಿಸಿಕೊಂಡು ಸೃಷ್ಟಿ ಮಾಡುವಂಥ ಸಾಮರ್ಥ್ಯ ಅವನಲ್ಲಿದೆ ಎಂದು ಒಪ್ಪೋಣ. ಆದರೆ ಯಾವಾಗ ಈ ಸಾಮರ್ಥ್ಯವೇ ನಾಶವಾಗುತ್ತದೋ, ಆಗ ಜಗತ್ಕರ್ತೃತ್ವವನ್ನು ಅವನಲ್ಲಿ ಹೇಳಲೂ ಕೂಡ ಸಾಧ್ಯವಾಗುವುದಿಲ್ಲ ಅಲ್ಲವೆ ? ಈ ಪ್ರಶ್ನೆಯೂ ಕೂಡ ತಪ್ಪು. 'ಯಾ ಶಾಶ್ವತಾತ್ಮೇತಿ ಚ ಯಾಂ ವದಂತಿ' ಎಂಬ ಶ್ರುತಿಯು ಪರಮಾತ್ಮನಲ್ಲಿರುವ ಅಚಿಂತ್ಯಾದ್ಭುತಶಕ್ತಿಯು ಶಾಶ್ವತವಾಗಿದೆ ಎಂದು ಸಾರುತ್ತಿದೆ. ಭಗವಂತನಿಗೆ ಜಡವಾದ ಅವಯವಗಳು ಇರುವುದಿಲ್ಲ. ಜ್ಞಾನಾನಂದಾತ್ಮಕವಾದ ಅವಯವಗಳು ಮಾತ್ರ ಇವೆ.

ಆದ್ದರಿಂದಲೇ ಅವನು ಇಷ್ಟು ದೊಡ್ಡ ಜಗತ್ತನ್ನು ನಿರ್ಮಾಣ ಮಾಡಲು ಸಮರ್ಥನಾಗಿದ್ದಾನೆ. ಈ ವಿಶೇಷ ಯುಕ್ತಿಯನ್ನು ಅವಶ್ಯವಾಗಿ ತಿಳಿಯಬೇಕು. 'ವಿಚಿತ್ರಶಕ್ತಿಃ ಪುರುಷಃ ಪುರಾಣೋ' ಇತ್ಯಾದಿ ಶ್ರುತಿಗಳಿಂದ ಅಘಟಿತಾಘಟನಾಶಕ್ತಿಯು ಇರುವುದು ಪರಮಾತ್ಮನಲ್ಲಿ ಮಾತ್ರ ಸಿದ್ಧವಾಗುತ್ತದೆ. ಆದ್ದರಿಂದ ಸರ್ವಕರ್ತೃತ್ವವು ಪರಮಾತ್ಮನಲ್ಲಿ ಅಬಾಧಿತವಾಗಿ ಇರುತ್ತದೆ. ಜೀವಕರ್ತೃತ್ವವು ಇರುವುದಿಲ್ಲ ಎಂಬುದು ಈ ಅಧಿಕರಣದಿಂದ ಸಿದ್ಧವಾಯಿತು.

ನ ಪ್ರಯೋಜನಾಧಿಕರಣ - ಪರಮಾತ್ಮನು ಜಗತ್ತನ್ನು ಸೃಷ್ಟಿ ಮಾಡುವುದರಿಂದ ಸ್ವಾರ್ಥವಿಲ್ಲ. ಯಾವುದೇ ಪ್ರಯೋಜನವಿಲ್ಲದೇ ಪ್ರೇಕ್ಷಾವಂತರು ಪ್ರವೃತ್ತಿ ಮಾಡಲಾರರು. ಪ್ರಯೋಜನದ ಉದ್ದೇಶವಿದೆ ಎಂದು ಹೇಳಿದರೆ ಅಪೂರ್ಣತ್ವವು ಪ್ರಾಪ್ತವಾಗುತ್ತದೆ. ಅಪೂರ್ಣತ್ವವಿದ್ದರೆ ಸರ್ವಕರ್ತೃತ್ವವು ಕೂಡುವುದಿಲ್ಲ. ಪ್ರಯೋಜನಾಪೇಕ್ಷೆ ಇಲ್ಲವೆಂದು ಹೇಳಿದರೆ ಪ್ರೇಕ್ಷಾವತ್ತ್ವವು ಇಲ್ಲ ಒಂದು ಒಪ್ಪಿದಂತಾಗುತ್ತದೆ. ಆಗಲೂ ಕೂಡ ಸೃಷ್ಟ್ಯಾದಿ ಪ್ರವೃತ್ತಿಯು ಕೂಡುವುದಿಲ್ಲ. ಹೀಗೆ ಭಗವಂತನ ಸರ್ವಕರ್ತೃತ್ವಕ್ಕೆ ಪುನಃ ಯುಕ್ತಿವಿರೋಧವು ಪ್ರಾಪ್ತವಾದರೆ ಎರಡು ಸೂತ್ರಗಳಿಂದ ಕೂಡಿದ ನ ಪ್ರಯೋಜನಾಧಿಕರಣವು ಹೊರಟಿದೆ.

ಅನಾಯಾಸಸಾಧ್ಯವಾದ ಕಾರ್ಯವನ್ನು ಮಾಡಲು ಯಾವುದೇ ಪ್ರಯೋಜನದ ಅಪೇಕ್ಷೆ ಇರುವುದಿಲ್ಲ. ಪರಮಾತ್ಮನಿಗೆ ಈ ಸೃಷ್ಟಿಯ ವ್ಯಾಪಾರವು ಅನಾಯಾಸಸಾಧ್ಯವಾಗಿದೆ. ಮತ್ತು 'ದೇವಸ್ಯೈಷ ಸ್ವಭಾವೋಽಯಮ್' ಎಂಬ ಶ್ರುತಿಯು ಜಗತ್‌ಸೃಷ್ಟ್ಯಾದಿಗಳನ್ನು ಮಾಡುವುದು ಈಶ್ವರನ ಸ್ವಭಾವವೆಂದು ಬಣ್ಣಿಸುತ್ತದೆ. ಜ್ಞಾನಿಗಳು ಪ್ರವಚನಗಳನ್ನು ಮಾಡುವ ಸಂದರ್ಭದಲ್ಲಿ ಹಸ್ತಾದಿಚಾಲನೆಗಳನ್ನು ಫಲವಿಲ್ಲದಿದ್ದರೂ ಕೂಡ ಮಾಡುತ್ತಾರೆ. ಇದು ಸ್ವಭಾವವಾದ್ದರಿಂದ ಹೇಗೆ ಪ್ರಯೋಜನವನ್ನು ಹೊಂದಿರುವುದಿಲ್ಲವೋ, ಅದರಂತೆ ಈಶ್ವರನ ಸೃಷ್ಟಿ ವ್ಯಾಪಾರವೂ ಕೂಡ ಅವನ ಸ್ವಭಾವವಾದ್ದರಿಂದ ಪ್ರಯೋಜನವನ್ನು ಹೊಂದಿರುವುದಿಲ್ಲ. ಆದ್ದರಿಂದ ವಿಷ್ಣುವಿನ ಸರ್ವಕರ್ತೃತ್ವಕ್ಕೆ ಯಾವುದೇ ಬಾಧಕವಿಲ್ಲ ಎಂಬುದು ನ ಪ್ರಯೋಜನಾಧಿಕರಣದ ಸಾರ.

ವೈಷಮ್ಯನೈರ್ಘೃಣ್ಯಾಧಿಕರಣ - ಪರಪ್ರಯೋಜನಕ್ಕೋಸ್ಕರ ಪರಮಾತ್ಮನು ಸೃಷ್ಟಿಯನ್ನು ಮಾಡುತ್ತಾನೆ. ಅವರವರ ಕರ್ಮಕ್ಕೆ ಅನುಗುಣವಾಗಿ ಫಲವನ್ನು ನೀಡುತ್ತಾನೆ ಎಂದು ಹೇಳಿದರೆ ನಿರ್ನಿಮಿತ್ತವಾಗಿ ಕೆಲವರಿಗೆ ಸುಖವನ್ನು ಕೊಡುತ್ತಾನೆ. ಕೆಲವರಿಗೆ ದುಃಖವನ್ನು

'ಈಶ' ಎಂಬೆರಡು ಪರ್ಯಾಯಪದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಇವನಲ್ಲಿಯೂ ವಿಶೇಷವನ್ನು ಒಪ್ಪಬೇಕಾಗಿಲ್ಲ. ನಿರ್ವಿಶೇಷಾಭಿನ್ನನಾದ ಇವನಲ್ಲಿ ಅಣುತ್ವ ಹಾಗೂ ಮಹತ್ವಗಳಿಗೆ ವಿರೋಧವು ಬಂದೇ ಬರುತ್ತದೆ. ಪ್ರಮಿತವಾದ್ದರಿಂದ ವಿರೋಧವಿಲ್ಲ ಎನ್ನುವುದಾದರೆ ಜೀವನಲ್ಲಿಯೂ ಕೂಡ ಇದು ಸಮಾನ.

ಈಶ್ವರನಲ್ಲಿ ಅಚಿಂತ್ಯವಾದ ಶಕ್ತಿಯಿಂದ ಎಲ್ಲಾ ಬಗೆಯ ವಿರೋಧಗಳನ್ನು ಪರಿಹಾರ ಮಾಡುವುದಾದರೆ ಉಪಾದಾನವಿಲ್ಲದೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು. ತನ್ನಲ್ಲಿರುವ ಜ್ಞಾನ ಹಾಗೂ ಇಚ್ಛೆಗಳನ್ನೂ ಕೂಡ ಉಪಯೋಗಿಸಿಕೊಳ್ಳದೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು. ಅಥವಾ ತಾನೇ ಉಪಾದಾನಕಾರಣನಾಗಬೇಕಾದೀತು. ಶೂನ್ಯದಿಂದಲೇ ಜಗತ್ತನ್ನು ಸೃಷ್ಟಿ ಮಾಡಬೇಕಾದೀತು. ಮುಕ್ತರನ್ನೂ ಕೂಡ ಸಂಸಾರಿಗಳನ್ನಾಗಿ ಮಾಡಬೇಕಾದೀತು ಈ ಎಲ್ಲಾ ಸಮಸ್ಯೆಗಳಿರುವುದರಿಂದ ಈಶ್ವರನಲ್ಲಿ ಅಚಿಂತ್ಯಾದ್ಭುತಶಕ್ತಿಯಿಂದ ವಿರೋಧವನ್ನು ಪರಿಹರಿಸಲಾಗದು. ಇಷ್ಟು ಅಧಿಕರಣದ ಪೂರ್ವಪಕ್ಷ.

ಶ್ರೋತ್ರೇಂದ್ರಿಯಕ್ಕೆ ವಿಷಯವಾದ ಶಬ್ದಾದಿಗಳ ಬಗ್ಗೆ ಚಕ್ಷುರಾದಿ ಇತರ ಇಂದ್ರಿಯಗಳು ಸಾಧಕವೂ ಆಗುವುದಿಲ್ಲ. ಬಾಧಕವೂ ಆಗುವುದಿಲ್ಲ. ಇದರಂತೆ ಈಶ್ವರನ ವಿಷಯದಲ್ಲಿ ಶುಷ್ಕವಾದ ತರ್ಕವು ಸಾಧಕವೂ ಆಗುವುದಿಲ್ಲ. ಬಾಧಕವೂ ಆಗುವುದಿಲ್ಲ.

ವಾಕ್ಯದಿಂದ ಪ್ರತಿಪಾದಿತವಾದ ವಿಷಯದಲ್ಲಿ ಯುಕ್ತಿಯು ಯಾವಾಗಲೂ ವಿರೋಧ ಮಾಡಲು ಸಮರ್ಥವಾಗುವುದಿಲ್ಲ. ಒಂದು ವೇಳೆ ವಾಕ್ಯಗಳಲ್ಲಿ ಪರಸ್ಪರ ವಿರೋಧವು ಬಂದರೆ ಆವಾಗ ಮಾತ್ರ ತರ್ಕವು ವಿರೋಧ ಪರಿಹಾರಕ್ಕಾಗಿ ಸಹಾಯ ಮಾಡುತ್ತದೆ. ಹೀಗೆ ಭಾಷ್ಯದಲ್ಲಿ ಸ್ಮೃತಿಯನ್ನು ಉದಾಹರಿಸಿದ್ದಾರೆ.

ದೇವಶಿಲ್ಪಿ ಎನಿಸಿದ ವಿಶ್ವಕರ್ಮನು ತನ್ನ ಸಾಮರ್ಥ್ಯದಿಂದ ಪುಷ್ಪಕವಿಮಾನವನ್ನು ನಿರ್ಮಾಣ ಮಾಡಿದನು. ಸಣ್ಣದಾದ ಪುಷ್ಪಕವಿಮಾನದಲ್ಲಿ ಐದುಮಂದಿ ಕುಳಿತುಕೊಳ್ಳಬಹುದು. ಅಷ್ಟೇ ಅಲ್ಲ ಲಕ್ಷಾಂತರಮಂದಿಯೂ ಸಹ ಕುಳಿತುಕೊಳ್ಳಬಹುದು. ಅನೇಕರು ಕುಳಿತುಕೊಳ್ಳುವ ಸ್ಥಳದಲ್ಲಿ ಸೂಕ್ಷ್ಮತ್ವವು ಇರುವುದಿಲ್ಲ. ಸೂಕ್ಷ್ಮತ್ವವಿರುವೆಡೆ ಅನೇಕ ಜನರ ಆವಾಸಯೋಗ್ಯತ್ವವು ಇರುವುದಿಲ್ಲ. ಇದೆರಡೂ ಪರಸ್ಪರ ವಿರುದ್ಧವೆಂದು ಲೋಕದಲ್ಲಿ ಕಂಡಿದೆ. ಆದರೆ ವಿಶ್ವಕರ್ಮನಿರ್ಮಾಣ ಮಾಡಿದ ಪುಷ್ಪಕವಿಮಾನದಲ್ಲಿ ಇವೆರಡೂ ವಿರುದ್ಧಧರ್ಮಗಳು ಒಟ್ಟಿಗೆ ಇರುವುದನ್ನು ನಾವು ಕಂಡಿರುತ್ತೇವೆ.

ಮನುಷ್ಯರಲ್ಲಿ ಕಾಣಸದ ವಿಚಿತ್ರಶಕ್ತಿಯನ್ನು ದೇವತೆಗಳಲ್ಲಿ ಕಾಣುತ್ತೇವೆ. ಅಷ್ಟೇ ಏಕೆ ನಮ್ಮಲ್ಲಿ ಕಾಣಸದ ಶಕ್ತಿಯನ್ನು ಮತ್ತೊಬ್ಬ ಮನುಷ್ಯನಲ್ಲಿಯೇ ನೋಡುತ್ತಿದ್ದೇವೆ.

ಸಮುದ್ರದ ದಡವನ್ನೇ ನೋಡಲು ನಮ್ಮಿಂದ ಸಾಧ್ಯವಿಲ್ಲ. ಹೀಗಿರಬೇಕಾದರೆ ಅಗಸ್ತ್ಯರು ಸಮಗ್ರ ಸಮುದ್ರವನ್ನೇ ಆಚಮನವನ್ನಾಗಿ ಕುಡಿದು ಬಿಟ್ಟರಲ್ಲವೇ ?

ಹೀಗೆ ಅನೇಕ ಕಡೆ ವಿರುದ್ಧವಾದ ಧರ್ಮಗಳನ್ನು ಒಟ್ಟಿಗೆ ಇರುವುದು ಕಂಡಿದ್ದೇವೆ. ಇದರಂತೆ ಈಶ್ವರನಲ್ಲಿ ವಿರುದ್ಧ ಧರ್ಮಗಳು ಇರಬಹುದು. ಅಚಿಂತ್ಯವಾದ ಶಕ್ತಿಯಿಂದ ಇಂತಹ ವಿರುದ್ಧ ಧರ್ಮಗಳು ಈಶ್ವರನಲ್ಲಿ ಹೊಂದುತ್ತದೆ.

'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದ ಸಾರ್ಥಕ್ಯವನ್ನು ಅದ್ವೈತಿಗಳು ಹೀಗೆ ಸಮರ್ಥಿಸುತ್ತಾರೆ- ವಿವರ್ತಕಾರಣವೇ ನಮಗೆ ಅಭಿಪ್ರೇತವಾಗಿದೆ. ಆದರೆ ಕ್ಷೀರದ ದೃಷ್ಟಾಂತವನ್ನು ಸೂತ್ರಕಾರರು ನೀಡಿದ್ದರಿಂದ ಪರಿಣಾಮಕಾರಣನಾಗುವನೆಂಬ ಭ್ರಾಂತಿಯು ಪ್ರಸಕ್ತವಾಗುತ್ತದೆ. ಅದರ ಪರಿಹಾರಕ್ಕಾಗಿ ಸೂತ್ರಕಾರರು 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂದು ಹೇಳಿದ್ದಾರೆ. ಈ ಸೂತ್ರದಲ್ಲಿ ಜೀವದೃಷ್ಟಾಂತದಿಂದ ಪರಮಾತ್ಮನು ವಿವರ್ತಕಾರಣನಾಗಿದ್ದಾನೆಂಬುದನ್ನು ಸಮರ್ಥಿಸಿದ್ದಾರೆ. ಜೀವನು ಹೇಗೆ ಸ್ವಾಪ್ನಪದಾರ್ಥಗಳನ್ನು ಕಾಣುವನೋ, ಅದರಂತೆ ಈ ಜಗತ್ತನ್ನೂ ಕೂಡ ಪರಮಾತ್ಮನು ಸೃಷ್ಟಿ ಮಾಡುತ್ತಾನೆ ಎಂಬುದು ಅದ್ವೈತಿಗಳ ಅಭಿಪ್ರಾಯ.

ಇದು ತಪ್ಪು. ಸೂತ್ರಕಾರರಿಗೆ ವಿವರ್ತಕಾರಣವೇ ವಿವಕ್ಷಿತವಾಗಿದ್ದಲ್ಲಿ ಕ್ಷೀರದ ದೃಷ್ಟಾಂತವನ್ನು ಮಧ್ಯದಲ್ಲೇಕೆ ಹೇಳುತ್ತಿದ್ದರು. ಈಗಾಗಲೇ ಅದೃಶ್ಯತ್ವಾಧಿಕರಣವೇ ಮೊದಲಾದ ಅನೇಕ ಅಧಿಕರಣಗಳಲ್ಲಿ ವಿವರ್ತವಾದವನ್ನು ಸಮರ್ಥಿಸಿದ ಮೇಲೆ ಪುನಃ ಜಿಜ್ಞಾಸುವಿನ ದಿಕ್ಕು ತಪ್ಪಿಸಲು ಪರಿಣಾಮಕಾರಣ ದೃಷ್ಟಾಂತವನ್ನು ನೀಡುವುದು ಸೂತ್ರಕಾರರ ಕುಚೋದ್ಯವಲ್ಲವೇ? ವಿವರ್ತಕಾರಣವೇ ವಿವಕ್ಷಿತವಾಗಿದ್ದಲ್ಲಿ ನೇರವಾಗಿ ಸ್ವಪ್ನಾದಿದೃಷ್ಟಾಂತವನ್ನೇ ಅವರು ಹೇಳುತ್ತಿದ್ದರು.

ಮತ್ತು ವಿವರ್ತಕಾರಣವೇ ಅಯುಕ್ತ. ವಿವರ್ತಕಾರಣಕ್ಕೆ ಶಬ್ದಗಮ್ಯತ್ವವಾಗಲೀ, ತರ್ಕಾಗಮ್ಯತ್ವ- ವಾಗಲೀ ಉಪಯುಕ್ತವೇ ಅಲ್ಲ. ವಿವರ್ತಕಾರಣ ಎಂದರೆ ಜಗತ್‌ಭ್ರಾಂತಿಗೆ ಅಧಿಷ್ಠಾನನಾಗಿದ್ದಾನೆಂದಷ್ಟೇ ಅರ್ಥ. ಇದಕ್ಕೇ ಶಬ್ದಗಮ್ಯತ್ವ, ಅಗಮ್ಯತ್ವಗಳು ಏಕೆ ಬೇಕಾಗುತ್ತವೆ.

ಮತ್ತು ಜೀವನು ಹೇಗೆ ಸ್ವಾಪ್ನಪದಾರ್ಥಗಳ ಭ್ರಾಂತಿಯುಳ್ಳವನೋ, ಅದರಂತೆ ಜಗದ್ವಿಷಯಕ ಭ್ರಾಂತಿಯುಳ್ಳವನು ಬ್ರಹ್ಮನಾಗಿದ್ದಾನೆ ಎಂಬುದು ತಪ್ಪು. ಜೀವನಂತೆ ಬ್ರಹ್ಮನಿಗೆ ಭ್ರಾಂತಿಯನ್ನು ಒಪ್ಪಿದರೆ ಜೀವನು ಹೇಗೆ ಸರ್ವಜ್ಞನಲ್ಲವೋ, ಅದರಂತೆ ಬ್ರಹ್ಮನೂ ಕೂಡ ಸರ್ವಜ್ಞನಾಗಲಾರ. ಇನ್ನು ಬ್ರಹ್ಮನು ಭ್ರಾಂತಿಯುಳ್ಳವನಲ್ಲ. ಭ್ರಾಂತಿಗೆ ಕೇವಲ ಅದಿಷ್ಠಾನನಾಗಿದ್ದಾನೆಂದು ಉತ್ತರಿಸಬೇಕು. ಹಾಗೇ ಹೇಳಿದರೆ ದೃಷ್ಟಾಂತವೇ ತಪ್ಪಾಗುತ್ತದೆ. ದೃಷ್ಟಾಂತದಲ್ಲಿ ಜೀವನು ಸ್ವಾಪ್ನಭ್ರಮೆಗೆ ಅಧಿಷ್ಠಾನನಾಗುವುದಾದರೆ ಸ್ವಪ್ನದಲ್ಲಿ ತೋರುವ ಎಲ್ಲ ಪದಾರ್ಥಗಳಲ್ಲೂ ಕೂಡ 'ಅಹಂ' ಎಂಬ ಬುದ್ಧಿಯು ಜೀವನಿಗೆ ಬರಬೇಕಾಗುತ್ತದೆ. ಮತ್ತು 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದಲ್ಲಿ ವಿಚಿತ್ರಶಕ್ತಿಯನ್ನು ಹೇಳಿದ್ದೂ ಕೂಡ ತಪ್ಪಾಗುತ್ತದೆ.

ಬ್ರಹ್ಮನು ಭ್ರಾಂತಿಯುಳ್ಳವನೂ ಅಲ್ಲ, ಭ್ರಾಂತಿಗೆ ಅಧಿಷ್ಠಾನನೂ ಅಲ್ಲ. ಮತ್ತೊಬ್ಬರಿಗೆ ಭ್ರಾಂತಿಯನ್ನು ತಂದೊಡುತ್ತಾನೆ ಎಂದು ಅದ್ವೈತಿಗಳು ಸಮರ್ಥನೆ ಮಾಡುವುದೂ ಕೂಡ ತಪ್ಪು. ಸ್ವಪ್ನವನ್ನು

ಕಾಣುವವನು ಮತ್ತೊಬ್ಬನಿಗೆ ಭ್ರಾಂತಿ ಬರಿಸಲು ಸಾಧ್ಯವೇ ಇಲ್ಲ. ಮತ್ತು ಸ್ವಾಪ್ನಸೃಷ್ಟಿಯಲ್ಲಿ 'ನ ತತ್ರ ರಥಃ' ಎಂಬ ಶ್ರುತ್ಯುದಾಹರಣೆಯನ್ನೂ ಕೂಡ ನೀಡಿದ್ದು ತಪ್ಪಾಗುತ್ತದೆ. ಏಕೆಂದರೆ ಸ್ವಪ್ನಪದಾರ್ಥಗಳನ್ನು ಸೃಷ್ಟಿ ಮಾಡುವವನು ಜೀವನೋ, ಈಶನೋ? ಜೀವನೆಂದರೆ 'ಸಹಿ ಕರ್ತಾ' ಇತ್ಯಾದಿ ಶ್ರುತಿ ವಿರೋಧ ಬರುತ್ತದೆ. ಈಶನೆಂದರೆ ಗಗನಾದಿಗಳಂತೆ ಸ್ವಾಪ್ನಪದಾರ್ಥವೂ ಕೂಡ ವ್ಯಾವಹಾರಿಕವಾಗುತ್ತದೆ. ಏಕೆಂದರೆ ಈಶ್ವರನಿರ್ಮಿತವಾದ ಪದಾರ್ಥಗಳೆಲ್ಲವೂ ವ್ಯಾವಹಾರಿಕವಾಗುತ್ತದೆಂದು ಅದ್ವೈತಿಗಳಾದ ನೀವೇ ಒಪ್ಪಿರುತ್ತೀರಿ. ಆದ್ದರಿಂದ ಅದ್ವೈತಿಗಳ ಅಭಿಪ್ರಾಯ ಅಸಾಧುವಾಗಿದೆ.

## ನ ಪ್ರಯೋಜನಾಧಿಕರಣ

ಹಿಂದಿನ ಅಧಿಕರಣದಲ್ಲಿ ಹೇತುಮುಖ ಯುಕ್ತಿವಿರೋಧವನ್ನು ಹೇಳಿದ್ದಾಯಿತು. ಪರಮಾತ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ವಿಷಯದಲ್ಲಿ ಬರುವ ಯುಕ್ತಿವಿರೋಧವನ್ನು ಪರಿಹರಿಸಿದ್ದಾಯಿತು. ಈ ಅಧಿಕರಣದಲ್ಲಿ ಪರಮಾತ್ಮನು ಜಗತ್ತಿಗೆ ಕಾರಣನಾಗಿದ್ದಾನೆಂದು ಹೇಳಿದರೆ ಇದರಿಂದ ಅವರಿಗೆ ಪ್ರಯೋಜನವಿದೆಯೋ, ಇಲ್ಲವೋ? ಎಂಬ ಫಲಮುಖವಿರೋಧವನ್ನು ಪರಿಹರಿಸುತ್ತಿದ್ದಾರೆ. ಯಾರೇ ಒಬ್ಬ ಪ್ರೇಕ್ಷಾವಂತನು ಪ್ರವೃತ್ತಿಯನ್ನು ಮಾಡಬೇಕೆಂದರೆ ಅದರಿಂದ ಪ್ರಯೋಜನವಿದ್ದೇ ಇರುತ್ತದೆ. ಪರಮಾತ್ಮನು ಈ ಜಗತ್ತಿನ ಸೃಷ್ಟಿಯನ್ನು ಮಾಡಲು ಹೊರಟಿರುವುದರಿಂದ ಅವನಿಗೆ ಇದರಿಂದ ಪ್ರಯೋಜನವಿದೇ ಎಂದೇ ಆಯಿತು. ಆದ್ದರಿಂದ ಸೃಷ್ಟ್ಯಾದಿ ವ್ಯಾಪಾರಗಳೆಲ್ಲವೂ ಕೂಡ ಕೇವಲ ಫಲಕ್ಕೋಸ್ಕರವೇ ಇರುತ್ತವೆ. ಯಾವ ಫಲವನ್ನು ಈ ಸೃಷ್ಟ್ಯಾದಿಗಳನ್ನು ಮಾಡುವುದರಿಂದ ಹೊಂದುತ್ತಾನೋ, ಆ ಫಲವು ಬ್ರಹ್ಮನಿಗೆ ಮೊದಲು ಇರಲಿಲ್ಲ ಎಂಬುದು ಇದರಿಂದ ಸಿದ್ಧವಾಯಿತು. ಆದ್ದರಿಂದ ಅಪೂರ್ಣನಾದ ಭಗವಂತನಲ್ಲಿ ಜಗತ್ ಸ್ರಷ್ಟೃತ್ವವೆಂಬ ಧರ್ಮವೇ ಯುಕ್ತವಾಗುವುದಿಲ್ಲ. ಇದು ಪೂರ್ವಪಕ್ಷಕಾರರ ಉದ್ದೇಶ.

ಪ್ರೇಕ್ಷಾವಂತನಾದ ಮಾತ್ರಕ್ಕೆ ಯಾವುದಾದರೂ ಪ್ರಯೋಜನವನ್ನು ಉದ್ದೇಶ ಇಟ್ಟುಕೊಂಡೇ ಪ್ರವೃತ್ತಿ ಮಾಡಬೇಕೆಂಬ ನಿಯಮವೇ ತಪ್ಪು. ಸುಖೋದ್ರೇಕಾದಿ ಸಾಮಗ್ರಿಗಳು ಇದ್ದಾಗ ಪ್ರವೃತ್ತಿಯನ್ನು ಪ್ರೇಕ್ಷಾವಂತನಾದವನೂ ಕೂಡ ಮಾಡುತ್ತಾನೆ. ಆದ್ದರಿಂದ ಸೃಷ್ಟ್ಯಾದಿವ್ಯಾಪಾರವು ಕೇವಲ ಲೀಲಾರೂಪವೆಂದೇ ಪರಿಗಣಿಸಬೇಕೇ ಹೊರತು, ಫಲಕ್ಕೋಸ್ಕರ ಎಂದು ಪರಿಗಣಿಸಬಾರದು. ಹೀಗಿರುವಾಗ ಸೃಷ್ಟ್ಯಾದಿಗಳಿಂದ ಸಾಧ್ಯವಾದ ಫಲವು ಬ್ರಹ್ಮನಲ್ಲಿ ಮೊದಲು ಇರಲಿಲ್ಲ. ಅನಂತರ ಬಂತು ಎಂಬ ಚಿಂತನೆಯೇ ಅಯುಕ್ತವಾಗುತ್ತದೆ. ಹಾಗಾಗಿ ಜಗತ್‌ಸ್ರಷ್ಟೃತ್ವವು ಬ್ರಹ್ಮನಲ್ಲಿ ಯುಕ್ತವಾಗುತ್ತದೆ. ಇದು ಸಿದ್ಧಾಂತದ ಪ್ರಮೇಯ.

ಅಧಿಕರಣದ ಪೂರ್ವಪಕ್ಷ - ಈಶ್ವರನು ಪ್ರಯೋಜನದ ಉದ್ದೇಶದಿಂದ ಸೃಷ್ಟಿಪ್ರವೃತ್ತಿಯನ್ನು ಮಾಡುವುದಾದರೆ, ಅಪೂರ್ಣನಾಗಬೇಕಾಗುತ್ತದೆ. ಕೇವಲ ಸ್ವಭಾವದಿಂದಲೂ ಪ್ರವೃತ್ತಿ ಮಾಡಲು

ಸಾಧ್ಯವಿಲ್ಲ. ಇವನು ಚೇತನನಾಗಿದ್ದಾನೆ. ಚೇತನನಾಗಿದ್ದರೂ ಉನ್ಮತ್ತನಾಗಿ ನಿಷ್ಫಲನಾಗಿ ಪ್ರವೃತ್ತಿಯನ್ನು ಮಾಡಲಾರನು. ಏಕೆಂದರೆ ಪ್ರೇಕ್ಷಾವಂತನಾಗಿದ್ದಾನೆ. ಪ್ರೇಕ್ಷಾವಂತನಾಗಿದ್ದರೂ ಕೇವಲ ದಯೆಯಿಂದ ಪ್ರವೃತ್ತಿ ಮಾಡಲು ಸಾಧ್ಯವಿಲ್ಲ. ಆ ದಯೆಯಿಂದ ದೊರೆಯುವ ಫಲವು ಇವನಿಗೆ ದೊರೆಯುವುದಿಲ್ಲ. ಏಕೆಂದರೆ ಆಪ್ತಕಾಮನಾಗಿದ್ದಾನೆ. ಫಲದ ಉದ್ದೇಶವೇ ಇಲ್ಲದೇ ಪ್ರವೃತ್ತಿ ಮಾಡುತ್ತಾನೆಂದು ಹೇಳಿದರೆ ಪ್ರೇಕ್ಷಾವತ್ತ್ವವೇ ಭಂಗವಾಗಬೇಕಾಗುತ್ತದೆ. ಆದ್ದರಿಂದ ಬ್ರಹ್ಮನು ನಿರ್ದುಷ್ಟನಾಗಿದ್ದಾನೆಂದು ಹೇಳಿದ್ದೇ ತಪ್ಪು.

ಸ್ವಾಭಾವಿಕವಲ್ಲದ ಪ್ರವೃತ್ತಿಯನ್ನು ಮಾಡುವಾಗ ಪ್ರಾಜ್ಞರಾದವರೂ ಕೂಡ ಫಲವನ್ನು ಅಪೇಕ್ಷಿಪಡುತ್ತಾರೆ. ಆದರೆ ಕಣ್ಣಿನ ರೆಪ್ಪೆ ಬಡಿಯುವಿಕೆ ಮೊದಲಾದ ಸ್ವಾಭಾವಿಕ ಪ್ರವೃತ್ತಿಗಳಲ್ಲಿ ಫಲದ ಅಪೇಕ್ಷೆಯನ್ನು ಪ್ರೇಕ್ಷಾವಂತರೂ ಕೂಡ ಹೊಂದಿರುವುದಿಲ್ಲ.

ಮಾವಿನ ಮರ ಮೊದಲಾದವು ವಸಂತಕಾಲವು ಪ್ರಾಪ್ತವಾದಾಗ ಹೂವು, ಚಿಗುರು ಮೊದಲಾದವುಗಳನ್ನು ಸಹಜವಾಗಿ ಹೊಂದುತ್ತವೆ. ಅದರಂತೆ ಈಶ್ವರನು ಸೃಷ್ಟಿ-ಸ್ಥಿತಿ-ಸಂಹಾರಗಳನ್ನು ಕ್ರಮವಾಗಿ ಮಾಡುತ್ತಾನೆ. ಇದೆಲ್ಲವೂ ಅವನ ಸಹಜ ಸ್ವಭಾವ.

'ದೇವಸ್ಯೈಷ ಸ್ವಭಾವೋಽಯಮ್' 'ಇಚ್ಛಾಪೂರ್ವಕವಾದ ಜಗತ್ಸೃಷ್ಟ್ಯಾದಿ ವ್ಯಾಪಾರವು ಪರಮಾತ್ಮನ ಸ್ವಭಾವವಾಗಿದೆ' ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಪ್ರೇಕ್ಷಾವಂತನು ಹಾಡು ಹೇಳುವಾಗ ತಲೆ ಅಲ್ಲಾಡಿಸುತ್ತಾನೆ. ಪಾಠ ಹೇಳುವಾಗ ಕೈ ಅಲ್ಲಾಡಿಸುತ್ತಾನೆ. ಇದರಿಂದ ಅವನಿಗೇನೂ ಪ್ರಯೋಜನ ಇರುವುದಿಲ್ಲ. ಆದರೂ ಇಂಥ ಚೇಷ್ಟೆಗಳನ್ನು ಹೇಗೆ ಮಾಡುತ್ತಾನೋ, ಅದರಂತೆ ದೇವರು ಸೃಷ್ಟ್ಯಾದಿ ಚೇಷ್ಟೆಗಳನ್ನು ಮಾಡುತ್ತಾನೆ.

ಪ್ರೇಕ್ಷಾವಂತನು ಬಹಳ ದುಃಖವಾದಾಗ ಅಳುತ್ತಾನೆ. ತುಂಬಾ ಸುಖವಾದಾಗ ನಗುತ್ತಾನೆ. ಅಳುವಿಗೆ ನಗುವಿಗೆ ಏನೂ ಪ್ರಯೋಜನವಿಲ್ಲ. ಆದರೂ ಇಂಥ ಪ್ರವೃತ್ತಿಯನ್ನು ಪಂಡಿತರೂ ಕೂಡ ಮಾಡುತ್ತಾರೆ.

ಮತ್ತು ಆಗ ತಾನೇ ಹುಟ್ಟಿದ ಕರುವಿಗೆ ತಾಯಿಯಾದ ಹಸುವು ಅದಕ್ಕೆ ಹಾಲು ಕುಡಿಸಲು ಹೇಗೆ ದಯೆಯಿಂದ ಮುನ್ನುಗ್ಗುತ್ತದೋ, ಅದರಂತೆ ಎಲ್ಲಾ ದಯಾಳುಗಳು ಮತ್ತೊಬ್ಬರ ಸಂತೋಷಕ್ಕೆ ಪ್ರವೃತ್ತರಾಗುತ್ತಾರೆ. ಇದರಿಂದ ಅವರಿಗೇನೂ ಪ್ರಯೋಜನವಿರುವುದಿಲ್ಲ.

ಅತಿಪ್ರಯತ್ನದಿಂದ ಸಾಧ್ಯವಾದ ಕಾರ್ಯದಲ್ಲಿ ಏನು ಪ್ರಯೋಜನವೆಂದು ಜನರು ಪ್ರಶ್ನಿಸುತ್ತಾರೆ? ಆದರೆ ಅನಾಯಾಸಸಾಧ್ಯವಾದ ಬೆರಳತುದಿಯನ್ನು ಅಲ್ಲಾಡಿಸುವಿಕೆ ಮೊದಲಾದ ಕಾರ್ಯದಲ್ಲಿ ಏನು ಪ್ರಯೋಜನವೆಂದು? ಯಾವ ಜನರೂ ಪ್ರಶ್ನಿಸುವುದಿಲ್ಲ.

* * *

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಅಸದಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಅಸದಧಿಕರಣ

## ಬ್ರಹ್ಮಸೂತ್ರ

'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – असदिति चेन्न प्रतिषेधमात्रत्वात् ।।**

ಜಗತ್ತು ಸೃಷ್ಟಿಯಾಗುವ ಮೊದಲು ಏನೂ ಇರಲಿಲ್ಲ. 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿ ಹೇಳುವಂತೆ ವಿಶ್ವದ ಪ್ರಾಗಭಾವವೇ ಜಗತ್ತಿಗೆ ಕಾರಣವಾಗಿದೆಯೆಂದು ಹೇಳಬೇಕಲ್ಲವೇ?

ಇದು ತಪ್ಪು. ಏಕೆಂದರೆ ಪ್ರಾಗಭಾವವು ಕೇವಲ ನಿಷೇಧಸ್ವರೂಪವಾಗಿರುವುದರಿಂದ ಜಗತ್ಕಾರಣವಾಗಲು ಸಾಧ್ಯವಿಲ್ಲ.

ಅರ್ಥ -- ಅಸತ್ = ವಿಶ್ವದ ಪ್ರಾಗಭಾವವೇ ಜಗತ್ ಕರ್ತೃವಾಗಿದೆ ಈಶ್ವರನಲ್ಲ. ಇತಿ ಚೇನ್ನ = ಇದು ತಪ್ಪು. ಏಕೆಂದರೆ ಪ್ರತಿಷೇಧಮಾತ್ರತ್ವಾತ್ = ಬೇರೆ ಧರ್ಮದ ಅವಶ್ಯಕತೆಯಿಲ್ಲದೆ ಸ್ವರೂಪತಃ ನಿಷೇಧ ಬುದ್ಧಿಗೆ ವಿಷಯವಾಗುವುದರಿಂದ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಪ್ರಳಯಕಾಲದಲ್ಲಿ ಅಸತ್ ಮಾತ್ರ ಇತ್ತಲ್ಲವೇ?

**ब्रह्मसूत्रभाष्यम् – 'असदेवेदमग्र आसीत्' (छां ६.२.१) 'असतः सदजायत' (ऋ.१०.७२.३) इत्यादिनाऽसतः कारणत्वोक्तेर्विरोध इति ।**

ಅನುವಾದ - ಪ್ರಳಯಕಾಲದಲ್ಲಿ 'ಅಸತ್'ಮಾತ್ರ ಅಸ್ತಿತ್ವವನ್ನು ಹೊಂದಿತ್ತು. ಅಭಾವ ಪದಾರ್ಥದಿಂದ ಭಾವಪದಾರ್ಥವು ಹುಟ್ಟಿತು.

ಅಸತ್‌ಪದಾರ್ಥದಿಂದ ಸತ್‌ಪದಾರ್ಥವು ಹುಟ್ಟಿತು. ಹೀಗೆ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ಅಸತ್ತಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳ ಮಾತಿನಿಂದ ವಿಷ್ಣುವಿನ ಜಗತ್ಕಾರಣತ್ವಪ್ರತಿಪಾದಕತ್ವಕ್ಕೆ ವಿರೋಧ ಬರುತ್ತದೆ.

ಪ್ರತಿಪದಾರ್ಥ -- ಪ್ರಾಗಭಾವಕರ್ತೃತ್ವಕ್ಕೆ ಶ್ರುತಿಯ ಬೆಂಬಲವಿದೆ. ಇದರಿಂದ ಬ್ರಹ್ಮನ ಜಗತ್‌ಕರ್ತೃತ್ವಕ್ಕೆ ವಿರೋಧ ಬರುತ್ತದೆ. ಇದನ್ನು ಈ ಅಧಿಕರಣದಲ್ಲಿ ಪರಿಹರಿಸಲಾಗಿದೆ. 'ಅಸದಿತಿಚೇತ್' ಎಂಬ ಸೂತ್ರದಿಂದ ಸೂಚಿತವಾದ ಪೂರ್ವಪಕ್ಷವನ್ನು ಮೊದಲು ಭಾಷ್ಯದಲ್ಲಿ ಪ್ರದರ್ಶನ ಮಾಡುತ್ತಿದ್ದಾರೆ. ಅಗ್ರೇ = ಪ್ರಳಯಕಾಲದಲ್ಲಿ, ಅಸದೇವ, ಅಸತ್ = ಪದಾರ್ಥವು ಮಾತ್ರ, ಆಸೀತ್ = ಅಸ್ತಿತ್ವವನ್ನು ಪಡೆದಿತ್ತು. ಅಸತಃ = ಅಸತ್ತಿನ ದೆಸೆಯಿಂದ, ಸತ್ = ಸತ್‌ಪದಾರ್ಥವು, ಅಜಾಯತ = ಹುಟ್ಟಿತು. ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ಅಸತಃ = ಅಸತ್‌ಪದಾರ್ಥಕ್ಕೆ, ಕಾರಣತ್ವೋಕ್ತೇಃ = ಅಸತ್ ಕಾರಣತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳ, ವಿರೋಧಃ = ವಿರೋಧವು ಬರುತ್ತದೆ. ಇತಿ = ಇಷ್ಟು ಪೂರ್ವಪಕ್ಷ.

ಅಸತ್ ಪದಾರ್ಥವು ಜಗತ್‌ಕಾರಣವಲ್ಲ

**ब्रह्मसूत्रभाष्यम् – अतो वक्ति –**

**।। असदिति चेन्न प्रतिषेधमात्रत्वात् ।।१।।**

**प्रतिषेधमात्रत्वान्नासतः कारणत्वं युक्तम् ।**

ಅನುವಾದ - ಈ ಪೂರ್ವಪಕ್ಷಕ್ಕೆ ಪರಿಹಾರವನ್ನು ಹೇಳಲು 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರವು ಹೊರಟಿದೆ. ಅಸತ್‌ಪದಾರ್ಥವು ನಿಷೇಧ ಸ್ವಭಾವವಾದ್ದರಿಂದ ಜಗತ್ಕಾರಣವಾಗುವುದಿಲ್ಲ.

ಪ್ರತಿಪದಾರ್ಥ -- ಪರಿಹಾರಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅತಃ = ಮೇಲಿನ ಪೂರ್ವಪಕ್ಷಕ್ಕೆ ಉತ್ತರವನ್ನು, ವಕ್ತಿ = ಹೇಳುತ್ತಿದ್ದಾರೆ. ಪ್ರತಿಷೇಧಮಾತ್ರತ್ವಾತ್ = ನಿಷೇಧಸ್ವರೂಪವಾದ್ದರಿಂದ, ಅಸತಃ = ಅಭಾವಕ್ಕೆ, ಕಾರಣತ್ವಂ = ಜಗತ್ಕಾರಣತ್ವವು, ನ ಯುಕ್ತಮ್ = ಯುಕ್ತಿಯುಕ್ತವಲ್ಲ.

'ಅಸದೇವ ಇದಮಗ್ರ ಆಸೀತ್' ಎಂಬುದಕ್ಕೆ ವ್ಯಾಖ್ಯಾನ

**ब्रह्मसूत्रभाष्यम् – असतः कारणत्वाद् युक्तिविरुद्धं वेदवाक्यमित्येतदत्रं निषिद्ध्यते।**

ಅನುವಾದ - ಅಸತ್‌ಪದಾರ್ಥವು ಜಗತ್ತಿಗೆ ಕಾರಣವಾಗಿದೆಯೆಂದು 'ಅಸದೇವೇದಮಗ್ರಮಾಸಿತ್' ಎಂಬ ವಾಕ್ಯವು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಬ್ರಹ್ಮನೇ ಕಾರಣನೆಂದು ಹೇಳುವ 'ಸದೇವ ಸೌಮ್ಯೇದಮಗ್ರ ಆಸೀತ್' ಇತ್ಯಾದಿ ವೇದವಾಕ್ಯವು ಯುಕ್ತಿವಿರುದ್ಧವಾಯಿತು. ಎಂಬುದನ್ನು ಈ ಸೂತ್ರದಲ್ಲಿ ನಿರಾಕರಿಸುತ್ತಿದ್ದಾರೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಶೂನ್ಯವಾದಿಗಳ ಮತವನ್ನು ನಿರಾಕರಣೆ ಮಾಡುತ್ತಿದ್ದಾರೆ. ಶ್ರುತಿಪ್ರಾಪ್ತವಾದ ಅಭಾವಕರ್ತೃತ್ವವನ್ನು ನಿರಾಕರಣೆ ಮಾಡುತ್ತಿಲ್ಲ. ಆದ್ದರಿಂದ ಅಸಂಗತಿದೋಷ ಬರುತ್ತದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಸತಃ = ಅಸತ್‌ಪದಾರ್ಥಕ್ಕೆ, ಕಾರಣತ್ವಾದ್ = ಕಾರಣತ್ವವಿರುವುದರಿಂದ, ವೇದವಾಕ್ಯಮ್ = 'ಸದೇವ ಸೌಮ್ಯ' ಎಂಬ ವೇದವು, ಯುಕ್ತಿವಿರುದ್ಧಂ = ಯುಕ್ತಿವಿರುದ್ಧವಾಗಿದೆ, ಇತ್ಯೇತತ್ = ಈ

ಶಂಕೆಯನ್ನು, ಅತ್ರ = ಈ ಅಧಿಕರಣದಲ್ಲಿ, ನಿಷಿದ್ಧ್ಯತೇ = ನಿರಾಕರಣೆ ಮಾಡುತ್ತಿದ್ದಾರೆ.

ಶೂನ್ಯಮತನಿರಾಕರಣೆಯನ್ನು ಈ ಅಧಿಕರಣ ಮಾಡುತ್ತಿಲ್ಲ

**ब्रह्मसूत्रभाष्यम् – सर्वशब्दानां ब्रह्मणि समन्वयेऽपि 'तदधीनत्वादर्थवत्' इत्यादिनाऽ-मुख्यत्वेनान्यस्यापि वाच्यत्वेनाङ्गीकारादसतः प्राप्तिः । तथा श्रुतिप्राप्तमेवासन्मतमत्र निषिद्ध्यते । समयस्योपरि निषेधात् । अर्थाद् युक्तिविरोधोऽपि निराक्रियते ॥१॥**

ಅನುವಾದ - ಪ್ರಥಮಾಧ್ಯಾಯದಲ್ಲಿ ವೈದಿಕವಾದ ಸಕಲಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಸಮರ್ಥಿಸಲಾಗಿದೆ. ಆದರೂ ಕೂಡ 'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ ಅಮುಖ್ಯವಾಗಿ ಬೇರೆ ಪದಾರ್ಥವು ಪ್ರತಿಪಾದ್ಯವಾಗುತ್ತದೆ ಎಂದು ಹೇಳಲಾಗಿದೆ. ಆದ್ದರಿಂದ 'ಅಸದೇವೇದಮಗ್ರಮಾಸೀತ್' ಎಂಬ ವೇದವಾಕ್ಯಕ್ಕೆ 'ಅಭಾವದಿಂದ ಜಗತ್ತು ಹುಟ್ಟಿತು' ಎಂದು ಅರ್ಥೈಸಬಹುದು. ಮತ್ತು ಶ್ರುತಿಯಿಂದ ಪ್ರಾಪ್ತವಾದ ಅಸತ್ಕಾರಣತಾವಾದವನ್ನೇ ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ. ಶೂನ್ಯಮತವೆನಿಸಿದ ಬೌದ್ಧಮತದ ನಿರಾಕರಣೆಯನ್ನು ಇಲ್ಲಿ ಮಾಡುತ್ತಿಲ್ಲ. ಇದನ್ನು ಮುಂದಿನ ಪಾದದಲ್ಲಿ ನಿರಾಕರಿಸುತ್ತಾರೆ.

ಪ್ರತಿಪದಾರ್ಥ -- ಶ್ರುತಿಯಿಂದ ಅಸತ್ಕಾರಣತ್ವವು ಪ್ರಾಪ್ತವಾಗಿಲ್ಲವೆಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಸರ್ವಶಬ್ದಾನಾಂ = ಸಕಲವಿಧವಾದ ಶಬ್ದಗಳನ್ನು, ಬ್ರಹ್ಮಣಿ = ಪರಬ್ರಹ್ಮನಲ್ಲಿ, ಸಮನ್ವಯೇಽಪಿ = ಸಮನ್ವಯವನ್ನು ಮಾಡಿದರೂ ಕೂಡ,

ತದಧೀನತ್ವಾದರ್ಥವತ್ ಇತ್ಯಾದಿನಾ = ತದಧೀನತ್ವಾದರ್ಥವತ್ ಇವೇ ಮೊದಲಾದ ಸೂತ್ರಗಳಿಂದ, ಅಮುಖ್ಯತ್ವೇನ ಅನ್ಯಸ್ಯ = ಪ್ರಸಿದ್ಧವಾದ ಶಬ್ದಗಳಿಗೆ ಅಮುಖ್ಯವೃತ್ತಿಯಿಂದ, ಅನ್ಯಸ್ಯಾಪಿ = ಭಗವದತಿರಿಕ್ತವಾದ ಜಗತ್ತಿಗೂ, ವಾಚ್ಯತ್ವೇನ = ವಾಚ್ಯತ್ವವನ್ನು, ಅಂಗೀಕಾರಾತ್ = ಅಂಗೀಕಾರ ಮಾಡಿರುವುದರಿಂದ, ಅಸತಃ = ಶೂನ್ಯಕ್ಕೆ ಜಗತ್ಕಾರಣತ್ವವು, ಪ್ರಾಪ್ತಿಃ = ಪ್ರಾಪ್ತವಾಗುತ್ತದೆ. ತಥಾ = ಅದೇ ರೀತಿಯಾಗಿ, ಶ್ರುತಿಪ್ರಾಪ್ತಮೇವ = ಶ್ರುತಿಪ್ರಮಾಣದಿಂದ ಪ್ರಾಪ್ತವಾಗುವ, ಅಸನ್ಮತಮತ್ರ = ಅಸತ್

ಕಾರಣತ್ವವಾದವನ್ನು, ಅತ್ರ = ಈ ಅಧಿಕರಣದಲ್ಲಿ, ನಿಷಿದ್ಧ್ಯತೇ = ನಿಷೇಧ ಮಾಡಲಾಗಿದೆ. ಸಮಯಸ್ಯ = ಶೂನ್ಯಮತದ ನಿರಾಕರಣೆಯನ್ನು, ಉಪರಿ = ಎರಡನೆಯ ಪಾದದಲ್ಲಿ, ನಿಷೇಧಾತ್ = ನಿರಾಕರಿಸುತ್ತಾರೆ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

### 'ಅಸತ್' ಪದಕ್ಕೆ 'ಪುರುಷೋತ್ತಮ' ಎಂದರ್ಥ

**सत्तर्कदीपावलिः – 'असदेवेदमग्र आसीत्' 'असतः सदजायत' इत्यादिना असतो जगत्कारणत्वश्रुतेः न ब्रह्म जगत्कारणम् इति नाशङ्कनीयम् । 'न विद्यते सत् उत्तमं यस्मात् तस्मात् असत्' इत्यसच्छब्दवाच्यस्य पुरुषोत्तमस्यावश्याङ्गीकर्तव्यत्वेनाविरोधात् । अत्यन्तासतो जगत्कारणत्वासम्भवात् ।**

'ಅಸದೇವೇದಮಗ್ರ ಆಸೀತ್' 'ಅಸತಃ ಸದಜಾಯತ' ಇದೇ ಮೊದಲಾದ ಶ್ರುತಿಗಳು ಅಸತ್ತೇ ಜಗತ್ತಿಗೆ ಕಾರಣವೆಂದು ಹೇಳುತ್ತಿದೆ. ಹಾಗಾಗಿ ಬ್ರಹ್ಮನೇ ಜಗತ್ತಿಗೆ ಕಾರಣನಾಗುವುದಿಲ್ಲ. ಹೀಗೆ ಆಕ್ಷೇಪ ಮಾಡಬಾರದು. ಶ್ರುತಿಯಲ್ಲಿರುವ 'ಅಸತ್' ಎಂಬ ಪದಕ್ಕೆ ವಿಷ್ಣುವೆಂದೇ ಅರ್ಥ. 'ನ ವಿದ್ಯತೇ ಸತ್ ಉತ್ತಮಂ ಯಸ್ಮಾತ್ ತಸ್ಮಾತ್ ಅಸತ್' ಎಂಬ ನಿಷ್ಪತ್ತಿಯಂತೆ ಯಾರಿಗಿಂತ ಉತ್ತಮವಾದ ಮತ್ತೊಂದು ಪದಾರ್ಥವೇ ಇಲ್ಲವೋ, ಅವನು 'ಅಸತ್' ಎಂದು ಕರೆಸಿಕೊಳ್ಳುತ್ತಾನೆ. ಹಾಗಾಗಿ 'ಅಸತ್' ಎಂಬ ಪದಕ್ಕೆ 'ಪುರುಷೋತ್ತಮ' ಎಂದರ್ಥ. ಹಾಗಾಗಿ 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಗೆ ಪುರುಷೋತ್ತಮನು ಸೃಷ್ಟಿಯ ಮೊದಲು ಇದ್ದನು ಎಂಬರ್ಥವನ್ನು ಅಂಗೀಕರಿಸುವುದರಿಂದ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ. ಅತ್ಯಂತ ಅಸತ್ತಿಗೆ ಜಗತ್ಕಾರಣತ್ವವು ಅಸಂಭಾವಿತವಾಗಿದೆ.

### ಪುನರುಕ್ತಿ ಪರಿಹಾರ

**सत्तर्कदीपावळिः – उपरितनपादगतेन 'नासतो दृष्टत्वात्' इत्यनेन गतार्थमिदमिति नाशङ्कनीयम्। 'असतः सदजायत' इत्यादिवाक्यस्य जगत्कर्तृपुरुषोत्तमपरत्वेन युक्तिविरुद्धार्थत्वम् इत्यत्र प्रतिपादनात् । उपरि युक्तिभिः शून्यवादस्य निराकरिष्यमाणत्वेन अपौनरुक्त्यात् ।**

ಮುಂದಿನ ಪಾದದಲ್ಲಿ 'ನಾಸತೋ ದೃಷ್ಟತ್ವಾತ್' ಎಂಬ ಸೂತ್ರದಿಂದ ಈ ಸೂತ್ರವು ಗತಾರ್ಥವಾಯಿತು ಎಂದು ಆಶಂಕೆ ಮಾಡಬಾರದು. ಈ ಅಧಿಕರಣದಲ್ಲಿ 'ಅಸತಃ ಸದಜಾಯತ' ಮೊದಲಾದ ವಾಕ್ಯಗಳು ಜಗತ್ಕರ್ತೃವಾದ ಪುರುಷೋತ್ತಮಪರವಾಗಿವೆ. ಆದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ ಎಂದು ಪ್ರತಿಪಾದನೆ ಮಾಡಲಾಗಿದೆ. ಮುಂದಿನ ಪಾದದಲ್ಲಿ ಶೂನ್ಯವಾದಿಗಳು ಜಗತ್ತಿಗೆ ಅಸತ್ಕಾರಣತ್ವವನ್ನು ಪ್ರತಿಪಾದನೆ ಮಾಡುತ್ತಾರೆ. ಅವರ ಮತವನ್ನು ಯುಕ್ತಿಯ ಮೂಲಕ ಪರಿಹರಿಸಲಾಗಿದೆ. ಆದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ.

### 'ಅಸದೇವೇದಮಗ್ರ ಆಸೀತ್' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**सत्तर्कदीपावळिः – 'एतेन सर्वे व्याख्याताः' इत्यत्र 'असदादिशब्दैर्मुख्यतः परमात्मोच्यते' इति प्रतिपादितत्वेऽपि तेषाम् अमुख्यवाच्यत्वस्याप्यङ्गीकृतत्वात्। 'असतः सदजायत' इत्यनेन असत्कारणत्वं विश्वस्य आशङ्क्य – 'असदिति चेन्न प्रतिषेधमात्रत्वात्' इति परिहृतम्, इत्यदोषः । असतः कारणत्वादिकं वक्तीत्यसतः कारणत्वाद्युक्तिविरुद्धं वेदवाक्यम् इत्येतदत्र निषिद्ध्यत इत्यर्थः । तदेतदाह – 'असदेवेदमग्र आसीत्' इत्यादिना ।**

'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಸೂತ್ರದಲ್ಲಿ ಅಸದಾದಿ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಪ್ರಥಮಾಧ್ಯಾಯದ ಕೊನೆಯ ಸೂತ್ರದಲ್ಲೇ ಸಮರ್ಥನೆ ಮಾಡಿದ್ದಾಗಿದೆ. ಆದರೂ ಕೂಡ ಅಭಾವಾದಿಗಳು ಅಮುಖ್ಯವಾಗಿ ಪ್ರತಿಪಾದ್ಯವಾಗಿವೆ ಎಂದು

ಅಂಗೀಕಾರ ಮಾಡಲಾಗಿದೆ. ಆದ್ದರಿಂದ 'ಅಸತ ಸದಜಾಯತ' ಎಂದು ಶ್ರುತಿ ಹೇಳುವಂತೆ ವಿಶ್ವಕ್ಕೆ ಅಸತ್‌ಕಾರಣತ್ವವನ್ನು ಅಂಗೀಕರಿಸಬೇಕು ಎಂಬುದಾಗಿ ಆಕ್ಷೇಪ ಮಾಡಿ, 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬುದರಿಂದ ಪರಿಹಾರವನ್ನು ನೀಡಲಾಗಿದೆ. ಆದ್ದರಿಂದ ದೋಷವಿಲ್ಲ. ಯಾವ ವೇದವಾಕ್ಯವು ಅಸತ್ತಿಗೆ ಕಾರಣತ್ವವನ್ನು ಹೇಳುತ್ತದೋ, ಅದು ಯುಕ್ತಿವಿರುದ್ಧವಾಗಿದೆ ಎಂಬುದಾಗಿ ಅಸತ್‌ಕಾರಣತ್ವವನ್ನು ಇಲ್ಲಿ ನಿಷೇಧ ಮಾಡಲಾಗುತ್ತಿದೆ. ಈ ಎಲ್ಲ ವಿಷಯವನ್ನು 'ಅಸದೇವೇದಮಗ್ರ ಆಸೀತ್' ಇತ್ಯಾದಿ ಭಾಷ್ಯದಿಂದ ನಿರೂಪಣೆ ಮಾಡಿದ್ದಾರೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

'ಇತ್ಯಾದಿನಾ' ಎಂಬ ಭಾಷ್ಯ ವಾಕ್ಯಕ್ಕೆ ಎರಡು ವ್ಯಾಖ್ಯಾನ

**असदेवेदमग्र आसीत्, तत्सदासीत्' इति छान्दोग्यश्रुतिः। 'देवानां पूर्वे युगे असतः सदजायत' इत्यादिना वाक्यजातेन असतः कारणत्वमुच्यते । तस्मादुक्तसमन्वयस्य विरोधः । अथवा – इत्यादिना असत्कारणत्वादिवाक्येन सतः कारणत्वोक्तिविरोधः । तस्मादसत्कारणं स्यादित्यत आह – असदिति चेन्न प्रतिषेधमात्रत्वात् ।**

'ಅಸದೇವೇದಮಗ್ರ ಆಸೀತ್, ತತ್‌ಸದಾಸೀತ್' ಇತ್ಯಾದಿಯಾಗಿ ಛಾಂದೋಗ್ಯದಲ್ಲಿ ಹೇಳಲ್ಪಟ್ಟಿದೆ. ಭಾಷ್ಯದಲ್ಲಿ 'ಇತ್ಯಾದಿನಾ' ಎಂಬುದಕ್ಕೆ ಎರಡು ಬಗೆಯಲ್ಲಿ ವ್ಯಾಖ್ಯಾನವನ್ನು ತಿಳಿಯಬೇಕು - ೧. 'ದೇವಾನಾಂ ಪೂರ್ವೇ ಯುಗೇ ಅಸತಃ ಸದಜಾಯತ' ಇತ್ಯಾದಿ ವಾಕ್ಯಸಮೂಹದಿಂದ ಅಸತ್ತಿಗೆ ಕಾರಣತ್ವವು ತಿಳಿಯುತ್ತಿದೆ. ಆದ್ದರಿಂದ ಹಿಂದೆ ಜಗತ್‌ಕಾರಣತ್ವ ವಿಷಯದಲ್ಲಿ ಮಾಡಲ್ಪಟ್ಟ ಸಮನ್ವಯಕ್ಕೆ ಇದರ ವಿರೋಧವು ಬರುತ್ತದೆ.

೨. ಅಥವಾ 'ಇತ್ಯಾದಿನಾ' ಎಂಬುದಕ್ಕೆ ಹೀಗೆ ಅರ್ಥ - ಅಸತ್‌ಕಾರಣತ್ವವನ್ನು ಪ್ರತಿಪಾದನೆ ಮಾಡುವ ವಾಕ್ಯದಿಂದ ಸತ್‌ಪದಾರ್ಥಕ್ಕೆ ಕಾರಣತ್ವವನ್ನು ಹೇಳುವ ವಚನಗಳಿಗೆ ವಿರೋಧವು ಬರುತ್ತದೆ ಎಂದು. ಹಿಂದಿನ ವ್ಯಾಖ್ಯಾನದಲ್ಲಿ 'ಅಸತಃ ಸದಜಾಯತ' ಇತ್ಯಾದಿ ವಾಕ್ಯದಿಂದ ಅಸತ್‌ಗೆ ಕಾರಣವು ಹೇಳಲ್ಪಟ್ಟಿದೆ ಎನ್ನಲಾಗಿತ್ತು. ಈ ವ್ಯಾಖ್ಯಾನದಲ್ಲಿ ಅಸತ್‌ಕಾರಣತ್ವ ವಾಕ್ಯದಿಂದ ನೇರವಾಗಿಯೇ ಸತ್‌ಕಾರಣತ್ವವಚನಗಳಿಗೆ ವಿರೋಧವನ್ನು ಹೇಳಲಾಗಿದೆ. ಈ ಎರಡೂ ಬಗೆಯ ವ್ಯಾಖ್ಯಾನಗಳನ್ನು ವಿವಕ್ಷಿಸಿದಾಗ ಜಗತ್ತಿಗೆ ಅಸತ್ ಎನಿಸಿದ ಅಭಾವವೇ ಈ ಆಕ್ಷೇಪಕ್ಕೆ ಉತ್ತರವನ್ನು ನೀಡಲು 'ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರವು ಹೊರಟಿದೆ.

### ಅಭಾವದಲ್ಲಿ ಕಾರಣತ್ವವಿರಲು ಸಾಧ್ಯವಿಲ್ಲ

**तत्वप्रदीपः – प्रतिषेधबुद्धिविषयमात्रत्वात् । यद्यप्यभावानां भावधर्माः सन्ति, भावानां चापरे, तथाऽपि धर्मिणो भावरूपत्वं मात्रशब्देन विवक्षितम्। नह्यभावरूपस्य धर्मिणः कारणत्वं दृश्यते भावधर्मवत्त्वेऽपि । न हि वन्ध्यासूनोः तद्भावान्यभेदादिभावधर्मवत्त्वेऽपि कार्यकरत्वं दृष्टम् ।**

'ಪ್ರತಿಷೇಧಮಾತ್ರತ್ವಾತ್' ಎಂಬ ಮಾತಿಗೆ ಕೇವಲ ನಿಷೇಧಬುದ್ಧಿಗೆ ವಿಷಯವಾಗಿದೆ ಎಂದರ್ಥ. ವಾಸ್ತವಿಕವಾಗಿ ಅಭಾವ ಪದಾರ್ಥಗಳಲ್ಲೂ ಕೂಡ ಭಾವಧರ್ಮಗಳಿವೆ. ಭಾವಪದಾರ್ಥದಲ್ಲೂ ಕೂಡ ಅಭಾವಧರ್ಮಗಳಿವೆ. ಆದರೂ ಮಾತ್ರಶಬ್ದದಿಂದ ಧರ್ಮಿಯು ಭಾವರೂಪವಾಗಿರಬೇಕು ಎಂಬುದನ್ನು ವಿವಕ್ಷಿಸಿದ್ದಾರೆ. ಪ್ರಕೃತ ಅಭಾವರೂಪವಾದ ಧರ್ಮಿಯಲ್ಲಿ ಭಾವಧರ್ಮವಿದ್ದರೂ ಕೂಡ ಕಾರಣತ್ವ ಇರುವುದು ಎಲ್ಲಿಯೂ ಕಂಡಿಲ್ಲ. ವಂಧ್ಯಾಸುತನಲ್ಲಿ ಬೇರೆ ಸುತರಿಂದ ಭೇದವೆಂಬ ಭಾವಧರ್ಮವಿದ್ದರೂ ಕೂಡ ಕಾರ್ಯಕಾರಿಯಾಗಿರುವುದು ಕಂಡಿಲ್ಲವಷ್ಟೇ.

### ಈ ಅಧಿಕರಣವು ಶೂನ್ಯಮತದ ನಿರಾಕರಣೆಗಾಗಿ ಹೊರಟಿಲ್ಲ

**तत्वप्रदीपः – ननु 'नासतोऽदृष्टत्वात्' इत्युपरिष्टादसत्कारणमतं प्रतिषेत्स्यति । तत्र कथमपुनरुक्तिः? इत्यत आह – असत इत्यादि ।। असत**

**एवाग्रेस्थितिः, तस्य कारणत्वं, तच्च मनःपूर्वकम् इत्याद्युक्तिभिर्विरुद्धं ब्रह्मकारणवाक्यम् । अस्ति हि तदुक्तिः श्रौती – 'इदं वा अग्रे नैव किञ्चनासीत् तदसदेव सन्मनोऽकुरुत' इत्यादिकेति । एतन्मतमत्र निषिद्ध्यते । उपरि तु तद्विवर्तपक्षः सामयिकः सम्मतः ।**

ಸಮಯಪಾದದಲ್ಲಿ ಬರುವ 'ನಾಸತೋऽದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಅಸತ್‌ಕಾರಣ ಸಮಯವನ್ನು ನಿಷೇಧ ಮಾಡಲಾಗುತ್ತದೆ. ಈ ಅಧಿಕರಣದಲ್ಲಿ ಇದೇ ವಿಷಯವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಆ ಅಧಿಕರಣವು ಅದರಿಂದ ಪುನರುಕ್ತವಾಗುವುದಿಲ್ಲ ಎಂದು ಹೇಗೆ ಹೇಳುವಿರಿ? ಈ ಪ್ರಶ್ನೆಗೆ ಭಾಷ್ಯದಲ್ಲಿ 'ಅಸತಃ ಕಾರಣತ್ವಾದ್ಯುಕ್ತಿವಿರುದ್ಧಂ ವೇದವಾಕ್ಯಮಿತ್ಯೇತದತ್ರ ನಿಷಿಧ್ಯತೇ' ಎಂಬುದರಿಂದ ಉತ್ತರಿಸಿದ್ದಾರೆ. ಪ್ರಳಯಕಾಲದಲ್ಲಿ ಅಸತ್‌ಪದಾರ್ಥ ಮಾತ್ರ ಇದ್ದು ಇದೇ ಜಗತ್ತಿಗೆ ಕಾರಣವಾಗಿದೆ. ಆ ಅಸತ್‌ಪದಾರ್ಥವೇ ಜಗತ್ತನ್ನು ನಿರ್ಮೂಲ ಮಾಡಲು ಮನಸ್ಸು ಮಾಡಿತು ಇತ್ಯಾದಿಯಾಗಿ ಶ್ರುತಿಯು ಹೇಳುತ್ತಿದೆ. ಬ್ರಹ್ಮಕಾರಣತ್ವವನ್ನು ಪ್ರತಿಪಾದನೆ ಮಾಡುವ ವಾಕ್ಯಗಳಿಗೆ ಈ ವಾಕ್ಯದ ವಿರೋಧವು ಬರುತ್ತದೆ. ಶ್ರುತಿಯು ಹೀಗೆ ಹೇಳಿದೆ - 'ಇದಂ ವಾ ಅಗ್ರೇ ನೈವ ಕಿಂಚನಾಸೀತ್ ತದಸದೇವ ಸನ್ಮನೋऽಕುರುತ' ಪ್ರಳಯದಲ್ಲಿ ಬೇರೆ ಯಾವುದು ಇರಲಿಲ್ಲ ಅಂಥ ಅಸತ್ತೇ ಸತ್ ಪದಾರ್ಥ ಸೃಷ್ಟಿ ಮಾಡಲು ಮನಸ್ಸು ಮಾಡಿತು ಎಂದು. ಈ ವಾದವನ್ನು ಈ ಅಧಿಕರಣದಲ್ಲಿ ನಿಷೇಧ ಮಾಡಲಾಗುತ್ತಿದೆ. ಸಮಯಪಾದದಲ್ಲಿ ಬರುವ ಅಸದಧಿಕರಣದಲ್ಲಿ ಶೂನ್ಯವು ವಿವರ್ತಕಾರಣವಾಗಿದೆಯೆಂಬ ಸಮಯವನ್ನು ನಿರಾಕರಣೆ ಮಾಡಲಾಗಿದೆ. ಹೀಗೆ ಅಸತ್‌ಕಾರಣತಾವಾದವನ್ನು ನಿರಾಕರಣೆ ಮಾಡಲು ಈ ಅಧಿಕರಣ ಹೊರಟಿದೆ. ಬೌದ್ಧಮತನಿರಾಕರಣೆಗಾಗಿ ಸಮಯಪಾದದಲ್ಲಿರುವ ಅಸದಧಿಕರಣವು ಹೊರಟಿದೆ. ಆದ್ದರಿಂದ ಶ್ರುತಿಪ್ರಾಪ್ತವಾದ ಮನಃಪೂರ್ವಕತ್ವಾದಿ ಯುಕ್ತಿವಿರೋಧದ ಪರಿಹಾರಕ್ಕೋಸ್ಕರ ಈ ಅಧಿಕರಣವು ಹೊರಟಿರುವುದರಿಂದ ಯುಕ್ತಿಪಾದದಲ್ಲಿ ಇದು ಅಂತರ್ಭಾವವನ್ನು ಹೊಂದುತ್ತದೆ.

'ಅಸತಃ ಸದಜಾಯತ' ಎಂಬ ವಾಕ್ಯಕ್ಕೆ ಅಪ್ರಾಮಾಣ್ಯ ಆಪಾದನೆ

**तत्वप्रदीपः – अथवाऽसतः कारणत्वाद्युक्तिहेतोः 'असदेवेदमग्र आसीत्' इत्यादि वाक्यमुक्तसमन्वयविरुद्धमप्रामाण्यमेवेति इत्येतदत्र निषिद्ध्यते ।**

ಅಥವಾ ಭಾಷ್ಯದಲ್ಲಿರುವ 'ಅಸತಃ ಕಾರಣತ್ವಾದ್ಯುಕ್ತಿವಿರುದ್ಧಮ್' ಇತ್ಯಾದಿ ಮಾತಿಗೆ ಎರಡನೆಯ ಅರ್ಥವನ್ನು ಹೀಗೆ ತಿಳಿಯಬೇಕು - ಈ ವ್ಯಾಖ್ಯಾನದಲ್ಲಿ ಕಾರಣತ್ವಾದಿ-ಉಕ್ತಿ-ವಿರುದ್ಧಮ್ ಎಂದು ಪದವಿಭಾಗ ಮಾಡಿದಾಗ ಅಭಾವವೇ ಜಗತ್ತಿಗೆ ಕಾರಣವಾಗಿದೆ. ಇದನ್ನು 'ಅಸದೇವೇದಮಗ್ರ ಆಸೀತ್' ಇತ್ಯಾದಿ ವಾಕ್ಯವು ಹೇಳುತ್ತಿದೆ. ಇದು ಹಿಂದೆ ಹೇಳಿದ ಬ್ರಹ್ಮಕಾರಣತ್ವದ ಸಮನ್ವಯಕ್ಕೆ ವಿರುದ್ಧವಾಗಿದೆ. ಆದ್ದರಿಂದ ಅಪ್ರಮಾಣವಾಗಿದೆ. ಇದನ್ನು ನಿರಾಕರಣೆ ಮಾಡುವುದಕ್ಕಾಗಿ ಈ ಅಧಿಕರಣ ಹೊರಟಿದೆ.

ವಿವರಣೆ - 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯು ಅಸತ್ತಿಗೆ ಕಾರಣತ್ವವನ್ನು ಹೇಳುತ್ತಿದೆ. ಆದ್ದರಿಂದ ವಿಷ್ಣುವಿಗೆ ಜಗತ್‌ಕಾರಣತ್ವವನ್ನು ಹೇಳುವ ವಾಕ್ಯಗಳಿಂದ ಇದು ವಿರುದ್ಧವಾಯಿತು. ಅಂದರೆ ಅಪ್ರಮಾಣವಾಯಿತು. ಹೇಗೆ ಹಿಂದಿನ ಅಧಿಕರಣದಲ್ಲಿ ಮೃದಬ್ರವೀತ್ ಇತ್ಯಾದಿ ವೇದೇಕದೇಶಗಳಿಗೆ ಅಪ್ರಾಮಾಣ್ಯಗಳನ್ನು ಆಶಂಕಿಸಲಾಗಿತ್ತೋ, ಅದರಂತೆ ಈ ಅಧಿಕರಣದಲ್ಲಿ ಅಸದೇವ ಇದಮಗ್ರ ಆಸೀತ್ ಇತ್ಯಾದಿ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಆಶಂಕಿಸಿ, ಅದರ ಪರಿಹಾರಕ್ಕಾಗಿ ಈ ಅಧಿಕರಣವು ಹೊರಟಿದೆ ಎಂಬ ಉತ್ತರವನ್ನು ಈ ಪಕ್ಷದಲ್ಲಿ ತಿಳಿಯಬೇಕು. ದ್ವಿತೀಯಪಾದದಲ್ಲಿ ಬರುವ ಅಸದಧಿಕರಣವು ಶೂನ್ಯವಾದದ ನಿರಾಕರಣೆಗಾಗಿ ಹೊರಟಿರುವುದರಿಂದ ಪುನರುಕ್ತಿಗೆ ಅವಕಾಶವಿಲ್ಲ.

ಸತ್‌ಕಾರಣತ್ವವಚನದಿಂದ ವಿರೋಧಪರಿಹಾರಕ್ಕಾಗಿ ಈ ಅಧಿಕರಣ

**तत्वप्रदीपः – अथवाऽसतः कारणत्वोक्त्या सत्कारणत्वोक्त्या च परस्परविरुद्धं वेदवाक्यम् इत्येतदत्र निषिद्ध्यते ।**

'ಅಥವಾ ಅಸತಃ ಕಾರಣತ್ವಾದ್ಯುಕ್ತಿವಿರುದ್ಧಮ್' ಇತ್ಯಾದಿ ಭಾಷ್ಯಕ್ಕೆ ಮೂರನೆಯ ವ್ಯಾಖ್ಯಾನವನ್ನು ಹೀಗೆ ತಿಳಿಯಬೇಕು - ಅಸತ್ತಿಗೆ ಕಾರಣತ್ವವನ್ನು ಕೆಲವು ಶ್ರುತಿಗಳು ಹೇಳುತ್ತಿವೆ. ಕೆಲವು ಶ್ರುತಿಗಳು ಸತ್‌ಪದಾರ್ಥಕ್ಕೆ ಕಾರಣತ್ವವನ್ನು ಹೇಳುತ್ತಿವೆ. ಈ ಎರಡು ವಾಕ್ಯಗಳಿಗೆ ಪರಸ್ಪರ ವಿರೋಧವು ಬರುವುದರಿಂದ ವೇದಕ್ಕೆ ಅಪ್ರಾಮಾಣ್ಯದೋಷವು ಬರುತ್ತದಲ್ಲವೇ? ಎಂಬ ಆಶಂಕೆಯನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ. 'ನಾಸತೋಽದೃಷ್ಟತ್ವಾತ್' ಎಂಬಲ್ಲಿ ಹೀಗೆ ಪರಸ್ಪರ ವಿರೋಧವನ್ನು ಹೇಳುತ್ತಿಲ್ಲವಾದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲ.

ಭಾಷ್ಯದ ವಾಕ್ಯಕ್ಕೆ ನಾಕನೆಯ ವ್ಯಾಖ್ಯಾನ

**तत्वप्रदीपः – अथवा प्रागुत्पत्तेर्विनाशादूर्ध्वं चासदात्मकत्वात् कार्यस्य कारणमप्यसद्भवितुमर्हति वस्तुत्वात् कार्यवत् ।**

'ಅಸತಃ ಕಾರಣತ್ವಾದ್ಯುಕ್ತಿವಿರುದ್ಧಮ್' ಇತ್ಯಾದಿ ಭಾಷ್ಯಕ್ಕೆ ನಾಕನೆಯ ವ್ಯಾಖ್ಯಾನವನ್ನು ಹೀಗೆ ತಿಳಿಯಬೇಕು - ಉತ್ಪತ್ತಿಗಿಂತ ಮೊದಲು ವಿನಾಶದ ಅನಂತರ ಕಾರ್ಯವು ಅಸದಾತ್ಮಕ-ವಾಗಿರುತ್ತದೆ. ಆದರ ಕಾರಣವೂ ಕೂಡ ಅಸತ್ತೇ ಆಗಬೇಕು. ಏಕೆಂದರೆ ವಸ್ತುವಾಗಿರುವುದರಿಂದ ಎಂಬುದಾಗಿ ಯುಕ್ತಿಯನ್ನು ಇಲ್ಲಿ ಆಧಾರವನ್ನಾಗಿ ನೀಡಲಾಗಿದೆ. ಈ ಯುಕ್ತಿಯ ಆಧಾರದಲ್ಲಿ ಪ್ರಾಪ್ತವಾದ ಶ್ರುತ್ಯಪ್ರಾಮಾಣ್ಯದ ಪರಿಹಾರಕ್ಕಾಗಿ ಈ ಅಧಿಕರಣ ಹೊರಟಿದೆ.

ವಿವರಣೆ - 'ಕಾರಣಂ ಅಸದ್ಭವಿತುಮರ್ಹತಿ ವಸ್ತುತ್ವಾತ್ ಕಾರ್ಯವತ್' ಎಂಬುದೇ ಯುಕ್ತಿ. ಕಾರ್ಯವು ಹೇಗೆ ಹುಟ್ಟುವ ಮೊದಲು ನಾಶವಾದ ಮೇಲೆ ಅಸತ್ತಾಗಿರುತ್ತದೋ, ಅದರಂತೆ ಕಾರಣವೂ ಕೂಡ ವಸ್ತುವಾಗಿರುವುದರಿಂದ ಅಸತ್ತಾಗಿರುತ್ತದೆ ಎಂಬ ಯುಕ್ತಿಯಿಂದ ಕಾರಣಕ್ಕೆ ಅಸತ್ವವನ್ನು ಪರಿಹಾರ ಮಾಡುವುದಕ್ಕಾಗಿ ಈ ಅಧಿಕರಣ ಹೊರಟಿದೆ.

ವೇದವಾಕ್ಯಕ್ಕೆ ಯುಕ್ತಿವಿರೋಧ

**तत्वप्रदीपः – एवमसतः कारणत्वायुक्तिविरुद्धं ब्रह्मवाचकं वेदवाक्यम् इत्येतदत्र निषिद्ध्यते न तु शून्यसमयः ।**

ಅಸತಃ ಕಾರಣತ್ವಾತ್ ಯುಕ್ತಿವಿರುದ್ಧಕ್ಕೆ ಐದನೆಯ ವ್ಯಾಖ್ಯಾನ ಹೀಗಿದೆ - ಬ್ರಹ್ಮಪ್ರತಿಪಾದಕವಾದ ವೇದವಾಕ್ಯವು ಅಸತ್ತಿಗೆ ಕಾರಣತ್ವಾದಿಗಳನ್ನು ಹೇಳುವ ಯುಕ್ತಿಗಳಿಂದ ವಿರುದ್ಧವಾಗಿವೆ. ಈ ವಿಷಯವನ್ನು ಈ ಅಧಿಕರಣವು ನಿಷೇಧ ಮಾಡುತ್ತಿದೆ. ಹೊರತು, ಶೂನ್ಯಸಮಯವನ್ನು ನಿರಾಕರಣೆ ಮಾಡುತ್ತಿಲ್ಲ. ಆದ್ದರಿಂದಲೂ 'ನಾಸತೋಽದೃಷ್ಟತ್ವಾತ್' ಎಂಬ ಸೂತ್ರದಿಂದ ಪುನರುಕ್ತವಾಗುವುದಿಲ್ಲ.

ಯುಕ್ತಿವಿರೋಧವು ಅರ್ಥಾತ್ ಸಿದ್ಧವಾಗಿದೆ

**तत्वप्रदीपः – तथाश्रुतिप्राप्तं मुख्यार्थस्य ब्रह्मणोऽपरित्यागेनैव असतो मुख्यत्वापरिग्रहेण श्रुतिप्राप्तम् । अतो न प्रबलेयं श्रुतिप्राप्तिः । न चात्र**

**श्रुतीनामेव मिथो विरोधनिरासः । येनोत्तरत्र पुनरुक्तिशङ्का स्यात् । किन्तु, अर्थायुक्तिविरोधो निराक्रियते ।**

ಶ್ರುತಿಯ ಮುಖ್ಯಾರ್ಥನು ಬ್ರಹ್ಮನಾಗಿದ್ದಾನೆ ಎಂಬುದನ್ನು ಪರಿತ್ಯಾಗ ಮಾಡದೇ ಅಸತ್ ಪದಾರ್ಥವೂ ಕೂಡ ಮುಖ್ಯವಾಗಿಯೇ ಪ್ರತಿಪಾದ್ಯವಾಗಿದೆ ಎಂಬುದಾಗಿ ಶ್ರುತಿಪ್ರಾಪ್ತವಾಗಿದೆ. ಆದ್ದರಿಂದ ಶ್ರುತಿಪ್ರಾಪ್ತಿಯು ಪ್ರಬಲವಾಗಿಲ್ಲ. ಒಂದುವೇಳೆ ಬ್ರಹ್ಮನಿಗೆ ಮುಖ್ಯಾರ್ಥವನ್ನು ಪರಿತ್ಯಾಗ ಮಾಡಿ ಅಸತ್‌ಪದಾರ್ಥಕ್ಕೆ ಮುಖ್ಯಾರ್ಥತ್ವವನ್ನು ಸ್ವೀಕರಿಸಿದ್ದರೆ ಶ್ರುತಿಪ್ರಾಪ್ತಿಯು ಪ್ರಬಲವಾಗುತ್ತಿತ್ತು.

ಬ್ರಹ್ಮಕಾರಣತ್ವ ಪ್ರತಿಪಾದಕವಾದ ಶ್ರುತಿಗೆ ಹಾಗೂ ಅಸತ್‌ಕಾರಣತ್ವ ಪ್ರತಿಪಾದಕವಾದ ಶ್ರುತಿಗೆ ಪರಸ್ಪರ ವಿರೋಧವನ್ನು ಪರಿಹರಿಸಲು ಈ ಅಧಿಕರಣ ಹೊರಟಿದೆ ಎಂದು ವಿವಕ್ಷಿಸಬಾರದು. ಕೇವಲ ಶ್ರುತಿಗಳ ವಿರೋಧ ಪರಿಹಾರಕ್ಕೋಸ್ಕರ ಈ ಅಧಿಕರಣ ಹೊರಟಿದ್ದರೆ ಮುಂದಿನ ಪಾದದಲ್ಲಿರುವ ಅಸದಧಿಕರಣದಿಂದ ಪುನರುಕ್ತಿ ದೋಷವು ಪ್ರಾಪ್ತವಾಗುತ್ತಿತ್ತು. ಮತ್ತೇನೆಂದರೆ ಅರ್ಥಾತ್ ಯುಕ್ತಿವಿರೋಧವನ್ನೂ ಕೂಡ ಇಲ್ಲಿ ಪರಿಹರಿಸಲಾಗಿದೆ.

ಪುನರುಕ್ತಿ ಪುನಃ ಬರುವುದಿಲ್ಲ

**तत्वप्रदीपः – अथात्र पुनरपि समापतिता पुनरुक्तिः । यतो युक्तिसहितश्रुति विरोधोऽप्युपरि निरसिष्यते । मैवम्, मुखतः श्रुतिविरोधः, अर्थायुक्तिविरोधो निराक्रियते । तच्चोक्तं हि – तथा श्रुतिप्राप्तमेवेत्यादि ।।**

ಆದರೂ ಕೂಡ ಪುನಃ ಪುನರುಕ್ತಿಯು ಪ್ರಾಪ್ತವಾಯಿತು. ಏಕೆಂದರೆ ಯುಕ್ತಿಸಹಿತವಾದ ಶ್ರುತಿವಿರೋಧವನ್ನೇ ಈ ಅಧಿಕರಣ ಪರಿಹರಿಸುತ್ತಿದೆ ಎಂದು ಹೇಳುತ್ತಿದ್ದೀರಿ. ಯುಕ್ತಿಸಹಿತವಾದ ಶ್ರುತಿವಿರೋಧ ಪರಿಹಾರವನ್ನು ನಾಕನೆಯ ಪಾದದಲ್ಲಿ ಪರಿಹರಿಸುತ್ತಾರೆ. ಅದರಲ್ಲಿ ವಿರೋಧ ಬರುತ್ತದಲ್ಲವೇ?

ಇದು ತಪ್ಪು. ಮುಖತಃ ಶ್ರುತಿವಿರೋಧವನ್ನು ಇಲ್ಲಿ ಪರಿಹರಿಸಲಾಗಿದೆ. ಅರ್ಥಾತ್ ಯುಕ್ತಿವಿರೋಧದ ಪರಿಹಾರವೂ ಕೂಡ ಇದರಿಂದ ಸಿದ್ಧವಾಗುತ್ತದೆ. ಇದನ್ನೇ 'ತಥಾ ಶ್ರುತಿಪ್ರಾಪ್ತಮೇವ' ಎಂಬುದಾಗಿ ಭಾಷ್ಯದಲ್ಲಿ ಹೇಳಿರುತ್ತಾರೆ.

ಅನುವ್ಯಾಖ್ಯಾನದ ಆಧಾರ

**तत्वप्रदीपः – अत एव चावोचन्तानुद्रवन्तो भगवन्तो वृत्तमनुव्याख्याने–**

**'स्मृतियुक्तिश्रुतिगुणयुक्तयो बहुयुक्तयः ।**
**एवं चतुर्विधा नैव विरुद्धयन्तेऽन्वयं प्रति' – इति ॥**

ಆದ್ದರಿಂದಲೇ ಭಗವಂತನೆಡೆ ಧಾವಿಸುವ ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ ಹೀಗೆ ಹೇಳಿದರು -

ಸ್ಮೃತಿವಿರೋಧ, ಯುಕ್ತಿವಿರೋಧ, ಶ್ರುತಿಸಹಿತಯುಕ್ತಿವಿರೋಧ, ಬಹುಬಗೆಯ ಯುಕ್ತಿವಿರೋಧ ಎಂಬ ನಾಕು ವಿರೋಧಗಳು ಭಗವಂತನಲ್ಲಿ ಮಾಡಿದ ಮಹಾಸಮನ್ವಯಕ್ಕೆ ಸರ್ವಥಾ ಬರಲಾರವು.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

ಜಗತ್‌ಕಾರಣತ್ವ ವಿಷಯದಲ್ಲಿ ಯುಕ್ತಿವಿರೋಧ ಪರಿಹಾರ

**तत्वप्रकाशिका – अत्र ब्रह्मणो जगत्कारणत्वे युक्तिविरोधस्य परिह्रियमाणत्वादस्ति शास्त्रादिसङ्गतिः । जगत्कारणत्वं हरेरुक्तम् । तस्य युक्तिविरुद्धत्वे लक्षणासम्भवात्स निराकर्तव्य एव । जगत्कारणत्वमेव विषयः तद्विष्णोर्युक्तमयुक्तं वेति सन्देहः । श्रुतिविगानं सन्देहबीजम् । तत्र पूर्वपक्षयति – असदेवेति ॥**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಬರುವ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗುತ್ತದೆ. ಆದ್ದರಿಂದ ಶಾಸ್ತ್ರಾದಿಸಂಗತಿಯು ಈ ಅಧಿಕರಣಕ್ಕೆ ಕೂಡುತ್ತದೆ.

ವಿಷ್ಣುವಿನಲ್ಲಿ ಹೇಳಿದ ಜಗತ್ಕಾರಣತ್ವಲಕ್ಷಣವು ಯುಕ್ತಿವಿರುದ್ಧವಾದರೆ ಕೂಡುವುದಿಲ್ಲವಾದ್ದರಿಂದ, ಯುಕ್ತಿವಿರೋಧವು ಪರಿಹಾರವಾಗಲೇ ಬೇಕು.

ಜಗತ್ಕಾರಣತ್ವವೇ ವಿಷಯ. ವಿಷ್ಣುವಿಗೆ ಯುಕ್ತವೇ ಅಯುಕ್ತವೇ ? ಎಂದು ಸಂದೇಹ. ಪರಸ್ಪರ ಶ್ರುತಿವಿರೋಧವೇ ಸಂದೇಹಕ್ಕೆ ಕಾರಣ. 'ಅಸದೇವ' ಎಂದು ಭಾಷ್ಯದಲ್ಲಿ ಪೂರ್ವಪಕ್ಷ ಮಾಡುತ್ತಾರೆ.

### ವಿಷ್ಣು ಜಗತ್‌ಕಾರಣನಲ್ಲವೆಂದು ಪೂರ್ವಪಕ್ಷ

**तत्वप्रकाशिका – न विष्णोर्जगत्कारणत्वम् प्रमाणाभावात् । न च 'यतो वा इमानि' इत्यादिश्रुतिः प्रमाणम् । 'असदेवेदमग्र आसीत्' इत्यादिश्रुत्याऽसतोऽपि कारणत्वोक्तेः । न हि श्रुतित्वाविशेषेऽन्यया ब्रह्मणः कारणत्वं सेत्स्यत्यन्यया तु नासत इति युक्तम् । अतोऽसदेव जगत्कारणमिति न जगत्कारणत्वं ब्रह्मणः । तथा चोक्तं लक्षणं दुष्टमिति भावः । अत्र सर्वत्रासच्छब्देन प्रलयवर्तिविश्वप्रागभावोऽभिधीयते । कारणशब्देन कर्तेत्यवधेयम् । स्यादेतत् । श्रुतिद्वयेन सन्देह एव नान्यतरपक्षावधारणमिति। न, पूर्वपक्षे सयुक्तिकत्वस्य वक्ष्यमाणत्वादिति । सिद्धान्तयत्सूत्र-मवतार्याक्षेपांशस्य पूर्वमेव विवृतत्वात् परिहारांशं व्याचष्टे – अत इति ।।**

ವಿಷ್ಣು ಜಗತ್ಕಾರಣನಲ್ಲ. ಆ ವಿಷಯದಲ್ಲಿ 'ಯತೋ ವಾ ಇಮಾನಿ' ಇತ್ಯಾದಿ ಶ್ರುತಿಗಳು ಪ್ರಮಾಣವಾಗಲಾರವು. ಏಕೆಂದರೆ, 'ಅಸದೇವ ಇದಮಗ್ರ ಆಸೀತ್' ಇತ್ಯಾದಿ ಶ್ರುತಿಗಳು ಅಸತ್ತನ್ನೂ ಕಾರಣವೆನ್ನುತ್ತಿವೆ. ಈ ಎರಡೂ ಶ್ರುತಿವಾಕ್ಯಗಳಲ್ಲಿ ಶ್ರುತಿತ್ವಧರ್ಮ ಸಾಮಾನ್ಯವಾಗಿರುವಾಗ 'ಯತೋ ವಾ' ಶ್ರುತಿಯಿಂದ ವಿಷ್ಣುವಿಗೆ ಕಾರಣತ್ವ ಸಿದ್ಧವಾಗುತ್ತದೆ. 'ಅಸದೇವ' ಶ್ರುತಿಯಿಂದ ಮಾತ್ರ ಅಸತ್ತಿಗೆ ಕಾರಣತ್ವ ಸಿದ್ಧವಾಗುವುದಿಲ್ಲ ಎನ್ನುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಅಸತ್ತೇ ಜಗತ್ಕಾರಣವಾಗಿದೆ, ಬ್ರಹ್ಮನಿಗೆ ಹೇಳಿದ ಜಗತ್ಕಾರಣತ್ವಲಕ್ಷಣವು ದುಷ್ಟವಾಯಿತೆಂದು ಅಭಿಪ್ರಾಯ.

ಶ್ರುತಿಯಲ್ಲಿ ಎಲ್ಲ ಕಡೆ 'ಅಸತ್' ಶಬ್ದದಿಂದ ಪ್ರಲಯಕಾಲದಲ್ಲಿರುವ ವಿಶ್ವಪ್ರಾಗಭಾವವನ್ನು ಹೇಳಲಾಗಿದೆ. ಕಾರಣಶಬ್ದದಿಂದ ವಿಶ್ವಕರ್ತೃವನ್ನು ಹೇಳಲಾಗಿದೆ ಎಂದು ತಿಳಿಯಬೇಕು.

ಭಿನ್ನಪದಾರ್ಥಗಳಿಗೆ ಕಾರಣತ್ವವನ್ನು ಹೇಳುವ ಎರಡು ಶ್ರುತಿಗಳಿರುವುದರಿಂದ, ಇವೆರಡರಲ್ಲಿ ಯಾವುದಕ್ಕೆ ಜಗತ್ಕಾರಣತ್ವವನ್ನು ಹೇಳಬೇಕೆಂಬ ಸಂದೇಹ ಬರುತ್ತದೆಯೇ ಹೊರತು ಯಾವುದನ್ನೂ ಅವಧಾರಣ ಮಾಡಲು ಬರುವುದಿಲ್ಲ. ಹೀಗಿರುವಾಗ ಅಸತ್ತಿಗೇ ಜಗತ್ಕಾರಣತ್ವವನ್ನು ಸ್ವೀಕಾರ ಮಾಡಿ ಪೂರ್ವಪಕ್ಷ ಮಾಡುವುದು ಹೇಗೆ ಯುಕ್ತವಾಗುತ್ತದೆ ? ಹೀಗೆ ಆಕ್ಷೇಪ ಮಾಡಿದರೆ, ಅದು ಸರಿಯಲ್ಲ. ಪೂರ್ವಪಕ್ಷವಿಷಯದಲ್ಲಿ ಯುಕ್ತಿಗಳಿವೆ ಎಂದು ಮುಂದೆ ಹೇಳುವವರಿದ್ದಾರೆ.

ಸಿದ್ಧಾಂತ ಮಾಡುವ ಸೂತ್ರವನ್ನು ಹೇಳಿ ಸೂತ್ರದಲ್ಲಿನ ಆಕ್ಷೇಪಾಂಶವನ್ನು ಈ ಹಿಂದೆ ವಿವೇಚನೆ ಮಾಡಿರುವುದರಿಂದ, ಪರಿಹಾರಾಂಶವನ್ನು ಮಾಡಿ ವ್ಯಾಖ್ಯಾನ ಮಾಡುತ್ತಾರೆ 'ಅತಃ' ಎಂಬುದರಿಂದ.

### ವಿಷ್ಣುವೇ ಜಗತ್‌ಕಾರಣನೆಂದು ಸಿದ್ಧಾಂತ

**तत्वप्रकाशिका – युक्तमेव विष्णोर्जगत्कारणत्वं न त्वसतः । तस्याभाव धर्मात्मतामन्तरेण स्वरूपत एव प्रतिषेधबुद्धिविषयत्वात् । न हि घटप्रागभावस्य कारणत्वं सम्भवतीति भावः (न हि शशविषाणादीनां यत्किञ्चित् प्रति कारणत्वं सम्भवतीति भावः) नन्वेतस्मिन्नधिकरणेऽसतो जगत्कारणत्वं वदतां शून्यवादिनां समयो निराक्रियते न तु श्रुतिप्राप्तमसन्मतम्। 'एतेन सर्वे व्याख्याताः' इत्यसदादिशब्दानां ब्रह्मविषयत्वस्योक्तत्वेनासतः प्राप्त्यभावात् । अतोऽपव्याख्यानमेतदित्यत आह – असत इति ।।**

ವಿಷ್ಣುವಿನಲ್ಲಿ ಮಾತ್ರ ಜಗತ್ಕಾರಣತ್ವ ಬರುತ್ತದೆ ಹೊರತು ಅಸತ್ತಿನಲ್ಲಿ ಅಲ್ಲ. ಏಕೆಂದರೆ ಅಸತ್ ಎಂಬುದು ಅಭಾವತ್ವರೂಪಧರ್ಮದಿಂದ ಪ್ರತೀತವಾಗದೇ ಕೇವಲ ಧರ್ಮಿಸ್ವರೂಪ-ದಿಂದಲೇ ನಿಷೇಧಬುದ್ಧಿಗೆ ವಿಷಯವಾಗುತ್ತದೆ. ಕೇವಲ ಅಭಾವ ಸ್ವರೂಪದಿಂದಲೇ ಬುದ್ಧಿಗೆ

ವಿಷಯವಾಗುವ ಶಶವಿಷಾಣಾದಿಗಳಿಗೆ ಅಥವಾ ಘಟಪ್ರಾಗಭಾವಕ್ಕೆ ಯಾವ ಕಾರ್ಯವನ್ನು ಕುರಿತು ಕರ್ತೃತ್ವವು ಸಂಭವಿಸಲಾರದು.

ಈ ಅಧಿಕರಣದಲ್ಲಿ ಅಸತ್ತಿಗೆ (ಶೂನ್ಯಕ್ಕೆ) ಜಗತ್ಕಾರಣತ್ವ ಹೇಳುವ ಬೌದ್ಧಮತದ ನಿರಾಕರಣೆ ಮಾಡಲ್ಪಟ್ಟಿದೆಯೇ ಹೊರತು ಶ್ರುತಿಪ್ರಾಪ್ತ ಅಸತ್ಕಾರಣತ್ವವಾದವನ್ನು ನಿರಾಸ ಮಾಡಿಲ್ಲ - ಏಕೆಂದರೆ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಸೂತ್ರದಲ್ಲಿ ಶ್ರುತಿಯಲ್ಲಿ ಬರುವ ಅಸದಾದಿ ಸರ್ವಶಬ್ದವೂ ಬ್ರಹ್ಮ ವಾಚಕವೆಂದು ಹೇಳಿರುವುದರಿಂದ ಅಸತ್ಕಾರಣವಾದವೇ ಪ್ರಾಪ್ತವಾಗುವುದಿಲ್ಲ. ಆದ್ದರಿಂದ ಭಾಷ್ಯದ ವ್ಯಾಖ್ಯಾನವು ಅಪವ್ಯಾಖ್ಯಾನವೇ ಆಗುತ್ತದೆ. ಈ ಶಂಕೆಗೆ 'ಅಸತಃ' ಎಂಬ ವಾಕ್ಯದಿಂದ ಉತ್ತರ ಕೊಡುತ್ತಾರೆ.

ವಿಶೇಷ ವಿಚಾರ - ಈ ಅಧಿಕರಣದಲ್ಲಿ ಟೀಕಾದ ಪ್ರಕಾರ 'ವಿಶ್ವಪ್ರಾಗಭಾವ ಕಾರಣ' ಎಂದು ಪೂರ್ವಪಕ್ಷ. ಬ್ರಹ್ಮನೇ ಕಾರಣವೆಂದು ಸಿದ್ಧಾಂತ. ಭಾವಬೋಧಕಾರರು 'ಅಸತ್' ಶಬ್ದಕ್ಕೆ ಶೂನ್ಯವೆಂದೇ ಅರ್ಥ - ವಿಶ್ವಪ್ರಾಗಭಾವವಲ್ಲ ಎಂದಿದ್ದಾರೆ. ಆದುದರಿಂದ ಅವರ ಪ್ರಕಾರ 'ಶೂನ್ಯವೇ ಕಾರಣ' ಎಂದು ಪೂರ್ವಪಕ್ಷ. ಟೀಕಾದಲ್ಲಿ ಸಿದ್ಧಾಂತ ನಿರೂಪಿಸುವಾಗ 'ನ ಹಿ ಘಟಪ್ರಾಗಭಾವಸ್ಯ ಕಾರಣತ್ವಂ ಸಂಭವತೀತಿಭಾವಃ' ಎಂದು ಹಾಗೂ ಅದಕ್ಕಿಂತ ಮೊದಲು 'ಅತ್ರ ಸರ್ವತ್ರ ಅಸಚ್ಛಬ್ದೇನ ಪ್ರಲಯವರ್ತಿವಿಶ್ವಪ್ರಾಗಭಾವೋಽಭಿಧೀಯತೇ' ಮುಂತಾದ ಟೀಕಾವಾಕ್ಯಗಳು ಇದನ್ನೇ ಹೇಳುತ್ತವೆ. ಆದರೆ 'ಘಟಪ್ರಾಗಭಾವಸ್ಯ' ಎಂಬ ಶಬ್ದದ ಸ್ಥಾನದಲ್ಲಿ 'ಶಶವಿಷಾಣಾದೀನಾಂ' ಎಂಬ ಟೀಕಾ ಪಾಠಾಂತರವೂ ಉಪಲಬ್ಧವಿದೆ. ಆದ್ದರಿಂದ ಅದನ್ನು ಆಧಾರವಾಗಿಟ್ಟುಕೊಂಡು ಭಾವಬೋಧದಲ್ಲಿ ಶೂನ್ಯಕಾರಣತಾವಾದವನ್ನು ಪೂರ್ವಪಕ್ಷವೆಂದು ಪರಿಗಣಿಸಲಾಗಿದೆ. ರಾಯರು ಪ್ರಾಗಭಾವಕಾರಣತಾವಾದವನ್ನೇ ಇಟ್ಟುಕೊಂಡು 'ಹೇಗೆ ಶಶವಿಷಾಣವು ಕಾರಣವಾಗಲಾರದೋ ಹಾಗೆ ವಿಶ್ವಪ್ರಾಗಭಾವವು ಕಾರಣವಾಗಲಾರದೆಂದು ಪಾಠಾಂತರವನ್ನು ದೃಷ್ಟಾಂತವಾಗಿ ಪರಿಗಣಿಸಿ ವ್ಯಾಖ್ಯಾನಿಸಿದ್ದಾರೆ.

ಇಲ್ಲಿ ಮಾಡಿದ್ದು ಅಸದ್‌ವಾದದ ನಿರಾಕರಣೆ

**तत्वप्रकाशिका – अत्राधिकरणेसऽसतः कारणत्वप्रलयस्थिततत्वाभिधायक श्रुत्या विरुद्धं विष्णोर्जगत्कारणत्वाभिधायकं वेदवाक्यमिति श्रुतिप्राप्तमेवासन्मतं**

**निराक्रियते न तु समय इत्यर्थः । नन्वक्तमेवासतो न श्रुतौ प्राप्तिरिति तत्राह – सर्वेति ।।**

ಈ ಅಧಿಕರಣದಲ್ಲಿ ಅಸತ್ತಿಗೆ ವಿಶ್ವಕಾರಣತ್ವ ಮತ್ತು ಪ್ರಲಯಕಾಲಸ್ಥಿತತ್ವಧರ್ಮಗಳನ್ನು ಹೇಳುವ ಶ್ರುತಿಗೆ ವಿಷ್ಣುವಿನ ಜಗತ್ಕಾರಣತ್ವ ಪ್ರತಿಪಾದಕ ವೇದವಾಕ್ಯದಿಂದ ವಿರೋಧ ಬರುತ್ತದೆಂಬುದಾಗಿ ಶ್ರುತಿ ಪ್ರಾಪ್ತವಾದ ಅಸದ್ವಾದವನ್ನೇ ನಿರಾಕರಣೆ ಮಾಡಲಾಗಿದೆ ಹೊರತು ಶೂನ್ಯ ಕಾರಣ ಎಂಬ ದರ್ಶನದ ನಿರಾಕರಣೆಯನ್ನು ಇಲ್ಲಿ ಮಾಡಿಲ್ಲ.

ಶ್ರುತಿಯಲ್ಲಿ ಅಸದ್ವಾದದ ಪ್ರಸಕ್ತಿಯೇ ಇಲ್ಲಿ ಬರುವುದಿಲ್ಲವೆಂದು ಹಿಂದೆ ಹೇಳಿದ್ದೇವಲ್ಲ? ಎಂದರೆ ಭಾಷ್ಯಕಾರರು ಉತ್ತರ ಕೊಡುತ್ತಾರೆ. 'ಸರ್ವ' ಎಂಬ ವಾಕ್ಯದಿಂದ.

ಶೂನ್ಯವಾದದ ನಿರಾಕರಣೆ ಇಲ್ಲಿ ಮಾಡಿಲ್ಲ

**तत्वप्रकाशिका – नन्वस्त्वेवमसतः प्राप्तिस्तथापि समयोऽत्र निराक्रियत इति किं न स्यादित्यत आह – तथेति ।।**

ಈ ರೀತಿಯಾಗಿ ಶ್ರುತ್ಯುಕ್ತವಾದ ಅಸದ್ವಾದದ ಪ್ರಸಕ್ತಿ ಇಲ್ಲಿ ಬಂದರೂ, ಶೂನ್ಯವಾದದ ನಿರಾಕರಣೆ ಇಲ್ಲಿ ಮಾಡಿದ್ದಾರೆಂದು ಏಕೆ ಹೇಳಬಾರದು ? ಎಂದರೆ 'ತಥಾ' ಎಂಬುದರಿಂದ ಉತ್ತರ ಕೊಡುತ್ತಾರೆ.

ಸಮಯಪ್ರಾಪ್ತದ ನಿರಾಕರಣೆ ಎರಡನೆಯ ಪಾದದಲ್ಲಿದೆ

**तत्वप्रकाशिका – अमुख्यतयेत्यर्थः । शून्यवादिसमयतस्योपरितनपादे निराकरिष्यमाणत्वात् । अत्र श्रुतिप्राप्तमेवासन्मतं निराक्रियत इत्येवाङ्गीकार्यम् । अन्यथा पौनरुक्त्यापातदिति भावः ।। यद्यत्र ब्रह्मणो जगत्कारणत्ववाचिश्रुतेः श्रुतिप्राप्तासन्मतविरोधो निराक्रियते तर्ह्येतदधिकरणं तृतीयपादे निबन्धनीयं न तु युक्तिविरोधपरिहारात्मकेऽस्मिन् पाद इत्यत आह – अर्थादिति ।।**

ಭಾಷ್ಯದಲ್ಲಿ 'ತಥಾ ಶ್ರುತಿಪ್ರಾಪ್ತಮೇವಾಸನ್ಮತಮತ್ರ ನಿಷಿದ್ಧ್ಯತೇ' ಎಂಬ ವಾಕ್ಯದಲ್ಲಿ 'ತಥಾ' ಶಬ್ದಕ್ಕೆ, ಅಮುಖ್ಯವಾಗಿ ಎಂದರ್ಥ. ಇದಕ್ಕೆ 'ಅಸನ್ಮತ' ಎಂಬಲ್ಲಿ ಸಂಬಂಧ. ಅಮುಖ್ಯವಾಗಿ

ಶ್ರುತಿ ಪ್ರತಿಪಾದಿತವಾದ ಅಸನ್ಮತ ಎಂದು ಇದರರ್ಥ. ಬೌದ್ಧಸಮಯವನ್ನು ಮುಂದಿನ ಪಾದದಲ್ಲಿ ನಿರಾಕರಣ ಮಾಡುವವರಿದ್ದಾರೆ. ಆದ್ದರಿಂದ ಇಲ್ಲಿ ಶ್ರುತಿಪ್ರಾಪ್ತವಾದ ಅಸತ್ಕಾರಣತ್ವವಾದವನ್ನೇ ನಿರಾಕರಣ ಮಾಡಿದ್ದಾರೆಂದು ಅಂಗೀಕಾರ ಮಾಡಬೇಕು. ಇಲ್ಲದಿದ್ದರೆ, ಒಂದೇ ಸಮಯವನ್ನು ಎರಡು ಕಡೆ ನಿರಾಕರಣ ಮಾಡುವ ಪ್ರಸಂಗ ಬರುವುದರಿಂದ ಸೂತ್ರಕಾರರ ಮೇಲೆ ಪುನರುಕ್ತಿ ದೋಷ ಪ್ರಸಕ್ತಿ ಬರುತ್ತದೆಂದು ಭಾಷ್ಯದ ಅಭಿಪ್ರಾಯ.

ವಿಷ್ಣುವಿಗೆ ಜಗತ್ಕಾರಣತ್ವ ಪ್ರತಿಪಾದನೆ ಮಾಡುವ ಶ್ರುತಿಗೆ ಅನ್ಯಶ್ರುತಿಯಿಂದ ಪ್ರಾಪ್ತವಾದ ಅಸತ್ಕಾರಣತ್ವಮತದ ವಿರೋಧವನ್ನು ನಿರಾಕರಣ ಮಾಡುವುದಾದರೆ, ಈ ಅಧಿಕರಣವು ಶ್ರುತಿವಿರೋಧಪರಿಹಾರರೂಪವಾದ ಮೂರನೇ ಪಾದದಲ್ಲಿ ಸೇರಿಸಬೇಕಾಗುತ್ತದೆ. ಹೊರತು ಕೇವಲ ಯುಕ್ತಿವಿರೋಧಪರಿಹಾರ ಮಾಡುವ ಈ ಪಾದದಲ್ಲಿ ಸೇರಿಸಲಾಗದು. ಈ ಪ್ರಶ್ನೆಗೆ 'ಅರ್ಥಾತ್' ಎಂಬುದರಿಂದ ಉತ್ತರ ನೀಡುತ್ತಾರೆ.

### ಅಧಿಕರಣಕ್ಕೆ ಪಾದಾಂತರ್ಭಾವಸಂಗತಿ

**तत्वप्रकाशिका – न केवलमत्र श्रुतिविरोधः परिह्रियते, येनासङ्गतिः । किं नाम करणमभिमतं प्रलयेऽसद्भवितुमर्हति वस्तुत्वात् कार्यवदित्याद्यसतः कारणत्व-प्रतिपादकयुक्तिविरोधोऽपीति भावः । तथापि युक्तिविरोधमात्रपरि हारात्मके पादे श्रुतियुक्तिविरोधपरिहारोऽसङ्गत इत्यतोऽर्थादित्युक्तम् । नात्र श्रुतियुक्त्योः स्वतन्त्रं विराधद्वयं परिह्रियते किं तु श्रुतिविरोधपरिहारेणाप्यन्ततो युक्तिविरोध एव । तथा हि – अत्रासतः कारणत्वप्रतिपादकयुक्तिः पूर्ववादिनोपन्यस्यते । तस्याश्च निर्मूलाया असाधकत्वात् तन्मूलभूता च श्रुतिरुच्यते । तथा चानुपपन्नभाषित्वेन श्रुतेरर्थान्तरे प्रामाण्याभाव इति तद्विरोधे परिहृते निर्मूलयुक्तेः स्वत एवाप्रामाण्यमिति । अतोऽत्र श्रुतिविोधपरिहारस्य युक्तिविरोधपरिहाराङ्गत्वान्न, ना सङ्गतिरिति युक्तमेवोक्तं याख्यानमिति भावः ।। ८ ।।**

**निराक्रियते न तु समय इत्यर्थः । ननूक्तमेवासतो न श्रुतौ प्राप्तिरिति तत्राह – सर्वेति ।।**

ಈ ಅಧಿಕರಣದಲ್ಲಿ ಅಸತ್ತಿಗೆ ವಿಶ್ವಕಾರಣತ್ವ ಮತ್ತು ಪ್ರಲಯಕಾಲಸ್ಥಿತತ್ವಧರ್ಮಗಳನ್ನು ಹೇಳುವ ಶ್ರುತಿಗೆ ವಿಷ್ಣುವಿನ ಜಗತ್ಕಾರಣತ್ವ ಪ್ರತಿಪಾದಕ ವೇದವಾಕ್ಯದಿಂದ ವಿರೋಧ ಬರುತ್ತದೆಂಬುದಾಗಿ ಶ್ರುತಿ ಪ್ರಾಪ್ತವಾದ ಅಸದ್ವಾದವನ್ನೇ ನಿರಾಕರಣೆ ಮಾಡಲಾಗಿದೆ ಹೊರತು ಶೂನ್ಯ ಕಾರಣ ಎಂಬ ದರ್ಶನದ ನಿರಾಕರಣೆಯನ್ನು ಇಲ್ಲಿ ಮಾಡಿಲ್ಲ.

ಶ್ರುತಿಯಲ್ಲಿ ಅಸದ್ವಾದದ ಪ್ರಸಕ್ತಿಯೇ ಇಲ್ಲಿ ಬರುವುದಿಲ್ಲವೆಂದು ಹಿಂದೆ ಹೇಳಿದ್ದೇವಲ್ಲ? ಎಂದರೆ ಭಾಷ್ಯಕಾರರು ಉತ್ತರ ಕೊಡುತ್ತಾರೆ. 'ಸರ್ವ' ಎಂಬ ವಾಕ್ಯದಿಂದ.

ಶೂನ್ಯವಾದದ ನಿರಾಕರಣೆ ಇಲ್ಲಿ ಮಾಡಿಲ್ಲ

**तत्वप्रकाशिका – नन्वस्त्वेवमसतः प्राप्तिस्तथापि समयोऽत्र निराक्रियत इति किं न स्यादित्यत आह – तथेति ।।**

ಈ ರೀತಿಯಾಗಿ ಶ್ರುತ್ಯುಕ್ತವಾದ ಅಸದ್ವಾದದ ಪ್ರಸಕ್ತಿ ಇಲ್ಲಿ ಬಂದರೂ, ಶೂನ್ಯವಾದದ ನಿರಾಕರಣೆ ಇಲ್ಲಿ ಮಾಡಿದ್ದಾರೆಂದು ಏಕೆ ಹೇಳಬಾರದು ? ಎಂದರೆ 'ತಥಾ' ಎಂಬುದರಿಂದ ಉತ್ತರ ಕೊಡುತ್ತಾರೆ.

ಸಮಯಪ್ರಾಪ್ತದ ನಿರಾಕರಣೆ ಎರಡನೆಯ ಪಾದದಲ್ಲಿದೆ

**तत्वप्रकाशिका – अमुख्यतयेत्यर्थः । शून्यवादिसमयतस्योपरितनपादे निराकरिष्यमाणत्वात् । अत्र श्रुतिप्राप्तमेवासन्मतं निराक्रियत इत्येवाङ्गीकार्यम्। अन्यथा पौनरुक्त्यापातदिति भावः ।। यद्यत्र ब्रह्मणो जगत्कारणत्ववाचिश्रुतेः श्रुतिप्राप्तासन्मतविरोधो निराक्रियते तर्ह्येतदधिकरणं तृतीयपादे निबन्धनीयं न तु युक्तिविरोधपरिहारात्मकेऽस्मिन् पाद इत्यत आह – अर्थादिति ।।**

ಭಾಷ್ಯದಲ್ಲಿ 'ತಥಾ ಶ್ರುತಿಪ್ರಾಪ್ತಮೇವಾಸನ್ಮತಮತ್ರ ನಿಷಿದ್ಧ್ಯತೇ' ಎಂಬ ವಾಕ್ಯದಲ್ಲಿ 'ತಥಾ' ಶಬ್ದಕ್ಕೆ, ಅಮುಖ್ಯವಾಗಿ ಎಂದರ್ಥ. ಇದಕ್ಕೆ 'ಅಸನ್ಮತ' ಎಂಬಲ್ಲಿ ಸಂಬಂಧ. ಅಮುಖ್ಯವಾಗಿ

ಶ್ರುತಿ ಪ್ರತಿಪಾದಿತವಾದ ಅಸನ್ಮತ ಎಂದು ಇದರರ್ಥ. ಬೌದ್ಧಸಮಯವನ್ನು ಮುಂದಿನ ಪಾದದಲ್ಲಿ ನಿರಾಕರಣ ಮಾಡುವವರಿದ್ದಾರೆ. ಆದ್ದರಿಂದ ಇಲ್ಲಿ ಶ್ರುತಿಪ್ರಾಪ್ತವಾದ ಅಸತ್ಕಾರಣತ್ವವಾದವನ್ನೇ ನಿರಾಕರಣ ಮಾಡಿದ್ದಾರೆಂದು ಅಂಗೀಕಾರ ಮಾಡಬೇಕು. ಇಲ್ಲದಿದ್ದರೆ, ಒಂದೇ ಸಮಯವನ್ನು ಎರಡು ಕಡೆ ನಿರಾಕರಣ ಮಾಡುವ ಪ್ರಸಂಗ ಬರುವುದರಿಂದ ಸೂತ್ರಕಾರರ ಮೇಲೆ ಪುನರುಕ್ತಿ ದೋಷ ಪ್ರಸಕ್ತಿ ಬರುತ್ತದೆಂದು ಭಾಷ್ಯದ ಅಭಿಪ್ರಾಯ.

ವಿಷ್ಣುವಿಗೆ ಜಗತ್ಕಾರಣತ್ವ ಪ್ರತಿಪಾದನೆ ಮಾಡುವ ಶ್ರುತಿಗೆ ಅನ್ಯಶ್ರುತಿಯಿಂದ ಪ್ರಾಪ್ತವಾದ ಅಸತ್ಕಾರಣತ್ವಮತದ ವಿರೋಧವನ್ನು ನಿರಾಕರಣ ಮಾಡುವುದಾದರೆ, ಈ ಅಧಿಕರಣವು ಶ್ರುತಿವಿರೋಧಪರಿಹಾರರೂಪವಾದ ಮೂರನೇ ಪಾದದಲ್ಲಿ ಸೇರಿಸಬೇಕಾಗುತ್ತದೆ. ಹೊರತು ಕೇವಲ ಯುಕ್ತಿವಿರೋಧಪರಿಹಾರ ಮಾಡುವ ಈ ಪಾದದಲ್ಲಿ ಸೇರಿಸಲಾಗದು. ಈ ಪ್ರಶ್ನೆಗೆ 'ಅರ್ಥಾತ್' ಎಂಬುದರಿಂದ ಉತ್ತರ ನೀಡುತ್ತಾರೆ.

### ಅಧಿಕರಣಕ್ಕೆ ಪಾದಾಂತರ್ಭಾವಸಂಗತಿ

**तत्वप्रकाशिका – न केवलमत्र श्रुतिविरोधः परिहियते, येनासङ्गतिः । किं नाम करणमभिमतं प्रलयेऽसद्भवितुमर्हति वस्तुत्वात् कार्यवदित्याद्यसतः कारणत्व-प्रतिपादकयुक्तिविरोधोऽपीति भावः । तथापि युक्तिविरोधमात्रपरि हारात्मके पादे श्रुतियुक्तिविरोधपरिहारोऽसङ्गत इत्यतोऽर्थादित्युक्तम् । नात्र श्रुतियुक्त्योः स्वतन्त्रं विराधद्वयं परिहियते किं तु श्रुतिविरोधपरिहारेणाप्यन्ततो युक्तिविरोध एव । तथा हि – अत्रासतः कारणत्वप्रतिपादकयुक्तिः पूर्ववादिनोपन्यस्यते । तस्याश्च निर्मूलाया असाधकत्वात् तन्मूलभूता च श्रुतिरुच्यते । तथा चानुपपन्नभाषित्वेन श्रुतेरर्थान्तरे प्रामाण्याभाव इति तद्विरोधे परिहृते निर्मूलयुक्तेः स्वत एवाप्रामाण्यमिति । अतोऽत्र श्रुतिविोधपरिहारस्य युक्तिविरोधपरिहाराङ्गत्वान्न, ना सङ्गतिरिति युक्तमेवोक्त० याख्यानमिति भावः ।। ८ ।।**

ಈ ಅಧಿಕರಣದಲ್ಲಿ ಕೇವಲ ಶ್ರುತಿವಿರೋಧವನ್ನೇ ಪರಿಹಾರ ಮಾಡುತ್ತಿಲ್ಲ. ಹಾಗಾಗಿದ್ದಲ್ಲಿ ಈ ಪಾದದಲ್ಲಿ ಈ ಅಧಿಕರಣ ಅಸಂಗತವಾಗುತ್ತಿತ್ತು. ಆದರೆ 'ಅಭಿಮತಂ ಕಾರಣಮ್ ಪ್ರಲಯೇ ಅಸದ್ಭವಿತುಮರ್ಹತಿ ವಸ್ತುತ್ವಾತ್ ಕಾರ್ಯವತ್' - ಕಾರಣವೆನಿಸಿರುವುದು ಪ್ರಳಯಕಾಲದಲ್ಲಿ ಅಸತ್ ಆಗಿರಬೇಕು. ಅದು ವಸ್ತುವಾದ್ದರಿಂದ, ಕಾರ್ಯದಂತೆ - ಇತ್ಯಾದಿಯಾಗಿ ಅಸತ್ತಿಗೆ ಕಾರಣ - ಪ್ರತಿಪಾದಕವಾದ ಯುಕ್ತಿವಿರೋಧವನ್ನೂ ಅರ್ಥಾತ್ ಪರಿಹರಿಸಲಾಗಿದೆಯೆಂದು ತಿಳಿಯಬೇಕು. ಆದರೂ ಯುಕ್ತಿವಿರೋಧ ಮಾತ್ರ ಪರಿಹಾರ ಮಾಡುವ ಈ ಪಾದದಲ್ಲಿ ಶ್ರುತಿವಿರೋಧ ಹಾಗೂ ಯುಕ್ತಿವಿರೋಧ ಪರಿಹಾರ ಮಾಡುವುದು ಅಸಂಗತವಲ್ಲವೆ? ಈ ಆಕ್ಷೇಪ ಪರಿಹಾರ ಮಾಡಲೂ ಸಹ ಭಾಷ್ಯಕಾರರು 'ಅರ್ಥಾತ್' ಎಂಬ ಶಬ್ದ ಯೋಜನೆ ಮಾಡಿದ್ದಾರೆ. ಈ ಅಧಿಕರಣದಲ್ಲಿ ಶ್ರುತಿ ಮತ್ತು ಯುಕ್ತಿಗಳಿಗಿರುವ ಸ್ವತಂತ್ರವಾದ ಎರಡು ವಿರೋಧವನ್ನು ಪರಿಹಾರ ಮಾಡಿಲ್ಲ. ಶ್ರುತಿವಿರೋಧ ಪರಿಹಾರದ ಮೂಲಕ ಅರ್ಥಾತ್ ಯುಕ್ತಿವಿರೋಧವನ್ನು ಪರಿಹಾರ ಮಾಡಿದ್ದಾರೆ. ಅದು ಹೀಗೆ - ಇಲ್ಲಿ ಅಸತ್ತಿಗೆ ಜಗತ್ಕಾರಣತ್ವ ವಿಷಯದಲ್ಲಿ ಪೂರ್ವಪಕ್ಷಿಯು ಮೇಲೆ ಹೇಳಿದ ಅನುಮಾನವನ್ನು ಉದಾಹರಿಸುತ್ತಾನೆ. ಈ ಅನುಮಾನಕ್ಕೆ ಮೂಲಭೂತವಾದ ಪ್ರಮಾಣವಿಲ್ಲವಾದರೆ, ಅದರಿಂದ ಅನುಮಿತಾರ್ಥದ ಸಾಧನೆಯು ಶಕ್ಯವಿಲ್ಲ. ಆದ್ದರಿಂದ ಅದಕ್ಕೆ ಮೂಲ ಪ್ರಮಾಣವಾಗಿ 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯನ್ನು ಹೇಳುತ್ತಾನೆ. ಈ ಶ್ರುತಿಯು ಹೇಳುವ ಅರ್ಥ ಕೂಡದ ಕಾರಣ ಈ ಅರ್ಥದಲ್ಲಿ ಅಪ್ರಮಾಣವಾಗುತ್ತದೆ. ಈ ರೀತಿ ಶ್ರುತಿ ವಿರೋಧ ಪರಿಹಾರ ಮಾಡಿದಾಗ ಪುನಃ ಪೂರ್ವಪಕ್ಷಿಯ ಅನುಮಾನಕ್ಕೆ ಯಾವ ಮೂಲಭೂತವಾದ ಪ್ರಮಾಣವೂ ಇಲ್ಲದ ಕಾರಣ ಅದು ಸ್ವತಃ ಅಪ್ರಮಾಣವೇ ಆಗುತ್ತದೆ. ಆದ್ದರಿಂದ ಈ ಅಧಿಕರಣದಲ್ಲಿ ಶ್ರುತಿವಿರೋಧ ಪರಿಹಾರವು ಯುಕ್ತಿ ವಿರೋಧ ಪರಿಹಾರದ ಅಂಗಭೂತವಾದ್ದರಿಂದ, ಈ ಅಧಿಕರಣವು ಈ ಪಾದಾಂತರ್ಗತವಾಗುತ್ತದೆ. ಯಾವುದೇ ರೀತಿಯ ಅಸಂಗತಿಯೂ ಇಲ್ಲ. ಆದ ಕಾರಣ ಇಲ್ಲಿ ಮಾಡಿರುವ ವ್ಯಾಖ್ಯಾನವು ಯುಕ್ತವೇ ಆಗಿದೆಯೆಂದು ತಿಳಿಯಬೇಕು.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
## ಭಾವದೀಪ

### ಈ ಅಧಿಕರಣವು ಏಕೆ ಹೊರಟಿದೆ ?

**भावदीपः – असदिति चेन्न प्रतिषेधमात्रत्वात् ॥ ८ ॥** युक्तिविरोधो निराक्रियत इत्यादि भाष्यदिशाऽस्यान्तर्भावसङ्गतिमाह – **अत्र ब्रह्मण इति ॥ युक्तीति ॥** श्रुत्युपसर्जनप्रागभावकर्तृत्वसाधकयुक्तीत्यर्थः। सा चाग्रे व्यक्ता। उक्तं चानुभाष्ये। अल्पवाक्ययुता युक्तिर्बहुलैव विरोधिनीति। अत्राल्पत्वबहुत्वे गुणत्वप्रधानत्वे इति सुधायामेवोक्तम्।

ಈ ಅಧಿಕರಣದಲ್ಲಿ ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ ಎಂಬುದಾಗಿ ಭಾಷ್ಯದಲ್ಲಿ ಹೇಳಿದಂತೆ ಅಧಿಕರಣಕ್ಕೆ ಅಂತರ್ಭಾವ ಸಂಗತಿಯನ್ನು ಉಪಪಾದನೆ ಮಾಡಲು 'ಅತ್ರ ಬ್ರಹ್ಮಣಃ' ಇತ್ಯಾದಿ ಗ್ರಂಥವು ಹೊರಟಿದೆ. 'ಯುಕ್ತಿವಿರೋಧಸ್ಯ' ಎಂಬಲ್ಲಿರುವ 'ಯುಕ್ತಿ' ಶಬ್ದಕ್ಕೆ ಶ್ರುತಿಯು ಅಪ್ರಧಾನವಾಗಿದ್ದು ಪ್ರಾಗಭಾವಕರ್ತೃತ್ವಸಾಧಕವಾದ ಪ್ರಬಲವಾದ ಯುಕ್ತಿ ಎಂದರ್ಥ. ಇಂತಹ ಯುಕ್ತಿಯು ಮುಂದೆ ಸ್ಪಷ್ಟವಾಗುತ್ತದೆ. ಅನುವ್ಯಾಖ್ಯಾನದಲ್ಲಿ 'ಅಲ್ಪವಾಕ್ಯಯುತಾ ಯುಕ್ತಿಃ ಬಹುಲೈವ ವಿರೋಧಿನೀ' ಎಂಬುದಾಗಿ ಇದನ್ನೇ ಹೇಳಿದ್ದಾರೆ. ಅಪ್ರಧಾನವಾದ ಶ್ರುತಿವಾಕ್ಯದಿಂದ ಸಹಿತವಾದ ಯುಕ್ತಿಯು ವೇದವನ್ನು ವಿರೋಧಿಸುತ್ತದೆ ಎಂಬುದು ಇದರ ಅರ್ಥ. ಇಲ್ಲಿರುವ 'ಅಲ್ಪ' ಎಂಬ ಶಬ್ದಕ್ಕೆ ಅಪ್ರಧಾನ ಎಂದರ್ಥ. 'ಬಹುಲ' ಎಂಬ ಶಬ್ದಕ್ಕೆ ಪ್ರಧಾನ ಎಂದರ್ಥ. ಈ ಅರ್ಥವನ್ನು ನ್ಯಾಯಸುಧೆಯಲ್ಲಿಯೇ ಹೇಳಿರುತ್ತಾರೆ. ಆದ್ದರಿಂದ ಚತುರ್ಥ ಪಾದದಲ್ಲಿ ಶ್ರುತಿಯು ಪ್ರಧಾನವಾಗಿರುತ್ತದೆ, ಯುಕ್ತಿಯು ಅಪ್ರಧಾನವಾಗಿರುತ್ತದೆ. ಆದರೆ ಈ ಅಧಿಕರಣದಲ್ಲಿ ಶ್ರುತಿಯು ಅಪ್ರಧಾನವಾಗಿದೆ, ಯುಕ್ತಿಯು ಪ್ರಬಲವಾಗಿದೆ. ಆದ್ದರಿಂದ ಚತುರ್ಥಪಾದಕ್ಕಿಂತ ಇದರಲ್ಲಿರುವ ವೈಲಕ್ಷಣ್ಯವನ್ನು ತಿಳಿಯಬೇಕು.

### ಶ್ರುತಿಗಳಲ್ಲಿರುವ ಪರಸ್ಪರ ವಿರೋಧ

**भावदीपः –** पूर्वसङ्गतिमाह – **जगदिति ॥** उक्तं जन्मादिसूत्र इत्यर्थः॥ **श्रुतीति ॥** यतो वा इति असदेवेदमग्र इत्यादिश्रुतिविरोध इत्यर्थः। भाष्ये विरोध इत्यत्र

यतो वा इत्यादि श्रुतेरिति शेषं मत्त्वा साध्योक्तिपूर्वं उक्तेरित्यन्तं तावद् व्याचष्टे॥ **न विष्णोरिति ।।**

ಹಿಂದಿನ ಅಧಿಕರಣದಿಂದ ಸಂಗತಿಯನ್ನು ತಿಳಿಸುವುದಕ್ಕಾಗಿ 'ಜಗತ್ಕಾರಣತ್ವಮೇವ' ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. 'ಉಕ್ತಂ' ಎಂದರೆ ಜನ್ಮಾಧಿಕರಣದಲ್ಲಿ ಹೇಳಲಾಗಿದೆ ಎಂದರ್ಥ. 'ಶ್ರುತಿವಿಗಾನಂ' ಎಂಬುದಕ್ಕೆ 'ಯತೋ ವಾ ಇಮಾನಿ' ಎಂಬ ಶ್ರುತಿಗೂ 'ಅಸದೇವೇದಮಗ್ರ' ಎಂಬ ಶ್ರುತಿಗೂ ಪರಸ್ಪರ ವಿವಾದವಿರುವುದು ಎಂದರ್ಥ. ಈ ವಿರೋಧವೇ ಸಂದೇಹಕ್ಕೆ ಕಾರಣವಾಗಿದೆ. ಭಾಷ್ಯದಲ್ಲಿ 'ವಿರೋಧಃ' ಎಂಬುದರ ಅನಂತರ 'ಯತೋ ವಾ ಇತ್ಯಾದಿಶ್ರುತೇಃ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಈ ಅಭಿಪ್ರಾಯವನ್ನು ಹೊಂದಿ ಭಾಷ್ಯದಲ್ಲಿ ಹೇಳದ ಸಾಧ್ಯವನ್ನು ಉಲ್ಲೇಖ ಮಾಡುವ ಮೂಲಕ 'ಉಕ್ತೇಃ' ಎಂಬಲ್ಲಿರುವ ತನಕ ಭಾಷ್ಯದ ಮಾತುಗಳನ್ನು ವ್ಯಾಖ್ಯಾನ ಮಾಡುವುದಕ್ಕಾಗಿ 'ನ ವಿಷ್ಣೋಃ' ಇತ್ಯಾದಿ ಗ್ರಂಥವು ಹೊರಟಿದೆ.

### 'ಯತೋ ವಾ' ಇತ್ಯಾದಿ ವಾಕ್ಯವು ಅಪ್ರಮಾಣವೆಂದು ಪೂರ್ವಪಕ್ಷ

**भावदीपः** – अप्रयोजको हेतुरित्यतः ईश्वरस्य स्रष्टृत्ववदसतोऽपि स्रष्टृत्वं श्रूयत इति न्यायविवरणप्रयुक्तवतिप्रत्ययोक्तसाम्यं व्यनक्ति॥ **न हीति ।।** अस्त्वसतोऽपि कारणत्वोक्तिस्तावता कथं यतो वा इत्यादिश्रुतिर्न प्रमाणं येन विष्णुकारणत्वं न युक्तमित्यतः विरोध इति भाष्यांशं फलोक्त्या विवृण्वन् उपसंहरति॥ **अत इति ।।** यतो वा इत्यादिश्रुतेरसद्वा इत्यादिश्रुतिविरोधेनाप्रमाण्यादित्यर्थः।

ಹೇತುವು ಅಪ್ರಯೋಜಕವಾಗಿದೆ ಎಂದರೆ 'ಈಶ್ವರಸ್ಯ ಸ್ರಷ್ಟೃತ್ವವತ್ ಅಸತೋಽಪಿ ಸ್ರಷ್ಟೃತ್ವಂ ಶ್ರೂಯತೇ' 'ಈಶ್ವರನಲ್ಲಿ ಸ್ರಷ್ಟೃತ್ವವಿದ್ದಂತೆ ಅಸತ್ತಿನಲ್ಲೂ ಕೂಡ ಸ್ರಷ್ಟೃತ್ವವು ಶ್ರುತವಾಗಿದೆ ಎಂಬ ನ್ಯಾಯವಿವರಣದಲ್ಲಿ ಹೇಳಿದ ಉಭಯ ಪಕ್ಷದ ಸಾಮ್ಯವನ್ನೇ 'ನ ಹಿ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ. ಅಸತ್ತಿಗೂ ಕೂಡ ಕಾರಣವಿದೆ ಎಂಬ ವಚನದಿಂದ 'ಯತೋ ವಾ' ಇತ್ಯಾದಿ ಶ್ರುತಿಯನ್ನು ಹೇಗೆ ಪ್ರಮಾಣವೆನ್ನುವಿರಿ? ಹಾಗೇನಾದರೂ 'ಯತೋ ವಾ' ಇತ್ಯಾದಿ ವಾಕ್ಯವು ಅಪ್ರಮಾಣವಾಗಿದ್ದಲ್ಲಿ ವಿಷ್ಣುವಿಗೆ ಜಗತ್ಕಾರಣತ್ವ ಅಯುಕ್ತವಾಗುತ್ತಿತ್ತು ಎಂಬ ಪ್ರಶ್ನೆಗೆ 'ವಿರೋಧಃ' ಎಂಬ ಭಾಷ್ಯದ ಭಾಗಕ್ಕೆ ಫಲವನ್ನು ಹೇಳುವ ಮೂಲಕ ವಿವರಿಸುವವರಾಗಿ ಉಪಸಂಹಾರ ಮಾಡಲು 'ಅತಃ'

ಎಂಬ ವಾಕ್ಯವು ಹೊರಟಿದೆ. 'ಯತೋ ವಾ' ಇತ್ಯಾದಿ ಶ್ರುತಿಗೆ 'ಅಸದ್ವಾ' ಎಂಬ ಶ್ರುತಿಯಿಂದ ವಿರೋಧವು ಬರುವುದರಿಂದ ಅಪ್ರಾಮಾಣ್ಯವನ್ನು ಒಪ್ಪಬೇಕು ಎಂಬುದು ಪೂರ್ವಪಕ್ಷದ ಅಭಿಪ್ರಾಯ.

### 'ಅಸತ್' ಪದಾರ್ಥಕ್ಕೆ ಕಾರಣತ್ವವನ್ನು ಹೇಗೆ ಆಶಂಕಿಸಿರುವಿರಿ ?

**भावदीपः** – ननु निःस्वरूपस्यासतो नियतप्राक्सत्वरूपहेतुत्वायोगवदासीदिति सत्वोक्तिविरोधाच्च कथमसतः कारणत्वशङ्का असच्छब्दस्य प्रागभावार्थत्वेऽपि तत्कारणत्वमात्रस्य विष्णुकर्तृत्वाविरोधाच्चेत्यत आह – **अत्र सर्वत्रासच्छब्देन प्रलयवर्तिविश्वप्रागभावोऽभिधीयते कारणशब्देन च कर्तेत्यवधेयमिति ।।**

ನಿಃಸ್ವರೂಪವಾದ ಅಸತ್ತಿಗೆ ನಿಯಮೇನ ಮೊದಲು ಇರುವಿಕೆ ಎಂಬ ಹೇತುತ್ವವೇ ಕೂಡುವುದಿಲ್ಲ. 'ಆಸೀತ್' ಎಂಬ ಸತ್ವವಚನವೂ ಕೂಡ ಕೂಡುವುದಿಲ್ಲ. ಹೀಗಿರುವಾಗ ಅಸತ್ತು ಜಗತ್ತಿಗೆ ಕಾರಣವಾಗುತ್ತದೆಂಬ ಶಂಕೆಯನ್ನು ಹೇಗೆ ಮಾಡುವಿರಿ? ಒಂದುವೇಳೆ ಅಸತ್ ಶಬ್ದಕ್ಕೆ ಪ್ರಾಗಭಾವ ಎಂಬರ್ಥವನ್ನು ವಿವಕ್ಷಿಸಿದರೂ ಕೂಡ ಪ್ರಾಗಭಾವಕ್ಕೆ ಕಾರಣವಿದ್ದ ಮಾತ್ರದಿಂದ ವಿಷ್ಣುವಿನ ಜಗತ್ಕರ್ತೃತ್ವವು ವಿರುದ್ಧವಾಗುವುದಿಲ್ಲ. ಈ ಪ್ರಶ್ನೆಗೆ ಉತ್ತರವನ್ನು ನೀಡಲು 'ಅತ್ರ ಸರ್ವತ್ರ ಅಸತ್ ಶಬ್ದೇನ ಪ್ರಳಯವರ್ತಿ ವಿಶ್ವಪ್ರಾಗಭಾವಃ ಅಭಿಧೀಯತೇ ಕಾರಣಶಬ್ದೇನ ಚ ಕರ್ತಾ ಇತ್ಯವಧೇಯಮ್' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ.

### ಅಚೇತನಕ್ಕೂ ಕೂಡ ಕರ್ತೃತ್ವವಿದೆ ಎಂಬ ಪೂರ್ವಪಕ್ಷದ ಉಪಸಂಹಾರ

**भावदीपः** – अचेतनस्यापि कर्तृत्वं वृक्षेण स्थीयत इत्यादौ कर्त्रर्थकतृतीया-विभक्तिदर्शनाद्युज्यत इति भावः। असदेवेति प्रागुक्तावधारणमाक्षिप्य समाधत्ते॥ **स्यादेतदिति ।। सयुक्तिकत्वस्येति ।।** तथा च भाष्ये उक्तेरित्यनन्तरं युक्त्या चेत्यपि ध्येयमिति भावः। युक्तिश्च कारणं प्रलयेऽसद्भवितुमर्हति। वस्तुत्वादित्यग्रे व्यक्ता ॥

ಅಚೇತನ ಪದಾರ್ಥಕ್ಕೂ ಕೂಡ ಕರ್ತೃತ್ವವಿರುವುದು 'ವೃಕ್ಷೇಣ ಸ್ಥೀಯತೇ' ಇತ್ಯಾದಿ ಸ್ಥಳದಲ್ಲಿ ಕಂಡಿದೆ. ಏಕೆಂದರೆ ಕರ್ತರ್ಥಕದಲ್ಲಿ ತೃತೀಯಾ ವಿಭಕ್ತಿಯು ಬಂದಿರುತ್ತದೆ ಎಂಬುದು 'ಕರ್ತಾ ಇತ್ಯವಧೇಯಂ' ಇತ್ಯಾದಿ ವಾಕ್ಯದ ಅಭಿಪ್ರಾಯವಾಗಿದೆ. 'ಅಸದೇವ' ಎಂಬ ಅವಧಾರಣವು ಹೇಗೆ

ಯುಕ್ತವಾಗುತ್ತದೆ? ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ನೀಡಲು 'ಸ್ಯಾದೇತತ್' ಎಂಬ ವಾಕ್ಯವು ಹೊರಟಿದೆ. 'ಸಯುಕ್ತಿಕತ್ವಸ್ಯ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರಿಂದ ಭಾಷ್ಯದಲ್ಲಿ 'ಉಕ್ತೇಃ' ಎಂಬ ಪದದ ಅನಂತರ 'ಯುಕ್ತ್ಯಾ ಚ' ಎಂಬುದನ್ನು ವಿವಕ್ಷಿಸಬೇಕು. ಆ ಯುಕ್ತಿಯು ಹೀಗಿದೆ – 'ಕಾರಣಂ ಪ್ರಲಯೇಽಸದ್ಭವಿತುಮರ್ಹತಿ ವಸ್ತುತ್ವಾತ್' 'ವಸ್ತುವಾಗಿರುವುದರಿಂದ ಪ್ರಳಯಕಾಲದಲ್ಲಿ ಕಾರಣವಿರುವುದಿಲ್ಲ' ಎಂಬುದೇ ಆ ಯುಕ್ತಿಯಾಗಿದೆ. ಈ ವಿಷಯವು ಮುಂದೆ ಸ್ಪಷ್ಟವಾಗುತ್ತದೆ.

## ಕರ್ತೃತ್ವವು ಅಭಾವದಲ್ಲಿ ಇಲ್ಲ

**ಭಾವದೀಪः** – असतः कारणत्वं न चेदकर्तृकं जगत्स्यादित्यतो भाष्ये साध्यभागस्यार्थमाह – **युक्तमेवेति** ।। कारणत्वं कर्तृत्वमित्यर्थः।। **न त्वसत इति** ।। न विश्वप्रागभावस्येत्यर्थः। इति चेन्न निषेधैकस्वरूपस्य न कर्तृतेत्यनुभाष्योक्तेः। प्रतिषेधात्मकत्वं तु भावस्याभावधर्मतः। धर्मधर्म्यैक्यतश्चैव न तु तन्मात्रता भवेत्। अभावस्य च भावोऽपि धर्मोऽथापि हि धर्मिशः। तादृक्त्वं मात्रतेहोक्तेत्यनुभाष्यदिशा भाष्यस्थहेत्वंशं मात्रपदार्थं वदन् व्याचष्टे।। **तस्येति** ।। तात्पर्यार्थः।। **स्वरूपत एवेति** ।। घटाभावादिवदिति भावः। सर्वभावानामभावधर्मात्मना प्रतिषेधबुद्धिविषयत्वम स्तीति कुलालादौ व्यभिचारनिरासाय अभावधर्मात्मतामन्तरेणेति मात्रपदार्थो विवृतः। न हि तादृशे अभावे बुद्धिपूर्वककृति (प्रवृति) मत्त्वरूपमीश्वरगतत्वेनास्मदभिमतं कर्तृत्वं युज्यते घटाभावादावदर्शनादित्याह – **न हीति** ।।

ಅಸತ್‌ಗೆ ಕಾರಣತ್ವವನ್ನು ಒಪ್ಪದೇ ಇದ್ದರೇ ಜಗತ್ತಿಗೆ ಯಾರೂ ಕೂಡ ಕರ್ತೃವೇ ಇಲ್ಲ ಎಂಬ ಪರಿಸ್ಥಿತಿ ಬರುತ್ತದೆ ಎಂಬ ಪ್ರಶ್ನೆಗೆ ಭಾಷ್ಯದಲ್ಲಿರುವ ಸಾಧ್ಯಭಾಗಕ್ಕೆ ಅರ್ಥವನ್ನು ಹೇಳುವ ಮೂಲಕ ಉತ್ತರಿಸುವುದಕ್ಕಾಗಿ 'ಯುಕ್ತಮೇವ' ಎಂಬ ವಾಕ್ಯವು ಹೊರಟಿದೆ. ವಿಷ್ಣುವಿಗೆ ಜಗತ್ಕಾರಣತ್ವ ಹಾಗೂ ಕರ್ತೃತ್ವಗಳು ಯುಕ್ತವೇ ಆಗಿವೆ ಎಂಬುದು ಇದರ ಅರ್ಥ. 'ನ ತ್ವಸತಃ' ಎಂದರೆ ವಿಶ್ವಪ್ರಾಗಭಾವಕ್ಕೆ ಎಂದರ್ಥ.

'ಇತಿ ಚೇನ್ನ ನಿಷೇಧೈಕಸ್ವರೂಪಸ್ಯ ನ ಕರ್ತೃತಾ' ಪ್ರಾಗಭಾವವು ಕೇವಲ ನಿಷೇಧಸ್ವರೂಪವಾಗಿರುವುದರಿಂದ ಕರ್ತೃತ್ವವನ್ನು ಹೇಳಬಾರದು' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ.

ಪ್ರತಿಷೇಧಾತ್ಮಕತ್ವಂ ತು ಭಾವಸ್ಯಾಭಾವಧರ್ಮತಃ।
ಧರ್ಮಧರ್ಮ್ಯೈಕ್ಯತಶ್ಚೈವ ನ ತು ತನ್ಮಾತ್ರತಾ ಭವೇತ್।
ಅಭಾವಸ್ಯ ಚ ಭಾವೋಽಪಿ ಧರ್ಮೋಽಥಾಪಿ ಹಿ ಧರ್ಮಿಣಃ।
ತಾದೃಕ್ತ್ವಂ ಮಾತ್ರತೇಹೋಕ್ತಾ॥

ಭಾವರೂಪವಾದ ಕರ್ತೃಗಳಿಗೂ ಕೂಡ ಪ್ರತಿಷೇಧಸ್ವರೂಪತ್ವವು ಇದ್ದೇ ಇದೆ. ಏಕೆಂದರೆ ಅನ್ಯೋನ್ಯಾಭಾವವು ಭಾವರೂಪ ಪದಾರ್ಥಗಳ ಧರ್ಮವಾಗಿದೆ ಮತ್ತು ಧರ್ಮಧರ್ಮಿಗಳಿಗೆ ಐಕ್ಯವಿದೆ. ಆದ್ದರಿಂದ ಭಾವಕ್ಕೆ ಅಭಾವರೂಪತ್ವವನ್ನು ಹೇಳಬಹುದು. ಆದರೆ ಕರ್ತೃಗಳಾದ ಕುಂಬಾರ ಮೊದಲಾದ ಭಾವಪದಾರ್ಥಗಳಿಗೆ ಕೇವಲ ಪ್ರತಿಷೇಧತ್ವವು ಇರುವುದಿಲ್ಲ. ಪಕ್ಷ ಮತ್ತು ದೃಷ್ಟಾಂತವೆನಿಸಿರುವ ಅಭಾವಗಳಲ್ಲಿ ಭಾವಧರ್ಮಗಳು ಇವೆ. ಅದು ಧರ್ಮಿಯಿಂದ ಅಭಿನ್ನವಾಗಿವೆ. ಆದರೂ ಕೂಡ ಸ್ವರೂಪಾಸಿದ್ಧಿ ಮೊದಲಾದ ದೋಷಕ್ಕೆ ಅವಕಾಶವಿಲ್ಲ. ಈ ಸೂತ್ರದಲ್ಲಿ 'ಪ್ರತಿಷೇಧಮಾತ್ರ' ಎಂಬ ಶಬ್ದಕ್ಕೆ ಧರ್ಮಿಯಲ್ಲಿರುವ ನೇರವಾದ ಪ್ರತಿಷೇಧತ್ವ ಎಂದರ್ಥ.

ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರ ಪ್ರಕಾರ ಭಾಷ್ಯದಲ್ಲಿರುವ ಹೇತ್ವಂಶವು ಮಾತ್ರ ಪದದ ಅರ್ಥವಾಗಿದೆ ಎಂಬುದಾಗಿ ವ್ಯಾಖ್ಯಾನ ಮಾಡಲು 'ತಸ್ಯ' ಇತ್ಯಾದಿ ಟೀಕಾ ವಾಕ್ಯವು ಹೊರಟಿದೆ. ಇದರ ತಾತ್ಪರ್ಯಾರ್ಥವನ್ನು 'ಸ್ವರೂಪತಃ ಏವ' ಎಂಬುದರಿಂದ ಹೇಳಿದ್ದಾರೆ. ಘಟಾಭಾವದಂತೆ ಎಂಬುದು ಇದರ ಅರ್ಥ. ಸಕಲ ಭಾವಪದಾರ್ಥಗಳಿಗೆ ಅಭಾವಧರ್ಮದ ಮೂಲಕ ಪ್ರತಿಷೇಧಬುದ್ಧಿವಿಷಯತ್ವ ಬರುವುದು ಕಂಡಿದೆ ಎಂಬುದಕ್ಕೆ ಕುಲಾಲಾದಿಗಳಲ್ಲಿ ವ್ಯಭಿಚಾರವು ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕೋಸ್ಕರ 'ಅಭಾವಧರ್ಮತಾ ಮಂತರೇಣ' ಎಂಬುದಾಗಿ ಮಾತ್ರಪದದ ಅರ್ಥವನ್ನು ವಿವರಿಸಿದ್ದಾರೆ. ಇಂತಹ ಅಭಾವದಲ್ಲಿ ಬುದ್ಧಿಪೂರ್ವಕ ಕೃತಿಮತ್ವವೆಂಬ ಈಶ್ವರನಲ್ಲಿರುವ ನಮಗೆ ಅಭಿಮತವಾದ ಕರ್ತೃತ್ವವು ಸರ್ವಥಾ ಬರುವುದಿಲ್ಲ. ಏಕೆಂದರೆ ಘಟಾಭಾವಾದಿಗಳಲ್ಲಿ ಇಂತಹ ಕರ್ತೃತ್ವವು ಕಂಡಿಲ್ಲ. ಇದನ್ನೇ 'ನ ಹಿ' ಇತ್ಯಾದಿ ವಾಕ್ಯವು ಸಮರ್ಥನೆ ಮಾಡುತ್ತಿದೆ.

ಶಶವಿಷಾಣಾದೀನಾಂ ಎಂಬ ಪಾಠವನ್ನು ವಿವಕ್ಷಿಸಿದಾಗ ವ್ಯಾಖ್ಯಾನ

**भावदीप:** – न हि शशविषाणादीनामिति पाठपक्षे तु यथा निःस्वरूपाणां शशविषाणादीनां नियतपूर्वक्षणसत्त्वस्वरूपं कारणत्वं शङ्कार्हं न भवति तथा बुद्धिहीने

विश्वप्रागभावे बुद्धिपूर्वककृतिमत्त्वरूपकर्तृत्वं न संभवतीत्यर्थः। कारणत्वाद्युक्तिविरुद्धमिति भाष्ये कारणत्वादेरुक्तिः श्रुतिः तद्विरुद्धमिति विग्रहः। न तु कारणत्वाद्धेतोर्युक्ति-विरुद्धमिति भिन्नं पदमुत्तरभाष्यविरोधादिति भावेनाह – **कारणत्वप्रलयस्थितत्वेति**।।

ಕೆಲವು ಪುಸ್ತಕಗಳಲ್ಲಿ 'ನ ಹಿ ಶಶವಿಷಾಣಾದೀನಾಂ' ಎಂಬ ಪಾಠವಿದೆ. ಇದರ ಪ್ರಕಾರ ಹೇಗೆ ನಿಃಸ್ವರೂಪವಾದ ಶಶವಿಷಾಣಾದಿಗಳಿಗೆ ನಿಯತಪೂರ್ವಕ್ಷಣಸತ್ವರೂಪವಾದ ಕಾರಣತ್ವದ ಶಂಕೆಯೇ ಕೂಡುವುದಿಲ್ಲವೋ ಹಾಗೆ ಬುದ್ಧಿ ಇಲ್ಲದ ವಿಶ್ವಪ್ರಾಗಭಾವದಲ್ಲಿ ಬುದ್ಧಿಪೂರ್ವಕಕೃತಿಮತ್ವವೆಂಬ ಕರ್ತೃತ್ವದ ಶಂಕೆಯೇ ಕೂಡುವುದಿಲ್ಲ ಎಂದರ್ಥ. 'ಕಾರಣತ್ವಾದ್ಯುಕ್ತಿವಿರುದ್ಧಂ' ಎಂಬ ಭಾಷ್ಯದಲ್ಲಿ ಕಾರಣತ್ವಾದಿಗಳನ್ನು ಹೇಳುವ ಶ್ರುತಿ ಅದಕ್ಕೆ ವಿರುದ್ಧವಾದ ಎಂದರ್ಥ ಹೊರತು 'ಕಾರಣತ್ವಾತ್' ಎಂಬ ಹೇತುವಿಗೆ ಯುಕ್ತಿವಿರೋಧ ಬರುತ್ತದೆ ಎಂದರ್ಥವಲ್ಲ. ಹಾಗೆ ಅರ್ಥವನ್ನು ಒಪ್ಪಿದರೆ ಮುಂದಿನ ಭಾಷ್ಯದ ಮಾತಿಗೆ ವಿರೋಧ ಬರುತ್ತದೆ. ಈ ಅಭಿಪ್ರಾಯದಿಂದ 'ಕಾರಣತ್ವಪ್ರಳಯಸ್ಥಿತತ್ವ' ಇತ್ಯಾದಿ ವಾಕ್ಯವು ಹೊರಟಿದೆ.

### ದ್ವಿತೀಯ ಪಾದದಲ್ಲಿರುವ ಅಸದಧಿಕರಣದಿಂದ ವೈಲಕ್ಷಣ್ಯ ಸಮರ್ಥನೆ

**भावदीपः – असन्मतमिति**।। प्रलयवृत्तिविश्वप्रागभाव एव विश्वस्योपादानं कर्ता चेत्यभावोपादानकर्तृत्वमतमित्यर्थः। असतः प्राप्तिः कर्तृत्वेनाभावस्य प्राप्तिरित्यर्थः।। **उपरितनेति**।। नासतो दृष्टत्वादित्यत्रेत्यर्थः। असन्मतमभावकर्तृत्वमतं निषिध्यत इत्यर्थः।। **अन्यथेति**।। अत्रापि समयप्राप्तस्य निषेधे प्रागभावकर्तृत्वप्रापकसमयाभावेन शून्यकारणतानिषेधस्यैव प्रसङ्गादिति भावः।

'ಅಸನ್ಮತಂ ನಿರಾಕ್ರಿಯತೇ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಪ್ರಳಯದಲ್ಲಿ ಇರುವ ವಿಶ್ವಪ್ರಾಗಭಾವವೇ ವಿಶ್ವಕ್ಕೆ ಉಪಾದಾನಕಾರಣವಾಗಿದೆ ಮತ್ತು ಕರ್ತೃವಾಗಿದೆ ಎಂಬ ಮತವನ್ನು ಎಂದರ್ಥ. 'ಅಸತಃ ಪ್ರಾಪ್ತಿಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಶ್ರುತಿಯಲ್ಲಿ ಅಸತ್ತಿಗೆ ಕರ್ತೃತ್ವವು ಪ್ರಾಪ್ತವಾಗಿಲ್ಲ ಎಂಬುದು ಇದರ ಅರ್ಥ. 'ಉಪರಿತನ ಪಾದೇ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಮುಂದಿನ ಪಾದದಲ್ಲಿರುವ 'ನಾಸತೋ ದೃಷ್ಟತ್ವಾತ್' ಎಂಬ ಸೂತ್ರದಲ್ಲಿ ಎಂದು ಇದರ ಅರ್ಥ. 'ಅಸನ್ ಮತಂ' ಎಂಬುದಕ್ಕೆ ಅಭಾವಕರ್ತೃತ್ವಮತವನ್ನು ಇಲ್ಲಿ ನಿರಾಕರಣೆ ಮಾಡಲಾಗಿದೆ ಎಂದರ್ಥ. 'ಅನ್ಯಥಾ'

ಎಂಬ ಪದಕ್ಕೆ ಒಂದುವೇಳೆ ಈ ಅಧಿಕರಣದಲ್ಲೂ ಕೂಡ ಇತರ ವಾದಿಗಳ ಮತದಿಂದ ಪ್ರಾಪ್ತವಾದದ್ದನ್ನು ನಿಷೇಧ ಮಾಡುವುದಾದರೆ ಪ್ರಾಗಭಾವಕರ್ತೃತ್ವ ಪ್ರಾಪಕವಾದ ಮತವೇ ಇಲ್ಲದ್ದರಿಂದ ಶೂನ್ಯಕಾರಣತ್ವದ ನಿಷೇಧದಲ್ಲಿಯೇ ಇದು ಪರ್ಯವಸಾನವನ್ನು ಹೊಂದುತ್ತದೆ. ಆಗ ಪೌನರುಕ್ತ್ಯಾದಿ ದೋಷಗಳು ಪ್ರಾಪ್ತವಾಗುತ್ತವೆ ಎಂದರ್ಥ.

### ಯುಕ್ತಿವಿರೋಧವನ್ನೂ ಕೂಡ ಇಲ್ಲಿ ಪರಿಹರಿಸಲಾಗಿದೆ

**भावदीपः** – असत्कार्यं यथादृष्टं वस्तुत्वात्कारणं तथेत्यनुभाष्योक्तदिशा असदिति चेदिति सूत्रांशसूचितां युक्तिमाह – **कारणमिति** ।। निमित्तकारणत्वेनोपादानकारणत्वेन च सिद्धान्त्यभिमतमीश्वरादृष्टप्रधानादिकं प्रलयेऽसत् अविद्यमानं वस्तुत्वात्कार्यवदित्यर्थः ।

'ಅಸತ್‌ಕಾರ್ಯಂ ಯಥಾದೃಷ್ಟಂ ವಸ್ತುತ್ವಾತ್ ಕಾರಣಂ ತಥಾ' 'ಮಹದಾದಿಕಾರ್ಯಗಳು ಪ್ರಳಯದಲ್ಲಿ ಇರುವುದಿಲ್ಲ ಎಂಬುದಾಗಿ ಪ್ರಮಾಣ ಸಿದ್ಧವಾಗಿದೆ. ಅದರಂತೆ ಕಾರಣ ಎಂದು ಅಂಗೀಕರಿಸಲ್ಪಟ್ಟಿರುವ ಈಶ್ವರಾದಿಗಳೂ ಕೂಡ ಪದಾರ್ಥವಾಗಿರುವುದರಿಂದ ಪ್ರಳಯ ಕಾಲದಲ್ಲಿ ಇರುವುದಿಲ್ಲ. ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದು 'ಅಸದಿತಿಚೇತ್' ಎಂಬ ಸೂತ್ರದ ವ್ಯಾಖ್ಯಾನವಾಗಿದೆ. ಇದರಿಂದ ಸೂಚಿತವಾದ ಯುಕ್ತಿಯನ್ನು 'ಕಾರಣಂ' ಇತ್ಯಾದಿ ಟೀಕಾ ಪಂಕ್ತಿಯಿಂದ ನಿರೂಪಣೆ ಮಾಡುತ್ತಿದ್ದಾರೆ. ಈಶ್ವರನು ನಿಮಿತ್ತಕಾರಣನಾಗಿದ್ದಾನೆ. ಪ್ರಕೃತಿ ಮೊದಲಾದವುಗಳು ಉಪಾದಾನ ಕಾರಣವಾಗಿವೆ ಎಂಬುದು ಸಿದ್ಧಾಂತಿಗಳಿಗೆ ಅಭಿಪ್ರೇತವಾಗಿದೆ. ಇವುಗಳನ್ನು ಪಕ್ಷವನ್ನಾಗಿ ಮಾಡಿ 'ಪ್ರಳಯೇ ಅಸದ್ಭವಿತುಮರ್ಹತಿ ವಸ್ತುತ್ವಾತ್ ಕಾರ್ಯವತ್' ಎಂಬುದಾಗಿ ಅನುಮಾನವನ್ನು ತಿಳಿಯಬೇಕು. ಇಂತಹ ಶ್ರುತಿವಿರೋಧವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡಲಾಗಿದೆ ಎಂಬುದನ್ನು 'ಕಾರಣಂ' ಎಂಬ ಟೀಕೆಯಲ್ಲಿ ಹೇಳಿದ್ದಾರೆ

### ಅಭಾವಕ್ಕೆ ಕರ್ತೃತ್ವ ಮಾತ್ರವಲ್ಲ ಉಪಾದಾನವೂ ಕೂಡ ಪೂರ್ವಪಕ್ಷಗಳಿಗೆ ಅಭಿಪ್ರೇತ

**भावदीपः** – एवं चानया युक्त्या ईश्वरप्रभृतिभावकारणमात्रस्य प्रलयेऽभावसिद्धौ कार्यत्वस्य सोपादानत्वसकर्तृकत्वनियमात्परिशेषादभावस्यैव विश्वकर्तृत्वं

विश्वोपादानत्वं च सेत्स्यतीति भावेनोक्तमित्याद्यसतः कारणत्वेत्यादिपदम्। अर्थान्तरे प्रागभावकर्तृत्वादौ॥ ८ ॥

ಮೇಲೆ ಹೇಳಿದ ಯುಕ್ತಿಯಿಂದ ಈಶ್ವರನೇ ಮೊದಲಾದ ಭಾವಪದಾರ್ಥಗಳಿಗೆ ಕಾರಣತ್ವವು ಪ್ರಳಯ ಕಾಲದಲ್ಲಿ ಇರುವುದಿಲ್ಲ ಎಂದು ಸಿದ್ಧವಾಗುತ್ತದೆ. ಕಾರ್ಯವಿದ್ದರೆ ಅದಕ್ಕೆ ಉಪಾದಾನ ಕಾರಣ ಇರಲೇಬೇಕು ಮತ್ತು ಕರ್ತೃವು ಕೂಡ ಇರಲೇಬೇಕು ಎಂಬ ನಿಯಮವಿದೆ. ಆದರೆ ಈಶ್ವರಾದಿಗಳು ಇರುವುದಿಲ್ಲ. ಪರಿಶೇಷಾತ್ ಅಭಾವವೇ ವಿಶ್ವಕ್ಕೆ ಕರ್ತೃವಾಗಿದೆ. ಮತ್ತು ಉಪಾದಾನಕಾರಣವಾಗಿದೆ ಎಂದು ಒಪ್ಪಬೇಕು. ಈ ಅಭಿಪ್ರಾಯದಿಂದ ಆದಿ ಪದವನ್ನು ಪ್ರಯೋಗಿಸಿದ್ದಾರೆ. 'ಅರ್ಥಾಂತರೇ' ಎಂಬ ಪದಕ್ಕೆ ಪ್ರಾಗಭಾವಕರ್ತೃತ್ವಾದಿಗಳಲ್ಲಿ ಎಂದರ್ಥ.

## ಬ್ರಹ್ಮಸೂತ್ರ

'ಅಪೀತೌ ತದ್ವತ್ಪ್ರಸಂಗಾದಸಮಂಜಸಮ್' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – अपीतौ तद्वत्प्रसङ्गादसमञ्जसम् ॥२॥**

ಅಭಾವದಿಂದ ಜಗತ್ತು ಹುಟ್ಟುವುದಾದರೆ ಪ್ರಳಯಕಾಲದಲ್ಲಿ ಯಾವುದೂ ಇಲ್ಲವೆಂದಾಗಬೇಕಾದೀತು. ಆದ್ದರಿಂದ ಅಭಾವಕರ್ತೃತ್ವವಾದವು ಸರಿಯಲ್ಲ.

ಅರ್ಥ -- ಅಪೀತೌ ತದ್ವತ್ಪ್ರಸಂಗಾತ್ = ಪ್ರಳಯಕಾಲದಲ್ಲಿ ಯಾವುದೂ ಇಲ್ಲವೆಂದಾಗಬೇಕಾದೀತು. ಆದುದರಿಂದ ಅಭಾವಕರ್ತೃತ್ವವು, ಅಸಮಂಜಸಮ್ = ಅಭಾವವೇ ಕರ್ತೃವಾಗಿದೆಯೆಂಬ ಮತವು ಅಯುಕ್ತವಾಗಿದೆ.

## ಬ್ರಹ್ಮಸೂತ್ರಭಾಷ್ಯ

ಪ್ರಳಯಕಾಲದಲ್ಲಿ ಎಲ್ಲವೂ ಅಸತ್ತೇ ಆದೀತು

**ब्रह्मसूत्रभाष्यम् – ॥ अपीतौ तद्वत्प्रसङ्गादसमञ्जसम् ॥२॥**

**असत उत्पत्तौ प्रलयेऽपि सर्वासत्त्वमेव स्यात् ॥२॥**

ಅನುವಾದ - ಶ್ರುತಿಪ್ರಾಪ್ತವಾದ ಅಸತ್ಕಾರಣತಾವಾದವನ್ನು ನಿರಾಕರಣೆ ಮಾಡಿದ್ದರಿಂದ ಯುಕ್ತಿವಿರೋಧವನ್ನು ಈ ಅಧಿಕರಣದಿಂದ ಪರಿಹರಿಸಿದಂತಾಗುತ್ತದೆ. ಇದು ಅರ್ಥತಃ ಪ್ರಾಪ್ತವಾದ

ಪ್ರಯೋಜನ. ಅಸತ್‌ಪದಾರ್ಥದಿಂದ ಜಗತ್ತು ಹುಟ್ಟುವುದಾದರೆ ಪ್ರಳಯಕಾಲದಲ್ಲಿ ಎಲ್ಲವೂ ಕೂಡ ಅಸತ್ತೇ ಆಗಬೇಕಾದೀತು.

ಪ್ರತಿಪದಾರ್ಥ -- ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗೆ ಅಸತ್ಕಾರಣತ್ವದ ವಿರೋಧದ ನಿರಾಕರಣೆಯನ್ನು ಮಾಡಲಾಗಿದೆ. ಹಾಗಾದರೆ ಇದಕ್ಕೆ ಮೂರನೆಯ ಪಾದದಲ್ಲಿ ಸಂಗತಿಯು ಬರಬೇಕಿತ್ತು ಯುಕ್ತಿವಿರೊಧಪರಿಹಾರಕವಾದ ಈ ಪಾದದಲ್ಲಿ ಸಂಗತಿಯು ಬರುವುದಿಲ್ಲವಲ್ಲವೇ? ಈ ಪ್ರಶ್ನೆಗೆ 'ಅರ್ಥಾತ್' ಎಂದು ಉತ್ತರಿಸುತ್ತಿದ್ದಾನೆ. ಯುಕ್ತಿವಿರೋಧೋ = ಯುಕ್ತಿಯು ವಿರೋಧವನ್ನು ಕೂಡ, ಅಥಾದ್ = ಪರಿಯವಸಾನದಲ್ಲಿ, ನಿರಾಕ್ರಿಯತೇ = ಇಲ್ಲಿ ನಿರಾಕರಣೆ ಮಾಡುತ್ತಿದ್ದಾರೆ.

ಅಸತಃ = ಅಸತ್‌ಪದಾರ್ಥಕ್ಕೆ, ಉತ್ಪತ್ತೌ = ಜಗತ್ತಿನ ಉತ್ಪತ್ತಿಯ ಕಾರಣತ್ವವನ್ನು ಹೇಳಿದರೆ, ಪ್ರಳಯೇಽಪಿ = ಪ್ರಳಯಕಾಲದಲ್ಲೂ, ಸರ್ವಾಸತ್ವಮೇವ = ಎಲ್ಲವೂ ಅಸತ್ತೇ ಆಗಿದೆ ಎಂದು, ಸ್ಯಾತ್ = ಆಗಬೇಕಾದೀತು.

## ಸತ್ತರ್ಕದೀಪಾವಳಿ

**सत्तर्कदीपावळिः – युक्त्यन्तरैरुक्तार्थं समर्थयते – अपीतावित्यादिना ।।**

ಬೇರೆ ಯುಕ್ತಿಗಳಿಂದಲೂ ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಸಮರ್ಥನೆ ಮಾಡಲು 'ಅಪಿತೌ' ಇತ್ಯಾದಿ ಸೂತ್ರವು ಹೊರಟಿದೆ.

## ತತ್ವಪ್ರದೀಪ

### ಅಭಾವಮತ ಅಸಮಂಜಸ

**तत्वप्रदीपः – अपीतौ तद्वत्प्रसङ्गादसमञ्जसम् ।। असत उत्पत्त्यङ्गीकारे प्रलयेऽपि पूर्ववत् सर्वासत्त्वप्रसङ्गादसमञ्जसमिदम् असन्मतम् ।।**

ಅಸತ್ ಪದಾರ್ಥಕ್ಕೆ ಉತ್ಪತ್ತಿಯನ್ನು ಅಂಗೀಕಾರ ಮಾಡಿದರೆ ಪ್ರಳಯದಲ್ಲಿಯೂ ಕೂಡ ಯಾವುದೂ ಇಲ್ಲದೇ ಇರಬೇಕಾದ ಪ್ರಸಂಗ ಬರುತ್ತದೆ. ಪ್ರಳಯಕಾಲದಲ್ಲಿ ಏನೂ ಇಲ್ಲ ಎಂಬುದು ಅಸಮಂಜಸವಾಗಿದೆ. ಆದ್ದರಿಂದ ಅಭಾವಕ್ಕೆ ಜಗತ್‌ಕಾರಣತ್ವವನ್ನು ಹೇಳುವ ಈ ಮತವು ಅಸಾಧುವಾಗಿದೆ.

### ತತ್ವಪ್ರಕಾಶಿಕಾ

ಅಸತ್ತಿಗೆ ಜಗತ್‌ಕಾರಣತ್ವ ಒಪ್ಪಿದರೆ ಯಾವುದೇ ಬಾಧಕವಿಲ್ಲ

**तत्वप्रकाशिका – यदुक्तं प्रतिषेधमात्रत्वाच्छशविषाणादिवदसतो न कारणत्वमिति न तद्युक्तम्। युक्तिविरुद्धस्यापि श्रुतिबलात् कस्यचिदसतः कारणत्वस्याभ्युपगमे बाधकाभावात् । न च शशविषाणादीनामपि तथात्वप्रसङ्गः। सत्सु वैलक्षण्यवदसत्स्वपि वैलक्षण्योपपत्तेरित्याशङ्कां परिहरत्सूत्रमुपन्यस्य व्याचष्टे – अपीताविति ।।**

ಕೇವಲ ನಿಷೇಧಬುದ್ಧಿಗೆ ಅಸತ್ತು ವಿಷಯವಾಗುವುದರಿಂದ ಮೊಲದ ಕೊಂಬಿನಂತೆ ಅದಕ್ಕೆ ಕಾರಣತ್ವವು ಕೂಡುವುದಿಲ್ಲವೆಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ, ಯುಕ್ತಿವಿರುದ್ಧವಾದರೂ ಶ್ರುತಿಪ್ರಮಾಣದ ಸಾಮರ್ಥ್ಯದಿಂದ ಯಾವುದಾದರೂ ಒಂದು ಪ್ರಕಾರ ಅಸತ್ತಿಗೆ ಜಗತ್ಕಾರಣತ್ವವನ್ನು ಸ್ವೀಕರಿಸಿದರೆ ಯಾವ ಬಾಧಕವೂ ಬರಲಾರದು. ಹಾಗಾದರೆ ಶಶವಿಷಾಣಾದಿಗಳಿಗೂ ಕಾರಣತ್ವ ಬರಲಿ ಎಂಬ ಆಪತ್ತಿ ಸರಿಯಲ್ಲ. ಏಕೆಂದರೆ ಸತ್ ಪದಾರ್ಥಗಳಲ್ಲಿ ವೈಲಕ್ಷಣ್ಯ ಇದ್ದಂತೆ ಅಸತ್ ಪದಾರ್ಥಗಳಲ್ಲಿಯೂ ವೈಲಕ್ಷಣ್ಯ ಒಪ್ಪಬೇಕಾಗುತ್ತದೆ. ಈ ಶಂಕೆಯನ್ನು ಪರಿಹಾರ ಮಾಡಲು ಸೂತ್ರವನ್ನು ಹೇಳಿ, ವ್ಯಾಖ್ಯಾನ ಮಾಡುತ್ತಾರೆ. 'ಅಪೀತೌ' ಇತ್ಯಾದಿಯಾಗಿ.

ಅಸದ್‌ವಾದವು ಅಸಮಂಜಸ

**तत्वप्रकाशिका – असतः सकाशाज्जगदुत्पत्तावभ्युपेतायां प्रलये असन्मात्रावशेषः प्रसज्येत । कार्यनाशे कारणमात्रावशेषनियमात् । अतोऽसम असमसन्मतमित्यर्थः ।। ९ ।।**

ಅಸತ್ತಿನಿಂದ ಜಗದುತ್ಪತ್ತಿ ಒಪ್ಪಿದರೆ, ಪ್ರಳಯಕಾಲದಲ್ಲಿ ಏನೂ ಇಲ್ಲವೆಂದೇ ಹೇಳಬೇಕಾದೀತು. ಏಕೆಂದರೆ, ಕಾರ್ಯನಾಶವಾದಾಗ ಕೇವಲ ಕಾರಣವೇ ಇರುತ್ತದೆಂಬ ನಿಯಮವಿರುತ್ತದೆ. ಆದ್ದರಿಂದ ಅಸದ್ವಾದವು ಅಸಮಂಜಸವಾಗಿದೆ.

## ಭಾವದೀಪ

### ಅಪೀತೌ ತದ್ವತ್ ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನ

**भावदीपः – अपीतौतद्वत्प्रसङ्गादसमञ्जसम् ।। ९ ।। युक्तीति ।।** प्रतिषेधमात्रत्वयुक्तीत्यर्थः । कस्यचिदसतः विश्वप्रागभावस्येत्यर्थः। आपाद्यापादकयोरसाङ्गत्यनिरासाय शेषपूर्त्या भाष्यं व्याचष्टे।। **असतः सकाशादिति ।।** सूत्रे अपीतिशब्दः प्रलयवाची। तच्छब्दः प्राक्प्रकृतासच्छब्दिताभावपरः सावधारणः।

'ಯುಕ್ತಿವಿರುದ್ಧಸ್ಯಾಪಿ' ಎಂಬ ಪದಕ್ಕೆ ಪ್ರತಿಷೇಧಮಾತ್ರತ್ವರೂಪವಾದ ಯುಕ್ತಿವಿರುದ್ಧವಾದರೂ ಕೂಡ ಎಂದರ್ಥ. 'ಕಸ್ಯಚಿತ್ ಅಸತಃ' ಎಂಬುದಕ್ಕೆ ವಿಶ್ವಪ್ರಾಗಭಾವಕ್ಕೆ ಎಂದರ್ಥ. ಆಪಾದ್ಯ ಹಾಗೂ ಆಪಾದಕಗಳಿಗೆ ಅಸಾಂಗತ್ಯ ದೋಷವನ್ನು ನಿರಾಕರಣೆ ಮಾಡುವುದಕ್ಕಾಗಿ ಶೇಷಪೂರಣ ಮಾಡುವುದರ ಮೂಲಕ ಭಾಷ್ಯಕ್ಕೆ ವ್ಯಾಖ್ಯಾನ ಮಾಡಲು 'ಅಸತಃ ಸಕಾಶಾತ್' ಇತ್ಯಾದಿ ಟೀಕಾ ವಾಕ್ಯವು ಹೊರಟಿದೆ. ಸೂತ್ರದಲ್ಲಿರುವ 'ಅಪೀತಿ' ಎಂಬ ಶಬ್ದವು ಪ್ರಳಯ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. 'ತತ್' ಎಂಬ ಶಬ್ದವು ಹಿಂದೆ ಪ್ರಕೃತವಾದ ಅಸತ್ ಶಬ್ದದಿಂದ ಪ್ರಕೃತವಾದ ಅಭಾವಪರವಾಗಿದೆ ಮತ್ತು ಸಾವಧಾರಣವಾಗಿದೆ. ಅಸತ್ ಪದಾರ್ಥವಷ್ಟೇ ಇರಬೇಕಾದೀತು ಎಂಬರ್ಥವು ಇದರಿಂದ ದೊರೆಯುತ್ತದೆ.

### ತದ್ವತ್ ಎಂಬುದು ವತಿ ಪ್ರತ್ಯಯಾಂತವಲ್ಲ

**भावदीपः –** वदितिमतुप्प्रत्ययो न तु परमत इव वतिरिति भावेन सूत्राक्षराणि योजयति।। **प्रलये असन्मात्रेत्यादि ।।** सर्वासत्त्वमिति भाष्यं तु तात्पर्यार्थोक्तिपरमिति भावः।। **कार्यनाश इति ।।**

ಸೂತ್ರದಲ್ಲಿ 'ತದ್ವತ್' ಎಂಬುದಾಗಿ 'ವತ್' ಎಂಬುದು ಮತುಬರ್ಥಕವಾದ ಪ್ರತ್ಯಯವಾಗಿದೆ ಹೊರತು ಪರಮತೀಯರು ಹೇಳುವಂತೆ ವತಿ ಎಂಬ ಪ್ರತ್ಯಯವೆಂದು ತಿಳಿಯಬಾರದು. ಈ ಅಭಿಪ್ರಾಯದಿಂದ ಸೂತ್ರಾಕ್ಷರಗಳನ್ನು ಯೋಜನೆ ಮಾಡುವುದಕ್ಕಾಗಿ 'ಪ್ರಳಯೇ ಅಸನ್ಮಾತ್ರಾವಶೇಷಃ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಸರ್ವ ಅಸತ್ವಂ' ಎಂಬ ಭಾಷ್ಯವು ತಾತ್ಪರ್ಯಾರ್ಥವನ್ನು ಹೇಳಲು ಹೊರಟಿದೆ ಎಂದು ತಿಳಿಯಬೇಕು.

'ಕಾರ್ಯನಾಶೇ ಕಾರಣಮಾತ್ರಾವಶೇಷನಿಯಮಾತ್' ಎಂಬುದಕ್ಕೆ ವ್ಯಭಿಚಾರವಿಲ್ಲ

**भावदीपः** – यद्यपि कार्यनाशेऽपि कारणशब्देनेहाभिमतकर्तृमात्रावशेषनियमो नास्ति नष्टकर्तृकघटादिनाशे व्यभिचारात्। तथापीह पूर्ववादिना कर्त्रुपादानयोरैक्याङ्गीकारात्कार्य-नाशे उपादानावशेषनियमात्तदभिप्रायेण कार्यनाशे कारणमात्रावशेषनियमादित्युक्तम्। असन्मतमभावमतम्॥ ९ ॥

ವಾಸ್ತವಿಕವಾಗಿ ಕಾರ್ಯನಾಶವಾದರೂ ಕೂಡ ಕಾರಣ ಶಬ್ದದಿಂದ ಪ್ರಕೃತ ಅಭಿಪ್ರೇತವಾದ ಕರ್ತೃತ್ವವಷ್ಟೇ ಉಳಿಯಬೇಕೆಂಬ ನಿಯಮವಿಲ್ಲ. ಏಕೆಂದರೆ ಎಲ್ಲಿ ಘಟಕ್ಕೆ ಕರ್ತೃವಾದ ಕುಲಾಲನು ನಾಶವಾಗಿದ್ದಾನೋ, ಅಲ್ಲಿ ಘಟವೆಂಬ ಕಾರ್ಯವು ನಾಶವಾಗಿದೆ. ಆದರೆ ಕಾರಣನೆನಿಸಿದ ಕುಲಾಲನು ಅವಶಿಷ್ಟನಾಗಿರುವುದಿಲ್ಲ. ಅವನೂ ಕೂಡ ನಾಶವಾಗಿದ್ದಾನೆ. ಆದ್ದರಿಂದ 'ಯತ್ರ ಕಾರ್ಯನಾಶಃ ತತ್ರ ಕಾರಣಸ್ಯ ಅಸ್ತಿತ್ವಂ' ಎಂಬ ನಿಯಮಕ್ಕೆ ವ್ಯಭಿಚಾರ ಬರುತ್ತದೆ. ಆದ್ದರಿಂದ ಗ್ರಂಥದಲ್ಲಿ ಕಾರ್ಯನಾಶವಾದಾಗ ಕಾರಣ ಇರುತ್ತದೆಂಬ ನಿಯಮವನ್ನು ಹೇಗೆ ಹೇಳಿದರು?

ಹೌದು. ಆದರೆ ಪೂರ್ವಪಕ್ಷಿಯು ಕರ್ತೃವಿಗೂ ಉಪಾದಾನಕ್ಕೂ ಐಕ್ಯವನ್ನು ಒಪ್ಪಿದ್ದಾನೆ. ಕಾರ್ಯನಾಶವಾದಾಗ ಉಪಾದಾನದ ಅವಶೇಷವು ನಿಯಮೇನ ಇದ್ದೇ ಇರುತ್ತದೆಂಬ ನಿಯಮ ಲೋಕದಲ್ಲಿ ಕಂಡಿದೆ. ಘಟ ನಾಶವಾದರೆ ಅದಕ್ಕೆ ಉಪಾದಾನವಾದ ಮಣ್ಣು ಇದ್ದೇ ಇರುತ್ತದೆಂಬುದು ಕಂಡಿದೆ. ಈ ಅಭಿಪ್ರಾಯದಿಂದ ಗ್ರಂಥದಲ್ಲಿ 'ಕಾರ್ಯನಾಶೇ ಕಾರಣಮಾತ್ರಾವಶೇಷನಿಯಮಾತ್' ಎಂಬುದಾಗಿ ಹೇಳಿರುತ್ತಾರೆ. 'ಅಸನ್ಮತಂ' ಎಂಬುದಕ್ಕೆ ಅಭಾವವು ಜಗತ್ಕಾರಣವಾಗಿದೆ ಎಂಬ ಮತವು ಎಂದರ್ಥ.

## ಬ್ರಹ್ಮಸೂತ್ರ

'ನತು ದೃಷ್ಟಾಂತಭಾವಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – न तु दृष्टान्तभावात् ॥३॥**

**ಪ್ರಳಯಕಾಲದಲ್ಲಿಯೂ ಅನೇಕ ತತ್ವಗಳಿವೆ ಎಂಬ ವಿಷಯದಲ್ಲಿ ಅನುಮಾನ ಪ್ರಮಾಣವಿರುವುದರಿಂದ ಏನೂ ಇರುವುದಿಲ್ಲ ಎಂಬ ಮತವು ಅಯುಕ್ತವಾಗಿದೆ.**

ಅರ್ಥ -- 'ತು' ಶಬ್ದವು ಅವಧಾರಣಾರ್ಥದಲ್ಲಿ ಇರುತ್ತದೆ. ನ = ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲ ಎಂಬುದು ಅಯುಕ್ತವಾಗಿದೆ. ಏಕೆಂದರೆ ಪ್ರಳಯಕಾಲದಲ್ಲಿ ಅನೇಕ ಭಾವಪದಾರ್ಥಗಳು ಇರುತ್ತವೆನ್ನಲು ದೃಷ್ಟಾಂತಭಾವಾತ್ = ಅನುಮಾನಪ್ರಮಾಣವಿರುವುದರಿಂದ.

## ಬ್ರಹ್ಮಸೂತ್ರಭಾಷ್ಯ

ಏನೂ ಇಲ್ಲವೆನ್ನಲು ದೃಷ್ಟಾಂತವಿಲ್ಲ

**ब्रह्मसूत्रभाष्यम् – ॥ न तु दृष्टान्तभावात् ॥३॥**

**प्रलये सर्वासत्त्वं भावे दृष्टान्ताभावादेव न युज्यते । सत उत्पत्तिः सशेषविनाशश्च हि लोके दृष्टः ॥३॥**

ಅನುವಾದ - ಅನೇಕ ತತ್ವಗಳು ಇರುತ್ತವೆಂದು ಅನುಮಾನದಿಂದ ಸಿದ್ಧವಾಗಿದೆ. ಹೀಗಿರುವಾಗ ಯಾವುದೂ ಇಲ್ಲವೆಂದು ಹೇಳಲಾಗದು. ಲೋಕದಲ್ಲಿ ಒಂದು ಬಗೆಯ ಸತ್ಯ ಪದಾರ್ಥದಿಂದ ಮತ್ತೊಂದು ಪದಾರ್ಥವು ಹುಟ್ಟಿದರೆ ಅದರ ಅವಶೇಷಗಳು ಇರುವುದು ಕಂಡಿದೆ. ಆದರೆ ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲವೆನ್ನುವುದಕ್ಕೆ ಯಾವುದೇ ದೃಷ್ಟಾಂತವಿರುವುದಿಲ್ಲ.

ಪ್ರತಿಪದಾರ್ಥ -- ಪ್ರಲಯೇ = ಪ್ರಳಯಕಾಲದಲ್ಲಿ, ಸರ್ವಾಸತ್ವಂ = ಯಾವುದೇ ಪದಾರ್ಥವು ಇರುವುದಿಲ್ಲವೆಂಬುದು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಏಕೆಂದರೆ ಭಾವೇ = ಪ್ರಳಯಕಾಲದಲ್ಲಿ ಸತ್ ಪದಾರ್ಥವು ಇದೆ ಎನ್ನಲು, ದೃಷ್ಟಾಂತಭಾವಾತ್ = ದೃಷ್ಟಾಂತವು ಇರುತ್ತದೆ. ಸತಃ = ಸತ್‌ಪದಾರ್ಥದಿಂದ, ಉತ್ಪತ್ತಿಃ = ಉತ್ಪತ್ತಿಯು, ಚ =

ಮತ್ತು ಸಶೇಶವಿನಾಶಃ = ಅವಶೇಷಗಳಿಂದ ಸಹಿತವಾಗಿ ನಾಶವನ್ನು ಹೊಂದುವುದು, ಲೋಕೇ = ಲೋಕದಲ್ಲಿ, ದೃಷ್ಟ = ಕಂಡಿರುತ್ತದೆ.

### ಸತ್ತರ್ಕದೀಪಾವಳಿ

**सत्तर्कदीपावळिः – दृष्टान्तसद्भावात् जगतः सकर्तृकत्वपक्ष एव ज्यायान् नत्वसत्कारणत्वपक्षः दृष्टान्तरहितत्वात् इत्यर्थः ।**

ದೃಷ್ಟಾಂತವಿರುವುದರಿಂದ ಜಗತ್ತಿಗೆ ವಿಷ್ಣುವೇ ಕರ್ತೃವಾಗಿದ್ದಾನೆ ಎಂಬ ಪಕ್ಷವೇ ಶ್ರೇಷ್ಠವಾಗಿದೆ. ದೃಷ್ಟಾಂತ ರಹಿತವಾಗಿರುವುದರಿಂದ ಅಸತ್‌ಕಾರಣತ್ವ ಪಕ್ಷವು ನೀಚವಾಗಿದೆ.

### ತತ್ವಪ್ರದೀಪ

ಏನೂ ಇಲ್ಲವೆನ್ನಲು ದೃಷ್ಟಾಂತವಿಲ್ಲ

**तत्वप्रदीपः – 'यथाग्रे नैव किञ्चनाऽसीत् तथाऽन्ते नैव किञ्चन भविष्यतीति युक्तमेव' इत्यत आह – न तु दृष्टान्तभावात् ।। प्रलये सर्वासत्त्वं न युज्यते । सद्भावे दृष्टान्तभावादेव । नचोत्पत्तेः प्रागपि युज्यते तस्मादेव ।। स्वपक्षदोषाच्च असद्वादिनः ।**

ಹೇಗೆ ಸೃಷ್ಟಿಯ ಮೊದಲು ಯಾವುದೇ ಪದಾರ್ಥಗಳು ಇರಲಿಲ್ಲವೋ, ಅದರಂತೆ ನಾಶವಾದ ಮೇಲೂ ಕೂಡ ಯಾವುದೂ ಇರುವುದಿಲ್ಲ. ಆದ್ದರಿಂದ ಪ್ರಳಯಕಾಲದಲ್ಲಿ ಏನೂ ಇಲ್ಲವೆಂದು ಹೇಳಿದರೆ ಏನು ತಪ್ಪು ? ಈ ಪ್ರಶ್ನೆಗೆ ಉತ್ತರವನ್ನು ನೀಡಲು 'ನತು ದೃಷ್ಟಾಂತಭಾವಾತ್' ಎಂಬ ಸೂತ್ರವು ಹೊರಟಿದೆ. ಪ್ರಳಯಕಾಲದಲ್ಲಿ ಯಾವುದೂ ಇರಲಿಲ್ಲ ಎನ್ನಲು ದೃಷ್ಟಾಂತವೇ ಇಲ್ಲ. ಹೊರತಾಗಿ ಸತ್ಯಪದಾರ್ಥಗಳು ಇದ್ದವು ಎನ್ನಲು ದೃಷ್ಟಾಂತವಿದೆ. ಉತ್ಪತ್ತಿಗಿಂತ ಮೊದಲೂ ಕೂಡ ಏನೂ ಇರಲಿಲ್ಲವೆಂಬುದು ಅಯುಕ್ತವಾಗಿದೆ. ಸ್ವಪಕ್ಷದೋಷಾಚ್ಚ ಎಂಬಲ್ಲಿ ಅಸದ್ವಾದಿಗಳಿಗೆ ಎಂಬುದನ್ನು ವಿವಕ್ಷಿಸಬೇಕು.

## ತತ್ವಪ್ರಕಾಶಿಕಾ

### ಅನಿಷ್ಟಾಪಾದನೆ ಅಲ್ಲವೆಂದು ಶಂಕೆ

**तत्वप्रकाशिका – अस्माभिरपि प्रलयेऽसन्मात्रावशेषस्याभिलषितत्वात् अनिष्टापादनमेतदित्याशङ्कां परिहरत्सूत्रमुपन्यस्य व्याचष्टे – न त्विति ।**

ಪ್ರಲಯಕಾಲದಲ್ಲಿ ಕೇವಲ ಅಸತ್ತೇ ಇರುತ್ತದೆಂದು ನಮಗೆ ಅಭಿಪ್ರೇತವೇ ಆಗಿದೆ. ಆದ್ದರಿಂದ, ನಮಗೆ ಯಾವ ಅನಿಷ್ಟವೂ ಇಲ್ಲ ಎಂಬ ಆಪಾದನೆಗೆ ಉತ್ತರ ಕೊಡುವ ಸೂತ್ರವನ್ನು ಹೇಳಿ ಅದರ ವ್ಯಾಖ್ಯಾನ ಮಾಡುತ್ತಾರೆ. 'ನ ತು' ಇತ್ಯಾದಿಯಾಗಿ.

### ಪೂರ್ವಪಕ್ಷಿಗೆ ಅನಿಷ್ಟಾಪಾದನೆಯೇ ಆಗಿದೆ

**तत्वप्रकाशिका – न प्रलये सर्वासत्त्वं युज्यते । तदा पदार्थसत्त्वस्यैव दृष्टान्तबलेन साधयितुं शक्यत्वात् । अतः परस्येष्टमपि प्रलये सर्वासत्त्वापादनं प्रामाणिकपरित्यागरूपत्वात् भवेदेवानिष्टापादनमिति भावः । कोऽसौ प्रलये पदार्थसत्त्वसाधने दृष्टान्त इति तत्राह – सत इति ।।**

ಪ್ರಲಯಕಾಲದಲ್ಲಿ ಎಲ್ಲವೂ ಅಸತ್ತೇ ಇರುತ್ತದೆಂಬುದು ಸರಿಯಲ್ಲ. ಏಕೆಂದರೆ ಆಗ ಪದಾರ್ಥವು ಸದ್‌ರೂಪದಿಂದ ಇದ್ದೇ ಇರುತ್ತದೆಂಬುದನ್ನು ದೃಷ್ಟಾಂತ ಬಲದಿಂದ ಸಿದ್ಧಮಾಡಲು ಶಕ್ಯವಾಗುತ್ತದೆ. ಆದ್ದರಿಂದ ಸರ್ವಾಸತ್ವಾಪಾದನೆ ಮಾಡುವುದು ಪ್ರತಿಪಕ್ಷಿಗೆ ಇಷ್ಟವಾದರೂ, ಪ್ರಾಮಾಣಿಕ ಸತ್ ಪದಾರ್ಥಸತ್ವತ್ವವಿರುವುದನ್ನು ಅಪಲಾಪ ಮಾಡಿದಂತಾಗುವುದರಿಂದ ಅನಿಷ್ಟಾಪಾದನೆಯೇ ಆಗುತ್ತದೆ. ಪ್ರಲಯಕಾಲದಲ್ಲಿ ಪದಾರ್ಥಸತ್ವ ಸಾಧನವಿಷಯದಲ್ಲಿ ಇರುವ ದೃಷ್ಟಾಂತ ಯಾವುದೆಂದರೆ ಭಾಷ್ಯಕಾರರು ಉತ್ತರಿಸುತ್ತಾರೆ 'ಸತಃ' ಎಂದು.

### ಸತ್ಯದಿಂದಲೇ ವಿಷಯೋತ್ಪತ್ತಿ ಎನ್ನಲು ಎರಡು ಅನುಮಾನ

**तत्वप्रकाशिका – अत्रैतौ प्रयोगो भवतः – 'विप्रतिपन्नोत्पत्तिः सतो भवितुमर्हति उत्पत्तित्वाद् घटोत्पत्तिवत्' 'विमतो विनाशः सशेषो**

**विनाशत्वात् घटविनाशवदिति । एवं विप्रतिपन्नोत्पत्तिविनाशयोः सत्पूर्वकत्वे सशेषत्वे च सिद्धे प्रलये पदार्थसत्त्वमेव सिध्यति ।। १० ।।**

ಈ ವಿಷಯದಲ್ಲಿ ಎರಡು ಅನುಮಾನಗಳನ್ನು ಹೇಳಬಹುದು. ೧. ವಿಪ್ರತಿಪನ್ನವಾದ ವಿಶ್ವೋತ್ಪತ್ತಿಯು ಸತ್ತಿನಿಂದಲೇ ಆಗುತ್ತದೆ. ಉತ್ಪತ್ತಿಯಾದುದರಿಂದ, ಘಟೋತ್ಪತ್ತಿಯಂತೆ. ೨. ವಿಮತವಾದ ವಿಶ್ವನಾಶವು ಅವಶೇಷಸಹಿತವಾಗಿಯೇ ಇರುತ್ತದೆ. ಅದು ನಾಶವಾದುದರಿಂದ ಘಟನಾಶದಂತೆ. ಈ ರೀತಿಯಾಗಿ ವಿವಾದಾಸ್ಪದವಾದ ಉತ್ಪತ್ತಿನಾಶಗಳಿಗೆ ಸತ್ಪೂರ್ವಕತ್ವ ಮತ್ತು ಸಶೇಷತ್ವಗಳು ಸಿದ್ಧವಾಗುವುದರಿಂದ ಪ್ರಳಯಕಾಲದಲ್ಲಿ ಪದಾರ್ಥ ಇದೆಯೆಂದೇ ಸಿದ್ಧವಾಗುತ್ತದೆ.

## ಭಾವದೀಪ

**भावदीपः – न तु दृष्टान्तभावात् ।। १० ।।** सतः भावपदार्थादित्यर्थः। सत्पूर्वकत्वे भावपूर्वकत्वे।। १० ।।

'ಸತಃ' ಎಂಬ ಪದಕ್ಕೆ ಭಾವಪದಾರ್ಥದ ದೆಶೆಯಿಂದ ಎಂದರ್ಥ. 'ಸತ್ಪೂರ್ವಕತ್ವೇ' ಎಂಬುದಕ್ಕೆ 'ಭಾವ ಪದಾರ್ಥವೇ ಪೂರ್ವವಾಗಿ ಉಳ್ಳದ್ದು' ಎಂದರ್ಥ.

## ಬ್ರಹ್ಮಸೂತ್ರ

### 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – स्वपक्षदोषाच ।।**

ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲ ಎಂಬ ಪಕ್ಷದಲ್ಲಿ ಯಾವುದೇ ಪ್ರಮಾಣವಿಲ್ಲ. ಆದ್ದರಿಂದಲೂ ಅಭಾವದಿಂದ ವಿಶ್ವದ ಸೃಷ್ಟಿಯನ್ನು ಹೇಳಲಾಗದು.

ಅರ್ಥ -- ಸ್ವಪಕ್ಷೇ = ಪ್ರಳಯಕಾಲದಲ್ಲಿ ಏನೂ ಇರುವುದಿಲ್ಲ ಎಂಬ ಪಕ್ಷದಲ್ಲಿ, ದೋಷಾಚ್ಚ = ಅನುಮಾನವೆಂಬ ಪ್ರಮಾಣವಿಲ್ಲದ ಕಾರಣ ಪ್ರಾಗಭಾವದಿಂದಲೇ ಜಗತ್ತು ಹುಟ್ಟುತ್ತದೆಂಬ ಪಕ್ಷವು ಅಯುಕ್ತವಾಗಿದೆ.

## ಬ್ರಹ್ಮಸೂತ್ರಭಾಷ್ಯ

### ಯಾವುದೇ ಪದಾರ್ಥವಿಲ್ಲವೆನ್ನಲು ದೃಷ್ಟಾಂತವಿಲ್ಲ

**ब्रह्मसूत्रभाष्यम् – ।। स्वपक्षदोषाच्च ।।४।।**

**दृष्टान्ताभावादेव ।।४।।**

ಅನುವಾದ - ಪ್ರಳಯಕಾಲದಲ್ಲಿ ಯಾವುದೇ ಪದಾರ್ಥವು ಇರಲಿಲ್ಲವೆನ್ನಲು ದೃಷ್ಟಾಂತವಿಲ್ಲ. ಹೀಗಿರುವಾಗ ಅಸತ್ ಪದಾರ್ಥದಿಂದ ಜಗತ್ತು ಹುಟ್ಟಿತು ಎಂದು ಹೇಳುವುದು ಹೇಗೆ ಸರಿ.

ಪ್ರತಿಪದಾರ್ಥ -- ಕೇವಲ ಪ್ರಾಮಾಣಿಕವಾದದ್ದನ್ನು ಪರಿತ್ಯಾಗ ಮಾಡಬೇಕಾದ ಪ್ರಸಂಗ ಬರುವುದರಿಂದ ಪ್ರಳಯಕಾಲದಲ್ಲಿ, ಅಸತ್ ಪದಾರ್ಥವನ್ನು ಒಪ್ಪುವುದು ಅನಿಷ್ಟವೆಂದಷ್ಟೇ ಅಲ್ಲ. ಅಪ್ರಾಮಾಣಿಕ-ವಾದದ್ದನ್ನು ಸ್ವೀಕಾರ ಮಾಡಿದ ದೋಷವೂ ಬರುತ್ತದೆ. ಇದನ್ನು ಸಮರ್ಥಿಸುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ದೃಷ್ಟಾಂತಾಭಾವಾದೇವ = ಅಸತ್ ಪದಾರ್ಥದಿಂದ ಸತ್‌ಪದಾರ್ಥವು ಹುಟ್ಟಿ ಸಶೇಷನಾಶವನ್ನು ಹೊಂದುತ್ತದೆನ್ನಲು ದೃಷ್ಟಾಂತ ಇರುವುದಿಲ್ಲ.

## ತತ್ವಪ್ರಕಾಶಿಕಾ

### ಯಾವುದೂ ಇಲ್ಲವೆಂಬುದು ಅಪ್ರಾಮಾಣಿಕವಾಗಿದೆ

**तत्वप्रकाशिका – न केवलं प्रामाणिकपरित्यागप्रास्या प्रलये सर्वासत्त्वमनिष्टमपि त्वप्रामाणिकत्वाच्चेत्यर्थप्रतिपादकसूत्रमुपन्यस्य व्याचष्टे – स्वपक्षेति ।।**

ಕೇವಲ ಪ್ರಾಮಾಣಿಕಪರಿತ್ಯಾಗ ಮಾಡಬೇಕಾಗುವುದರಿಂದಲೇ ಪ್ರಲಯಕಾಲದಲ್ಲಿ ಸರ್ವಪದಾರ್ಥಗಳು ಅಸತ್ತೆಂಬುದು ಅನಿಷ್ಟವೆಂಬುದಷ್ಟೇ ಅಲ್ಲ, ಪ್ರಲಯದಲ್ಲಿ ಏನೂ ಇಲ್ಲವೆಂಬ ವಿಷಯವು ಅಪ್ರಾಮಾಣಿಕವೂ ಆಗುತ್ತದೆ. ಈ ಅರ್ಥವನ್ನು ಪ್ರತಿಪಾದನೆ ಮಾಡುವ ಸೂತ್ರವನ್ನು ಹೇಳಿ ಅದರ ವ್ಯಾಖ್ಯಾನ ಮಾಡುತ್ತಾರೆ 'ಸ್ವಪಕ್ಷ' ಎಂಬುದರಿಂದ.

ಪ್ರಳಯದಲ್ಲಿ ಏನೂ ಇಲ್ಲವೆಂಬುದು ಹೇಗೆ ಸಿದ್ಧವಾಗುತ್ತದೆ ?

**तत्वप्रकाशिका – न तावत् प्रलये सर्वासत्वं प्रत्यक्षसिद्धम् । नाप्यागमेन। तस्याभावात् । अनुमानमपि किं 'प्रलयः सर्वासत्त्ववान्' इत्यादिरूपेण साक्षात्, भवेत्यपरम्परया वा । नाद्यः प्रलये सर्वासत्त्वपक्षे दृष्टान्ताभावेनानुमानस्य दुष्टत्वात्। व्यातिरेकेऽतिप्रसङ्गः । एतेन द्वितीयोऽपि परास्तः । अतः प्रलये सर्वासत्त्वस्याप्रामाणिकत्वात् तदभ्युपगमोऽनिष्ट इति भावः ।। ११ ।।**

ಪ್ರಲಯಕಾಲದಲ್ಲಿ ಯಾವ ಪದಾರ್ಥವೂ ಇಲ್ಲ ಎಂದು ಪ್ರತ್ಯಕ್ಷಸಿದ್ಧವಲ್ಲ. ಆಗಮದಿಂದಲೂ ಸಿದ್ಧವಲ್ಲ. ಅಂತಹ ಆಗಮವೇ ಇಲ್ಲ. ಅನುಮಾನದಿಂದ ಸಿದ್ಧವಾಗಬೇಕಾದರೆ ನಾವು ಪ್ರಶ್ನಿಸುತ್ತೇವೆ - ಪ್ರಳಯ ಕಾಲದಲ್ಲಿ ಸರ್ವಪದಾರ್ಥಗಳೂ ಇಲ್ಲ ಎಂದು ನೇರವಾಗಿ ಅನುಮಾನದಿಂದ ಸಾಧಿಸಲಾಗುತ್ತದೋ ? ಅಥವಾ ಪರಂಪರೆಯಿಂದಲೋ ?

ಮೊದಲನೇ ಪಕ್ಷ ಸರಿಯಲ್ಲ. ಏಕೆಂದರೆ ಪ್ರಳಯದಲ್ಲಿ ಸರ್ವಾಭಾವವಿದೆ ಎನ್ನಲು ದೃಷ್ಟಾಂತವೇ ಸಿಗುವುದಿಲ್ಲ. ಆದ್ದರಿಂದ ಈ ಅನುಮಾನವು ದುಷ್ಟವಾಗುತ್ತದೆ. ವ್ಯತಿರೇಕವ್ಯಾಪ್ತಿಯಿಂದ ಸಾಧಿಸುವಾಗ ಅನ್ವಯದೃಷ್ಟಾಂತವಿಲ್ಲದಿರುವುದು ದೋಷವಾಗಲಾರದೆಂದರೆ ವ್ಯತಿರೇಕ-ದೃಷ್ಟಾಂತವಾದ ಒಂದು ಕಾಲದಲ್ಲಿ ಸರ್ವಪದಾರ್ಥಗಳಿಗೂ ಸತ್ತ್ವ ಬರಬೇಕಾದೀತು ಎಂಬ ಅತಿಪ್ರಸಂಗ ಬರುವುದು. ಅಂದರೆ ಎಲ್ಲಿ ಸರ್ವಸತ್ತ್ವಾಭಾವವಿದೆಯೋ ಅಂದರೆ ಸರ್ವಸತ್ತ್ವವಿದೆಯೋ ಅಲ್ಲಿ ಪ್ರಲಯಕಾಲತ್ವಾಭಾವವಿದೆ - ಎಂದು ವ್ಯತಿರೇಕವ್ಯಾಪ್ತಿಯನ್ನು ಹೇಳಿದಾಗ ಪ್ರಲಯಕಾಲಕ್ಕಿಂತ ಬೇರೆಯಾದ ಒಂದು ಕಾಲದಲ್ಲಿ ಸರ್ವಪದಾರ್ಥಗಳೂ ಇರಬೇಕಾದೀತು, ಹಾಗಾಗಿಲ್ಲ. ಪರಂಪರೆಯಿಂದ ಎಂದರೆ ಸರ್ವಪದಾರ್ಥವೂ ಪ್ರಲಯದಲ್ಲಿ ಅಸತ್ತಾಗಿರುತ್ತದೆ. ಪದಾರ್ಥವಾದ್ದರಿಂದ, ನಷ್ಟಭಾವಪದಾರ್ಥದಂತೆ ಎಂದು ಅನುಮಾನದಿಂದ ಅಸತ್ವವನ್ನು ತಿಳಿಯುವುದು. ಈ ಪಕ್ಷದಲ್ಲಿಯೂ ಸರ್ವಪದಾರ್ಥವೂ ಸ್ಥಿತಿಕಾಲದಲ್ಲಿಯೂ ಅಸತ್ತಾಗಿರುತ್ತದೆ. ಆಗ ಇಲ್ಲದ ಘಟಾದಿಪದಾರ್ಥದಂತೆ ಎಂದು ಅತಿಪ್ರಸಂಗ ಬರುವುದು. ಹೀಗೆ ಎರಡನೆಯ ಪಕ್ಷವೂ ನಿರಸ್ತವಾಯಿತು. ಆದ್ದರಿಂದ ಪ್ರಲಯಕಾಲದಲ್ಲಿ ಸರ್ವಪದಾರ್ಥಗಳಿಲ್ಲವೆಂಬ

ವಿಷಯವು ಅಪ್ರಾಮಾಣಿಕವೆಂದು ಸಿದ್ಧವಾಗುವುದರಿಂದ, ಅದನ್ನು ಇಷ್ಟಾಪತ್ತಿ ಎಂದು ಸ್ವೀಕರಿಸುವುದು ಅನಿಷ್ಟವೆಂದು ತಿಳಿಯಬೇಕು.

ವಿವರಣೆ - ಭಾವಬೋಧಕಾರರ ಪ್ರಕಾರ - ಇಲ್ಲಿ 'ಪ್ರಲಯಃ ಸರ್ವಾಸತ್ವವಾನ್ ಪ್ರಲಯಕಾಲತ್ವಾತ್ - ವ್ಯತಿರೇಕೇಣ ಸ್ಥಿತಿಕಾಲವತ್' - ಪ್ರಲಯಕಾಲದಲ್ಲಿ ಏನೂ ಇಲ್ಲ. ಪ್ರಲಯಕಾಲವಾದುದರಿಂದ, ಹೇತ್ವಭಾವಸಾಧ್ಯಭಾವಗಳೆರಡೂ ಸ್ಥಿತಿಕಾಲದಲ್ಲಿ ಇರುವಂತೆ ಎಂದು ಅನುಮಾನ ಪ್ರಯೋಗದಲ್ಲಿ ವ್ಯತಿರೇಕವ್ಯಾಪ್ತಿ ಹೇಳಿದಾಗ ಅತಿಪ್ರಸಂಗ ಬರುವುದು ಎಂದು ವ್ಯಾಖ್ಯಾನಿಸಿದ್ದಾರೆ. ಎಲ್ಲಿ ಸರ್ವಸತ್ವಾಭಾವವಿದೆಯೋ ಅಂದರೆ ಸರ್ವಸತ್ವವಿದೆಯೋ ಅಲ್ಲಿ ಪ್ರಲಯಕಾಲತ್ವಾಭಾವವಿದೆ. ಸ್ಥಿತಿ ಕಾಲವು ಇಲ್ಲಿ ವ್ಯತಿರೇಕ ವ್ಯಾಪ್ತಿಗೆ ದೃಷ್ಟಾಂತ. ಆದರೆ ಸ್ಥಿತಿಕಾಲದಲ್ಲಿ ಯಾವ ಕಾಲದಲ್ಲಿಯೂ ಎಲ್ಲಾ ಪದಾರ್ಥಗಳ ಸತ್ವವನ್ನು ಹೇಳಲು ಬರುವುದಿಲ್ಲ. ಹಾಗೆ ವ್ಯತಿರೇಕವ್ಯಾಪ್ತಿ ಹೇಳಿದರೆ ಯಾವುದೋ ಒಂದು ಕಾಲದಲ್ಲಿ ಎಲ್ಲಾ ಪದಾರ್ಥಗಳಿಗೆ ಸತ್ತ್ವವು ಬರಬೇಕಾದೀತು. ಇದೇ ಟೀಕಾದಲ್ಲಿ ಹೇಳಿದ ಅತಿಪ್ರಸಂಗ.

ಅಥವಾ - 'ಸ್ಥಿತಿಕಾಲಃ ಅತೀತನಾಗತಸರ್ವಪದಾರ್ಥೋಪೇತಃ, ಸ್ಥಿತಿಕಾಲತ್ವಾತ್, ವ್ಯತಿರೇಕೇಣ ಪ್ರಲಯಕಾಲವತ್' - ವ್ಯತಿರೇಕದಿಂದ ಪ್ರಲಯಕಾಲದಲ್ಲಿ ಹೇಗೆ ಯಾವ ಪದಾರ್ಥಗಳೂ ಇಲ್ಲವೋ, ಹಾಗೆ ಸ್ಥಿತಿಕಾಲದಲ್ಲಿ ಭೂತಭವಿಷ್ಯತ್ ಮುಂತಾದ ಸಕಲಪದಾರ್ಥಗಳೂ ಇರಬೇಕಾದೀತು ಎಂದು ವ್ಯತಿರಿಕ್ತವಾಗಿ ಅನುಮಾನಪ್ರಯೋಗ ಮಾಡಲು ಬರುವುದರಿಂದ ಅತಿಪ್ರಸಂಗ ಬರುವುದು. ಈ ಕಾರಣದಿಂದ ಅನುಮಾನದಿಂದ ಪರಂಪರೆಯಿಂದ ಪ್ರಲಯಕಾಲದಲ್ಲಿ ಯಾವ ಪದಾರ್ಥವೂ ಇಲ್ಲ ಎಂದು ಸಾಧಿಸಲಾಗುವುದು ಎಂಬ ಎರಡನೇ ಪಕ್ಷವನ್ನು ನಿರಾಸ ಮಾಡಿದಂತಾಯಿತು.

೨. ಇಲ್ಲಿ ಭಾವಬೋಧಕಾರರು ಹೀಗೆ ವ್ಯಾಖ್ಯಾನ ಮಾಡುವರು. 'ಈಶ್ವರಾದಿಕಂ ಪ್ರಲಯೇ ಅಸದ್‌ಭವಿತುಮರ್ಹತಿ ಭಾವತ್ವಾತ್ ನಷ್ಟಭಾವವತ್' - ಈಶ್ವರ ಮುಂತಾದ ಭಾವಪದಾರ್ಥಗಳು ಪ್ರಲಯಕಾಲದಲ್ಲಿ ಇರಲಾರವು ಭಾವಪದಾರ್ಥಗಳಾದ್ದರಿಂದ. ನಾಶ ಹೊಂದಿದ ಭಾವಪದಾರ್ಥಗಳಂತೆ ಎಂಬ ಅನುಮಾನದಿಂದ (ಪರಂಪರೆಯಿಂದ) ಪ್ರಲಯಕಾಲದಲ್ಲಿ ಯಾವ ಪದಾರ್ಥವೂ ಇಲ್ಲವೆಂದು ಸಿದ್ಧವಾಗುವುದು ಎಂದು.

## ಭಾವದೀಪ

### ಪ್ರಳಯಕಾಲದಲ್ಲಿ ಏನೂ ಇಲ್ಲ ಎನ್ನಲು ಪ್ರಮಾಣವಿಲ್ಲ

**भावदीपः – स्वपक्षदोषाच्च ।। ११ ।।** सूत्रे चशब्दादाह॥ **न केवलमिति।।** ननु दृष्टान्ताभावमात्रेण प्रलये सर्वासत्त्वं कथमप्रामाणिकम्। प्रमाणमात्राभाव एव तत्त्वापातादित्यतो भाष्यमुपलक्षणत्वेन व्याचष्टे ॥ **न तावदिति।। परंपरया वेति।।** सर्वे भावाः प्रलये असन्तः भावत्वात् । कारणं प्रलये असत् वस्तुत्वात् कार्यवत् इत्यादिरूपया इत्यर्थः । ननु प्रलयः सर्वाभाववान् लयकालत्वाद् व्यतिरेकेणान्यकालवदित्यनुमानं स्यादित्यत आह – **व्यतिरेक इति।।**

ಸೂತ್ರದಲ್ಲಿರುವ ಚಶಬ್ದದ ಅರ್ಥವನ್ನು 'ನ ಕೇವಲಮ್' ಇತ್ಯಾದಿಯಾಗಿ ಹೇಳಿರುತ್ತಾರೆ. ದೃಷ್ಟಾಂತ ಇಲ್ಲವೆಂದ ಮಾತ್ರಕ್ಕೆ ಪ್ರಳಯದಲ್ಲಿ ಸಕಲ ಅಸತ್ವಗಳು ಹೇಗೆ ಅಪ್ರಾಮಾಣಿಕವಾಗುತ್ತವೆ? ಪ್ರಮಾಣ ಇಲ್ಲ ಎಂದರೆ ಮಾತ್ರ ಅಸತ್ವಾಪಾದನೆಯನ್ನು ಮಾಡಬೇಕಲ್ಲವೇ? ಎಂಬ ಪ್ರಶ್ನೆಗೆ ಭಾಷ್ಯದ ಮಾತು ಉಪಲಕ್ಷಣವಾಗಿದೆ ಎಂದು ಹೇಳುವ ಮೂಲಕ ಉತ್ತರವನ್ನು ನೀಡಲು 'ನ ತಾವತ್' ಇತ್ಯಾದಿ ವಾಕ್ಯವು ಹೊರಟಿದೆ. ದೃಷ್ಟಾಂತವಿಲ್ಲ ಎಂದಷ್ಟೇ ಅಲ್ಲ ಯಾವುದೇ ಪ್ರಮಾಣವೂ ಕೂಡ ಇರುವುದಿಲ್ಲ ಎಂದು ತಿಳಿಯಬೇಕು. 'ಪರಂಪರಯಾ ವಾ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿ ಪರಂಪರೆಯಿಂದ ತಿಳಿಯಬೇಕಾದ ಅನುಮಾನದ ಸ್ವರೂಪ ಹೀಗಿದೆ – 'ಸರ್ವೇ ಭಾವಾಃ ಪ್ರಳಯೇ ಅಸಂತಃ ಭಾವತ್ವಾತ್' 'ಸಕಲ ಭಾವ ಪದಾರ್ಥಗಳು ಭಾವಪದಾರ್ಥವಾಗಿರುವುದರಿಂದಲೇ ಪ್ರಳಯಕಾಲದಲ್ಲಿ ಇರುವುದಿಲ್ಲ'. 'ಕಾರಣಂ ಪ್ರಳಯೇ ಅಸತ್ ವಸ್ತುತ್ವಾತ್ ಕಾರ್ಯವತ್' 'ಕಾರಣವು ವಸ್ತುವಾಗಿರುವುದರಿಂದ ಪ್ರಳಯದಲ್ಲಿ ಇರುವುದಿಲ್ಲ' ಇತ್ಯಾದಿ ರೂಪವಾದ ಪರಂಪರಾನುಮಾನದಿಂದ ಎಂದು ತಿಳಿಯಬೇಕು.

ಪ್ರಶ್ನೆ– 'ಪ್ರಳಯಃ ಸರ್ವಾಭಾವವಾನ್ ಲಯಕಾಲತ್ವಾತ್ ವ್ಯತಿರೇಕೇಣ ಅನ್ಯಕಾಲವತ್' 'ಬೇರೆ ಕಾಲದಲ್ಲಿ ಸಕಲ ಭಾವಪದಾರ್ಥಗಳಿವೆ. ಆದರೆ ಪ್ರಳಯವು ಲಯಕಾಲವಾಗಿರುವುದರಿಂದ ಯಾವುದೇ ಪದಾರ್ಥಗಳು ಇರುವುದಿಲ್ಲ'. ಹೀಗೆ ಅನುಮಾನದಿಂದ ಅಸತ್ವವನ್ನು ಸಾಧಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ವ್ಯತಿರೇಕೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

## ಟೀಕೆಯಲ್ಲಿರುವ 'ಏತೇನ' ಎಂಬ ಪದಕ್ಕೆ ಮೂರು ಅರ್ಥ

**भावदीपः** – प्रलयः शशविषाणवान् लयकालत्वात् व्यतिरेकेणान्यकालवत् इत्यप्रामाणिकपदार्थान्तरसाधनसम्भवादतिप्रसङ्ग इत्यर्थः। एतेन अतिप्रसङ्गेनेत्यर्थः। भावत्वादिना लये सर्वासत्त्वसाधने लयकालस्याप्यभावापत्तिप्रसङ्गात्। अन्यथा तत्र हेतोर्व्यभिचार इति भावः । यद्वा एतेनानुमानस्य दुष्टत्वेनेत्यर्थः। भावत्वादेर्दुष्टत्वं च विप्रतिपन्नोत्पत्तिः सतो भवितुमर्हतीत्यादिप्रागुक्तानुमानविरुद्धत्वेनेत्यर्थः। यद्वा एतेन प्रागुक्तानुमानविरुद्धत्वेनैवेत्येवार्थः॥ ११ ॥

'ಪ್ರಳಯಃ ಶಶವಿಷಾಣವಾನ್ ಲಯಕಾಲತ್ವಾತ್ ವ್ಯತಿರೇಕೇಣ ಅನ್ಯಕಾಲವತ್' 'ಪ್ರಳಯಕಾಲವು ಲಯಕಾಲ ಎನಿಸಿರುವುದರಿಂದ ಶಶವಿಷಾಣವುಳ್ಳದ್ದಾಗಿದೆ' ಎಂಬ ಅನುಮಾನದಿಂದ ಅಪ್ರಾಮಾಣಿಕ ಪದಾರ್ಥವನ್ನೂ ಕೂಡ ಸಾಧನೆ ಮಾಡಲು ಬರುತ್ತದೆ. ಆದ್ದರಿಂದ 'ವ್ಯತಿರೇಕೇಣ ಅನ್ಯಕಾಲವತ್' ಎಂಬ ದೃಷ್ಟಾಂತದಿಂದ ನೀವು ಯಾವುದೇ ಭಾವ ಪದಾರ್ಥಗಳು ಪ್ರಳಯದಲ್ಲಿ ಇಲ್ಲವೆಂದು ಸಾಧಿಸಲು ಸಾಧ್ಯವಿಲ್ಲ ಎಂಬುದು 'ವ್ಯತಿರೇಕೇ ಅತಿಪ್ರಸಂಗಃ' ಎಂಬ ವಾಕ್ಯದ ಅಭಿಪ್ರಾಯವಾಗಿದೆ. 'ಏತೇನ' ಎಂಬ ಪದಕ್ಕೆ ಅತಿಪ್ರಸಂಗ ಇರುವುದರಿಂದ ಎಂದರ್ಥ.

ಭಾವತ್ವ ಎಂಬ ಹೇತುವಿನಿಂದ ಲಯಕಾಲದಲ್ಲಿ ಯಾವುದೇ ಪದಾರ್ಥ ಇಲ್ಲವೆಂದು ಸಾಧನೆ ಮಾಡಿದರೆ ಲಯಕಾಲವೂ ಕೂಡ ಭಾವಪದಾರ್ಥವಾಗಿರುವುದರಿಂದ ಅದೂ ಸಹ ಇಲ್ಲ ಎಂದಾಗಬೇಕಾದೀತು! ಲಯಕಾಲ ಇದೆ ಎಂದು ಒಪ್ಪಿದರೆ ಅಲ್ಲಿಯೇ ವ್ಯಭಿಚಾರ ದೋಷವು ಪ್ರಾಪ್ತವಾಗುತ್ತದೆ. ಏಕೆಂದರೆ ಪ್ರಳಯಕಾಲದಲ್ಲಿ ಪ್ರಳಯಕಾಲತ್ವ ಎಂಬ ಹೇತುವಿದೆ. ಅಭಾವವತ್ವ ಎಂಬ ಸಾಧ್ಯವು ಇರುವುದಿಲ್ಲ.

ಅಥವಾ 'ಏತೇನ' ಎಂಬ ಪದಕ್ಕೆ ಅನುಮಾನವು ದುಷ್ಟವಾಗಿರುವುದರಿಂದ ಎಂದರ್ಥ. ಭಾವತ್ವ ಮೊದಲಾದ ಹೇತುಗಳು ದುಷ್ಟವಾಗಿವೆ. ಅದು ಹೀಗೆ – 'ವಿಪ್ರತಿಪನ್ನೋತ್ಪತ್ತಿಃ ಸತಃ ಭವಿತುಮರ್ಹತಿ' ಇತ್ಯಾದಿಯಾಗಿ ಹಿಂದೆ ಹೇಳಿದ ಅನುಮಾನಗಳಿಂದ ಭಾವತ್ವಹೇತುವು ವಿರುದ್ಧವಾಗಿದೆ ಎಂದು ತಿಳಿಯಬೇಕು. ಅಥವಾ 'ಏತೇನ' ಎಂಬ ಪದಕ್ಕೆ ಹಿಂದೆ ಹೇಳಿದ ಅನುಮಾನವಿರುದ್ಧವಾಗಿರುವುದರಿಂದ ಎಂದರ್ಥ.

## ಬ್ರಹ್ಮಸೂತ್ರ

### 'ತರ್ಕಾಪ್ರತಿಷ್ಠಾನಾತ್' ಇತ್ಯಾದಿ ಸೂತ್ರದ ವ್ಯಾಖ್ಯಾನ

**ब्रह्मसूत्रम् – तर्काप्रतिष्ठानादप्यन्यथानुमेयमिति चेदेवमप्यनिर्मोक्षप्रसङ्गः ।।**

ಅನುಮಾನವು ಕಾಮಚಾರಿಯಾಗಿರುವುದರಿಂದ ಸಿದ್ಧಾಂತಸ್ಥಾಪಕವಾಗಿ ನೀವು ಏನನ್ನು ಅನುಮಾನ ಮಾಡುತ್ತೀರೋ ಅದಕ್ಕೆ ವಿರುದ್ಧವಾಗಿ ಪ್ರತಿತರ್ಕಾನುಮಾನವನ್ನು ಮಾಡಬಹುದು. ಆದ್ದರಿಂದ ಅನುಮಾನದಿಂದ ಸಿದ್ಧಾಂತಿಗಳು ಏನನ್ನೂ ಕೂಡ ಸಾಧಿಸಲು ಬರುವುದಿಲ್ಲ.

ಇದು ತಪ್ಪು. ಎಲ್ಲಾ ಅನುಮಾನಗಳೂ ಕೂಡ ಅಪ್ರಮಾಣವಾಗುವುದಿಲ್ಲ. ಹಾಗಾದಲ್ಲಿ ಮೋಕ್ಷವೆಂಬ ಫಲವೇ ಇಲ್ಲವೆಂದಾಗಬೇಕಾದೀತು.

ಅರ್ಥ -- ತರ್ಕಾಪ್ರತಿಷ್ಠಾನಾತ್ = ಅನುಮಾನವು ಅವ್ಯವಸ್ಥಿತವಾದ್ದರಿಂದ ಅನ್ಯಥಾಪಿ = ಸಿದ್ಧಾಂತ ಸ್ಥಾಪಕ ಅನುಮಾನಕ್ಕಿಂತ ವಿಪರೀತವಾಗಿಯೂ ಪ್ರತಿತರ್ಕ ಮಾಡಿ ಅನುಮೇಯಮ್ = ಅಭಾವವೇ ಜಗತ್ಕಾರಣವೆಂದು ಸಾಧಿಸಬಹುದು. ಇತಿ ಚೇತ್= ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ 'ಏವಮಪಿ' ಒಂದು ವೇಳೆ ಎಲ್ಲ ಬಗೆಯ ಅನುಮಾನಗಳೂ ಅಪ್ರಮಾಣವಾದಲ್ಲಿ ಅನಿರ್ಮೋಕ್ಷ ಪ್ರಸಂಗಃ = ಸಕಲ ಸಿದ್ಧಾಂತಿಗಳೂ ತಮ್ಮ ತಮ್ಮ ಶಾಸ್ತ್ರಗಳ ಪ್ರಯೋಜನವೆಂದು ಅಂಗೀಕರಿಸಲ್ಪಟ್ಟ ಮೋಕ್ಷವು ಇಲ್ಲವೆಂದಾಗಬೇಕಾದೀತು. ಏಕೆಂದರ ವಿಪ್ರತಿಪನ್ನನಾದ ವ್ಯಕ್ತಿಯನ್ನು ಕುರಿತು ಅನುಮಾನದಿಂದಲೇ ಮೋಕ್ಷವನ್ನು ಸಾಧನೆ ಮಾಡಬೇಕು. ಆ ಅನುಮಾನಕ್ಕೆ ಪ್ರತಿತರ್ಕಾನುಮಾನವನ್ನು ಹೇಳಬಹುದಾದ್ದರಿಂದ ಅದೂ ಕೂಡ ಅಪ್ರಮಾಣವಾಗಬೇಕಾದೀತು.

## ಬ್ರಹ್ಮಸೂತ್ರಭಾಷ್ಯ

### ವಿಪರೀತವಾಗಿಯೂ ಅನುಮಾನ ಮಾಡಬಹುದು

**ब्रह्मसूत्रभाष्यम् –।। तर्काप्रतिष्ठानादप्यन्यथानुमेयमिति चेदेवमप्यनिर्मोक्षप्रसङ्गः ।।५।।**

**एतावानेव तर्क इति प्रतिष्ठापकप्रमाणाभावाद् उक्तादन्यथाऽप्यनुमेयमिति चेत् –**

ಅನುವಾದ - ಯುಕ್ತಿಯು ಇದನ್ನು ಮಾತ್ರ ಹೇಳುತ್ತದೆ ಎಂಬ ವಿಷಯದಲ್ಲಿ ನಿರ್ದಿಷ್ಟವಾದ ಪ್ರಮಾಣವಿರುವುದಿಲ್ಲ. ಆದ್ದರಿಂದ ಹಿಂದೆ ಹೇಳಿದ ವಿಷಯದಲ್ಲಿ ವಿಪರೀತವಾಗಿಯೂ ಅನುಮಾನವನ್ನು ಮಾಡಲು ಬರುತ್ತದೆ.

ಪ್ರತಿಪದಾರ್ಥ -- ತರ್ಕದಿಂದ ಸತ್‌ಪದಾರ್ಥಕ್ಕೆ ಕಾರಣತ್ವವನ್ನು ಅಸತ್‌ಪದಾರ್ಥಕ್ಕೆ ಕಾರಣತ್ವದ ಇಲ್ಲದಿರುವಿಕೆಯನ್ನು ಹೇಳಿದಿರಿ. ಇದನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಏತಾವಾನೇವ ತರ್ಕಃ = ಈ ವಿಷಯವನ್ನು ಸ್ಥಾಪನೆ ಮಾಡುವುದೇ ತರ್ಕ ಎನಿಸಿಕೊಳ್ಳುತ್ತದೆ. ಇತಿ = ಹೀಗೆ, ಪ್ರತಿಷ್ಠಾಪಕಪ್ರಮಾಣಾಭಾವಾದ್ = ನಿಯಾಮಕಪ್ರಮಾಣವು ಇಲ್ಲದ ಕಾರಣ, ಉಕ್ತಾದ್ = ಹಿಂದೆ ಹೇಳಲ್ಪಟ್ಟ ವಿಷಯಕ್ಕಿಂತಲೂ, ಅನ್ಯಥಾಽಪಿ = ಬೇರೆ ರೀತಿಯಲ್ಲೇ ಅನುಮಾನ ಮಾಡಲು ಸಾಧ್ಯವಿರುತ್ತದೆ. ಇತಿಚೇತ್ = ಇಷ್ಟು ಆಕ್ಷೇಪ.

### ಪುರುಷಾರ್ಥವೇ ಇಲ್ಲವೆಂದಾದೀತು

**ब्रह्मसूत्रभाष्यम् — न, एवं सति प्रमाणसिद्धेऽपि मोक्षेऽन्यथाऽनुमेयत्वादनिर्मोक्ष प्रसङ्गः।**

ಅನುವಾದ - ಇದು ಸರಿಯಲ್ಲ ಹೀಗೆ ವಾದ ಮಾಡುವುದಾದರೆ ಪ್ರಮಾಣಸಿದ್ಧವಾದ ಮೋಕ್ಷದ ವಿಷಯದಲ್ಲೂ ಕೂಡ ವಿರುದ್ಧವಾಗಿ ಅನುಮಾನ ಮಾಡಬಹುದಾದ್ದರಿಂದ ಮೋಕ್ಷವೆಂಬ ಪುರುಷಾರ್ಥವೇ ಇಲ್ಲವೆಂದಾಗಬೇಕಾದೀತು.

ಪ್ರತಿಪದಾರ್ಥ -- ನಞ್ ಎಂಬುದನ್ನು ಅಧ್ಯಾಹಾರ ಮಾಡಿಕೊಂಡು ಪರಿಹಾರಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ನ = ಮೇಲಿನ ಆಕ್ಷೇಪವು ಯುಕ್ತವಲ್ಲ. ಏವಂ ಸತಿ = ತರ್ಕವೇ ಬಲಿಷ್ಠವೆಂದು ಹೇಳಿದರೆ, ಪ್ರಮಾಣಸಿದ್ಧೇಽಪಿ = ಪ್ರಮಾಣ ಸಿದ್ಧವಾದ, ಮೋಕ್ಷೇಽಪಿ = ಮೋಕ್ಷದ ವಿಷಯದಲ್ಲೂ ಕೂಡ, ಅನ್ಯಥಾ = ಮತ್ತೊಂದು ಬಗೆಯಲ್ಲಿ, ಅನುಮೇಯತ್ವಾತ್ = ಅನುಮಾನ ಮಾಡಬಹುದಾದ್ದರಿಂದ, ಅನಿರ್ಮೋಕ್ಷಪ್ರಸಂಗಃ = ಮೋಕ್ಷವೇ ಇಲ್ಲದಿರುವ ಪ್ರಸಂಗ ಬರುತ್ತದೆ.

ಪ್ರಮಾಣಸಿದ್ಧವಾದದ್ದನ್ನಷ್ಟೇ ಒಪ್ಪಬೇಕು

**ब्रह्मसूत्रभाष्यम् — अतो यावत्प्रमाणसिद्धं तावदेवाङ्गीकर्तव्यं नातोऽन्यच्छङ्क्यम्।**

ಅನುವಾದ - ಆದ್ದರಿಂದ ಎಷ್ಟು ಪ್ರಮಾಣದಿಂದ ಸಿದ್ಧವಾಗಿದೆಯೋ ಅಷ್ಟನ್ನು ಮಾತ್ರ ಅಂಗೀಕಾರ ಮಾಡಬೇಕು. ಪ್ರಮಾಣವಿಲ್ಲದ್ದರ ಬಗ್ಗೆ ಶಂಕಿಸಬಾರದು.

ಪ್ರತಿಪದಾರ್ಥ -- ಹೀಗೆ ಎಲ್ಲಾ ತರ್ಕಗಳಲ್ಲಿಯೂ ವಿರೋಧಿಯಾಗಿ ಪ್ರತಿ ತರ್ಕವನ್ನು ಹೇಳಬಹುದೆಂದು ಅಂಗೀಕಾರ ಮಾಡಿದರೆ ಅತಿಪ್ರಸಂಗವನ್ನು ಹೇಳಿ ಸೂತ್ರಾಂಶದ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ. ಅತಃ = ಆದ್ದರಿಂದ, ಯಾವತ್ = ಎಷ್ಟು ವಿಷಯವು, ಪ್ರಮಾಣಸಿದ್ಧಂ = ಪ್ರಮಾಣದಿಂದ ಪ್ರಮಿತವಾಗಿದೆಯೋ, ತಾವದೇವ = ಅಷ್ಟನ್ನು ಮಾತ್ರ, ಅಂಗೀಕರ್ತವ್ಯಂ = ಅಂಗೀಕಾರ ಮಾಡಬೇಕು. ಅತಃ = ಆದ್ದರಿಂದ ಪ್ರಮಾಣರಹಿತವಾದ ಅನ್ಯತ್ = ಬೇರೆ ನಿಯಮದ ಬಗ್ಗೆ, ನಶಂಕ್ಯಮ್ = ತರ್ಕದಿಂದ ಆಶಂಕೆ ಮಾಡಬಾರದು.

ಪ್ರಮಾಣದಿಂದ ಸಿದ್ಧವಾದದ್ದನ್ನಷ್ಟೇ ಒಪ್ಪಬೇಕು

**ब्रह्मसूत्रभाष्यम् –**

**'यावदेव प्रमाणेन सिद्धं तावदहापयन् ।**
**स्वीकुर्यान्नैव चान्यत्र शक्यं मानमृते क्वचित् ।।' इति वामने ।।९।।**

ಅನುವಾದ - ವಾಮನಪುರಾಣದ ವಚನ ಹೀಗಿದೆ - ಎಷ್ಟು ವಿಷಯವು ಪ್ರಮಾಣದಿಂದ ಸಿದ್ಧವಾಗಿದೆಯೋ ಅಷ್ಟನ್ನು ಮಾತ್ರ ತರ್ಕದಿಂದ ಸ್ವೀಕರಿಸಬೇಕು. ಪ್ರಮಾಣದಿಂದ ಸಿದ್ಧವಾಗದೆ ಇರುವ ವಿಷಯವನ್ನು ತರ್ಕದಿಂದ ಸಾಧನೆ ಮಾಡಬಾರದು. ಏಕೆಂದರೆ ಕೇವಲ ತರ್ಕದಿಂದ ಯಾವುದನ್ನು ಕೂಡ ಸಾಧನೆ ಮಾಡಲು ಅಥವಾ ನಿಷೇಧ ಮಾಡಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಸೂತ್ರದಲ್ಲಿರುವ ಅಪಿಶಬ್ದದಿಂದ ಸೂಚಿತವಾದ ಸ್ಮೃತಿಯನ್ನು ಸಂವಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಯಾವದೇವ

ಎಷ್ಟು ವಿಷಯವು ಪ್ರಮಾಣೇನ = ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿದೆಯೋ ಅಷ್ಟು ವಿಷಯವನ್ನು ಅಹಾಪಯನ್ = ಬಿಡದೆ, ಸ್ವೀಕುರ್ಯಾತ್ = ತರ್ಕದಿಂದ ಸಾಧನೆ ಮಾಡಬೇಕು. ಚಾನ್ಯತ್ರ = ಪ್ರಮಾಣಸಿದ್ಧವಾಗದಿರುವ ವಿಷಯದಲ್ಲಿ, ನೈವ =ಅನುಮಾನದಿಂದ ಏನನ್ನು ಸಾಧನೆ ಮಾಡಬಾರದು, ಮಾನಮೃತೇ = ಪ್ರತ್ಯಕ್ಷಾದಿ ಪ್ರಮಾಣಗಳಿಲ್ಲದೆ, ಕ್ವಚಿತ್ = ಯಾವುದೇ ಸ್ಥಳದಲ್ಲಿಯೂ, ನ ಶಕ್ಯಂ = ಅನುಮಾನವನ್ನು ಪ್ರಮಾಣವನ್ನಾಗಿ ವಿವಕ್ಷಿಸಬಾರದು.

## ತತ್ವಪ್ರದೀಪ

### ತರ್ಕವು ಪ್ರಮಾಣವೋ, ಅಪ್ರಮಾಣವೋ?

**तत्वप्रदीपः – तर्काप्रतिष्ठानात् इत्यादिसूत्रम् । एतावानेव तर्को नैतत् प्रतीपत्वेनेति प्रतिष्ठापकप्रमाणाभावात् । यथा त्वयाऽनुमितं तथाऽन्यथा मयाऽप्यनुमेयं स्यात्, त्वत्पक्षे प्रमाणसद्भाववत् मत्पक्षेऽपि तस्य युक्तत्वादिति चेत्, एवं सति यथा प्रमाणसिद्धो मोक्षः, तथाऽन्यथाऽप्यनुमेयत्वात् अनिश्चितो मोक्षः प्रसज्येत । अथवा सत्त्वेन प्रमाणसिद्धेऽपि मोक्षोऽन्यथाऽनुमेयत्वात् तदभावप्रसङ्गः । अपिशब्दात् सर्वस्यापि प्रमाणसिद्धस्य अन्यथात्वप्रसङ्गः । अपि च त्वदुक्तन्यायेनैव त्वदुक्तादन्यथाऽप्यनुमेयत्वप्राप्तेः स्वव्याघातः स्यात् ।**

'ತರ್ಕಾಪ್ರತಿಷ್ಠಾನಾತ್' ಇತ್ಯಾದಿ ಸೂತ್ರಭಾಗದ ಅಭಿಪ್ರಾಯ ಹೀಗಿದೆ - ಕೆಲವು ಅನುಮಾನಕ್ಕೆ ಮಾತ್ರ ಪ್ರತಿತರ್ಕವಿರುತ್ತದೆ. ಕೆಲವು ಅನುಮಾನಕ್ಕೆ ಪ್ರತಿತರ್ಕವೇ ಇರುವುದಿಲ್ಲ. ಹೀಗೆ ನಿರ್ಧಾರ ಮಾಡಲು ಯಾವುದೇ ಪ್ರಮಾಣವಿಲ್ಲ. ಹೇಗೆ ನಿನ್ನಿಂದ ಅನುಮಾನವನ್ನು ಮಾಡಲಾಗಿದೆಯೋ, ಅದೇ ವಿಷಯದಲ್ಲಿ ವಿಪರೀತವಾದದ್ದನ್ನು ನಾನೂ ಕೂಡ ಅನುಮಾನ ಮಾಡುತ್ತೇನೆ. ನಿನ್ನ ಪಕ್ಷದಲ್ಲಿ ಪ್ರಮಾಣವಿದೆ ಎಂದರೆ, ನನ್ನ ಪಕ್ಷದಲ್ಲೂ ಅದು ಸಮಾನ.

ಪ್ರಮಾಣಸಿದ್ಧವಾದದ್ದನ್ನಷ್ಟೇ ಒಪ್ಪಬೇಕು

**ब्रह्मसूत्रभाष्यम् – अतो यावत्प्रमाणसिद्धं तावदेवाङ्गीकर्तव्यं नातोऽन्यच्छङ्क्यम्।**

ಅನುವಾದ - ಆದ್ದರಿಂದ ಎಷ್ಟು ಪ್ರಮಾಣದಿಂದ ಸಿದ್ಧವಾಗಿದೆಯೋ ಅಷ್ಟನ್ನು ಮಾತ್ರ ಅಂಗೀಕಾರ ಮಾಡಬೇಕು. ಪ್ರಮಾಣವಿಲ್ಲದ್ದರ ಬಗ್ಗೆ ಶಂಕಿಸಬಾರದು.

ಪ್ರತಿಪದಾರ್ಥ -- ಹೀಗೆ ಎಲ್ಲಾ ತರ್ಕಗಳಲ್ಲಿಯೂ ವಿರೋಧಿಯಾಗಿ ಪ್ರತಿ ತರ್ಕವನ್ನು ಹೇಳಬಹುದೆಂದು ಅಂಗೀಕಾರ ಮಾಡಿದರೆ ಅತಿಪ್ರಸಂಗವನ್ನು ಹೇಳಿ ಸೂತ್ರಾಂಶದ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಿದ್ದಾರೆ. ಅತಃ = ಆದ್ದರಿಂದ, ಯಾವತ್ = ಎಷ್ಟು ವಿಷಯವು, ಪ್ರಮಾಣಸಿದ್ಧಂ = ಪ್ರಮಾಣದಿಂದ ಪ್ರಮಿತವಾಗಿದೆಯೋ, ತಾವದೇವ = ಅಷ್ಟನ್ನು ಮಾತ್ರ, ಅಂಗೀಕರ್ತವ್ಯಂ = ಅಂಗೀಕಾರ ಮಾಡಬೇಕು. ಅತಃ = ಆದ್ದರಿಂದ ಪ್ರಮಾಣರಹಿತವಾದ ಅನ್ಯತ್ = ಬೇರೆ ನಿಯಮದ ಬಗ್ಗೆ, ನಶಂಕ್ಯಮ್ = ತರ್ಕದಿಂದ ಆಶಂಕೆ ಮಾಡಬಾರದು.

ಪ್ರಮಾಣದಿಂದ ಸಿದ್ಧವಾದದ್ದನ್ನಷ್ಟೇ ಒಪ್ಪಬೇಕು

**ब्रह्मसूत्रभाष्यम् –**

**'यावदेव प्रमाणेन सिद्धं तावदहापयन् ।**
**स्वीकुर्यान्नैव चान्यत्र शक्यं मानमृते क्वचित् ।।' इति वामने ।।९।।**

ಅನುವಾದ - ವಾಮನಪುರಾಣದ ವಚನ ಹೀಗಿದೆ - ಎಷ್ಟು ವಿಷಯವು ಪ್ರಮಾಣದಿಂದ ಸಿದ್ಧವಾಗಿದೆಯೋ ಅಷ್ಟನ್ನು ಮಾತ್ರ ತರ್ಕದಿಂದ ಸ್ವೀಕರಿಸಬೇಕು. ಪ್ರಮಾಣದಿಂದ ಸಿದ್ಧವಾಗದೆ ಇರುವ ವಿಷಯವನ್ನು ತರ್ಕದಿಂದ ಸಾಧನೆ ಮಾಡಬಾರದು. ಏಕೆಂದರೆ ಕೇವಲ ತರ್ಕದಿಂದ ಯಾವುದನ್ನು ಕೂಡ ಸಾಧನೆ ಮಾಡಲು ಅಥವಾ ನಿಷೇಧ ಮಾಡಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಸೂತ್ರದಲ್ಲಿರುವ ಅಪಿಶಬ್ದದಿಂದ ಸೂಚಿತವಾದ ಸ್ಮೃತಿಯನ್ನು ಸಂವಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಯಾವದೇವ

ಎಷ್ಟು ವಿಷಯವು ಪ್ರಮಾಣೇನ = ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾಗಿದೆಯೋ ಅಷ್ಟು ವಿಷಯವನ್ನು ಅಹಾಪಯನ್ = ಬಿಡದೆ, ಸ್ವೀಕುರ್ಯಾತ್ = ತರ್ಕದಿಂದ ಸಾಧನೆ ಮಾಡಬೇಕು. ಚಾನ್ಯತ್ರ = ಪ್ರಮಾಣಸಿದ್ಧವಾಗದಿರುವ ವಿಷಯದಲ್ಲಿ, ನೈವ =ಅನುಮಾನದಿಂದ ಏನನ್ನು ಸಾಧನೆ ಮಾಡಬಾರದು, ಮಾನಮೃತೇ = ಪ್ರತ್ಯಕ್ಷಾದಿ ಪ್ರಮಾಣಗಳಿಲ್ಲದೆ, ಕ್ವಚಿತ್ = ಯಾವುದೇ ಸ್ಥಳದಲ್ಲಿಯೂ, ನ ಶಕ್ಯಂ = ಅನುಮಾನವನ್ನು ಪ್ರಮಾಣವನ್ನಾಗಿ ವಿವಕ್ಷಿಸಬಾರದು.

### ತತ್ತ್ವಪ್ರದೀಪ

#### ತರ್ಕವು ಪ್ರಮಾಣವೋ, ಅಪ್ರಮಾಣವೋ?

**तत्वप्रदीपः – तर्काप्रतिष्ठानात् इत्यादिसूत्रम् । एतावानेव तर्को नैतत् प्रतीपत्वेनेति प्रतिष्ठापकप्रमाणाभावात् । यथा त्वयाऽनुमितं तथाऽन्यथा मयाऽप्यनुमेयं स्यात्, त्वत्पक्षे प्रमाणसद्भाववत् मत्पक्षेऽपि तस्य युक्तत्वादिति चेत्, एवं सति यथा प्रमाणसिद्धो मोक्षः, तथाऽन्यथाऽप्यनुमेयत्वात् अनिश्चितो मोक्षः प्रसज्येत । अथवा सत्त्वेन प्रमाणसिद्धेऽपि मोक्षोऽन्यथाऽनुमेयत्वात् तदभावप्रसङ्गः । अपिशब्दात् सर्वस्यापि प्रमाणसिद्धस्य अन्ययात्वप्रसङ्गः । अपि च त्वदुक्तन्यायेनैव त्वदुक्तादन्यथाऽप्यनुमेयत्वप्राप्तेः स्वव्याघातः स्यात् ।**

'ತರ್ಕಾಪ್ರತಿಷ್ಠಾನಾತ್' ಇತ್ಯಾದಿ ಸೂತ್ರಭಾಗದ ಅಭಿಪ್ರಾಯ ಹೀಗಿದೆ - ಕೆಲವು ಅನುಮಾನಕ್ಕೆ ಮಾತ್ರ ಪ್ರತಿತರ್ಕವಿರುತ್ತದೆ. ಕೆಲವು ಅನುಮಾನಕ್ಕೆ ಪ್ರತಿತರ್ಕವೇ ಇರುವುದಿಲ್ಲ. ಹೀಗೆ ನಿರ್ಧಾರ ಮಾಡಲು ಯಾವುದೇ ಪ್ರಮಾಣವಿಲ್ಲ. ಹೇಗೆ ನಿನ್ನಿಂದ ಅನುಮಾನವನ್ನು ಮಾಡಲಾಗಿದೆಯೋ, ಅದೇ ವಿಷಯದಲ್ಲಿ ವಿಪರೀತವಾದದ್ದನ್ನು ನಾನೂ ಕೂಡ ಅನುಮಾನ ಮಾಡುತ್ತೇನೆ. ನಿನ್ನ ಪಕ್ಷದಲ್ಲಿ ಪ್ರಮಾಣವಿದೆ ಎಂದರೆ, ನನ್ನ ಪಕ್ಷದಲ್ಲೂ ಅದು ಸಮಾನ.

ಆದ್ದರಿಂದ ತರ್ಕದಿಂದ ಸಾಧಿಸುವ ಎಲ್ಲ ವಿಷಯಗಳಿಗೂ ವಿರುದ್ಧವಾಗಿ ಪ್ರತಿತರ್ಕದಿಂದ ಇನ್ನೊಂದು ವಿಷಯವನ್ನು ಸಾಧಿಸಬಹುದು.

ಈ ಆಕ್ಷೇಪ ತಪ್ಪು. ಹೀಗೆ ನೀವು ವಾದ ಮಾಡಿದರೆ, ಪ್ರಮಾಣಸಿದ್ಧವಾದ ಮೋಕ್ಷವೂ ಕೂಡ ಅನಿಶ್ಚಯವಾಗಬೇಕಾಗುತ್ತದೆ. ಏಕೆಂದರೆ ಮೋಕ್ಷವು ಇದೆ ಎಂದು ನೀನು ಹೇಗೆ ಅನುಮಾನ ಮಾಡುತ್ತೀಯೋ, ಅದಕ್ಕೆ ವಿರುದ್ಧವಾಗಿ ನಾನೂ ಕೂಡ ಮೋಕ್ಷವಿಲ್ಲವೆಂದು ಅನುಮಾನವನ್ನು ಮಾಡುತ್ತೇನೆ. ಆಗ ಮೋಕ್ಷವೆಂಬ ಪುರುಷಾರ್ಥವೇ ಇಲ್ಲದಿರಬೇಕಾಗುತ್ತದೆ.

ಸೂತ್ರದಲ್ಲಿರುವ ಅಪಿಶಬ್ದದಿಂದ ಪ್ರಮಾಣಸಿದ್ಧವಾದ ಪ್ರತಿಯೊಂದು ಪದಾರ್ಥದಲ್ಲೂ ಕೂಡ ಹೀಗೆ ಅನ್ಯಥಾರೀತಿಯಲ್ಲಿ ಅನುಮಾನವನ್ನು ಮಾಡಬಹುದು. ಎಂಬುದನ್ನು ತಿಳಿಸಲಾಗಿದೆ. ಮತ್ತು ಯಾವ ನ್ಯಾಯದಿಂದ ಅನುಮಾನ ಮಾಡಿದಿಯೋ, ಅದೇ ನ್ಯಾಯದಿಂದಲೇ ನೀನು ಹೇಳಿದ ವಿಷಯಕ್ಕೆ ವಿರುದ್ಧವಾಗಿಯೂ ಅನುಮಾನವನ್ನು ಮಾಡಬಹುದಾದ್ದರಿಂದ ಸ್ವವ್ಯಾಘಾತಕರವಾಗಿದೆ.

### ತತ್ವಪ್ರಕಾಶಿಕಾ

### ಸೂತ್ರದ ಆಕ್ಷೇಪಭಾಗದ ವ್ಯಾಖ್ಯಾನ

**तत्वप्रकाशिका – तर्केण सदसतोः कारणत्वसाधनबाधने आक्षिप्य समादधत्सूत्रमुपन्यस्याऽऽक्षेपांशं तावद् व्याचष्टे – तर्केति ।।**

ತರ್ಕದಿಂದ 'ಸತ್' ಎಂಬುದು ವಿಶ್ವಕ್ಕೆ ಕಾರಣ, ಹಾಗೂ 'ಅಸತ್' ಎಂಬುದು ಕಾರಣವಲ್ಲವೆಂದು ಸಿದ್ಧಮಾಡಿದುದರ ಮೇಲೆ ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ಹೇಳಿ, ಸೂತ್ರದ ಆಕ್ಷೇಪ ಭಾಗವನ್ನು ಮೊದಲು ವ್ಯಾಖ್ಯಾನ ಮಾಡುತ್ತಾರೆ - 'ತರ್ಕ' ಎಂಬುದಾಗಿ.

### ತರ್ಕದಿಂದ ಏನನ್ನು ಬೇಕಾದರೂ ಸಾಧಿಸಬಹುದು

**तत्वप्रकाशिका – यत्तर्कबलेन सतः कारणत्वसाधनमसतश्च तद्बाधनं तदयुक्तम् । यद्यत्तर्केण साध्यते तस्मादुक्तात् तर्केण साधितादन्यथापि**

**प्रतितर्केण साधयितुं शक्यत्वेन तर्कस्याप्रामाण्यात् । न हि प्रतितर्क एतावानेवैतादृशं तर्कं प्रति विरोधितया वर्तते नैतादृशमिति नियामकमस्ति । अतः सर्वानुमानेषु प्रतितर्कस्यानिवारणीयत्वेन तेषामप्रामाण्यान्न तद्बलात्सारणत्वसाधनादि युक्तमिति भावः । परिहारांशं व्याचष्टे – नेति ।।**

ಕೇವಲ ತರ್ಕಬಲದಿಂದ 'ಸತ್' ಎಂಬುದು ವಿಶ್ವಕ್ಕೆ ಕಾರಣ, ಅಸತ್ತಿಗೆ ಕಾರಣತ್ವವು ಬಾಧಿತ - ಎಂದು ಸಾಧನೆ ಮಾಡಿದುದು ಸರಿಯಲ್ಲ. ಯಾವುದನ್ನೆಲ್ಲಾ ತರ್ಕದಿಂದ ಸಾಧನೆ ಮಾಡುತ್ತಾರೋ ಆ ತರ್ಕದಿಂದ ಸಾಧನೆ ಮಾಡಿದ ಧರ್ಮಕ್ಕೆ ವಿಪರೀತವಾಗಿ ಪ್ರತಿಕೂಲತರ್ಕದಿಂದ ಸಾಧನೆ ಮಾಡಲು ಶಕ್ಯವಾಗುತ್ತದೆ. ಹೀಗೆ ತರ್ಕವು ಅಪ್ರಮಾಣವಾಗಿದೆ. ಕೆಲವು ಅನುಮಾನಗಳಿಗೆ ಮಾತ್ರ ಪ್ರತಿತರ್ಕವು ವಿರೋಧಿಯಾಗಿದೆ. ಕೆಲವು ಅನುಮಾನಗಳಿಗೆ ಪ್ರತಿತರ್ಕವೇ ಇಲ್ಲ. ಹೀಗೆ ನಿರ್ಧರಿಸಲು ಯಾವ ಆಧಾರವೂ ಇಲ್ಲ. ಆದ್ದರಿಂದ ಎಲ್ಲಾ ಅನುಮಾನಗಳಲ್ಲಿ ಪ್ರತಿತರ್ಕಗಳು ಅನಿವಾರ್ಯಗಳಾದ್ದರಿಂದ ತರ್ಕಗಳೂ ಪ್ರಮಾಣಗಳಲ್ಲ. ಆದ್ದರಿಂದ ಕೇವಲ ತರ್ಕದಿಂದ ಸತ್ತೇ ವಿಶ್ವಕ್ಕೆ ಕಾರಣವೆಂಬ ವಿಷಯವನ್ನು ಸಾಧನೆ ಮಾಡುವುದಕ್ಕಾಗುವುದಿಲ್ಲವೆಂದು ತಾತ್ಪರ್ಯ. ಸೂತ್ರದಲ್ಲಿರುವ ಪರಿಹಾರಾಂಶವನ್ನು 'ನ' ಎಂಬುದರಿಂದ ವ್ಯಾಖ್ಯಾನ ಮಾಡುತ್ತಾರೆ.

### ಯಾವುದೇ ತರ್ಕಕ್ಕೆ ಪ್ರತಿತರ್ಕ ಇದ್ದೇ ಇರುತ್ತದೆ

**तत्वप्रकाशिका – तर्कसिद्धं सर्वं प्रतितर्केण दूषयितुं शक्यत इति वदन् प्रष्टव्यो जायते । किं प्रामाणिकं तर्कसिद्धं प्रतितर्केण दूषयितुं शक्यमप्रामाणिकं वेति । द्वितीयस्तु युक्त एव । प्रथमेऽपि प्रष्टव्यं किमेवंवादिनो मते मोक्षोऽस्ति न वेति । न चेन्नासौ वादी प्रयोजनान्तरस्य शास्त्रमन्तरेणापि सिद्धेः । अस्ति चेत् किं विप्रतिपन्नं प्रत्यागमेनैव साध्यते उत तर्केण । नाद्यः अनिर्मोक्षवादिनाऽऽगमप्रामाण्यानभ्युपगमात् । अतो द्वितीयपक्ष एवाङ्गीकार्यः। तथा च प्रामाणिकस्यापि तर्कसिद्धस्य प्रतितर्केण बाधे सोपि चार्वाकतर्केण**

**बाधितः स्यादिति मतं व्यर्थमेव भवेत् । न च परं प्रति प्रतिपादनोपायाभावेऽपि स्वस्यागमेन मोक्षसिद्धिरिति वाच्यम् । विप्रतिपन्नप्रमेये स्वस्यापि केवलागमे नानध्यवसायादिति भावः । एवं सर्वतर्केऽपि प्रतितर्कः प्रसरतीत्यङ्गीकारेऽतिप्रसङ्गमुक्त्वा विपर्यये पर्यवसानं दर्शयति – अत इति ॥**

ತರ್ಕಸಿದ್ಧವಾದ ಸರ್ವವಿಷಯವನ್ನೂ ಪ್ರತಿತರ್ಕದಿಂದ ದೂಷಣೆ ಮಾಡಬಹುದೆಂದು ಹೇಳುವವನನ್ನು ಕುರಿತು ಹೀಗೆ ಕೇಳುತ್ತೇವೆ - ತರ್ಕದಿಂದ ಸಿದ್ಧವಾಗುವ ಪ್ರಾಮಾಣಿಕ ವಿಷಯವು ಪ್ರತಿತರ್ಕದಿಂದ ದೂಷಿತವಾಗುತ್ತದೋ ? ಅಥವಾ ಅಪ್ರಾಮಾಣಿಕ ವಿಷಯವು ದೂಷಿತವಾಗುತ್ತದೋ? ಇದರಲ್ಲಿ ಎರಡನೇ ಪಕ್ಷ ಯುಕ್ತವೇ ಆಗಿದೆ. ಮೊದಲನೆ ಪಕ್ಷದಲ್ಲಿ ಪುನಃ ಎರಡು ಪ್ರಶ್ನೆ ಬರುತ್ತದೆ - ಅನುಮಾನ ಅಪ್ರಮಾಣವೆಂಬ ನಿಮ್ಮ ಮತದಲ್ಲಿ ಮೋಕ್ಷವಿದೆಯೋ ಇಲ್ಲವೋ ? ಇಲ್ಲವೆಂದರೆ ಅವರು ಈ ಶಾಸ್ತ್ರದಲ್ಲಿ ವಾದಿಯೇ ಆಗಲಾರರು. ಏಕೆಂದರೆ, ಮೋಕ್ಷೇತರಪದಾರ್ಥಗಳು ಶಾಸ್ತ್ರವಿಲ್ಲದೆಯೂ ಸಿದ್ಧವಾಗಬಹುದು. ಮೋಕ್ಷವಿದೆ ಎಂದರೆ, ಮೋಕ್ಷವಿಷಯದಲ್ಲಿ ವಿವಾದ ಮಾಡುವ ಪುರುಷನಿಗೆ ಆಗಮದಿಂದ ಮೋಕ್ಷವನ್ನು ಸಾಧಿಸುತ್ತೀರೋ? ಅಥವಾ ತರ್ಕದಿಂದಲೋ ? ಆಗಮದಿಂದ ಎಂದರೆ ಮೋಕ್ಷ ಒಪ್ಪದ ಅವರು ಆಗಮಪ್ರಾಮಾಣ್ಯವನ್ನೇ ಒಪ್ಪುವುದಿಲ್ಲ. ಆದ್ದರಿಂದ ತರ್ಕದಿಂದ ಮೋಕ್ಷವನ್ನು ಸಾಧಿಸಲಾಗುವುದು ಎಂಬ ದ್ವಿತೀಯ ಪಕ್ಷವನ್ನೇ ಅಂಗೀಕಾರ ಮಾಡಬೇಕು. ಆದ್ದರಿಂದ ಪ್ರಾಮಾಣಿಕವೂ ತರ್ಕಸಿದ್ಧವೂ ಆದ ವಿಷಯವು ಪ್ರತಿತರ್ಕದಿಂದ ಬಾಧಿತವಾಗುತ್ತದೆಂದು ಹೇಳಿದರೆ, ಮೋಕ್ಷವಿಷಯದ ತರ್ಕವೂ ಪ್ರತಿತರ್ಕವಾದ ಚಾರ್ವಾಕತರ್ಕದಿಂದ ಬಾಧಿತವಾಗಬೇಕಾದೀತು. ಹೀಗಾಗಿ ನಿಮ್ಮ ಮತಕ್ಕೆ ಪ್ರಯೋಜನವೇ ಇಲ್ಲವೆಂದಾಗುತ್ತದೆ.

ಮತ್ತೊಬ್ಬನಿಗೆ ಮೋಕ್ಷವನ್ನು ಸಾಧನೆ ಮಾಡುವ ಪ್ರಮಾಣವಿಲ್ಲದಿರಬಹುದು. ಆದರೆ ನನಗೆ ವೇದರೂಪ ಪ್ರಮಾಣದಿಂದ ಮೋಕ್ಷವು ಸಿದ್ಧಿಯಾಗುತ್ತದೆಂದು ಹೇಳಬಹುದಲ್ಲವೇ? ಎಂದರೆ ಹೀಗೆ ಹೇಳಲಾಗುವುದಿಲ್ಲ. ಏಕೆಂದರೆ ಯಾವ ವಿಷಯದಲ್ಲಿ ವಿವಾದವಿದೆಯೋ ಅಲ್ಲಿ ಕೇವಲ ಆಗಮ ಪ್ರಮಾಣದಿಂದ ತನಗೂ ನಿಶ್ಚಯವಾಗುವುದಿಲ್ಲವೆಂದು ತಾತ್ಪರ್ಯ. ಈ ರೀತಿ ಎಲ್ಲಾ ವಿಧ ತರ್ಕಗಳಲ್ಲಿಯೂ ಪ್ರತಿ ತರ್ಕವು ವಿರುದ್ಧವಾಗಿ ನಿಲ್ಲುತ್ತದೆಂಬ ವಿಷಯದಲ್ಲಿ ಅತಿಪ್ರಸಂಗ ಹೇಳಿ ತದ್ವಿರುದ್ಧ ಪಕ್ಷದಲ್ಲಿ ಪರ್ಯವಸಾನವನ್ನು ಹೇಳುತ್ತಾರೆ, 'ಅತಃ' ಎಂಬ ವಾಕ್ಯದಿಂದ.

ತರ್ಕವು ಅಪ್ರಾಮಾಣಿಕ

**तत्वप्रकाशिका – यत एवं प्रामाणिकतर्कस्यापि प्रतितर्केण बाधाभ्युपगमेऽतिप्रसङ्गोऽतः प्रामाणिकमेव तर्केणाङ्गीकार्यमप्रामाणिकं न शङ्क्यम् । प्रमाणसाहाय्ययुक्तः प्रतितर्कोऽप्रामाणिकतर्कं बाधते न त्वप्रामाणिकः प्रामाणिकम् । अत्रैतौ प्रयोगौ भवतः इत्यत्र उक्ततर्कद्वयस्य प्रलयः सर्वासत्त्ववानित्यादिविरुद्धतर्कौ तूभावपि न प्रामाणिकौ । प्रकृततर्कश्च प्रामाणिको नाप्रामाणिकेन निषेद्धुं शक्यत इति भावः । अत्र स्मृतिसंमतिं चाह – यावदिति ।। अन्यत्रान्यत् ।। १२ ।।**

ಪ್ರಾಮಾಣಿಕತರ್ಕವೂ ಪ್ರತಿತರ್ಕದಿಂದ ಬಾಧಿತವಾಗುತ್ತದೆಂದು ಒಪ್ಪಿದಲ್ಲಿ ಅತಿಪ್ರಸಂಗ ಬರುತ್ತದೆಯಾದ್ದರಿಂದ ಪ್ರಾಮಾಣಿಕವಾದದ್ದನ್ನೇ ತರ್ಕದಿಂದ ಸ್ವೀಕರಿಸಬೇಕು. ಅಪ್ರಾಮಾಣಿಕ ವಿಷಯವನ್ನು ತರ್ಕದಿಂದ ಶಂಕಿಸಕೂಡದು. ಪ್ರಮಾಣದ ಸಹಾಯವಿದ್ದರೇನೇ ಆ ಪ್ರತಿತರ್ಕವು ಅಪ್ರಾಮಾಣಿಕ ತರ್ಕವನ್ನು ಬಾಧಿಸುತ್ತದೆ. ಅಪ್ರಾಮಾಣಿಕತರ್ಕವು ಪ್ರಾಮಾಣಿಕ ತರ್ಕವನ್ನು ಬಾಧ ಮಾಡಲಾರದು.

ಈ ವಿಷಯದಲ್ಲಿ ಎರಡು ಅನುಮಾನ ಮಾಡಬಹುದು - ವಿಶ್ವದ ಉತ್ಪತ್ತಿಯು ಸತ್ತಿನಿಂದ ಆಗುತ್ತದೆ, ಮತ್ತು ಕಾರ್ಯದ ನಾಶ ಸಶೇಷವಾಗಿರುತ್ತದೆ ಎಂದು ಹಿಂದೆ ತೋರಿಸಿದ ಎರಡು ಅನುಮಾನಕ್ಕೆ ವಿರುದ್ಧವಾಗಿ ಪ್ರಲಯವು ಸರ್ವಪದಾರ್ಥಗಳಿಗಿಂತ ರಹಿತವಾಗಿದೆ. ಇತ್ಯಾದಿ ಪ್ರತಿಪಕ್ಷಿ ತೋರಿಸಿದ ಎರಡೂ ತರ್ಕಗಳೂ ಪ್ರಮಾಣಿಕವಲ್ಲ. ನಾವು ಹೇಳಿದ ತರ್ಕವೇ ಪ್ರಾಮಾಣಿಕವಾದುದರಿಂದ ಅಪ್ರಾಮಾಣಿಕ ಪ್ರತಿತರ್ಕದಿಂದ ದೂಷಿಸುವುದಕ್ಕಾಗುವುದಿಲ್ಲವೆಂದು ಅಭಿಪ್ರಾಯ. ಈ ವಿಷಯದಲ್ಲಿ 'ಯಾವತ್' ಎಂಬುದರಿಂದ ಸ್ಮೃತಿ ಪ್ರಮಾಣವನ್ನೂ ತೋರಿಸುತ್ತಾರೆ. 'ಅನ್ಯತ್ರ' ಎಂದರೆ 'ಅನ್ಯತ್' ಎಂದರ್ಥ.

## ಭಾವದೀಪ

### 'ಏತಾವಾನೇವ' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**भावदीपः – तर्काप्रतिष्ठानात् ।। १२ ।।** सदसतोर्भावाभावयोः। कारणत्वसाधनबाधने निरन्तरसूत्रद्वयोक्ते इति भावः। साध्यं पूरयन्नुक्तादित्यादिभाष्यं हेतुतया व्याचष्टे॥ **यत्तर्केति ।।** एतावानित्यादि व्याचष्टे॥ **नहीति ।।**

'ಸದಸತೋಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಭಾವ ಹಾಗೂ ಅಭಾವಗಳಿಗೆ ಎಂಬುದು ಇದರ ಅರ್ಥ. ಭಾವ ಪದಾರ್ಥವು ಜಗತ್ತಿಗೆ ಕಾರಣವಾಗಿದೆ ಎಂದು ಅಭಾವ ಪದಾರ್ಥವು ಜಗತ್ತಿಗೆ ಕಾರಣವಾಗಿಲ್ಲ ಎಂದು ಹಿಂದಿನ ಎರಡು ಸೂತ್ರಗಳಲ್ಲಿ ಸಮರ್ಥಿಸಲಾಗಿದೆ ಎಂಬುದು ಇದರ ಅಭಿಪ್ರಾಯ. ಸಾಧ್ಯವನ್ನು ಶೇಷಪೂರಣ ಮಾಡಿಕೊಳ್ಳುವ ಮೂಲಕ 'ಉಕ್ತಾತ್' ಇತ್ಯಾದಿ ಭಾಷ್ಯವನ್ನು ಹೇತುಪರವಾಗಿ ವ್ಯಾಖ್ಯಾನ ಮಾಡಲು 'ಯತ್ತರ್ಕಬಲೇನ' ಇತ್ಯಾದಿ ಗ್ರಂಥವು ಹೊರಟಿದೆ. 'ಏತಾವಾನ್' ಇತ್ಯಾದಿ ಭಾಷ್ಯದ ಮಾತನ್ನು ವ್ಯಾಖ್ಯಾನ ಮಾಡಲು 'ನ ಹಿ' ಇತ್ಯಾದಿ ಗ್ರಂಥವು ಹೊರಟಿದೆ.

### ತರ್ಕಕ್ಕೆ ಪ್ರತಿತರ್ಕ ಪರಾಹತಿ

**भावदीपः –** सूत्रे एवमपीत्यस्यैवं सति तर्कसिद्धस्य प्रतितर्केण बाधे सतीति भाषितस्यापादकस्याप्रयोजकत्वनिरासाय तथाऽऽपाद्यस्येष्टापत्तिनिरासाय चोभयत्र विकल्पपूर्वं तर्कस्वरूपं निर्धारयन् भाष्यं व्याचष्टे॥ **तर्कसिद्धमित्यादिना ।।**

ಸೂತ್ರದಲ್ಲಿ 'ಏವಮಪಿ' ಎಂದು ಹೇಳಿದ್ದಾರೆ. ಇದಕ್ಕೆ ಭಾಷ್ಯದಲ್ಲಿ 'ಏವಂ ಸತಿ' ಎಂಬುದರಿಂದ ಅರ್ಥವನ್ನು ಹೇಳಿದ್ದಾರೆ. ತರ್ಕಸಿದ್ಧವಾದುದಕ್ಕೆ ಪ್ರತಿತರ್ಕದಿಂದ ಬಾಧವು ಪ್ರಾಪ್ತವಾದರೆ ಎಂದು ಹಿಂದೆ ಹೇಳಿದರು. ಒಂದುವೇಳೆ ತರ್ಕದ ಬಲದಿಂದ ಅಸತ್ತು ಜಗತ್ತಿಗೆ ಕಾರಣವಾಗಿದೆ ಎಂದು ಸಾಧನೆ ಮಾಡುವುದಾದರೆ ಅದಕ್ಕೆ ವಿಪರೀತವಾದ ಪ್ರತಿಕೂಲ ತರ್ಕದಿಂದ ಬಾಧವನ್ನು ನಾವು ಹೇಳುತ್ತೇವೆ ಎಂಬಲ್ಲಿ ಆಪಾದಕಕ್ಕೆ ಅಪ್ರಯೋಜಕತ್ವವನ್ನು ಪ್ರಯೋಗ ಮಾಡಿ ಆಪಾದ್ಯಕ್ಕೆ ಇಷ್ಟಾಪತ್ತಿಯನ್ನು ನಿರಾಕರಣೆ ಮಾಡುವುದಕ್ಕಾಗಿ ಎರಡೂ ಕಡೆ ವಿಕಲ್ಪಪೂರ್ವಕವಾದ ತರ್ಕಸ್ವರೂಪವನ್ನು ನಿರ್ಧಾರ ಮಾಡುವುದರ ಮೂಲಕ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ತರ್ಕಸಿದ್ಧಂ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

'ಏವಂ ಸತಿ' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**भावदीपः – युक्त एवेति ।।** तथा च कामाच्च नानुमानापेक्षेत्यनेन न विरोध इति भावः।। **प्रयोजनान्तरस्येति ।।** पशुपुत्रादेः।। अनुभ्युपगमादिति।। तत्प्रमाण्यप्रसाधनं च तर्केणैवेति भावः। एवं परिष्कृत्यैवं सतीत्यादि भाष्यं व्याचष्टे।। **तथा चेति ।।** अनिर्मोक्षप्रसङ्गे किमनिष्टमित्यत आह – **मतं व्यर्थमेवेति।। विरुद्धतर्काविति।।** प्रमाणेनेति शेषः। अन्यत्रेति स्मार्तपदानुवादेनान्यदिति व्याख्या।। १२ ।।

'ಯುಕ್ತ ಏವ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಎರಡನೆಯ ಪಕ್ಷವನ್ನು ಒಪ್ಪಿದಾಗ 'ಕಾಮಾಚ್ಚ ನಾನುಮಾನಾಪೇಕ್ಷಾ' ಎಂಬ ಸೂತ್ರದಿಂದ ವಿರೋಧವು ಬರುವುದಿಲ್ಲ ಎಂಬುದು ಇದರ ಅಭಿಪ್ರಾಯ. 'ಪ್ರಯೋಜನಾಂತರಸ್ಯ' ಎಂದರೆ ಪಶು-ಪುತ್ರಾದಿಗಳ ಲಾಭವೆಂಬ ಪ್ರಯೋಜನವು ಎಂದರ್ಥ. 'ಅನಭ್ಯುಪಗಮಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅನಿರ್ಮೋಕ್ಷವಾದಿಗಳು ಆಗಮಪ್ರಾಮಾಣ್ಯವನ್ನೂ ಕೂಡ ತರ್ಕದಿಂದಲೇ ಸಾಧನೆ ಮಾಡುತ್ತಾರೆ. ಇದು ಯುಕ್ತವಾಗುವುದಿಲ್ಲ ಎಂದು ಇದರ ಅಭಿಪ್ರಾಯ.

ಹೀಗೆ ಸೂತ್ರದ ಅರ್ಥವನ್ನು ಭಾಷ್ಯದ ಮೂಲಕ ಸ್ಪಷ್ಟಪಡಿಸಿ 'ಏವಂ ಸತಿ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ತಥಾಪಿ' ಇತ್ಯಾದಿ ಗ್ರಂಥವು ಹೊರಟಿದೆ. ಮೋಕ್ಷವೇ ಇಲ್ಲವೆಂದು ಒಪ್ಪಿದರೆ ಏನು ಅನಿಷ್ಟವಾಗುತ್ತದೆ ಎಂಬ ಪ್ರಶ್ನೆಗೆ 'ಮತಂ ವ್ಯರ್ಥಮೇವ' ಎಂಬುದರಿಂದ ಉತ್ತರಿಸಿದ್ದಾರೆ. 'ವಿರುದ್ಧತರ್ಕೌ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಪ್ರಮಾಣದಿಂದ ಎಂಬುದನ್ನು ಇಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು. 'ಅನ್ಯತ್ರ' ಎಂಬುದಾಗಿ ಸ್ಮೃತಿಯಲ್ಲಿರುವ ಪದವನ್ನು ಅನುವಾದ ಮಾಡಿ 'ಅನ್ಯತ್' ಎಂಬುದಾಗಿ ವ್ಯಾಖ್ಯಾನ ಮಾಡಿರುತ್ತಾರೆ.

## ಬ್ರಹ್ಮಸೂತ್ರ

'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रसूत्रम् – ।। एतेन शिष्टा अपरिग्रहा अपि व्याख्याताः ।।**

ಇದುವರೆಗೂ ಸಾಧಿಸಿದ ಅನುಮಾನ ಪ್ರಮಾಣದಿಂದಲೇ ವೇದದ ಸಮ್ಮತಿಯಿಲ್ಲದ ಹಾಗೂ ವೇದ ವಿರುದ್ಧವಾದ 'ಜೀವನೇ ಕರ್ತೃ' 'ಕಾಲವೇ ಕರ್ತೃ' 'ಸ್ವಭಾವವೇ ಕರ್ತೃ' ಮೊದಲಾದ ವಾದಗಳು ನಿರಾಕರಿಸಲ್ಪಟ್ಟವು.

ಅರ್ಥ -- ಏತೇನ = ಸಿದ್ಧಾಂತಪಕ್ಷದಲ್ಲಿ ಅನುಮಾನವಿರುವಿಕೆ ಪರಪಕ್ಷದಲ್ಲಿ ಅನುಮಾನವಿಲ್ಲದಿರುವಿಕೆ ಎಂಬ ಕಾರಣದಿಂದಲೇ, ಅಪರಿಗ್ರಹಾಃ = ವೇದ ಸಮ್ಮತಿಯಿಲ್ಲದ ಮತ್ತು ವೇದ ವಿರುದ್ಧವಾದ ಶಿಷ್ಟಾಃ ಅಪಿ = ಉಳಿದೆಲ್ಲಾ ಜೀವ, ಕಾಲ, ಸ್ವಭಾವ ಕರ್ತೃತ್ವ ಪಕ್ಷಗಳು ಕೂಡ, ವ್ಯಾಖ್ಯಾತಾಃ = ನಿರಾಕೃತವಾದವು.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಅಸದಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

ಜಗತ್ತಿನ ಸೃಷ್ಟಿ ಆಕಸ್ಮಿಕವಲ್ಲ

**ब्रह्मसूत्रभाष्यम् –।। एतेन शिष्टा अपरिग्रहा अपि व्याख्याताः ।।६।।**

**एतेन दृष्टान्तभावेनाभावेन चावशिष्टा अप्यपरिग्रहा विरुद्धसिद्धान्ता अकर्तृकत्वाचेतनकर्तृकत्वजीवकर्तृकत्वादयोऽपि ।**

ಅನುವಾದ - ಸತ್‌ಪದಾರ್ಥದಿಂದ ಸತ್‌ಪದಾರ್ಥವೇ ಹುಟ್ಟುತ್ತದೆ ಎಂಬ ವಿಷಯದಲ್ಲಿ ದೃಷ್ಟಾಂತವಿರುವುದರಿಂದ ಹಾಗೂ ಅಸತ್ ಪದಾರ್ಥದಿಂದ ಸತ್‌ಪದಾರ್ಥವು ಹುಟ್ಟುವುದರಲ್ಲಿ ದೃಷ್ಟಾಂತ ಇಲ್ಲದಿರುವುದರಿಂದ ವೇದದ ಸಮ್ಮತಿಯಿಲ್ಲದೆ ಹಾಗೂ ವೇದಕ್ಕೆ ವಿರುದ್ಧವಾದ ವಾದಗಳು ನಿರಾಕೃತವಾದವು. ಜಗತ್ತಿಗೆ ಕರ್ತೃವೇ ಇರುವುದಿಲ್ಲ. ಮತ್ತು ಜಡವಾದ ವಸ್ತು ಜಗತ್ತಿಗೆ ಕರ್ತೃ ಜೀವನೇ ಜಗತ್ತಿಗೆ ಕರ್ತೃ ಇವೆಲ್ಲವೂ ಕೂಡ ವೇದವಿರುದ್ಧವಾದ ಮತಗಳು.

ಪ್ರತಿಪದಾರ್ಥ -- 'ಅಸತ್' ಶಬ್ದದಿಂದ ಪ್ರತಿಪಾದ್ಯವಾದ ಅಭಾವವು ಜಗತ್ತಿಗೆ ಕಾರಣವಾಗುವುದು ಬೇಡ. ಆದರೂ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ 'ವಿಪ್ರತಿಪನ್ನಂ ಜಗತ್ ನಿಷ್ಕಾರಣಕಮ್, ಅಚೇತನಕಾರಣಕಂ, ಜೀವಕಾರಣಕಂ ವಾ, ಕಾರ್ಯತ್ವಾತ್, ಕೂಲಪತನವದ್ ದಧ್ಯಾದಿವತ್' ಇತ್ಯಾದಿ ಅನುಮಾನದಿಂದ ನಿಷ್ಕಾರಣತ್ವವನ್ನು ಸಾಧನೆ ಮಾಡುವ ಯುಕ್ತಿವಿರೋಧವು ಬರುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಅಕಸ್ಮಾತ್ ಹುಟ್ಟಿತು ಎಂಬ ಶ್ರುತಿಗೆ ವ್ಯಾಖ್ಯಾನ

**ब्रह्मसूत्रभाष्यम् — अकस्माद्वीदमाविरासीदकस्मात् तिष्ठत्यकस्माल्लयमभ्युपैति ।**

ಅನುವಾದ - ಕಾರಣವಿಲ್ಲದೆ ಸ್ಥಿತಿಯನ್ನು ಪಡೆಯಿತು. ಕಾರಣವಿಲ್ಲದೆ ನಾಶವಾಯಿತು.

ಪ್ರತಿಪದಾರ್ಥ -- 'ಕಾರಣವಿಲ್ಲದೆ ಜಗತ್ತು ಹುಟ್ಟಿದೆ' ಎನ್ನಲು ಶ್ರುತಿಪ್ರಮಾಣವಿದೆ ಎಂದು ಹೇಳಲಾಯಿತು. ಆ ಶ್ರುತಿಗಳು ಯಾವುದು ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಕಸ್ಮಾತ್ = ಕಾರಣವಿಲ್ಲದೆ, ಇದಂ = ಈ ಜಗತ್ತು, ಅವಿರಾಸೀತ್ = ಹುಟ್ಟಿತು. ಅಕಸ್ಮಾದ್ಧಿ = ಕಾರಣವಿಲ್ಲದೆಯೇ, ತಿಷ್ಠತಿ = ಸ್ಥಿತಿಯನ್ನು ಹೊಂದಿದೆ. ಅಕಸ್ಮಾತ್ = ಕಾರಣವಿಲ್ಲದೆ, ಲಯಂ = ನಾಶವನ್ನು, ಅಭ್ಯುಪೈತಿ = ಹೊಂದುತ್ತದೆ.

### ಜಡಪ್ರಕೃತಿಯಿಂದ ಜಗತ್ತು ಹುಟ್ಟಿತು ಎಂಬುದು ಸರಿಯಲ್ಲ

**ब्रह्मसूत्रभाष्यम् —**

**'प्रधानादिदमुत्पन्नं प्रधानमधितिष्ठति ।**
**प्रधाने लयमभ्येति न ह्यन्यत् कारणं मतम् ।।'**

ಅನುವಾದ - ಜಡಪ್ರಕೃತಿಯಿಂದ ಈ ಜಗತ್ತು ಹುಟ್ಟಿದೆ. ಜಡಪ್ರಕೃತಿಯಲ್ಲಿಯೇ ಆಶ್ರಿತವಾಗಿದೆ. ಜಡಪ್ರಕೃತಿಯಲ್ಲೇ ನಾಶವನ್ನು ಹೊಂದುತ್ತದೆ. ಜಡಪ್ರಕೃತಿಗಿಂತ ಬೇರೆ ಕಾರಣವು ಇರುವುದಿಲ್ಲ.

ಪ್ರತಿಪದಾರ್ಥ -- ಜಗತ್ತಿಗೆ ಅಚೇತನವೇ ಕಾರಣವಾಗಿದೆ ಎನ್ನಲು ಶ್ರುತಿಪ್ರಮಾಣವನ್ನು ಹೇಳುತ್ತಿದ್ದಾರೆ. ಇದಂ = ಈ ಜಗತ್ತು, ಪ್ರಧಾನಾತ್ = ಅಚೇತನವಾದ ಪ್ರಕೃತಿಯಿಂದ, ಉತ್ಪನ್ನಂ = ಸೃಷ್ಟಿಯನ್ನು ಪಡೆದಿದೆ. ಪ್ರಧಾನೇ = ಜಡಪ್ರಕೃತಿಯಲ್ಲಿ, ಅಧಿತಿಷ್ಠತಿ = ನೆಲೆಸಿದೆ. ಪ್ರಧಾನೇ = ಜಡಪ್ರಕೃತಿಯಲ್ಲಿ, ಲಯಂ ಚ = ಲಯವನ್ನು ಕೂಡ, ಅಭ್ಯೇತಿ = ಹೊಂದುತ್ತದೆ. ಅನ್ಯತ್ = ಜಡ ಪ್ರಕೃತಿಗಿಂತ ಬೇರೆಯಾದ, ಕಾರಣಂ = ಕಾರಣವು ನಹಿ ಮತಂ = ಅಭಿಪ್ರೇತವಾಗಿಲ್ಲ.

## ಜೀವನಿಂದಲೇ ಜಗತ್ತು ಹುಟ್ಟಿತು ಎಂಬುದೂ ಕೂಡ ಸರಿಯಲ್ಲ

**ब्रह्मसूत्रभाष्यम् –**

**'जीवाद् भवन्ति भूतानि जीवे तिष्ठन्त्यचञ्चलाः ।**
**जीवे तु लयमृच्छन्ति न जीवात् कारणं परम् ।'**
**इत्यादिश्रुतिप्राप्ता निराकृताः ।**

ಅನುವಾದ - ಜೀವನಿಂದಲೇ ಪಂಚಭೂತಗಳು ಸೃಷ್ಟಿಯನ್ನು ಪಡೆದಿವೆ. ಜೀವನಿಂದ ಸ್ಥಿತಿಯನ್ನು ಸ್ಥಿರವಾಗಿ ಪಡೆದಿವೆ. ಜೀವನಲ್ಲಿಯೇ ಲಯವನ್ನು ಹೊಂದುತ್ತವೆ.ಜೀವನಿಗಿಂತ ಬೇರೆಯಾದ ಮತ್ತೊಂದು ಕಾರಣವಿರುವುದಿಲ್ಲ. ಇವೇ ಮೊದಲಾದ ಶ್ರುತಿಗಳಿಂದ ಆಕ್ಷೇಪಗಳು ಪ್ರಾಪ್ತವಾಗಿವೆ. ಇವುಗಳೆಲ್ಲವೂ ಈಗ ನಿರಾಕೃತವಾದವು.

ಪ್ರತಿಪದಾರ್ಥ -- ಜೀವನೇ ಜಗತ್ತಿಗೆ ಕಾರಣನಾಗಿದ್ದಾನೆನ್ನಲು ಶ್ರುತಿಪ್ರಮಾಣವನ್ನು ಉಲ್ಲೇಖ ಮಾಡುತ್ತಿದ್ದಾರೆ. ಜೀವಾದ್ = ಜೀವನ ದೆಸೆಯಿಂದ, ಭೂತಾನಿ = ಪೃಥಿವ್ಯಾದಿ ಸಕಲವಿಧವಾದ ಕಾರ್ಯಗಳು, ಭವಂತಿ = ಹುಟ್ಟುತ್ತವೆ. ಜೀವೇ = ಜೀವನಲ್ಲಿ, ಅಚಂಚಲಾಃ = ಸ್ಥಿರವಾಗಿ, ತಿಷ್ಠಂತಿ = ನೆಲೆಗೊಂಡಿವೆ, ಜೀವೇತು = ಜೀವನಲ್ಲಿಯೇ, ಲಯಂ = ಲಯವನ್ನು, ಋಚ್ಛಂತಿ = ಹೊಂದುತ್ತವೆ. ಜೀವಾತ್ = ಜೀವನಿಗಿಂತ, ಪರಂ = ಬೇರೆ, ಕಾರಣಂ = ಕಾರಣವು, ನ = ಇರುವುದಿಲ್ಲ. ಇತ್ಯಾದಿಶ್ರುತಿಪ್ರಾಪ್ತಾಃ = ಇವೇ ಮೊದಲಾದ ಶ್ರುತಿಗಳಿಂದ ಪ್ರಾಪ್ತವಾದ ಆಕ್ಷೇಪಗಳು, ನಿರಾಕೃತಾಃ = ನಿರಾಕರಿಸಲ್ಪಟ್ಟವು.

ಪ್ರಕೃತ್ಯಾದಿಗಳಲ್ಲಿ ಅಸ್ವಾತಂತ್ರ್ಯವೇ ಕಂಡಿದೆ

**ब्रह्मसूत्रभाष्यम् – यथा दुःखादिषु जीवस्यास्वातन्त्र्यमेवमन्येष्वपीति दृष्टान्तः ।**

ಅನುವಾದ - ಸುಖದುಃಖ ಮುಂತಾದವುಗಳಲ್ಲಿ ಜೀವನಿಗೆ ಹೇಗೆ ಅಸ್ವಾತಂತ್ರ್ಯವಿದೆಯೋ ಅದರಂತೆ ಉತ್ಪತ್ತಿ, ನಾಶ ಮೊದಲಾದವುಗಳ ವಿಷಯದಲ್ಲೂ ಅಸ್ವಾತಂತ್ರ್ಯವಿದೆ. ಹೀಗೆ ದೃಷ್ಟಾಂತವನ್ನು ತಿಳಿಯಬೇಕು.

ಪ್ರತಿಪದಾರ್ಥ -- ದೃಷ್ಟಾಂತವಿಲ್ಲವೆಂಬ ಹೇತು ಜೀವಕರ್ತೃತ್ವಪಕ್ಷದಲ್ಲಿ ಸಿದ್ಧವಾಗುವುದಿವಷ್ಟೆ ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯಥಾ = ಯಾವರೀತಿಯಾಗಿ, ಜೀವಸ್ಯ = ಜೀವನಿಗೆ, ದುಃಖಾದಿಷು = ಸುಖದುಃಖಾದಿಗಳ ಅನುಭವದಲ್ಲಿ, ಅಸ್ವಾತಂತ್ರ್ಯಮ್ = ಅಸ್ವಾತಂತ್ರ್ಯವೇ ಕಂಡಿದೆಯೋ, ಏವಂ = ಮೇಲೆ ಅದರಂತೆ, ಅನ್ಯೇಷ್ವಪಿ = ಪ್ರಕೃತ್ಯಾದಿ ವಿಷಯಗಳಲ್ಲಿ, ಇತಿ = ಹೀಗೆ, ದೃಷ್ಟಾಂತಃ = ದೃಷ್ಟಾಂತವನ್ನು ತಿಳಿಯಬೇಕು.

ಜೀವಾದಿ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯ

**ब्रह्मसूत्रभाष्यम् – श्रुतिगतिस्तु ब्रह्मवाचकत्वेन प्रदर्शिता ।**

ಅನುವಾದ - ಜೀವಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳ ಅಭಿಪ್ರಾಯವನ್ನು ಬ್ರಹ್ಮವಾಚಕತ್ವೇನ ಈ ಹಿಂದೆ ತೋರಿಸಿದ್ದಾಗಿದೆ. ಜೀವ ಮೊದಲಾದ ಶಬ್ದಗಳಿಂದ ಬ್ರಹ್ಮನೇ ಮುಖ್ಯವಾಗಿ ಪ್ರತಿಪಾದ್ಯನೆಂದು ತಿಳಿಯಬೇಕು.

ಪ್ರತಿಪದಾರ್ಥ -- ಶ್ರುತಿಗತಿಸ್ತು = ಜೀವಪ್ರತಿಪಾದ ಶ್ರುತಿಗಳಾದರೂ, ಬ್ರಹ್ಮವಾಕತ್ವೇನ = ಬ್ರಹ್ಮನನ್ನೇ ಹೇಳುವುದಾಗಿ, ಪ್ರದರ್ಶಿತಾ = ಈ ಹಿಂದೆ ತೋರಿಸಲಾಗಿದೆ.

ವಿರೋಧವಿಲ್ಲದಿದ್ದಾಗ ಮಾತ್ರ ಅನ್ಯಾರ್ಥ ಒಪ್ಪಬೇಕು

**ब्रह्मसूत्रभाष्यम् – यत्रान्यवाचकत्वेऽप्यविरोधस्तत्रान्यदप्यमुख्यतयोच्यते । यत्र विरोधस्तत्र ब्रह्मैवोच्यते इति नियमः ॥**

**॥ इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये असदधिकरणम् ॥ ४ ॥**

ಅನುವಾದ - ಬ್ರಹ್ಮನಿಗಿಂತ ಭಿನ್ನವಾದ ಬೇರೆ ಪದಾರ್ಥವು ಪ್ರತಿಪಾದ್ಯವಾಗಿದೆ ಎಂದು ಹೇಳಿದಾಗ ಶ್ರುತಿಯ ವಿರೋಧ ಬಾರದಿದ್ದರೆ ಆವಾಗ ಬೇರೆ ಪದಾರ್ಥವೂ ಕೂಡ ಅಮುಖ್ಯವಾಗಿ ಶ್ರುತಿಪ್ರತಿಪಾದ್ಯವಾಗುತ್ತದೆ. ಎಲ್ಲಿ ವಿರೋಧ ಬರುತ್ತದೋ ಅಂಥ ಸಂದರ್ಭದಲ್ಲಿ ಬ್ರಹ್ಮನು ಮಾತ್ರ ಪ್ರತಿಪಾದ್ಯನಾಗುತ್ತಾನೆ. ಇದು ಶ್ರುತಿಯ ನಿಯಮ.

ಪ್ರತಿಪದಾರ್ಥ -- ಶ್ರುತಿಗಳು ಪರಮಮುಖ್ಯವೃತ್ತಿಯಿಂದ ಬ್ರಹ್ಮನನ್ನು ಪ್ರತಿಪಾದನೆ ಮಾಡಿದರೂ ಮುಖ್ಯವೃತ್ತಿಯಿಂದ ಅಸತ್ ಪದಾರ್ಥಗಳನ್ನು ಪ್ರತಿಪಾದನೆ ಮಾಡಬಹುದಲ್ಲವೆ? ಆವಾಗ ವಿಷ್ಣುಕಾರಣತ್ವ ಪ್ರತಿಪಾದಕವಾದ ಶ್ರುತಿಗಳಿಗೆ ಅಸತ್ಕಾರಣ-ಪ್ರತಿಪಾದಕವಾದ ಶ್ರುತಿಯ ವಿರೋಧವು ಬರುತ್ತದಲ್ಲವೆ? ಈ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯತ್ರ = ಯಾವ ಸಂದರ್ಭದಲ್ಲಿ, ಅನ್ಯವಾಚಕತ್ವೇನ = ವಿಷ್ಣುವಿಗಿಂತ ಬೇರೆಯಾದ ಪದಾರ್ಥವು ಪ್ರತಿಪಾದ್ಯವಾಗುತ್ತದೆಂದು ಒಪ್ಪಿದರೆ, ಅವಿರೋಧಃ = ವಿರೋಧವು ಬರುವುದಿಲ್ಲವೋ, ತತ್ರ = ಆ ಸಂದರ್ಭದಲ್ಲಿ, ಅನ್ಯದಪಿ = ಬೇರೆ ವಸ್ತುಗಳೂ ಕೂಡ, ಅಮುಖ್ಯತಯಾ = ಅಮುಖ್ಯವೃತ್ತಿಯಿಂದ, ಉಚ್ಯತೇ = ಪ್ರತಿಪಾದ್ಯವಾಗುತ್ತದೆ. ಯತ್ರ = ಯಾವ ಸಂದರ್ಭದಲ್ಲಿ, ವಿರೋಧಃ = ಅರ್ಥವಿರೋಧವು ಬರುತ್ತದೋ, ಅತ್ರ = ಆ ಸಂದರ್ಭದಲ್ಲಿ, ಬ್ರಹ್ಮೈವ = ಮಹಾವಿಷ್ಣುವೇ, ಉಚ್ಯತೇ = ಪ್ರತಿಪಾದ್ಯನಾಗುತ್ತಾನೆ. ಇತಿ = ಹೀಗೆ, ನಿಯಮಃ = ಶ್ರುತಿಯ ನಿಯಮವಿದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಅಸದಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### ಜೀವಾದಿಕರ್ತೃತ್ವಪಕ್ಷದ ನಿರಾಕರಣೆ

**सत्तर्कदीपावळिः – एतेनैव न्यायेन जगतः अकर्तृकत्वाचेतनकर्तृकत्वपक्षा निराकृता भवन्ति । भगवत्कर्तृकत्ववादिनं प्रति अकर्तृकत्वे जीवेनाप्रेरितेन जडेन वा कृतत्वे दृष्टान्तस्याभिघातुमशक्यत्वात् । ईश्वरकर्तृकत्वे दृष्टान्तसद्भावाच । तदाह – एतेनेत्यादिना ।। 'अकस्माद्धि इदमाविरासीत्' इत्यादिश्रुतिगतिमाह – श्रुतिगतिरित्यादिना ।।**

ಇದೇ ನ್ಯಾಯದಿಂದ ಜಗತ್ತಿಗೆ ಯಾರೂ ಕರ್ತೃವಿಲ್ಲ. ಅಥವಾ ಜಡವು ಕರ್ತೃವಾಗಿದೆ. ಇವೇ ಮೊದಲಾದ ಪಕ್ಷಗಳನ್ನೂ ಕೂಡ ಈ ಅಧಿಕರಣದಿಂದಲೇ ನಿರಾಕರಣೆ ಮಾಡಿದಂತಾಯಿತು. ಯಾವ ವಾದಿಯು ಭಗವಂತನೇ ಜಗತ್ತಿಗೆ ಕರ್ತೃವಾಗಿದ್ದಾನೆಂದು ಒಪ್ಪುತ್ತಾನೋ, ಅವನನ್ನು ಕುರಿತು, ಜಗತ್ತಿಗೆ ಯಾರೂ ಕರ್ತೃವಿಲ್ಲ ಎಂಬುದನ್ನು ಉಪಪಾದನೆ ಮಾಡಲು ದೃಷ್ಟಾಂತವನ್ನು ಹೇಳಲು ಸಾಧ್ಯವಾಗುವುದಿಲ್ಲ. ಅಥವಾ ಜೀವನಿಂದ ಅಪ್ರೇರಿತವಾದ ಜಡದಿಂದಲೂ ಕೂಡ ಜಗತ್ತು ಸೃಷ್ಟವಾಗಿದೆ ಎನ್ನಲು ದೃಷ್ಟಾಂತವನ್ನು ಹೇಳಲು ಸಾಧ್ಯವಾಗುವುದಿಲ್ಲ. ಈಶ್ವರನೇ ಜಗತ್ತಿಗೆ ಕರ್ತೃವಾಗಿದ್ದಾನೆಂಬ ವಿಷಯದಲ್ಲಿ ದೃಷ್ಟಾಂತವಿದೆ. ಈ ವಿಷಯವನ್ನು 'ಏತೇನ' ಸೂತ್ರ ಹಾಗೂ ಭಾಷ್ಯಗಳಿಂದ ಉಪಪಾದನೆ ಮಾಡಿದ್ದಾರೆ. 'ಅಕಸ್ಮಾದ್ಧಿ ಇದಮಾವಿರಾಸೀತ್' ಇತ್ಯಾದಿ ಶ್ರುತಿಯ ಅರ್ಥವನ್ನು 'ಶ್ರುತಿಗತಿಃ' ಇತ್ಯಾದಿ ಭಾಷ್ಯದಿಂದ ಉಪಪಾದನೆ ಮಾಡಿದ್ದಾರೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಅಸದಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ತ್ವಪ್ರದೀಪ

### ಶ್ರುತಿಗಳ ವ್ಯಾಖ್ಯಾನಕ್ರಮ

**तत्वप्रदीपः – एतेन शिष्टापरिग्रहा अपि व्याख्याताः । अस्मत्पक्षे दृष्टान्तभावेन परपक्षे तदभावेन च । अपरिग्रहा = वेदैरपरिगृहीताः । अत्र 'आदि'शब्देन मायिब्रह्मकर्तृत्वमेव बोद्धव्यम् । श्रुतिगतिस्तु ब्रह्मवाचकत्वेन प्रदर्शिताऽधस्तात् । प्रदर्शयिष्यते च साऽसत्कारणश्रुतीनामसम्भवसूत्रे । यत्रान्यवाचकत्वेऽपि अविरोधः तत्रान्यदप्यमुख्यतयोच्यते । यथा चात्र प्रधानं कथञ्चित् कारणमुपादनत्वेन । यथा वा 'यो भूतानामधिपतिः' 'सोऽरोदीत्' इत्यादौ । यत्र विरोधस्तत्र ब्रह्मैव । यथा 'सत्यं ज्ञानं' 'नकिरिन्द्रः' 'निषुसीद' इत्यादौ। 'अकः' न कोऽपि, सर्वतो विलक्षण इत्यर्थः ।।**

**इत्यसदधिकरणम् ।**

'ಏತೇನ ಶಿಷ್ಟಾಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಸೂತ್ರದ ಅರ್ಥವನ್ನು ಹೀಗೆ ತಿಳಿಯಬೇಕು - ನಮ್ಮ ಪಕ್ಷದಲ್ಲಿ ದೃಷ್ಟಾಂತ ಮೂಲಕವಾದ ಅನುಮಾನವಿದೆ. ಪರಪಕ್ಷದಲ್ಲಿ ತನ್ಮೂಲಕವಾದ ಅನುಮಾನವು ಇರುವುದಿಲ್ಲ. ಆದ್ದರಿಂದ ವೇದಗಳಿಗೆ ಸಮ್ಮತಿಯಿಲ್ಲದ ಅಭಾವಕಾರಣತವಾದವು ತ್ಯಾಜ್ಯವಾಗಿದೆ. ಸೂತ್ರದಲ್ಲಿರುವ 'ಜೀವಕರ್ತೃಕತ್ವಾದಯಃ' ಎಂಬಲ್ಲಿರುವ ಆದಿಪದದಿಂದ ಮಾಯಾವಾದಿಗಳು ಹೇಳುವ ಬ್ರಹ್ಮಕರ್ತೃಕತ್ವವನ್ನೂ ಕೂಡ ವಿವಕ್ಷಿಸಬೇಕು.

'ಶ್ರುತಿಗತಿಸ್ತು ಬ್ರಹ್ಮವಾಚಕತ್ವೇನ ಪ್ರದರ್ಶಿತಃ' ಎಂಬ ವಾಕ್ಯದಲ್ಲಿ 'ಅದರ್ಶನಾತ್' ಎಂಬುದಾಗಿ ವಿವಕ್ಷಿಸಬೇಕು. ಜೀವಾದಿಗಳಿಗೆ ಕಾರಣತ್ವವನ್ನು ಹೇಳುವ ಶ್ರುತಿಗಳಿಗೆ ಗತಿಯನ್ನು ಬ್ರಹ್ಮವಾಚಕತ್ವವನ್ನು ಸಮರ್ಥನೆ ಮಾಡುವ ಮೂಲಕ ಈ ಹಿಂದೆಯೇ ತೋರಿಸಿದ್ದಾಗಿದೆ ಎಂಬುದು ಇದರ ಅಭಿಪ್ರಾಯ. ಮುಂದೆಯೂ ಕೂಡ ಅಸಂಭವಸೂತ್ರದಲ್ಲಿ ಅಸತ್ಕಾರಣ-ಪ್ರತಿಪಾದಕವಾದ ಶ್ರುತಿಗಳಿಗೆ ಗತಿಯನ್ನು ತೋರಿಸಲಾಗುತ್ತದೆ.

'ಯತ್ರಾನ್ಯವಾಚಕತ್ವೇಽಪಿ ಅವಿರೋಧಃ ತತ್ರಾನ್ಯದಪ್ಯಮುಖ್ಯತಯೋಚ್ಯತೇ' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಯಾವ ಶ್ರುತಿಯಲ್ಲಿ ಬ್ರಹ್ಮನನ್ನು ಬಿಟ್ಟು ಬೇರೆ ಪದಾರ್ಥಗಳು ಪ್ರತಿಪಾದ್ಯವೆಂದು ಹೇಳಿದಾಗಲೂ ಕೂಡ ವಿರೋಧವು ಬರುವುದಿಲ್ಲವೋ, ಅಂಥಲ್ಲಿ ಅಮುಖ್ಯವಾಗಿ ಬೇರೆ ಪದಾರ್ಥಗಳೂ ಕೂಡ ಪ್ರತಿಪಾದ್ಯವಾಗಿರುತ್ತವೆ. ಆದ್ದರಿಂದ ಪ್ರಕೃತಿಯು ಉಪಾದಾನತ್ವೇನ ಕಾರಣವಾಗುತ್ತದೆಂದೇ ಶ್ರುತಿಯ ಅರ್ಥವನ್ನು ವಿವಕ್ಷಿಸಬೇಕು. ಇದರಂತೆ 'ಯೋ ಭೂತಾನಾಮಧಿಪತಿಃ'' 'ಸೋಽರೋದೀತ್'' ಎಂಬಲ್ಲೆಲ್ಲಾ ಬೇರೆ ಅರ್ಥವನ್ನು ಪ್ರತಿಪಾದ್ಯವೆಂದು ಒಪ್ಪಿದಾಗ ಬಾಧಕವು ಬರುವುದಿಲ್ಲ. 'ಯತ್ರ ವಿರೋಧಃ ತತ್ರ ಬ್ರಹ್ಮೈವ' ಎಂಬ ಭಾಷ್ಯದಿಂದ ವಿರೋಧವಿದ್ದರೆ ಅಂಥ ಶ್ರುತಿಗಳಿಂದ ಬ್ರಹ್ಮನು ಪ್ರತಿಪಾದ್ಯನೆಂದು ಒಪ್ಪಬೇಕು ಎಂದು ಹೇಳಿದ್ದಾರೆ. ಉದಾಹರಣೆ - 'ಸತ್ಯಂ ಜ್ಞಾನಂ' ಎಂಬ ಶ್ರುತಿಯಲ್ಲಿ ಹಾಗೂ 'ನಕಿರಿಂದ್ರಃ' ಎಂಬ ಶ್ರುತಿಯಲ್ಲಿ, 'ನಿಷುಸೀದ' ಎಂಬ ಶ್ರುತಿಯಲ್ಲಿ ಬೇರೆ ಅರ್ಥವನ್ನು ಪ್ರತಿಪಾದ್ಯವೆಂದು ಹೇಳಿದರೆ ವಿರೋಧವು ಬರುತ್ತದೆ. ಎಲ್ಲದಕ್ಕಿಂತ ವೈಲಕ್ಷಣ್ಯವನ್ನು ಸತ್ಯಜ್ಞಾನಾದಿ ಸ್ವರೂಪವನ್ನು, ಈ ಶ್ರುತಿಗಳೆಲ್ಲವು ಹೇಳುತ್ತಿರುವುದರಿಂದ ಇವುಗಳು ಬೇರೆ ವಿಷಯದಲ್ಲಿ ಅಯುಕ್ತವಾಗಿವೆ. ಆದ್ದರಿಂದ 'ಸತ್ಯಂ ಜ್ಞಾನಂ' ಇತ್ಯಾದಿ ವಾಕ್ಯಗಳಿಂದೆಲ್ಲಾ ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನೆಂದು ವಿವಕ್ಷಿಸಬೇಕು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಅಸದಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ತತ್ವಪ್ರಕಾಶಿಕಾ

ವಿಶ್ವಕ್ಕೆ ಯಾವುದೇ ಕಾರಣ ಬೇಡ

**तत्वप्रकाशिका – मास्त्वसत्कारणं जगतस्तथापि न विष्णोर्जगत्कारणत्वं सम्भवति । 'विप्रतिपन्नं निष्कारणमचेतनकारणं जीवकारणं वा कार्यत्वात् कूलपतनदध्यादिवदिति निष्कारणत्वादिसाधक-युक्तिविरोधात् । न च निर्मूलयुक्तेरसाधकत्वम् । 'अकस्मात्' इत्यादि श्रुतिमूलत्वादित्याशङ्कां परिहरत्सूत्रमुपन्यस्य व्याचष्टे – एतेनेति ।।**

ಅಸತ್ತು ಜಗತ್ತಿಗೆ ಕಾರಣವಾಗುವುದಿಲ್ಲವೆಂದರೆ ಬೇಡ. ಆದರೂ ವಿಷ್ಣುವಿಗೆ ಜಗತ್ಕಾರಣತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ವಿಶ್ವಕ್ಕೆ ಯಾವ ಕಾರಣವೂ ಬೇಕಾಗಿಲ್ಲ. ಅಥವಾ ಅಚೇತನವೋ ಜೀವನೋ ಕಾರಣವಾಗಬಹುದು. ಏಕೆಂದರೆ ಅದು ಕಾರ್ಯವಾಗಿದೆ. ಹೇಗೆಂದರೆ ನದೀದಡ ಬೀಳುವಿಕೆ ಅಥವಾ ಹಾಲು ಮೊಸರಾಗುವಿಕೆ, ಮುಂತಾದವುಗಳಲ್ಲಿ ಹೇಗೋ ಹಾಗೆ ಈ ರೀತಿ ನಿಷ್ಕಾರಣತ್ವಾದಿ ಸಾಧಕ ಯುಕ್ತಿ ವಿರೋಧ ಬರುತ್ತದೆ. ಈ ನಿರ್ಮೂಲಯುಕ್ತಿಗಳಿಗೆ ಸಾಧಕತ್ವವಿಲ್ಲವೆಂದು ಹೇಳಕೂಡದು. ಏಕೆಂದರೆ ಈ ಅನುಮಾನಕ್ಕೆ 'ಅಕಸ್ಮಾತ್' ಇತ್ಯಾದಿ ಶ್ರುತಿಯು ಮೂಲಪ್ರಮಾಣವಾಗಿರುತ್ತದೆ. ಈ ಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಹೇಳಿ ಅದರ ವ್ಯಾಖ್ಯಾನ ಮಾಡುತ್ತಾರೆ; 'ಏತೇನ' ಎಂದು.

ಯಾವುದೂ ಕೂಡ ನಿಷ್ಕಾರಣವಲ್ಲ

**तत्वप्रकाशिका – सत्कारणत्वादौ दृष्टान्तभावेन निष्कारणत्वादौ दृष्यान्ताभावेनेत्यर्थः । कूलपतनादीनामपि निष्कारणत्वादि न सम्मतमिति भावः ।। अत्र निष्कारणत्वादिनिरासे वक्ष्यमाणचार्वाकसाख्यनिषेघस्य पौनरुक्त्यं प्रसज्जत इत्यत उक्तम् – श्रुतिप्रासा इति ।।**

ವಿಶ್ವದ ಸತ್ಕಾರಣತ್ವಕ್ಕೆ ದೃಷ್ಟಾಂತವಿದೆಯೆಂದೂ ನಿಷ್ಕಾರಣತ್ವದಲ್ಲಿ ದೃಷ್ಟಾಂತವಿಲ್ಲವೆಂದೂ, ಅರ್ಥ. ಕೂಲಪತನಾದಿ (ದಡಬೀಳುವಿಕೆ ಮುಂತಾದ್ದು) ನಿಷ್ಕಾರಣವೆಂದು ನಾವು

ಒಪ್ಪುವುದಿಲ್ಲವೆಂದು ಭಾವ. (ಅಲ್ಲಿಯೂ ಈಶ್ವರ ಪ್ರೇರಣೆಯೇ ಕಾರಣವಾಗಿದೆ). ಈ ಅಧಿಕರಣದಲ್ಲಿ ವಿಶ್ವದ ನಿಷ್ಕಾರಣತ್ವದ ನಿರಾಸದಿಂದ ಪುನರುಕ್ತಿ ದೋಷ ಬರುತ್ತದೆ. ಏಕೆಂದರೆ ಮುಂದೆ ಚಾರ್ವಾಕ, ಸಾಂಖ್ಯಾದಿ ಮತನಿಷೇಧ ಮಾಡಿದ್ದಾರಲ್ಲವೆ? ಎಂಬ ಶಂಕೆಯನ್ನು ಪರಿಹಾರ ಮಾಡಲು 'ಶ್ರುತಿಪ್ರಾಪ್ತಾ' ಎಂದು ಹೇಳಿದ್ದಾರೆ.

ಶ್ರುತಿವಿರೋಧವಷ್ಟೇ ಈ ಅಧಿಕರಣದ ವಿಷಯವಲ್ಲ

**तत्वप्रकाशिका – तृतीयानुप्रवेशादि तु पूर्ववत्परिहरणीयम् । नन्वस्तु सत्कारणत्वादौ घटादिदृष्टान्तभावो निष्कारणत्वादौ दृष्टन्ताभावश्च, तथापि कथमजीवकतृत्वे दृष्टान्तः कथञ्च जीवकतृत्वे दृष्टान्ताभावो घटादीनां जीवकतृत्वदर्शनादित्यत आह – यथेति ।।**

ಇಲ್ಲಿ ಶ್ರುತಿವಿರೋಧದ ಪರಿಹಾರವೇ ಅಭಿಪ್ರೇತವಾಗಿದ್ದರೆ ಈ ಅಧಿಕರಣವನ್ನು ಈ ಅಧ್ಯಾಯದ ಮೂರನೇ ಪಾದದಲ್ಲಿ ಏಕೆ ಹಾಕಲಿಲ್ಲವೆಂದು ಪ್ರಶ್ನೆ ಬಂದರೆ ಇದಕ್ಕೂ ಅರ್ಥಾತ್ ಯುಕ್ತಿವಿರೋಧವನ್ನು ನಿರಾಕರಿಸುವುದರಿಂದ ಈ ಪಾದದಲ್ಲಿರುವುದು ಯುಕ್ತವೇ ಎಂದು ಹಿಂದಿನಂತೆ ತಿಳಿಯಬೇಕು. ಸತ್ಕಾರಣದ ವಿಷಯದಲ್ಲಿ ಘಟಾದಿಗಳು ದೃಷ್ಟಾಂತ. ನಿಷ್ಕಾರಣತ್ವದ ವಿಷಯದಲ್ಲಿ ದೃಷ್ಟಾಂತವಿಲ್ಲ. ಆದರೂ ನಿಮ್ಮ ಅಭಿಪ್ರಾಯದಂತೆ ಅಜೀವ ಕರ್ತೃತ್ವವಿಷಯದಲ್ಲಿ ದೃಷ್ಟಾಂತ ಹೇಗೆ ಸಿಗುತ್ತದೆ ? ಮತ್ತು ಜೀವಕರ್ತೃತ್ವ ವಿಷಯದಲ್ಲಿ ದೃಷ್ಟಾಂತ ಹೇಗೆ ಸಿಗುವುದಿಲ್ಲ? ಏಕೆಂದರೆ, ಘಟಾದಿಗಳಿಗೆ ಜೀವ ಕರ್ತೃವಾಗಿರುವುದು ಕಂಡಿದೆ. ಈ ಆಕ್ಷೇಪವನ್ನು ಪರಿಹಾರ ಮಾಡಲು 'ಯಥಾ' ಎಂಬ ವಾಕ್ಯವನ್ನು ಹೇಳುತ್ತಾರೆ.

ಜೀವನು ಸ್ವತಂತ್ರ ಕರ್ತೃವಲ್ಲ

**तत्वप्रकाशिका – दुःखादिकार्येषु जीवस्य कतृत्वाभावेनाजीवकतृत्वेऽस्ति दृष्टान्तः, एमन्येष्वपि कार्येषु तत्साध्यम् । ततश्च जीवकर्तृत्वे दृष्टान्ताभाव इति भावः । घटादीनां जीवकर्तृत्वाभावे न चेतनकर्तृकत्वे दृष्टान्तोऽचेतन**

**कर्तृकत्वनिषेधार्थमित्यतोऽकर्तृत्वमित्यनुक्त्वाऽ स्वातन्त्र्यमित्युक्तम् । नन्वेवं चेदसत्कारणत्वादिश्रुतीनां का गतिरित्यत आह – श्रुतीति ।।**

ದುಃಖಾದಿಕಾರ್ಯಗಳಲ್ಲಿ ಜೀವನಿಗೆ ಕರ್ತೃತ್ವವಿಲ್ಲದಿರುವುದರಿಂದ, ಅಜೀವಕರ್ತೃತ್ವ ವಿಷಯದಲ್ಲಿ ದೃಷ್ಟಾಂತವಿರುತ್ತದೆ. ಆದ್ದರಿಂದ ಈ ದೃಷ್ಟಾಂತದ ಮೇಲೆ ಅನ್ಯಕಾರ್ಯಗಳೂ ಅಜೀವಕರ್ತೃಕವಾಗಿವೆ ಎಂಬುದು ಸಿದ್ಧವಾಗುತ್ತದೆ. ಆದ್ದರಿಂದ ಜೀವಕರ್ತೃಕಕಾರ್ಯಗಳ ವಿಷಯದಲ್ಲಿ ದೃಷ್ಟಾಂತವೇ ಸಿಗುವುದಿಲ್ಲವೆಂದು ತಿಳಿಯಬೇಕು.

'ವಿಶ್ವವು ಅಚೇತನಕರ್ತೃಕವಾಗಿದೆ' ಎಂದು ಹೇಳಿದರೆ ಅದನ್ನು ನಿಷೇಧ ಮಾಡಲು 'ವಿಶ್ವವು ಕಾರ್ಯವಾದುದರಿಂದ ಚೇತನಕರ್ತೃಕವಾಗಿದೆ; ಘಟಾದಿಕಾರ್ಯದಂತೆ' ಈ ರೀತಿ ಅನುಮಾನ ಹೇಳಬೇಕಾಗುತ್ತದೆ. ಮತ್ತು ಈ ಅನುಮಾನಗಳಲ್ಲಿ ಜೀವಕರ್ತೃಕ ಘಟಾದಿಗಳನ್ನೇ ದೃಷ್ಟಾಂತವಾಗಿ ಹೇಳಬೇಕಾಗುತ್ತದೆ. ಆಗ ಘಟಾದಿಗಳು ಜೀವಕರ್ತೃಕವಲ್ಲವೆಂದು ಹೇಳಿದರೆ ಆ ಅನುಮಾನದಲ್ಲಿ ಘಟಾದಿಗಳು ದೃಷ್ಟಾಂತವಾಗಲಾರವು. ಆದ್ದರಿಂದ ಇಲ್ಲಿ ಜೀವನು ಘಟಾದಿಕರ್ತನಲ್ಲವೆಂದು ಹೇಳದೇ ಅವನು ಸ್ವತಂತ್ರನಲ್ಲವೆಂದು ಹೇಳಿದ್ದಾರೆ. ಎಂದರೆ, ಅವನು ಕರ್ತನಾದರೂ ಸ್ವತಂತ್ರ ಕರ್ತನಲ್ಲವೆಂದರ್ಥ. ಹೀಗೆ ಹೇಳಿದ್ದರಿಂದ ಯಾವ ದೋಷವೂ ಬರುವುದಿಲ್ಲ. ವಿಶ್ವಕ್ಕೆ ಅಸತ್ಕಾರಣತ್ವವನ್ನು ಒಪ್ಪದಿದ್ದರೆ, ಅಸತ್ಕಾರಣತ್ವಪ್ರತಿಪಾದಕ ಶ್ರುತಿಗೆ ಏನು ಗತಿ ? ಎಂಬ ಪ್ರಶ್ನೆಗೆ 'ಶ್ರುತಿಗತಿಸ್ತು' ಎಂದು ಉತ್ತರ ಕೊಡುತ್ತಾರೆ.

ಅಸತ್‌ಕಾರಣತ್ವವಾದದ ವಿರೋಧ ಬರುತ್ತದಯೇ ?

**तत्वप्रकाशिका – श्रुतीनां ब्रह्मवाचकत्वेऽप्यसदादिवाचकत्वम-मुख्यतयाऽभ्युपगम्यत एवातस्तद्विरोध इत्यत आह – यत्रेति ।।**

ಶ್ರುತಿಯು ಮುಖ್ಯವೃತ್ತಿಯಿಂದ ಬ್ರಹ್ಮವಾಚಕವಾದರೂ ಅಮುಖ್ಯವೃತ್ತಿಯಿಂದ ಅಸದಾದಿ ಪದಾರ್ಥವಾಚಕವಾಗಿರುತ್ತದೆಂಬ ವಿಷಯ ಸಿದ್ಧಾಂತಿಗೆ ಮಾನ್ಯವೇ ಆಗಿದೆ. ಆದ್ದರಿಂದ ಅಮುಖ್ಯಾರ್ಥತ್ವದಿಂದಲಾದರೂ, ವಿಷ್ಣುಜಗತ್ಕಾರಣನೆಂಬ ವಿಷಯದಲ್ಲಿ ಅಸತ್ಕಾರಣತ್ವವಾದದ ವಿರೋಧ ಬಂದೇ ಬರುತ್ತದೆ. ಈ ಸಂದೇಹವನ್ನು ಪರಿಹಾರ ಮಾಡಲು 'ಯತ್ರ' ಎಂದು ಹೇಳುತ್ತಾರೆ.

ವಿರೋಧ ಬರುವುದಿಲ್ಲವೆಂದು ಉತ್ತರ

**तत्वप्रकाशिका – अतो युक्त्यादेराभासत्वेनाविरोधकत्वाद्युक्तं जन्मादिकारणत्वं ब्रह्मणो लक्षणमिति स्थितम् ।। १३ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् असदधिकरणम् ।।**

ಆದ್ದರಿಂದ ಅಸತ್ಕಾರಣತ್ವಪ್ರತಿಪಾದನ ಮಾಡುವ ಅನುಮಾನಾದಿಗಳು ಆಭಾಸರೂಪ-ವಾದ್ದರಿಂದ, ವಿಷ್ಣುವಿನ ಜಗತ್ಕಾರಣತ್ವಕ್ಕೆ ವಿರೋಧ ಉಂಟು ಮಾಡುವುದಿಲ್ಲ. ಆದ್ದರಿಂದ ಬ್ರಹ್ಮನ ಜಗತ್ಕಾರಣತ್ವವೆಂಬ ಲಕ್ಷಣವು ಯುಕ್ತವೇ ಆಗಿದೆಯೆಂದು ನಿರ್ಣಯವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಅಸದಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಭಾವದೀಪ

ಜಗತ್ತಿಗೆ ವಿಷ್ಣು ಕಾರಣ ಆಗಬೇಕಿಲ್ಲ

**भावदीपः – एतेन शिष्टा अपरिग्रहा अपि व्याख्याताः ।। १३ ।।** भाष्ये श्रुतिप्राप्ता इत्यस्य श्रुतिमूलयुक्तिप्राप्ता इत्यर्थमभिप्रेत्य तद्दर्शयति ।। **विप्रतिपन्नमित्यादिना ।। कूलेति ।।** कूलपतनं निष्कारणकं पय एव दधि जायत इति दध्यचेतनकारणकम् । घटादिर्जीवकारणकः। शेषोक्त्या भाष्यं व्याचष्टे।। **सत्कारणत्वादाविति ।।**

ಭಾಷ್ಯದಲ್ಲಿ 'ಶ್ರುತಿಪ್ರಾಪ್ತಾಃ ನಿರಾಕೃತಾಃ' ಎಂದು ಹೇಳಿದ್ದಾರೆ. ಇಲ್ಲಿರುವ 'ಶ್ರುತಿಪ್ರಾಪ್ತಾಃ' ಎಂಬ ಪದಕ್ಕೆ ಶ್ರುತಿ ಮೂಲಕವಾದ ಯುಕ್ತಿಗಳಿಂದ ಪ್ರಾಪ್ತವಾದ ವಾದಗಳು ಎಂದರ್ಥ. ಈ ಅಭಿಪ್ರಾಯದಿಂದ 'ವಿಪ್ರತಿಪನ್ನಂ' ಇತ್ಯಾದಿ ಟೀಕಾ ವಾಕ್ಯವು ಹೊರಟಿದೆ. 'ಕೂಲಪತನದದ್ಯಾದಿವತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಕೂಲಪತನಕ್ಕೆ ಯಾವುದೇ ಕಾರಣವಿರುವುದಿಲ್ಲ. ದಧಿಗೆ ಅಚೇತನವಾದ ಹಾಲು ಎಂಬುದು ಕಾರಣವಾಗಿದೆ. ಘಟಾದಿಗಳಿಗೆ ಜೀವರುಗಳು ಕಾರಣರಾಗಿದ್ದಾರೆ. ಹೀಗೆ ವ್ಯತ್ಯಾಸವನ್ನು ಗಮನಿಸಬೇಕು. ಶೇಷಪೂರಣವನ್ನು ಮಾಡಿಕೊಳ್ಳುವ ಮೂಲಕ ಭಾಷ್ಯಕ್ಕೆ ವ್ಯಾಖ್ಯಾನ ಮಾಡಲು 'ಸತ್ಕಾರಣತ್ವಾದೌ' ಎಂಬ ಟೀಕಾ ಪಂಕ್ತಿಯು ಹೊರಟಿದೆ.

### ನಿಷ್ಕಾರಣತ್ವಕ್ಕೆ ದೃಷ್ಟಾಂತವೇ ಇಲ್ಲ

**ಭಾವದೀಪಃ** – ननूक्तं निष्कारणत्वादौ कूलपतनादिदृष्टान्त इति तत्राह –**कूलेति** ।। पयोऽबुवच्चेत्तत्रापीत्यादौ समयपादे कूलपतनादावपि ईशप्रवृ तेर्वक्ष्यमाणत्वादिति भावः।। **वक्ष्यमाणेति** ।। समयपादे ।। **श्रुतिप्राप्ता इतीति** ।। तत्र तु समयप्राप्ता इति भावः।

ಯಾವುದೇ ಕಾರಣವಿಲ್ಲದೇ ಕಾರ್ಯ ಆಗುತ್ತದೆ ಎನ್ನಲು ಕೂಲಪತನದ ದೃಷ್ಟಾಂತವನ್ನು ನಾವು ಹಿಂದೆ ಹೇಳಿದ್ದೇವೆ. ಹೀಗಿರುವಾಗ ನಿಷ್ಕಾರಣತ್ವಕ್ಕೆ ಯಾವುದೇ ದೃಷ್ಟಾಂತವಿಲ್ಲವೆಂದು ಹೇಗೆ ಹೇಳುವಿರಿ? ಎಂಬ ಪ್ರಶ್ನೆಗೆ 'ಕೂಲಪತನಾದೀನಾಮಪಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಪಯೋऽಂಬುವಚ್ಚೇತ್ತತ್ರಾಪಿ' ಎಂಬ ಸಮಯ ಪಾದದಲ್ಲಿರುವ ಸೂತ್ರದಲ್ಲಿ ಕೂಲಪತನಾದಿಗಳಿಗೂ ಕೂಡ ಪರಮಾತ್ಮನು ಕಾರಣನಾಗಿದ್ದಾನೆ ಎಂಬುದಾಗಿ ಮುಂದೆ ಸಮರ್ಥಿಸುತ್ತೇವೆ ಎಂಬುದು ಈ ವಾಕ್ಯದ ಅಭಿಪ್ರಾಯ. 'ವಕ್ಷ್ಯಮಾಣ' ಎಂದರೆ ಸಮಯ ಪಾದದಲ್ಲಿ ಹೇಳಲ್ಪಡುವ ಎಂದರ್ಥ. 'ಶ್ರುತಿಪ್ರಾಪ್ತಾಃ' ಎಂದು ಹೇಳಿದ್ದರಿಂದ ಸಮಯಪಾದದಲ್ಲಿ ಸಮಯಪ್ರಾಪ್ತವಾಗಿದೆ ಎಂಬ ವ್ಯತ್ಯಾಸವನ್ನು ಉಲ್ಲೇಖಿಸಿದ್ದಾರೆ.

### ಈ ಅಧಿಕರಣಕ್ಕೆ ತೃತೀಯ ಪಾದದಲ್ಲಿ ಸಂಗತಿ ಇಲ್ಲ

**ಭಾವದೀಪಃ** – ननु श्रुतिप्राप्तस्य निराकारणे तृतीयपादे निवेशः स्यात् प्रथमपादे निवेशश्च न स्यादित्यत आह – **तृतीयेति** ।। पूर्ववदर्थाद्युक्तिविरोधोऽपि निराक्रियत

इत्यत्रोक्तरीत्या श्रुतिमूलकयुक्तिप्राप्तत्वव्युत्पादनेनेत्यर्थः। अत एव विप्रतिपन्नमित्यादिना श्रुतिमूलकयुक्तिप्राप्तत्वप्रदर्शनं प्राक् कृतमिति भावः।

ಶ್ರುತಿಪ್ರಾಪ್ತವಾದ ಮತವನ್ನು ನಿರಾಕರಣೆ ಮಾಡುವುದಾದರೆ ಮೂರನೇ ಪಾದದಲ್ಲಿ ಈ ಅಧಿಕರಣವನ್ನು ನಿವೇಶ ಮಾಡಬೇಕು. ಪ್ರಥಮ ಪಾದದಲ್ಲಿ ಈ ಅಧಿಕರಣದ ಉಲ್ಲೇಖವು ಅಸಂಗತವಾಗುತ್ತದಲ್ಲವೇ? ಈ ಪ್ರಶ್ನೆಗೆ ಉತ್ತರವನ್ನು ನೀಡುವುದಕ್ಕಾಗಿ 'ತೃತೀಯಾನುಪ್ರವೇಶಾದಿ' ಎಂಬ ಟೀಕಾವಾಕ್ಯವು ಹೊರಟಿದೆ. ಹಿಂದಿನ ಅಧಿಕರಣದಂತೆ ಈ ಅಧಿಕರಣದಲ್ಲೂ ಕೂಡ ಯುಕ್ತಿವಿರೋಧವನ್ನು ಪರಿಹರಿಸಿದ್ದಾರೆ. 'ಪೂರ್ವವತ್' ಎಂದರೆ 'ಅರ್ಥಾತ್ ಯುಕ್ತಿವಿರೋಧೋಽಪಿ ನಿರಾಕ್ರಿಯತೇ' ಎಂಬುದಾಗಿ ಹಿಂದೆ ಭಾಷ್ಯದಲ್ಲಿ ಹೇಳಿದಂತೆ ಶ್ರುತಿಮೂಲಕವಾದ ಯುಕ್ತಿ ಪ್ರಾಪ್ತತ್ವದ ಸಮರ್ಥನೆಯ ಮೂಲಕ ಈ ಅಧಿಕರಣಕ್ಕೆ ಸಂಗತಿಯನ್ನು ತಿಳಿಯಬೇಕು. ಆದ್ದರಿಂದಲೇ 'ವಿಪ್ರತಿಪನ್ನಂ' ಇತ್ಯಾದಿ ವಾಕ್ಯದಿಂದ ಶ್ರುತಿಮೂಲಕಯುಕ್ತಿ ಪ್ರಾಪ್ತತ್ವವನ್ನು ವ್ಯುತ್ಪಾದನೆ ಮಾಡಿರುವುದರಿಂದ ಎಂದರ್ಥ.

### ಅಕರ್ತೃತ್ವ ಎಂದರೆ ಅಸ್ವತಂತ್ರತ್ವ ಎಂದರ್ಥ

**भावदीपः** – भाष्ये यथेत्येकपक्ष एव दृष्टान्तप्रदर्शनमयुक्तमित्यतोऽन्यत्र स्फुटत्वान्नायुक्तमिति भावेन तदनुवदन्नवतारयति॥ **नन्वस्त्विति**॥ स्वतन्त्रः कर्तेति पाणिन्युक्तेरस्वतन्त्रत्वमित्यस्याकर्तृत्वमर्थ इति भावेन योजयति॥ **जीवस्य कर्तृत्वाभावेनाजीवकर्तृत्व इति**॥ सतीति शेषः।

ಭಾಷ್ಯದಲ್ಲಿ 'ಯಥಾ' ಎಂಬ ವಾಕ್ಯದಿಂದ ಹಿಂದೆ ಪ್ರಸಕ್ತವಾದ ಮೂರು ಪಕ್ಷಗಳಲ್ಲಿ ಒಂದನ್ನು ಮಾತ್ರ ದೃಷ್ಟಾಂತದ ಮೂಲಕ ಸಮರ್ಥನೆ ಮಾಡಿದ್ದಾರೆ. ಇದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಮುಖ್ಯವಾದದ್ದನ್ನು ದೃಷ್ಟಾಂತದ ಮೂಲಕ ನಿರಾಕರಣೆ ಮಾಡಿದ ಮೇಲೆ ಉಳಿದೆರಡೂ ಕೂಡ ಹೀಗೆ ನಿರಾಕರಣೆ ಮಾಡುವುದು ಸುಲಭವೆಂಬ ಅಭಿಪ್ರಾಯದಿಂದ ಭಾಷ್ಯಕಾರರು ಉಳಿದವುಗಳನ್ನು ಉಲ್ಲೇಖ ಮಾಡಿಲ್ಲ. ಈ ಅಭಿಪ್ರಾಯದಿಂದ ಅದನ್ನು ಅನುವಾದ ಮಾಡುವ ಮೂಲಕ ಭಾಷ್ಯಕ್ಕೆ ಅವತಾರಿಕೆ ನೀಡಲು 'ನನು ಅಸ್ತು' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಸ್ವತಂತ್ರಃ ಕರ್ತಾ' ಎಂಬುದಾಗಿ ಪಾಣಿನಿ ಸೂತ್ರದಲ್ಲಿ ಸ್ವತಂತ್ರತ್ವವನ್ನು ಕರ್ತೃತ್ವವೆಂದು ಹೇಳಲಾಗಿದೆ. ಇದರಿಂದ ಅಸ್ವತಂತ್ರತ್ವವೇ ಅಕರ್ತೃತ್ವ ಎನಿಸುತ್ತದೆ ಎಂದು ತಿಳಿಯುತ್ತದೆ. ಈ ಅಭಿಪ್ರಾಯವನ್ನು ಹೊಂದಿ 'ಜೀವಸ್ಯ' ಇತ್ಯಾದಿ ವಾಕ್ಯವು ಹೊರಟಿದೆ. ಇಲ್ಲಿ 'ಸತಿ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು.

### ಜೀವನಲ್ಲಿ ಕರ್ತೃತ್ವವಿದ್ದರೂ ಸ್ವತಂತ್ರತ್ವವಿಲ್ಲ

**भावदीपः** – दुःखादिर्दृष्टान्तोऽस्तीत्यर्थः। अन्येषु घटादिकार्येष्वित्यर्थः। ननु दुःखादिदृष्टान्तेन घटादीनां जीवकर्तृत्वाभाव इति॥ **नचेतनकर्तृत्व इति**॥ जगत इति शेषः। कुतो जगतश्चेतनकर्तृत्वे दृष्टान्तेन भाव्यं येन तदभावोऽनिष्ट इत्यत आह – **अचेतनेति**॥

ದುಃಖಾದಿದೃಷ್ಟಾಂತವು ಈ ವಿಷಯದಲ್ಲಿ ಇದೆ ಎಂದು ತಿಳಿಯಬೇಕು. 'ಅನ್ಯೇಷು' ಎಂಬ ಪದಕ್ಕೆ ಘಟಾದಿ ಕಾರ್ಯಗಳಲ್ಲಿ ಎಂದರ್ಥ. ದುಃಖಾದಿದೃಷ್ಟಾಂತದಿಂದ ಘಟಾದಿಗಳಿಗೂ ಕೂಡ ಜೀವನು ಕರ್ತೃವಲ್ಲ ಎಂದು ಹೇಳಿದಂತಾಗುತ್ತದೆ ಎಂಬುದು ಇದರ ಅಭಿಪ್ರಾಯ. 'ನ ಚೇತನಕರ್ತೃಕತ್ವೇ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿ 'ಜಗತಃ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಒಂದುವೇಳೆ ಜಗತ್ತಿಗೆ ಚೇತನಕರ್ತೃಕತ್ವವನ್ನು ಒಪ್ಪಿದರೆ ದೃಷ್ಟಾಂತವು ಅನಿವಾರ್ಯವಾಗುತ್ತದೆ ಎಂದು ಏಕೆ ಹೇಳಬೇಕು? ಹಾಗೇನಾದರೂ ದೃಷ್ಟಾಂತವು ಬೇಕೇಬೇಕು ಎಂದಾಗಿದ್ದಲ್ಲಿ ದೃಷ್ಟಾಂತವು ಅನಿಷ್ಟವಾಗುತ್ತಿತ್ತು. ಈ ಪ್ರಶ್ನೆಗೆ 'ಅಚೇತನಕರ್ತೃಕತ್ವ' ಇತ್ಯಾದಿ ಮಾತಿನಿಂದ ಉತ್ತರಿಸುತ್ತಿದ್ದಾರೆ.

### ಜೀವನು ಸ್ವತಂತ್ರಕರ್ತೃವಲ್ಲ ಎಂಬುದಕ್ಕೆ ದೃಷ್ಟಾಂತವಿದೆ

**भावदीपः** – **अस्वातन्त्र्यमित्युक्तमिति**॥ तथा च घटादौ कर्ता शास्त्रार्थवत्त्वादिति वक्ष्यमाणन्यायेन जीवस्य कर्तृत्वे सत्यपि पराधीनमेव तत्। न स्वतन्त्रम्। तथा च जगत्स्वतन्त्रजीवकर्तृकमित्यत्र दृष्टान्ताभावः। स्वातन्त्र्येण जीवकर्तृकं नेत्यत्र दृष्टान्ताभावः। जगदचेतनकर्तृकं न किन्तु चेतनकर्तृकमेव कार्यत्वादित्यादौ घटादिदृष्टान्तभावश्च नानुपपन्न इति भावः।

'ಕರ್ತಾ ಶಾಸ್ತ್ರಾರ್ಥವತ್ವಾತ್' ಎಂಬ ಮುಂದೆ ಹೇಳುವ ಸೂತ್ರದಂತೆ ಜೀವನಿಗೆ ಕರ್ತೃತ್ವವಿದ್ದರೂ ಕೂಡ ಅಸ್ವಾತಂತ್ರ್ಯವೇ ಇರಬಹುದು, ಸ್ವಾತಂತ್ರ್ಯವು ಇರಬೇಕೆಂದೇನಿಲ್ಲ. ಆದ್ದರಿಂದ ಜಗತ್ತು ಸ್ವತಂತ್ರ ಜೀವಕರ್ತೃಕವಾಗಿದೆ ಎಂಬಲ್ಲಿ ಯಾವುದೇ ದೃಷ್ಟಾಂತವು ದೊರೆಯುವುದಿಲ್ಲ. ಸ್ವಾತಂತ್ರ್ಯೇಣ ಜೀವನು ಕರ್ತೃವಾಗಿಲ್ಲ ಎಂಬ ವಿಷಯದಲ್ಲಿ ದೃಷ್ಟಾಂತವು ಇರುತ್ತದೆ. ಆದ್ದರಿಂದ 'ಜಗತ್ ಅಚೇತನಕರ್ತೃಕಂ ನ

ಕಾರ್ಯತ್ವಾತ್' ಎಂಬ ಅನುಮಾನದಲ್ಲಿ ಘಟಾದಿ ದೃಷ್ಟಾಂತವನ್ನೇ ತಿಳಿಯಬಹುದು. ಇದರಲ್ಲಿ ಯಾವುದೇ ಅನುಪಪತ್ತಿಯು ಇರುವುದಿಲ್ಲ.

'ಶ್ರುತಿಗತಿಸ್ತು' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ

**भावदीपः –** भाष्ये श्रुतिगतिरित्यत्र श्रुतिशब्दगो नाव्यवहितश्रुतिमात्रपरः। किं तु सोऽसच्छब्दो ब्रह्मशब्दवदेव ब्रह्मवाचक इति न्यायविवरणानुरोधात्प्रागुक्तश्रुतिपरोऽपीति भावेनाह – **असत्कारणत्वादीति**।। तन्मात्रपरत्वभ्रान्तिनिरासायादिपदम्। अत एव भाष्यस्थश्रुतिपदस्य श्रुतीनामिति बहुवचनेन निर्देशः। न्यायविवरणस्थासत्पदमुपलक्षणमिति भावः। साक्षात्परंपराफलयोरुक्त्या सर्वसूत्रार्थमुपसंहरति ॥ **अत इति**।। प्रतिषेध-मात्रत्वरूपयुक्तिविरुद्धत्वात्तद्वत्प्रसङ्गरूपबाधकादपि तौ भावपदार्थसत्त्वे दृष्टान्तभावाद्वैपरीत्ये दृष्टान्ताभावात्सत्तर्कस्य सु(प्रतिष्ठित) प्रमितत्वाच्चेत्यर्थः॥ **युक्त्यादेरिति**।। श्रुतिरादिपदार्थ। श्रुतेराभासत्वं च पूर्ववाद्युक्तार्थ एवेति ध्येयम्॥ १३॥

ಭಾಷ್ಯದಲ್ಲಿ 'ಶ್ರುತಿಗತಿಃ' ಎಂದು ಹೇಳಿದ್ದಾರೆ. ಇಲ್ಲಿರುವ ಶ್ರುತಿ ಶಬ್ದವು ಅವ್ಯವಹಿತವಾದ ಹಿಂದಿನ ಶ್ರುತಿಯನ್ನು ಮಾತ್ರ ವಿವಕ್ಷಿಸುತ್ತಿಲ್ಲ. ಅದಕ್ಕಿಂತ ಹಿಂದೆ ಪ್ರಸಕ್ತವಾದ ಶ್ರುತಿಯನ್ನು ಕೂಡ ವಿವಕ್ಷಿಸುತ್ತಿದೆ. ಏಕೆಂದರೆ 'ಸೋಽಸಚ್ಛಬ್ದಃ ಬ್ರಹ್ಮಶಬ್ದವದೇವ ಬ್ರಹ್ಮವಾಚಕಃ' 'ಬ್ರಹ್ಮಶಬ್ದದಂತೆ ಅಸತ್ ಶಬ್ದವೂ ಕೂಡ ಬ್ರಹ್ಮವಾಚಕವಾಗಿದೆ' ಎಂದು ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಈ ಅಭಿಪ್ರಾಯದಿಂದ 'ಅಸತ್ಕಾರಣತ್ವಾದಿ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಆದಿ ಪದದಿಂದ ಅವ್ಯವಹಿತವಾಗಿ ಹಿಂದೆ ಪ್ರಸಕ್ತವಾದ ಶ್ರುತಿಯನ್ನಷ್ಟೇ ವಿವಕ್ಷಿಸಬೇಕೆಂಬ ಭ್ರಾಂತಿಯನ್ನು ನಿರಾಕರಣೆ ಮಾಡಿದ್ದಾರೆ. ಆದ್ದರಿಂದ ಭಾಷ್ಯದಲ್ಲಿರುವ ಶ್ರುತಿ ಪದವನ್ನು ಟೀಕೆಯಲ್ಲಿ 'ಶ್ರುತೀನಾಂ' ಎಂದು ಬಹುವಚನಾಂತವಾಗಿ ನಿರ್ದೇಶ ಮಾಡಿದ್ದಾರೆ.

ನ್ಯಾಯವಿವರಣದಲ್ಲಿರುವ 'ಅಸತ್'ಪದವು ಉಪಲಕ್ಷಣವಾಗಿದೆ ಎಂದು ತಿಳಿಯಬೇಕು. ಸಾಕ್ಷಾತ್ತಾಗಿ ಮತ್ತು ಪರಂಪರೆಯಿಂದ ಅಧಿಕರಣದ ಫಲವನ್ನು ಹೇಳಿದ್ದರಿಂದ ಸೂತ್ರಾರ್ಥವನ್ನು ಉಪಸಂಹಾರ ಮಾಡಲು 'ಅತಃ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ಪ್ರತಿಷೇಧಮಾತ್ರತ್ವ' ಎಂಬ

ಯುಕ್ತಿವಿರುದ್ಧವಾಗಿದೆ, 'ತದ್ವತ್‌ಪ್ರಸಂಗ' ಎಂಬ ಬಾಧಕವಿದೆ, ಭಾವಪದಾರ್ಥವು ಪ್ರಳಯದಲ್ಲಿದೆ ಎನ್ನಲು ದೃಷ್ಟಾಂತವಿದೆ, ಭಾವಪದಾರ್ಥವು ಪ್ರಳಯದಲ್ಲಿ ಇಲ್ಲ ಎನ್ನಲು ದೃಷ್ಟಾಂತವು ಇರುವುದಿಲ್ಲ, ಸತ್ತರ್ಕವು ಪ್ರಮಿತವಾಗಿದೆ. ಈ ಎಲ್ಲಾ ಕಾರಣಗಳಿಂದ ಎಂಬುದು 'ಅತಃ' ಎಂಬ ಪದದ ಅರ್ಥವಾಗಿದೆ. 'ಯುಕ್ತ್ಯಾದೇಃ' ಎಂಬಲ್ಲಿರುವ ಆದಿಪದದಿಂದ ಶ್ರುತಿಯನ್ನು ವಿವಕ್ಷಿಸಬೇಕು. ಶ್ರುತಿಗೆ ಆಭಾಸತ್ವವನ್ನು ಪೂರ್ವವಾದಿಯು ಹೇಳಿದಂತೆ ವಿವಕ್ಷಿಸಬೇಕು.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಅಸದಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

**।। श्रीजानकीवदनाम्भोजराजहंसाय रामचन्द्राय नमः ।।**

**।। श्री गुरुभ्यो नमः ।।**

**श्री राघवेन्द्रतीर्थविरचिता**

# तन्त्रदीपिका

**असदधिकरणम् (२।१।४)**

ಅಸದಧಿಕರಣವು ಆರಂಭಣೀಯ

।। असदिति चेन्न प्रतिषेधमात्तत्वात् ।।२-१-८।।

अत्र श्रुत्युपसर्जनकप्रागभावकर्तृत्वसाधकयुक्त्यविरोध उच्यते । श्रुतेर्ब्रह्म परत्वोक्तावप्यन्यत्रापि वृत्तेस्सत्त्वात् ।

ಶ್ರುತ್ಯುಪಸರ್ಜನಕವಾದ ಪ್ರಾಗಭಾವಕರ್ತೃತ್ವ ಸಾಧಕವಾದ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. (ಯುಕ್ತಿಯು ಪ್ರಧಾನವಾಗಿದೆ. ಇದಕ್ಕೆ ಬೆಂಬಲ ನೀಡಿದ ಶ್ರುತಿಯು ಗೌಣವಾಗಿದೆ ಎಂದಭಿಪ್ರಾಯ) ಶ್ರುತಿಯು ಬ್ರಹ್ಮಪರವಾಗಿದೆ ಎಂಬುದಾಗಿ ಈಗಾಗಲೇ ಪ್ರಥಮಾಧ್ಯಾಯದಲ್ಲಿ ಸಮನ್ವಯ ಮಾಡಿದ್ದರೂ ಕೂಡ, ಬೇರೆಡೆಯೂ ಕೂಡ ಆ ಶ್ರುತಿಯು ಸಮನ್ವಯವಾಗಬಹುದಲ್ಲವೇ? ಹೀಗೆ ಆಕ್ಷೇಪವು ಬರುವುದರಿಂದ ಇದರ ಪರಿಹಾರಕ್ಕಾಗಿ ಈ ಸೂತ್ರವು ಹೊರಟಿದೆ.

### 'ಅಸತ್' ಶಬ್ದದ ವ್ಯಾಖ್ಯಾನ

**अत्रासच्छब्दः प्रागभावपरः अभवाप्रतियोगिपरश्च । अस्तेर्भावे कर्तरि च शतृप्रत्यये श्नसोरल्लोपे नञ्ससासे असदभवनमिति नास्तीत्यसदिति च रूपसम्भवात् । यद्यपि शतृ कर्तर्येव । तथापि छान्दसो भावसाधनः । कर्तृसाधनत्वं तु युक्तिसूचनार्थम् । अत एवाभाव इति वाच्ये असदित्युक्तिः, श्रुत्यनुगमसूचनार्था च ।**

ಈ ಸೂತ್ರದಲ್ಲಿರುವ 'ಅಸತ್' ಎಂಬ ಶಬ್ದಕ್ಕೆ 'ಪ್ರಾಗಭಾವ' ಎಂದರ್ಥ. ಅಥವಾ 'ಅಭಾವಪ್ರತಿಯೋಗಿ' ಎಂದರ್ಥ. ಅಸ್ ಧಾತುವಿಗೆ ಭಾವಾರ್ಥದಲ್ಲಿ ಹಾಗೂ ಕರ್ತರ್ಥದಲ್ಲಿ ಶತೃಪ್ರತ್ಯಯವು ಬರುತ್ತದೆ. ಅನಂತರ 'ಶ್ನಸೋರಲ್ಲೋಪಃ' ಎಂಬ ಸೂತ್ರದಿಂದ ಅಸ್ ಎಂಬಲ್ಲಿರುವ ಆಕಾರವು ಲೋಪವನ್ನು ಹೊಂದುತ್ತದೆ. ಅನಂತರ ನಞ್ ಸಮಾಸವನ್ನು ಮಾಡಿದರೆ 'ಅಸತ್' ಎಂಬ ರೂಪವು ನಿಷ್ಪನ್ನವಾಗುತ್ತದೆ. ಇದು ಅಭವನ ಎಂಬುದರ ಅರ್ಥದಲ್ಲಿ ಅಥವಾ 'ನಾಸ್ತಿ' ಎಂಬುದರ ಅರ್ಥದಲ್ಲಿ ಪ್ರಯುಕ್ತವಾಗುತ್ತದೆ. ಹೀಗೆ 'ಅಸತ್' ಎಂಬ ಶಬ್ದದ ರೂಪನಿಷ್ಪತ್ತಿಯನ್ನು ತಿಳಿಯಬೇಕು.

ವಾಸ್ತವಿಕವಾಗಿ ಕರ್ತರ್ಥದಲ್ಲಿ ಮಾತ್ರ ಶತೃಪ್ರತ್ಯಯವು ಪ್ರಾಪವಾಗುತ್ತದೆ. ಆದರೆ ಪ್ರಕೃತ ಸೂತ್ರದಲ್ಲಿ ಭಾವಾರ್ಥದಲ್ಲಿ ಪ್ರಯೋಗಿಸಲಾಗಿದೆ. ಇದನ್ನು ವೈದಿಕಪ್ರಯೋಗವಾದ್ದರಿಂದ ಸಾಧುವೆಂದು ಕೂಡಿಸಬೇಕು.

ಕರ್ತೃಸಾಧನತ್ವವನ್ನು ಹೇಳಿದ್ದು ಯುಕ್ತಿಸೂಚನೆಗೋಸ್ಕರ. ಪೂರ್ವಪಕ್ಷಯುಕ್ತಿಯನ್ನು ಸೂಚಿಸುವುದಕ್ಕಾಗಿ ಕರ್ತೃ ಎಂಬರ್ಥವನ್ನು ಹೇಳಲಾಗಿದೆ ಎಂದಭಿಪ್ರಾಯ. ಆದ್ದರಿಂದ ಅಭಾವ ಎಂದು ಶಬ್ದವನ್ನು ಪ್ರಯೋಗಿಸುವ ಬದಲು 'ಅಸತ್' ಎಂಬ ಶಬ್ದವನ್ನು ಪ್ರಯೋಗಿಸಲಾಗಿದೆ. ಅಷ್ಟೇ ಅಲ್ಲದೇ ಶ್ರುತಿಯ ಅನುಗಮವನ್ನೂ ಕೂಡ ಇದರಿಂದ ಸೂಚಿಸಿದ್ದಾರೆ.

'ಅಸದಿತಿ ಚೇನ್ನ' ಎಂಬ ಸೂತ್ರಭಾಗಕ್ಕೆ ಮೊದಲನೆಯ ವ್ಯಾಖ್ಯಾನ

**अपीतावितीहाप्यन्वेति । अपीतौ असत् लयवृत्तिर्विश्वप्रागभावः जगत्कारणमित्यस्ति । अनन्यथशासिद्धपूर्वक्षणवृत्तित्वात् । सामान्यव्याप्त्या घटप्रागभाववत् । ''असदेवेदमग्र आसीत्'' इति श्रुतेश्चेत्येका वृत्तिः ।**

'ಅಪೀತೌ ತದ್ವತ್‌ಪ್ರಸಂಗಾತ್' ಎಂಬ ಸೂತ್ರದಲ್ಲಿರುವ 'ಅಪೀತೌ' ಎಂಬ ಪದವನ್ನು ಈ ಸೂತ್ರದಲ್ಲೂ ಕೂಡ ಅನ್ವಯ ಮಾಡಬೇಕು. ಆಗ ಸೂತ್ರಾರ್ಥ ಹೀಗೆ - 'ಅಪೀತೌ' = ಪ್ರಳಯಕಾಲದಲ್ಲಿ, ಅಸತ್ = 'ಜಗತ್‌ಕಾರಣಂ' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು ಜಗತ್‌ಕಾರಣವಾಗುತ್ತದೆ. ಏಕೆಂದರೆ ಜಗತ್ತು ಹುಟ್ಟುವ ಮೊದಲು ಅನ್ಯಥಾಸಿದ್ಧವಾಗದೇ ವಿಶ್ವಪ್ರಾಗಭಾವವು ಪೂರ್ವಕ್ಷಣವೃತ್ತಿಯೇ ಆಗಿದೆ. ಹೇಗೆ ಘಟ ಹುಟ್ಟುವ ಮೊದಲು ಘಟಪ್ರಾಗಭಾವವು ಪೂರ್ವಕ್ಷಣವೃತ್ತಿಯಾದ್ದರಿಂದ ಕಾರಣವಾಗಿದೆಯೋ, ಅದರಂತೆ ವಿಶ್ವಪ್ರಾಗಭಾವವೂ ಕೂಡ ಪೂರ್ವಕ್ಷಣವೃತ್ತಿಯಾಗಿರುವುದರಿಂದ ಜಗತ್‌ಕಾರಣವಾಗುತ್ತದೆ. ಯಾವುದು ಅನ್ಯಥಾಸಿದ್ಧವಾಗದೇ ಪೂರ್ವಕ್ಷಣವೃತ್ತಿಯಾಗಿರುತ್ತದೋ, ಅದು ಕುರಿತು ಕಾರ್ಯವನ್ನು ಕಾರಣವಾಗುತ್ತದೆಂಬ ಸಾಮಾನ್ಯವ್ಯಾಪ್ತಿಯನ್ನು ಇಲ್ಲಿ ತಿಳಿಯಬೇಕು. ಈ ವ್ಯಾಪ್ತಿಯ ಬಲದಿಂದ ಮಾತ್ರವಲ್ಲ. 'ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯೂ ಕೂಡ ವಿಶ್ವಪ್ರಾಗಭಾವವು ಜಗತ್ತಿಗೆ ಕಾರಣವಾಗಿದೆ ಎನ್ನಲು ಪ್ರಮಾಣವಾಗಿದೆ. ಇಷ್ಟು ಸೂತ್ರಕ್ಕೆ ಮೊದಲನೆಯ ವ್ಯಾಖ್ಯಾನ.

'ಅಸದಿತಿ ಚೇನ್ನ' ಎಂಬ ಸೂತ್ರಭಾಗಕ್ಕೆ ಎರಡನೆಯ ವ್ಯಾಖ್ಯಾನ

**अन्या तु भावजातं अपीतौ लये असत् अविद्यमानं, भावत्वात् कार्यवदिति । एवं लये भावमात्रासिद्धौ कार्यस्य सकर्तृकत्वनियमात्**

परिशेषादभावस्यैव कर्तृत्वं सिद्ध्यति । ''असदेव तन्मनोऽकुरुत'' इति श्रुतेरिति चेन्न ।

ಮತ್ತೊಂದು ವ್ಯಾಖ್ಯಾನ ಹೀಗಿದೆ - ಈ ವ್ಯಾಖ್ಯಾನದಲ್ಲೂ ಕೂಡ 'ಅಪೀತೌ' ಎಂಬುದನ್ನು ಅನುವೃತ್ತಿ ಮಾಡಬೇಕು. ಸಕಲಭಾವ ಪದಾರ್ಥಗಳು 'ಅಪೀತೌ' = ಪ್ರಳಯಕಾಲದಲ್ಲಿ, 'ಅಸತ್' = ಅಸ್ತಿತ್ವವನ್ನು ಹೊಂದಿರುವುದಿಲ್ಲ. ಭಾವಪದಾರ್ಥವಾಗಿರುವುದರಿಂದ ಜನ್ಯಪದಾರ್ಥಗಳಂತೆ ಎಂದು. ಇಲ್ಲಿ 'ಭಾವಪದಾರ್ಥಾಃ ಪ್ರಳಯೇ ಅಸಂತಃ ಭಾವತ್ವಾತ್ ಕಾರ್ಯವತ್' ಎಂಬ ಅನುಮಾನವನ್ನು ತಿಳಿಯಬೇಕು.

ಹೀಗೆ ಪ್ರಳಯಕಾಲದಲ್ಲಿ ಭಾವಪದಾರ್ಥಗಳಿವೆ ಎಂಬುದಷ್ಟೇ ಸಿದ್ಧವಾಗುತ್ತದೆ. ಅನಂತರ ಯಾವುದೇ ಕಾರ್ಯಕ್ಕೆ ಕರ್ತೃ ಇರಲೇಬೇಕೆಂಬ ನಿಯಮವಿರುವುದರಿಂದ. ಪ್ರಳಯಕಾಲದಲ್ಲಿ ಪ್ರಾಗಭಾವ ಬಿಟ್ಟು ಬೇರೆ ಯಾವುದೇ ಪದಾರ್ಥವಿಲ್ಲದ ಕಾರಣ ಪ್ರಾಗಭಾವವೇ ಕರ್ತೃವೆಂದು ಪರಿಶೇಷಾತ್ ಸಿದ್ಧವಾಗುತ್ತದೆ. 'ಅಸದೇವ ತನ್ಮನೋಽಕುರುತ' ಪ್ರಾಗಭಾವವು ಜಗತ್ತನ್ನು ಸೃಷ್ಟಿಸಲು ಮನಸ್ಸು ಮಾಡಿತು ಎಂಬ ಶ್ರುತಿಯು ಈ ವಿಷಯದಲ್ಲಿ ಆಧಾರವಾಗಿದೆ. ಇಷ್ಟು ಎರಡನೆಯ ವ್ಯಾಖ್ಯಾನ

ಈ ಎರಡು ಬಗೆಯ ಪೂರ್ವಪಕ್ಷಗಳು ಅಸಾಧುವಾಗಿವೆ.

'ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನ

प्रागभावः कर्तेति न । प्रतिषेधमात्रत्वादभावधर्मतां विना स्वरूपत एव निषेधरूपत्वात् । घटप्रागभाववदित्यर्थः । भावेषु कुलालादिषु अन्योन्याभावधर्मात्मना प्रतिषेधरूपत्वमस्तीति व्यभिचारनिरासाय मात्रपदम् । कर्तृत्वाभावे विश्वकर्तृत्वं दूरेऽप्यास्तमिति भावः ।

ಪ್ರಾಗಭಾವವೇ ಜಗತ್‌ಕರ್ತೃವಾಗಿದೆ ಎಂಬ ಪೂರ್ವಪಕ್ಷವು ತಪ್ಪು. ಏಕೆಂದರೆ ಪ್ರಾಗಭಾವವು ಸ್ವತಃ ಅಭಾವರೂಪವಾಗಿದೆ. ಯಾವುದು ಅಭಾವವೋ, ಅದು ಕರ್ತೃವಾಗಲು ಸಾಧ್ಯವಿಲ್ಲ. ಏಕೆಂದರೆ ಸ್ವತಃ ತಾನೇ ಅಭಾವರೂಪವಾಗಿರುತ್ತದೆ. ಹಾಗೂ ಸ್ವರೂಪದಿಂದಲೂ

ನಿಷೇಧಾತ್ಮಕವಾಗಿದೆ. ಹೇಗೆ ಘಟಾಭಾವವು ಸ್ವತಃ ಅಭಾವರೂಪವಾಗಿದ್ದು, ಸ್ವರೂಪದಿಂದಲೂ ನಿಷೇಧಾತ್ಮಕವಾದ್ದರಿಂದ ಕರ್ತೃವಲ್ಲವೋ, ಅದರಂತೆ ವಿಶ್ವಪ್ರಾಗಭಾವವೂ ಕೂಡ ಕರ್ತೃವಾಗುವುದಿಲ್ಲ.

ಕುಲಾಲಾದಿಗಳೇ ಘಟಾದಿಗಳಿಗೆ ಕರ್ತೃವಾಗಿದ್ದು ಕಂಡಿದೆ. ಏಕೆಂದರೆ ಕುಲಾಲಾದಿಗಳು ಭಾವಪದಾರ್ಥವೆನಿಸಲಾಗಿದೆ. ಕುಲಾಲಾದಿಗಳಲ್ಲೂ ಕೂಡ ಅನ್ಯೋನ್ಯಾಭಾವವೆಂಬ ಅಭಾವ-ಧರ್ಮತ್ವವಿದೆ. ಆದ್ದರಿಂದ ಪ್ರಾಗಭಾವದಲ್ಲಿ ಹೇಗೆ ಪ್ರತಿಷೇಧರೂಪತ್ವವಿದೆಯೋ, ಅದರಂತೆ ಕುಲಾಲಾದಿಗಳಲ್ಲಿಯೂ ಕೂಡ ಪ್ರತಿಷೇಧರೂಪತ್ವವಿರುವುದರಿಂದ ಅನುಮಾನಕ್ಕೆ ವ್ಯಭಿಚಾರ ಬರುತ್ತದಲ್ಲವೇ? (ವಿಶ್ವಪ್ರಾಗಭಾವಃ ನ ಜಗತ್‌ಕರ್ತಾ ಪ್ರತಿಷೇಧಮಾತ್ರತ್ವಾತ್' ಎಂಬ ಅನುಮಾನದಲ್ಲಿ ಪ್ರತಿಷೇಧಮಾತ್ರತ್ವವೆಂಬ ಹೇತು ಕುಲಾಲನಲ್ಲಿದೆ. ಆದರೆ ಕರ್ತೃತ್ವವೇ ಇದೆ. ಇಲ್ಲಿ ಹೇತು ಬಂದು ಸಾಧ್ಯ ಬಾರದ ಕಾರಣ ವ್ಯಭಿಚಾರವೆಂದು ತಿಳಿಯಬೇಕು.)

ಈ ಮೇಲಿನ ವ್ಯಭಿಚಾರದೋಷ ಪರಿಹಾರಕ್ಕಾಗಿ 'ಮಾತ್ರ' ಪದವನ್ನು ನಿವೇಶಿಸಲಾಗಿದೆ. ಕುಲಾಲಾದಿಗಳು ಅನ್ಯೋನ್ಯಾಭಾವಾದಿ ಧರ್ಮಸ್ವರೂಪರಾಗಿರುವುದರಿಂದ ಪತಿಷೇಧರೂಪ-ವೆನಿಸಬಹುದು ಆದರೆ ಕೇವಲ ನಿಷೇಧಸ್ವರೂಪರಾಗಿರುವುದಿಲ್ಲ. ಭಾವಸ್ವರೂಪವೂ ಆಗಿರುವುದರಿಂದ ಹೇತುವೇ ಬಾರದ ಕಾರಣ ವ್ಯಭಿಚಾರಕ್ಕೆ ಅವಕಾಶವಿಲ್ಲ.

ಆದ್ದರಿಂದ ವಿಶ್ವಪಾಗ್ರಭಾವಕ್ಕೆ ಕರ್ತೃತ್ವವೇ ಸುತರಾಂ ಯುಕ್ತವಾಗುವುದಿಲ್ಲ. ಹೀಗಿರುವಾಗ ವಿಶ್ವಕರ್ತೃತ್ವವು ದೂರದಲ್ಲೇ ನಿರಸ್ತವಾಯಿತು.

### ನಿಷೇಧ ಮುಖ್ಯವಾಗಿ ತೋರಬೇಕು ಎಂದರ್ಥ

यद्यपि निषेधमात्रेत्युक्त्या निषेधैकस्वरूपत्वं लभ्यते । तच्च पक्षे असिद्धं दृष्टान्ताद् व्यावृत्तं च । सर्वस्य धर्मात्मना द्विरूपत्वात् । तथापि प्रतिषेधमात्रपदेनान्नमात्रं भुक्तमितिवत् प्रतिषेधसामान्यं गम्यते । धर्मधर्मिणोश्च धर्मी प्रधान इति धर्मात्मता विना धर्मित एव निषेधत्वादिति गम्य इति बोध्यम् ।।

ವಾಸ್ತವಿಕವಾಗಿ ನಿಷೇಧಮಾತ್ರ ಎಂಬುದರಿಂದ ಕೇವಲ ನಿಷೇಧರೂಪವಾಗಿರಬೇಕು ಎಂಬರ್ಥವು ತಿಳಿಯುತ್ತದೆ. ಆದರೆ ಈ ಅರ್ಥವನ್ನು ವಿವಕ್ಷಿಸಿ ವಿಶ್ವಪ್ರಾಗಭಾವವೆಂಬ ಪಕ್ಷದಲ್ಲೂ ಹೇತು ಬರುವುದಿಲ್ಲ. ದೃಷ್ಟಾಂತವಾದ ಘಟಪ್ರಾಗಭಾವದಲ್ಲೂ ಕೂಡ ಹೇತುವು ಬರುವುದಿಲ್ಲ. ಏಕೆಂದರೆ ಪ್ರತಿಯೊಂದು ಪದಾರ್ಥಗಳು ಪ್ರಮೇಯತ್ವ ಮೊದಲಾದ ಸ್ವರೂಪದಿಂದ ಭಾವರೂಪವೂ ಆಗುತ್ತದೆ. ಅಭಾವರೂಪವೂ ಆಗುತ್ತದೆ. ಹೀಗಿರುವಾಗ 'ಪ್ರತಿಷೇಧ-ಮಾತ್ರತ್ವಾತ್' ಎಂದು ಹೇಗೆ ಹೇಳಿದರು?

ಹೌದು ಆದ್ದರಿಂದ ಇಲ್ಲಿ ಕೇವಲ ನಿಷೇಧರೂಪವಾಗಿರಬೇಕೆಂಬ ಅರ್ಥವನ್ನು ವಿವಕ್ಷಿಸಬಾರದು. ನಿಷೇಧವು ಮುಖ್ಯವಾಗಿ ತೋರಬೇಕು ಎಂಬರ್ಥವನ್ನೇ ವಿವಕ್ಷಿಸಬೇಕು. 'ಅನ್ನಮಾತ್ರಂ ಭುಕ್ತಂ' ಎಂದು ಹೇಳಿದರೆ ಊಟದಲ್ಲಿ ಅನ್ನವು ಉಳಿದ ಪದಾರ್ಥಗಳಿಗಿಂತ ಹೆಚ್ಚಾಗಿ ಪ್ರಾಧಾನ್ಯವನ್ನು ಹೊಂದಿತ್ತು ಎಂದಷ್ಟೇ ಅರ್ಥ. ಅಂದಮಾತ್ರಕ್ಕೆ ಬೇರೆ ಪದಾರ್ಥಗಳನ್ನೇ ತಿನ್ನಲಿಲ್ಲ ಎಂದರ್ಥವಲ್ಲ. ಅದರಂತೆ ಪ್ರಕೃತ 'ಪ್ರತಿಷೇಧಮಾತ್ರತ್ವಾತ್' ಎಂಬಲ್ಲಿ ಪ್ರತಿಷೇಧವು ಪ್ರಧಾನವಾಗಿದೆ ಎಂಬರ್ಥವನ್ನು ತಿಳಿಯಬೇಕು. ಧರ್ಮ ಹಾಗೂ ಧರ್ಮಿಗಳಲ್ಲಿ ಧರ್ಮಿಯೇ ಪ್ರಧಾನವಾಗುತ್ತದೆ. ಈ ಧರ್ಮಿಯು ಧರ್ಮವನ್ನು ಅಪೇಕ್ಷೆ ಪಡದೇ ಸ್ವತಃ ಅಭಾವರೂಪವಾಗಿರಬೇಕು. ಆಗ 'ಪ್ರತಿಷೇಧಮಾತ್ರ' ಎಂದು ಕರೆಸಿಕೊಳ್ಳುತ್ತದೆ.

### 'ಅಪೀತೌ' ಇತ್ಯಾದಿ ಸೂತ್ರಕ್ಕೆ ಅವತಾರಿಕೆ

**ननु श्रुतिबलादन्यत्रादृष्टमपि कर्तृत्वं विश्वप्रागभावस्य स्यादित्यत आह-**

**।। अपीतौ तद्वत्प्रसङ्गादसमञ्जसम् ।।२-१-९।।**

ಬೇರೆ ಕಡೆ ಪ್ರಾಗಭಾವಕ್ಕೆ ಕರ್ತೃತ್ವವು ಕಂಡಿಲ್ಲ. ಆದರೆ ವಿಶ್ವಪ್ರಾಗಭಾವಕ್ಕೆ ಕರ್ತೃತ್ವವನ್ನು ಒಪ್ಪಬೇಕು. ಈ ವಿಷಯದಲ್ಲಿ ಅನೇಕ ಶ್ರುತಿಗಳು ಆಧಾರವಾಗಿವೆ. ಈ ಆಕ್ಷೇಪಕ್ಕೆ ಉತ್ತರವನ್ನು ನೀಡಲು 'ಅಪೀತೌ ತದ್ವತ್ಪಸಂಗಾದಸಮಂಜಸಮ್' ಎಂಬ ಸೂತ್ರ ಹೊರಟಿದೆ.

### ಪ್ರಳಯದಲ್ಲಿ ಕಾಲವೇ ಇಲ್ಲದಿರಬೇಕಾದೀತು

**तच्छब्दः प्राक् प्रवृत्तासत्परः सावधारणः । वदिति मतुप्प्रत्ययो न तु वतिः । भावप्रधानोऽयम् । अपीतौ प्रलये तद्वत्प्रसङ्गात् अभावमात्रत्वप्रसङ्गाद्**

असमञ्जसम् अभावकर्तृत्वमतमित्यर्थः । कार्यनाशे उपादानमात्रवशेष-नियमादिति भावः । कर्त्रुपादानयोस्तवैकत्वात् । अपीतावित्यनेन प्रलये भावमात्रासत्त्वे कालोऽपि न स्यादिति सूचयति ।।

ಸೂತ್ರದಲ್ಲಿ 'ತದ್ವತ್' ಎಂದು ಹೇಳಿದ್ದಾರೆ. ಇಲ್ಲಿರುವ 'ತತ್' ಎಂಬ ಶಬ್ದವು ಹಿಂದಿನ ಸೂತ್ರದಲ್ಲಿ ಪ್ರಕೃತವಾದ ಅಸತ್ತನ್ನು ಹೇಳುತ್ತಿದೆ. ಹಾಗೂ ಅವಧಾರಣಪುರಸ್ಸರವಾಗಿಯೇ ಅದನ್ನು ವಿವಕ್ಷಿಸಿದೆ. 'ವತ್' ಎಂಬುದು 'ಮತ್' ಪ್ರತ್ಯಯವಾಗಿದೆ. 'ವತಿ' ಪ್ರತ್ಯಯವೆಂದು ತಿಳಿಯಬಾರದು. ಮತ್ತು ಈ ಪದವು ಭಾವಪ್ರಧಾನನಿರ್ದಿಷ್ಟವಾಗಿದೆ. ಈಗ ಸೂತ್ರಾರ್ಥ ಹೀಗೆ- ಅಪೀತೌ = ಪ್ರಳಯಕಾಲದಲ್ಲಿ, ತದ್ವತ್ಪ್ರಸಂಗಾತ್ = ಕೇವಲ ಅಭಾವವು ಮಾತ್ರ ಉಳಿಯಬೇಕಾದ ಪರಿಸ್ಥಿತಿ ಬರುತ್ತದೆ. ಆದ್ದರಿಂದ ಅಸಮಂಜಸಮ್ = ಅಭಾವವೇ ಕರ್ತೃವಾಗಿವೆ ಎಂಬ ಪೂರ್ವಪಕ್ಷವು ಅಸಾಧುವಾಗಿದೆ ಎಂದು.

ಕಾರ್ಯವೆಲ್ಲವೂ ನಾಶವಾದಾಗ ಉಪಾದಾನವು ಮಾತ್ರ ಉಳಿಯುತ್ತದೆಂಬ ನಿಯಮವಿದೆ. ಪ್ರಕೃತ ಪೂರ್ವಪಕ್ಷಿಯು ಕರ್ತೃ ಹಾಗೂ ಉಪಾದಾನಗಳಿಗೆ ಐಕ್ಯವನ್ನು ಒಪ್ಪುತ್ತಿರುವುದರಿಂದ ಕಾರ್ಯವು ನಾಶವಾದಾಗ ಪ್ರಳಯಕಾಲದಲ್ಲಿ ಕೇವಲ ಅಭಾವವಷ್ಟೇ ಉಳಿಯಬೇಕಾಗುತ್ತದೆ.

ಸೂತ್ರದಲ್ಲಿ 'ಅಪೀತೌ' ಎಂಬ ಪದದಿಂದ ಪ್ರಳಯಕಾಲದಲ್ಲಿ ಯಾವುದೇ ಭಾವಪದಾರ್ಥ-ಇರದಿರಬೇಕಾದೀತು. ಕಾಲವೂ ಕೂಡ ಇಲ್ಲದೇ ಇರಬೇಕಾದೀತು ಎಂಬುದನ್ನು ಸೂಚಿಸಿದ್ದಾರೆ.

### ಅನಿಷ್ಟಾಪಾದನೆಯಾಗಿದೆ ಎಂಬುದರ ಸಮರ್ಥನೆ

नेदमनिष्टमित्यत आह -

।। न तु दृष्टान्तभावात् ।।२-१-१०।।

तुरेव । अत्र दृष्टान्तपदेन तत्रावधारितव्याप्तिमूलकमनुमानमुच्यते । तन्मात्रस्यासाधकत्वात् । व्याप्तिसव्वसूचनायैवमुक्तिः । प्रलये सर्वासत्त्वमिष्टमिति न युज्यते । तदा पदार्थसत्त्वसाधने दृष्टान्तभावादनुमानसत्त्वादित्यर्थः । विमतोत्पत्तिर्भावाधीना उत्पत्तित्वाद् घटोत्पत्तिवत् ।

विमतो विनाशः सशेषो विनाशत्वाद् घटविनाशवत् । विमतः कालो भाववान् कालत्वादन्यकालवदित्यादियुक्तिविरुद्धत्वाद् अनिष्टापादनमेवेति भावः ।।

ಪ್ರಳಯಕಾಲದಲ್ಲಿ ಕೇವಲಾಭಾವ ಉಳಿಯಬೇಕಾಯಿತು ಎಂಬುದಾಗಿ ಹಿಂದಿನ ಸೂತ್ರದಲ್ಲಿ ಆಪಾದನೆ ಮಾಡಲಾಯಿತು. ಇದು ನಮಗೆ ಅನಿಷ್ಟವೇ ಅಲ್ಲ. ಈ ಆಕ್ಷೇಪಕ್ಕೆ ಉತ್ತರವನ್ನು ನೀಡಲು 'ನತು ದೃಷ್ಟಾಂತಭಾವಾತ್' ಎಂಬ ಸೂತ್ರ ಹೊರಟಿದೆ.

ಸೂತ್ರದಲ್ಲಿರುವ ತು ಶಬ್ದಕ್ಕೆ 'ಏವ' ಎಂದರ್ಥ. ಸೂತ್ರದಲ್ಲಿರುವ ದೃಷ್ಟಾಂತ ಪದದಿಂದ ಅನುಮಾನವನ್ನು ವಿವಕ್ಷಿಸಬೇಕು. ಏಕೆಂದರೆ ಕೇವಲ ದೃಷ್ಟಾಂತವು ಏನನ್ನೂ ಕೂಡ ಸಾಧಿಸುವುದಿಲ್ಲ. ಹಾಗಾಗಿ ದೃಷ್ಟಾಂತದಲ್ಲಿ ನಿರ್ಣಯಿಸಲ್ಪಟ್ಟ ವ್ಯಾಪ್ತಿಯ ಆಧಾರವುಳ್ಳ ಅನುಮಾನ ಎಂಬರ್ಥವನ್ನು ವಿವಕ್ಷಿಸಬೇಕು. ವ್ಯಾಪ್ತಿಯು ಇದ್ದೇ ಇದೆ ಎಂಬುದನ್ನು ತಿಳಿಸುವುದಕ್ಕಾಗಿ ಇಲ್ಲಿ ದೃಷ್ಟಾಂತ ಎಂಬ ಪದವನ್ನೇ ಪ್ರಯೋಗಿಸಿದ್ದಾರೆ. ಪ್ರಳಯಕಾಲದಲ್ಲಿ ಯಾವ ಪದಾರ್ಥಗಳು ಇಲ್ಲದೇ ಇರಬೇಕಾದೀತು ಎಂಬುದು ನಮಗೆ ಇಷ್ಟವಾಗಿದೆ ಎಂಬುದಾಗಿ ಪೂರ್ವಪಕ್ಷಿಯು ಹೇಳಲು ಸಾಧ್ಯವಿಲ್ಲ. ಏಕೆಂದರೆ ಆಗಲೂ ಕೂಡ ಅನೇಕ ಭಾವಪದಾರ್ಥಗಳಿವೆ. ಈ ವಿಷಯದಲ್ಲಿ 'ದೃಷ್ಟಾಂತಭಾವಾತ್' = ಅನುಮಾನಪ್ರಮಾಣವಿದೆ. ಅದು ಹೀಗೆ - 'ವಿಮತಃ ಉತ್ಪತ್ತಿಃ ಭಾವಾಧೀನಾ ಉತ್ಪತ್ತಿತ್ವಾತ್ ಘಟೋತ್ಪತ್ತಿವತ್' ವಿವಾದಕ್ಕೆ ವಿಷಯವಾದ ಜಗದುತ್ಪತ್ತಿಯು ಉತ್ಪತ್ತಿಯೆನಿಸುವುದರಿಂದ ಭಾವಪದಾರ್ಥದ ಅಧೀನವಾಗಿದೆ ಘಟೋತ್ಪತ್ತಿಯಂತೆ ಎಂದು. ಮತ್ತು 'ವಿಮತಃ ವಿನಾಶಃ ಸಶೇಷೋ ವಿನಾಶತ್ವಾತ್ ಘಟವಿನಾಶವತ್' ಘಟವಿನಾಶದಂತೆ ಜಗತ್ತಿನ ವಿನಾಶವೂ ಕೂಡ ಭಾವಪದಾರ್ಥದಿಂದ ಸಹಿತವಾಗಿಯೇ ನಷ್ಟವಾಗುತ್ತದೆ. 'ವಿಮತಃ ಕಾಲಃ ಭಾವವಾನ್ ಕಾಲತ್ವಾತ್ ಅನ್ಯಕಾಲವತ್' ಬೇರೆ ಕಾಲವು ಹೇಗೆ ಭಾವಪದಾರ್ಥವುಳ್ಳದ್ದಾಗಿದೆಯೋ, ಅದರಂತೆ ಪ್ರಳಯಕಾಲವೂ ಕೂಡ ಭಾವಪದಾರ್ಥವುಳ್ಳದ್ದಾಗುತ್ತದೆ. ಇದೇ ಮೊದಲಾದ ಅನುಮಾನಗಳಿಂದ ವಿರುದ್ಧ-ವಾಗಿರುವುದರಿಂದ ಪ್ರಳಯಕಾಲದಲ್ಲಿ ಅಭಾವವಷ್ಟೇ ಇರುತ್ತದೆಂಬುದನ್ನು ಇಷ್ಟಾಪತ್ತಿ ಎನ್ನಲು ಸಾಧ್ಯವಿಲ್ಲ.

ಪ್ರಳಯದಲ್ಲಿ ಏನೂ ಇಲ್ಲ ಎನ್ನಬಾರದು

लये सर्वासत्त्वाङ्गीकारोऽप्रामाणिकत्वाच्च नेष्ट इत्याह -

।। स्वपक्षदोषाच्च ।।२-१-११।।

स्वपक्षे सर्वावत्त्वपक्षे दृष्टान्ताभाववरूपदोषाच्चेत्यर्थः । प्रत्यक्षागमौ न स्तः अदर्शनात् । भावत्वं तु दुष्टम् । श्रुती चान्यपरे इति भावः ।

ಪ್ರಳಯಕಾಲದಲ್ಲಿ ಯಾವುದೇ ಪದಾರ್ಥವಿಲ್ಲ ಎಂದು ಒಪ್ಪುವುದು ಅಪ್ರಾಮಾಣಿಕವಾಗಿದೆ. ಆದ್ದರಿಂದ ಯಾವುದೇ ಪದಾರ್ಥವಿಲ್ಲವೆಂದು ಒಪ್ಪುವುದು ಇಷ್ಟಾಪತ್ತಿ ಎನ್ನಲಾಗದು ಎಂಬ ವಿಷಯವನ್ನು ಸಮರ್ಥಿಸಲು 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರವು ಹೊರಟಿದೆ.

'ಸ್ವಪಕ್ಷೇ ದೋಷಾಚ್ಚ' ಎಂಬುದಾಗಿ ತಿಳಿಯಬೇಕು. ಸ್ವಪಕ್ಷೇ = ಪ್ರಳಯಕಾಲದಲ್ಲಿ ಯಾವುದೇ ಪದಾರ್ಥವಿಲ್ಲವೆಂದು ಹೇಳಿದರೆ ಈ ವಿಷಯದಲ್ಲಿ ದೃಷ್ಟಾಂತವೇ ಇರುವುದಿಲ್ಲ. ತನ್ಮೂಲಕವಾಗಿ ಅನುಮಾನಪ್ರಮಾಣವಿಲ್ಲವೆಂದಂತಾಗುತ್ತದೆ. ಆದ್ದರಿಂದಲೂ ಕೂಡ ಎಂದರ್ಥ. ಮತ್ತು ಪ್ರತ್ಯಕ್ಷ ಹಾಗೂ ಆಗಮಪ್ರಮಾಣಗಳು ನೀವು ಹೇಳುವ ವಿಷಯದಲ್ಲಿ ಆಧಾರವಾಗಿರುವುದಿಲ್ಲ. ಭಾವತ್ವವೆಂಬ ಯುಕ್ತಿಯನ್ನು ಹೇಳಿದ್ದೀರಿ. ಅದೂ ಕೂಡ ದುಷ್ಟವಾಗಿದೆ. ಎರಡು ಶ್ರುತಿಗಳನ್ನೂ ಕೂಡ ಉಲ್ಲೇಖ ಮಾಡಿದ್ದೀರಿ. ಅದು ಅನ್ಯತ್ರ ತಾತ್ಪರ್ಯವುಳ್ಳದ್ದಾಗಿದೆ. ಆದ್ದರಿಂದ ನೀವು ಪ್ರತಿಪಾದನೆ ಮಾಡಿದ ವಿಷಯವು ಅಪ್ರಾಮಾಣಿಕವೆಂದು ಸಿದ್ಧವಾಯಿತು.

'ತರ್ಕಾಪ್ರತಿಷ್ಠಾನಾತ್' ಇತ್ಯಾದಿ ಸೂತ್ರಕ್ಕೆ ವ್ಯಾಖ್ಯಾನ

तर्केण सदसतोः कारणत्वसाधनबाधने आक्षिप्य समाधत्ते -

।। तर्काप्रतिष्ठानादप्यन्यथाऽनुमेयमिति चेदेवमप्यनिर्मोक्षप्रसङ्गः ।। ।।२-१-१२।।

ತರ್ಕದಿಂದ ಭಾವಪದಾರ್ಥಗಳು ಮಾತ್ರ ಕಾರಣವಾಗುತ್ತವೆ. ಅಭಾವಪದಾರ್ಥಗಳು ಕಾರಣವಾಗುವುದಿಲ್ಲ ಎಂಬುದಾಗಿ ಇಲ್ಲಿಯ ತನಕ ಸಮರ್ಥಿಸಿದ್ದಾಯಿತು. ಇದು ಹೇಗೆ ಸರಿ?

ತರ್ಕದಿಂದ ಯಾವುದನ್ನೂ ಕೂಡ ಸಾಧಿಸಲು ಸಾಧ್ಯವಿಲ್ಲವಲ್ಲವೇ? ಈ ಆಕ್ಷೇಪಕ್ಕೆ ಉತ್ತರ ನೀಡಲು 'ತರ್ಕಾಪ್ರತಿಷ್ಠಾನಾದಪ್ಯನ್ಯಥಾಽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ' ಎಂಬ ಸೂತ್ರವು ಹೊರಟಿದೆ.

### ಸೂತ್ರದ ಪೂರ್ವಪಕ್ಷ ಭಾಗಕ್ಕೆ ವ್ಯಾಖ್ಯಾನ

**अन्यथा पूर्वसूत्रद्वयोक्ताद् अभावाकारणत्वभावकारणत्वरूपात् प्रमेयाद्वैपरीत्येनाभावकारणत्वभावकारणत्वरूपेणाप्यनुमातुं शक्यम् । तर्कस्याप्रतिष्ठानाद् अप्रतिष्ठितत्वाद् अव्यवस्थितत्वेनाप्रमाण्यात् । न हि प्रतितर्कः एवावानेवैतादृशं तर्कं प्रति विरोधितया प्रवर्तते नैतादृशमिति नियामकमस्ति । अतः सर्वानुमानेषु प्रतितर्कस्यावारणीयत्वेन तेषामप्रामाण्यात्, अतोऽनुमानेन तद्द्वयसाधनं पूर्वसूत्रद्वये न युक्तमिति चेन्न ।**

ಸೂತ್ರಾರ್ಥ ಹೀಗಿದೆ - ಅನ್ಯಥಾ = ಹಿಂದಿನ ಎರಡು ಸೂತ್ರಗಳಲ್ಲಿ ಹೇಳಲ್ಪಟ್ಟ ಅಭಾವಕ್ಕೆ ಕಾರಣತ್ವವಿಲ್ಲದಿರುವುದು ಮತ್ತು ಭಾವಕ್ಕೆ ಕಾರಣತ್ವವಿರುವುದು ಎಂಬ ಯಾವ ಪ್ರಮೇಯವಿದೆಯೋ, ಅದಕ್ಕೆ ವಿಪರೀತವಾಗಿ ಅಭಾವಕ್ಕೆ ಕಾರಣತ್ವವಿರುವುದು ಭಾವಪದಾರ್ಥಕ್ಕೆ ಕಾರಣತ್ವವಿಲ್ಲದಿರುವುದನ್ನು ಅನುಮಾನದಿಂದ ಸಮರ್ಥನೆ ಮಾಡಲು ಸಾಧ್ಯವಿದೆ. ಏಕೆಂದರೆ ತರ್ಕಾಪ್ರತಿಷ್ಠಾನಾತ್ = ತರ್ಕವು ಅಪ್ರತಿಷ್ಠಿತವಾಗಿದೆ ಎಂದರೆ ಅವ್ಯವಸ್ಥಿತವಾಗಿರುವುದರಿಂದ ಅಪ್ರಮಾಣವಾಗಿದೆ. ಪ್ರತಿತರ್ಕಗಳು ಇಷ್ಟು ಮಾತ್ರ ಇದೆ. ಇಂಥ ತರ್ಕವನ್ನು ಕುರಿತು ವಿರೋಧಿಯಾಗಿ ಪ್ರವೃತ್ತವಾಗುತ್ತದೆ. ಇಂಥ ತರ್ಕವನ್ನು ಕುರಿತು ವಿರೋಧಿಯಾಗಿ ಪ್ರವೃತ್ತವಾಗುವುದಿಲ್ಲ ಎಂಬ ವಿಷಯದಲ್ಲಿ ಯಾವುದೇ ವಿನಿಗಮಕ ಪ್ರಮಾಣವಿಲ್ಲ. ಆದ್ದರಿಂದ ಎಲ್ಲಾ ಅನುಮಾನಗಳಲ್ಲಿ ಪ್ರತಿತರ್ಕವನ್ನು ನಿವಾರಣೆ ಮಾಡಲು ಸಾಧ್ಯವೇ ಇಲ್ಲ. ಆದ್ದರಿಂದ ಅವುಗಳನ್ನು ಅಪ್ರಮಾಣವೆನ್ನಬೇಕು. ಹೀಗೆ ಅನುಮಾನದಿಂದ ಭಾವಪದಾರ್ಥಕ್ಕೆ ಕಾರಣತ್ವವನ್ನು, ಅಭಾವಪದಾರ್ಥಕ್ಕೆ ಕಾರಣತ್ವವಿಲ್ಲವೆಂಬುದನ್ನು ತರ್ಕದ ಮೂಲಕ ಸಾಧನೆ ಮಾಡಿದ್ದು ಅಯುಕ್ತವಾಗಿದೆ. ಇಷ್ಟು ಆಕ್ಷೇಪ.

ಸೂತ್ರದ ಸಿದ್ಧಾಂತ ಭಾಗಕ್ಕೆ ವ್ಯಾಖ್ಯಾನ

एवमप्येवं सति तर्कस्याप्रामाण्ये सति, यद्वा एवमपि ''यावदेव प्रमाणेन'' इत्यादिस्मृतौ प्रमाणमूलतर्कस्य प्रतिष्ठा अन्यस्य तु नेत्युक्तावपि तर्कमात्राप्रामाण्येऽनिर्मोक्षप्रसङ्गो मोक्षाभावप्रसङ्ग इत्यर्थः । त्वयापि शास्त्रफलत्वेनाङ्गीकृतमोक्षस्य विप्रतिपन्नं चार्वाकं प्रति तर्केणैव साधनीयत्वात् । विप्रतिपन्ने चार्थे स्वस्यापि केवलागमेन अनध्यवसायेन स्वमते मोक्षाभावप्रसङ्गात् । अतो यावत्प्रमितं तावन्मात्रसाधकतर्कः प्रतिष्ठितोऽन्यस्तु नेति भावः ।

ಏವಮಪಿ = ಹೀಗೆ ತರ್ಕವು ಅಪ್ರಮಾಣವಾಗುವುದಾದರೆ, ಅಥವಾ ಏವಮಪಿ = 'ಯಾವದೇವ ಪ್ರಮಾಣೇನ' ಇತ್ಯಾದಿ ಸ್ಮೃತಿಯಲ್ಲಿ ಪ್ರಮಾಣದ ಬೆಂಬಲವಿರುವ ತರ್ಕವನ್ನು ಪ್ರಮಾಣವೆನ್ನಬೇಕು. ಪ್ರಮಾಣದ ಆಧಾರವಿಲ್ಲದ ತರ್ಕವನ್ನು ಪ್ರಮಾಣವಲ್ಲವೆನ್ನಬೇಕು ಎಂದು ಹೇಳಿದ್ದರೂ ಕೂಡ ತರ್ಕವೆಂದ ಮಾತ್ರಕ್ಕೆ ಅಪ್ರಮಾಣವೆಂದು ನೀವು ಹೇಳುವುದಾದರೆ, ಅನಿರ್ಮೋಕ್ಷಪ್ರಸಂಗಃ = ಮೋಕ್ಷವೇ ಇಲ್ಲದಿರುವ ಪ್ರಸಂಗವು ಪ್ರಾಪ್ತವಾಗುತ್ತದೆ. ಇಷ್ಟು ಸೂತ್ರಾರ್ಥ.

ನೀನೂ ಕೂಡ ತರ್ಕವನ್ನು ಪ್ರಮಾಣವೆಂದು ಒಪ್ಪಲೇ ಬೇಕು. ಮೋಕ್ಷವನ್ನು ಶಾಸ್ತ್ರದ ಫಲವೆಂದು ಅಂಗೀಕರಿಸಿರುವಿ. ಆದರೆ ಚಾರ್ವಾಕನು ಈ ಮೋಕ್ಷವನ್ನು ಒಪ್ಪಲಾರ. ಅವನನ್ನು ಕುರಿತು ತರ್ಕದಿಂದಲೇ ನೀನು ಮೋಕ್ಷವನ್ನು ಸಾಧನೆ ಮಾಡಬೇಕು. ಮತ್ತು ಯಾವ ಅರ್ಥದಲ್ಲಿ ವಿಪ್ರತಿಪ್ರತ್ತಿ ಇದೆಯೋ ಅದನ್ನು ನಿನ್ನ ಮತದ ಪ್ರಕಾರ ಕೇವಲ ಆಗಮದಿಂದ ಸಾಧನೆ ಮಾಡಲು ಸಾಧ್ಯವಾಗುವುದಿಲ್ಲ. ಆಗ ನಿನ್ನ ಮತದ ಪ್ರಕಾರವೂ ಮೋಕ್ಷದ ಇಲ್ಲದ ಪರಿಸ್ಥಿತಿ ಬರುತ್ತದೆ. ಹಾಗಾಗಿ ಎಷ್ಟು ತರ್ಕಗಳು ಪ್ರಮಾಣಪ್ರಮಿತವಾಗಿವೆಯೋ, ಅಷ್ಟು ಸಾಧಕ-ತರ್ಕಗಳನ್ನು ಅಂಗೀಕರಿಸಲೇಬೇಕು. ಬೇರೆ ತರ್ಕಗಳು ಸಾಧಕತರ್ಕಗಳಲ್ಲವೆಂದು ಅಂಗೀಕರಿಸಬೇಕು. ಇಷ್ಟು ಸೂತ್ರದ ಅಭಿಪ್ರಾಯ.

ನ್ಯಾಯಸುಧೆಯ ಪ್ರಕಾರ ಸೂತ್ರಾರ್ಥ

**सुधायां तु तर्कमात्राप्रामाण्ये स्वव्याघातदोषादनिर्मोक्षप्रसङ्ग इत्यर्थ उक्तः । तर्काप्रतिष्ठानादन्यथा तर्क्यमिति वाच्ये अनुमेयमित्युक्तिः न तर्कोऽनुमानाद् भिद्यत इति सूचयितुम् ।।**

ನ್ಯಾಯಸುಧಾದಲ್ಲಿ ಸಮಸ್ತತರ್ಕಗಳು ಅಪ್ರಮಾಣವೆಂದು ಹೇಳುವುದಾದರೆ, ಸ್ವವ್ಯಾಘಾತ-ದೋಷವು ಬರುವುದರಿಂದ ಅನಿರ್ಮೋಕ್ಷಪ್ರಸಂಗ ಬರುತ್ತದೆಂಬ ಅರ್ಥವನ್ನು ಸೂತ್ರಕ್ಕೆ ಹೇಳಿದ್ದಾರೆ. ತರ್ಕವು ಒಂದೇ ರೀತಿಯಲ್ಲಿ ಇಲ್ಲದ ಕಾರಣ ವಿಪರೀತವಾಗಿಯೂ ಕೂಡ ತರ್ಕವನ್ನು ಮಾಡಬಹುದು. ಈ ವಿಷಯವನ್ನು ಸೂತ್ರದಲ್ಲಿ ತಿಳಿಸುವುದಕ್ಕಾಗಿ 'ತರ್ಕಾಪ್ರತಿಷ್ಠಾನಾದನ್ಯಥಾ ತರ್ಕ್ಯಮ್' ಎಂದೇ ಹೇಳಬಹುದಿತ್ತು. 'ಅನುಮೇಯಮ್' ಎಂದು ಏಕೆ ಹೇಳಿದರು ?

ಹೌದು, ತರ್ಕವು ಅನುಮಾನಕ್ಕಿಂತ ಭಿನ್ನವಲ್ಲ ಎಂಬ ಪ್ರಮೇಯವನ್ನು ಸೂಚಿಸಬೇಕಾಗಿದೆ. ಅದಕ್ಕಾಗಿ 'ತರ್ಕ್ಯಮ್' ಎಂಬ ಪದವನ್ನು ಪ್ರಯೋಗ ಮಾಡದೇ, 'ಅನುಮೇಯಮ್' ಎಂಬ ಪದವನ್ನು ಪ್ರಯೋಗ ಮಾಡಿದ್ದಾರೆ.

ಜಗತ್ತಿಗೆ ಜೀವನು ಕಾರಣನಾಗಲಿ ಅಥವಾ ಯಾರೂ ಕಾರಣ ಬೇಡ

**नन्वभावस्य निषेधमात्रत्वेनाकर्तृत्वेऽपि जीवस्य तदभावात् तत्कारणकमस्तु, निष्कारणकं वाऽस्तु कूलपतनवदिदं जगदिति विशेषशङ्कायामाह -**

**।। एतेन शिष्टा अपरिग्रहा अपि व्याख्याताः ।।२-१-१३।।**

ಅಭಾವವು ಕೇವಲ ನಿಷೇಧರೂಪವಾಗಿದೆ. ಆದ್ದರಿಂದ ಅದು ಜಗತ್‌ಕರ್ತೃವಾಗುವುದಿಲ್ಲ ಎಂಬುದನ್ನು ಒಪ್ಪೋಣ. ಆದರೆ ಜೀವನು ಕೇವಲ ನಿಷೇಧರೂಪ ಆಗಿರುವುದಿಲ್ಲ. ಇಂಥ ಜೀವನಿಗೆ ಜಗತ್‌ಕಾರಣತ್ವವನ್ನು ಒಪ್ಪಬಹುದಲ್ಲವೇ? ಅಥವಾ ಜಗತ್ತಿಗೆ ಯಾರೂ ಕೂಡ ಕಾರಣವೇ ಬೇಡ. ನದಿಯ ದಡವು ತನ್ನಷ್ಟಕ್ಕೇ ತಾನೇ ಒಮ್ಮೆ ಬೀಳುತ್ತದೆ. ಅದರಂತೆ ಜಗತ್ತೂ

ಕೂಡ ತನ್ನಷ್ಟಕ್ಕೆ ಉತ್ಪನ್ನವಾಗಿದೆ. ಹೀಗೂ ಹೇಳಬಹುದಲ್ಲವೇ? ಈ ಆಶಂಕೆಗೆ ಉತ್ತರಿಸಲು 'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಸೂತ್ರವು ಹೊರಟಿದೆ.

### ಸೂತ್ರದ ಪ್ರತಿಪದಾರ್ಥ

**एतेन सत्कारणत्वे दृष्टान्तभावेन जीवादिकारणत्वेन दृष्टान्ताभावेन च शिष्टाः प्राङ् निरस्तादभावकर्तृत्वादवशिष्टाः, यद्वा शिष्टा अवशिष्टतया प्रतीताः न तु पूर्वेणैवानिरस्ता इत्यर्थः, अपरिग्रहा वेदपरिग्रहशून्याः तद्विरुद्धाश्च जीवप्रधानशून्यकालस्वभावादिवादा निरस्ता इत्यर्थः ।**

'ಏತೇನ' = ಭಾವಪದಾರ್ಥಗಳೇ ಕಾರಣವಾಗುತ್ತವೆಂಬ ವಿಷಯದಲ್ಲಿ ದೃಷ್ಟಾಂತ-ವಿರುವುದರಿಂದ ಜೀವಾದಿಕಾರಣತ್ವವಿಷಯದಲ್ಲಿ ದೃಷ್ಟಾಂತ ಇಲ್ಲದಿರುವುದರಿಂದ, ಶಿಷ್ಟಾಃ = ಹಿಂದೆ ನಿರಾಕರಿಸಲ್ಪಟ್ಟ ಅಭಾವಕರ್ತೃತ್ವವಾದವನ್ನು ಬಿಟ್ಟು, ಉಳಿದ ವಾದಗಳು ಅಥವಾ, ಶಿಷ್ಟಾಃ = ಅವಶಿಷ್ಟತಯಾ ಪ್ರತೀತವಾದ ಹಿಂದಿನ ಯುಕ್ತಿಗಳಿಂದ ನಿರಾಕೃತವಾಗದೇ ಉಳಿದಿರುವ ಎಂಬುದು ಮತ್ತೊಂದು ಅರ್ಥ. ಅಪರಿಗ್ರಹಾ = ವೇದದ ಸಮ್ಮತಿಯಿಲ್ಲದ ಮತ್ತು ವೇದವಿರುದ್ಧವಾದ ಜೀವ, ಪ್ರಕೃತಿ, ಶೂನ್ಯ, ಕಾಲ, ಸ್ವಭಾವ ಇವುಗಳೇ ಜಗತ್ತಿಗೆ ಕಾರಣವಾಗುತ್ತವೆಂಬ ವಾದಗಳೆಲ್ಲವೂ ಕೂಡ, ವ್ಯಾಖ್ಯಾತಾಃ = ನಿರಾಕೃತವಾದವು ಎಂಬುದು ಸೂತ್ರಾರ್ಥ.

### 'ವ್ಯಾಖ್ಯಾತಾಃ' ಎಂಬ ಪದದ ಸ್ವಾರಸ್ಯ

अत्र शिष्टा इत्येवोक्ते ब्रह्मवादोऽपि प्राप्नोतीत्यपरिग्रहा इत्युक्तम् । तन्मात्रे तूक्ते अभावकर्तृत्ववादोऽपि गृह्येत । अतः शिष्टा इत्युक्तम् । उक्तरीत्या विशेषशङ्कासूचनाय वेति । प्रत्युक्ता इति वाच्ये व्याख्याता इति वचनं ''जीवाद्भवन्ति भूतानि'', ''अकस्मादिदमाविरासीत्'' इत्यादि पूर्ववाद्यनुकूलश्रुतीनां प्रागुक्तब्रह्मपरत्वस्मारणाय ।।४।।

ಸೂತ್ರದಲ್ಲಿ 'ಶಿಷ್ಟಾಃ' ಎಂದಷ್ಟೇ ಹೇಳಿದ್ದಲ್ಲಿ ಬ್ರಹ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ವಾದವೂ ಕೂಡ ನಿರಾಕರಣೆಗೆ ಯೋಗ್ಯವಾಗಿದೆ ಎಂದು ಅಪಾರ್ಥವಾಗುತ್ತಿತ್ತು. ಆದಕ್ಕಾಗಿ 'ಅಪರಿಗ್ರಹಾಃ' ಎಂಬುದಾಗಿ ಹೇಳಿದ್ದಾರೆ. ಕೇವಲ 'ಅಪರಿಗ್ರಹಾಃ' ಎಂದು ಹೇಳಿದರೆ ಅಭಾವಕರ್ತೃತ್ವದ ಸಂಗ್ರಹವೂ ಕೂಡ ಆಗುತ್ತಿತ್ತು. ಆದನ್ನು ಈಗಾಗಲೇ ನಿರಾಕರಣೆ ಮಾಡಿದ್ದಾಗಿದೆ. ಆದಕ್ಕಾಗಿ 'ಶಿಷ್ಟಾಃ' ಎಂಬುದಾಗಿ ಹೇಳಿದ್ದಾರೆ.

ಅಥವಾ ಈಗಾಗಲೇ ಹೇಳಿದಂತೆ ಅಧಿಕಾಶಂಕೆಯನ್ನು ಸೂಚನೆ ಮಾಡುವುದಕ್ಕಾಗಿ 'ಶಿಷ್ಟಾಃ' ಎಂಬುದಾಗಿ ಉಲ್ಲೇಖ ಮಾಡಿದ್ದಾರೆ. ಸೂತ್ರದಲ್ಲಿ 'ಪ್ರತ್ಯುಕ್ತಾಃ' ಎಂದು ಹೇಳಬೇಕಿತ್ತು. 'ವ್ಯಾಖ್ಯಾತಾಃ' ಎಂದೇಕೆ ಹೇಳಿದರು? ಎಂಬ ಪ್ರಶ್ನೆಗೆ ಉತ್ತರ ಹೀಗಿದೆ - 'ಜೀವಾದ್ಭವಂತಿ ಭೂತಾನಿ' 'ಅಕಸ್ಮಾದಿದಮಾವಿರಾಸೀತ್' ಇದೇ ಮೊದಲಾದ ಪೂರ್ವಪಕ್ಷಿಗೆ ಅನುಕೂಲವಾದ ಶ್ರುತಿಗಳೂ ಕೂಡ ಬ್ರಹ್ಮಪರವೇ ಆಗಿದೆ ಎಂಬುದನ್ನು ತಿಳಿಸಬೇಕಾಗಿದೆ. ಆದಕ್ಕಾಗಿ ನಿರಾಕೃತವಾದವು ಎಂದು ಹೇಳುವ ಬದಲು ವ್ಯಾಖ್ಯಾತವಾದವು ಎಂಬುದಾಗಿ ಸೂತ್ರಕಾರರು ಹೇಳಿದ್ದಾರೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಅಸದಧಿಕರಣವು ಮುಗಿಯಿತು ॥

## ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ಅಸದಧಿಕರಣ ಮತ್ತು

## ವಿಮರ್ಶೆ

ಅದ್ವೈತಿಗಳ ಶರೀರವಾಗಲೀ, ಸೂತ್ರವ್ಯಾಖ್ಯಾನವಾಗಲೀ ಸಾಧುವಾಗಿಲ್ಲ. ಹಿಂದಿನ ಸ್ಮೃತ್ಯಧಿಕರಣದಲ್ಲಿ ತಾವು ಪ್ರಮಾಣವೆಂದು ಒಪ್ಪಿದ ಸ್ಮೃತಿಗಳಿಂದ, ಪರಕೀಯರು ಒಪ್ಪಿದ ಸ್ಮೃತಿ ಗ್ರಂಥಗಳಿಗೆ ವಿರೋಧ ಬರುವ ಕಾರಣ ಅಪ್ರಾಮಾಣ್ಯವನ್ನು ಸಮರ್ಥಿಸಲಾಯಿತು. ಅನಂತರ ತಮ್ಮದೇ ಆದ ಸ್ಮೃತಿಗ್ರಂಥಗಳಿಗೂ ಕೂಡ ಅದೇ ರೀತಿಯ ಅಪ್ರಾಮಾಣ್ಯವು ಬರುತ್ತದಲ್ಲವೇ? ಎಂಬ ಆಶಂಕೆಯನ್ನು ಮಾಡಿ, ಅದರ ಪರಿಹಾರ ನೀಡಲು ಈ ಅಧಿಕರಣ ಹೊರಡುವುದು ಸಂಗತವಾಗುತ್ತದೆ.

ಪಂಚರಾತ್ರಾದಿಸ್ಮೃತಿಗಳೆಂಬ ಪ್ರಮಾಣಗಳ ವಿರೋಧವು ಶೈವಸ್ಮೃತಿಗಳಿಗೆ ಕಣಾದಸ್ಮೃತಿಗಳಿಗೆ ಬರುತ್ತದೆಂದು ನಾವು ಸಮರ್ಥಿಸಿದೆವು. ಹೀಗೆ ಸ್ಮೃತ್ಯಧಿಕರಣದಲ್ಲಿ ಸಮರ್ಥನೆ ಮಾಡಿದ ಮೇಲೆ ಅದೇ ರೀತಿಯಲ್ಲಿ ಪರರೂ ಕೂಡ ಆಕ್ಷೇಪ ಮಾಡುತ್ತಾರೆ. ಶೈವಸ್ಮೃತಿಗಳು ಹೇಗೆ ಅಪ್ರಮಾಣವೋ, ಅದರಂತೆ ಪಂಚರಾತ್ರಾದಿ ಸ್ಮೃತಿಗಳೂ ಕೂಡ ಅಪ್ರಮಾಣವಾಗುತ್ತವಲ್ಲವೇ? ಎಂದು. ಈ ಆಶಂಕೆಯ ಪರಿಹಾರಕ್ಕಾಗಿ ಮುಂದಿನ ಅಧಿಕರಣವು ಹೊರಡುತ್ತದೆಂದು ಹೇಳುವುದೇ ಸಂಗತವಾಗುತ್ತದೆ. ಇದನ್ನು ಬಿಟ್ಟು, ಅದ್ವೈತಿಗಳಾದ ನೀವು ಸಂಗತವಾಗದ ಬ್ರಹ್ಮನ ಉಪಾದಾನತ್ವ ಸಮರ್ಥನೆಗಾಗಿ ಮುಂದಿನ ಅಧಿಕರಣವು ಹೊರಟಿದೆ ಎಂದು ಹೇಳುವುದು ತಪ್ಪಾಗುತ್ತದೆ.

ಮತ್ತು ನಾವು ಹೇಳುವಂತೆ ನ ವಿಲಕ್ಷಣತ್ವಾಧಿಕರಣದಲ್ಲಿ ಯುಕ್ತಿವಿರೋಧವನ್ನು ಪರಿಹರಿಸಿದ್ದಾಯಿತು. ಮುಂದಿನ 'ಅಭಿಮಾನಿವ್ಯಪದೇಶಃ' ಎಂಬ ಅಧಿಕರಣದಲ್ಲಿ ದೃಢವಾದ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಯಿತು. ಅನಂತರ ಶ್ರುತಿಸಂವಾದಿಯಾದ ಯುಕ್ತಿಯ ವಿರೋಧವನ್ನು ಪರಿಹರಿಸಬೇಕು. ಹೀಗೆ 'ಯುಕ್ತ್ಯವಿರೋಧ', 'ದೃಢಯುಕ್ತ್ಯವಿರೋಧ', 'ಶ್ರುತಿಸಂವಾದಿ- ಯುಕ್ತ್ಯವಿರೋಧ' ಎಂಬುದಾಗಿ ಬೇರೆ ಬೇರೆ ಉಪಾಧಿಗಳಿರುವುದರಿಂದ ಪ್ರತ್ಯೇಕವಾದ ಅಧಿಕರಣವೆಂದು ಹೇಳಬೇಕು. ಏಕೆಂದರೆ ಪ್ರತಿಯೊಂದು ಸೂತ್ರಗಳೂ ಕೂಡ

ಸಿದ್ಧಾಂತಸ್ಥಾಪಕವಾದ ಸೂತ್ರಗಳೇ ಆಗಿವೆ. ಇದನ್ನು ಬಿಟ್ಟು ಅದ್ವೈತಿಗಳಾದ ನೀವು ಮೊದಲನೆಯ, ಎರಡನೆಯ ಮತ್ತು ಐದನೆಯ ಸೂತ್ರಗಳನ್ನು ಪೂರ್ವಪಕ್ಷಸೂತ್ರಗಳನ್ನಾಗಿ ಪರಿಗಣಿಸಿ ಉಳಿದ ಸೂತ್ರಗಳನ್ನು ಸಿದ್ಧಾಂತ ಸೂತ್ರಗಳನ್ನಾಗಿ ಹೇಳುವುದು ಅಯುಕ್ತವಾಗುತ್ತದೆ. ಮತ್ತು ಅದ್ವೈತಿಗಳಾಗಲೀ, ವಿಶಿಷ್ಟಾದ್ವೈತಿಗಳಾಗಲೀ ಬ್ರಹ್ಮ ಹಾಗೂ ಜಗತ್ತಿಗೆ ವಿಕಾರವಿಕಾರಿಭಾವವನ್ನು ಒಪ್ಪಿರುವುದೇ ಇಲ್ಲ. ಸೂತ್ರಕಾರರಿಗೂ ಕೂಡ ಇದು ಸಮ್ಮತವಲ್ಲ. ಹೀಗೆ ಯಾರಿಗೂ ಕೂಡ ಅಭಿಪ್ರೇತವಲ್ಲದ ವಿಕಾರವಿಕಾರಿಭಾವದ ಸಮರ್ಥನೆಗಾಗಿ ಈ ಅಧಿಕರಣ ಹೊರಡುವುದು ಅತ್ಯಂತ ಅಸಂಗತವಾಗಿದೆ.

ಜಗತ್ಕಾರಣತ್ವಪ್ರತಿಪಾದಕವಾದ ಶ್ರುತಿಗಳ ವಿಚಾರವನ್ನಷ್ಟೇ ಮಾಡಬೇಕೆಂಬುದು ಅದ್ವೈತಿಗಳ ನಿಲುವು. ಇದೂ ಕೂಡ ಸರಿಯಲ್ಲ. ಏಕೆಂದರೆ ಈಗ ಕಾರೀರ್ಯಾದಿವಾಕ್ಯಗಳಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡುವುದು ತಪ್ಪಾಗುವುದಿಲ್ಲ. ಯಾವರೀತಿಯಾಗಿ 'ಸಪ್ತಗತೇರ್ವಿಶೇಷಿತತ್ವಾಚ್ಚ' ಎಂಬ ಅಧಿಕರಣದಲ್ಲಿ ಜಗತ್ಕಾರಣತ್ವ ಪ್ರತಿಪಾದಕವಾದ ವಾಕ್ಯವನ್ನಷ್ಟೇ ವಿಚಾರ ಮಾಡಿಲ್ಲ. ಇಂದ್ರಿಯಗಳು ಏಳು ಎಂದು ಕೆಲವು ಶ್ರುತಿಯಲ್ಲಿದೆ. ಇನ್ನು ಕೆಲವು ಶ್ರುತಿಯಲ್ಲಿ ಐದು ಎಂದಿದೆ. ಈ ಎರಡು ಶ್ರುತಿಗಳಿಗೆ ವಿರೋಧವನ್ನು ಪರಿಹರಿಸುತ್ತಾ ಜ್ಞಾನೇಂದ್ರಿಯಗಳನ್ನು ಸೇರಿಸಿದಾಗ ಒಟ್ಟು ಹನ್ನೆರಡು ಇಂದ್ರಿಯಗಳಾಗುತ್ತವೆ ಎಂಬುದಾಗಿ ಈ ಅಧಿಕರಣದಲ್ಲಿ ಸಮರ್ಥನೆ ಮಾಡಿರುತ್ತಾರೆ. ಅದೇ ರೀತಿಯಾಗಿ ಇಲ್ಲಿಯೂ ಕೂಡ ಕಾರೀರ್ಯಾದಿ ಶ್ರುತಿಗಳ ವಿಷಯದಲ್ಲಿ ಬರುವ ಯುಕ್ತಿವಿರೋಧವನ್ನು ಪರಿಹಾರ ಮಾಡಬಹುದು.

ಒಂದುವೇಳೆ ಕಾರೀರ್ಯಾದಿವಾಕ್ಯಗಳ ಯುಕ್ತಿವಿರೋಧವನ್ನು ಪರಿಹಾರ ಮಾಡದಿದ್ದರೆ ಆ ವಾಕ್ಯಗಳು ಅಪ್ರಮಾಣವಾಗುತ್ತವೆ. ಅದೇ ಕಾರೀರ್ಯಾದಿವಾಕ್ಯಗಳ ದೃಷ್ಟಾಂತದಿಂದ ಜಗತ್ ಕಾರಣತ್ವಪ್ರತಿಪಾದಕವಾದ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಸಮರ್ಥನೆ ಮಾಡಬಹುದು. ಆದಕ್ಕಾಗಿ ವೇದದಲ್ಲಿರುವ ಯಾವುದೇ ವಾಕ್ಯಗಳಿಗೆ ವಿರೋಧವು ಬಾರದಂತೆ ಸೂತ್ರಗಳಿಂದ ಸಮರ್ಥನೆ ಮಾಡಬೇಕು.

ಶಾಂಕರಭಾಷ್ಯದಲ್ಲಿ ಯಾವುದೇ ಒಂದು ಸೂತ್ರದಲ್ಲಿ ತುಶಬ್ದವಿದ್ದರೆ ಅದರ ಹಿಂದಿನ ಸೂತ್ರವು ಪೂರ್ವಪಕ್ಷವಾಗುತ್ತದೆಂದು ಸಮರ್ಥಿಸಲಾಗಿದೆ. ಆದ್ದರಿಂದಲೇ 'ದೃಶ್ಯತೇ ತು' ಎಂಬ

ಸೂತ್ರದಲ್ಲಿ 'ತು' ಶಬ್ದವಿರುವುದರಿಂದ ಅದರ ಹಿಂದಿರುವ ನ ವಿಲಕ್ಷಣತ್ವಸೂತ್ರ ಹಾಗೂ ಅಭಿಮಾನಿ ಸೂತ್ರಗಳೆರಡು ಪೂರ್ವಪಕ್ಷವಾಗುತ್ತವೆ ಎಂಬುದು ಅದ್ವೈತಿಗಳ ಅಭಿಪ್ರಾಯ. ಇದೂ ಕೂಡ ಸರಿಯಲ್ಲ. ಹಾಗಾದರೆ 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' ಎಂಬ ಸೂತ್ರದಲ್ಲಿಯೇ 'ತು'ಶಬ್ದವಿದೆ. ಆದ್ದರಿಂದ ಇದರ ಹಿಂದಿನ ನ ವಿಲಕ್ಷಣತ್ವಸೂತ್ರವು ಮಾತ್ರ ಪೂರ್ವಪಕ್ಷವಾಗಬೇಕಾದೀತು. ಆದರೆ ಅದ್ವೈತಿಗಳು 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರವನ್ನೂ ಕೂಡ ಪೂರ್ವಪಕ್ಷ ಸೂತ್ರವನ್ನಾಗಿಯೇ ಪರಿಗಣಿಸಿದ್ದಾರೆ. ಇದರಂತೆ 'ಅಸಂಭವಸ್ತು ಸತೋಽನುಪಪತ್ತೇಃ'ಎಂಬ ಸೂತ್ರದಲ್ಲಿಯೂ 'ತು'ಶಬ್ದವಿರುವುದರಿಂದ ಇದರ ಹಿಂದಿನ ಸೂತ್ರವು ಪೂರ್ವಪಕ್ಷ ಸೂತ್ರವೆನಿಸಬೇಕಾದೀತು.

ವಾಸ್ತವಿಕವಾಗಿ ಪೂರ್ವಮೀಮಾಂಸೆಯಲ್ಲಿ ಪೂರ್ವಪಕ್ಷಸೂತ್ರಗಳು ಬಹಳ ಇವೆ. ಆದರೆ ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿಯೇ ಪೂರ್ವಪಕ್ಷ ಸೂತ್ರಗಳಿರುವುದರಿಂದ ಸಮಗ್ರ-ಶಾಸ್ತ್ರದಲ್ಲಿಯೂ ಪೂರ್ವಪಕ್ಷಸೂತ್ರಗಳಿರುತ್ತವೆಂಬುದನ್ನು ತಿಳಿಯಬಹುದು. ಈ ಶಾಸ್ತ್ರದ ಪ್ರಥಮಾಧ್ಯಾಯದಲ್ಲಿ ಅದ್ವೈತಿಗಳ ಪ್ರಕಾರ ಒಂದೇ ಒಂದು ಪೂರ್ವಪಕ್ಷಸೂತ್ರವೂ ಕೂಡ ಇರುವುದಿಲ್ಲ. ಉಳಿದ ಅಧ್ಯಾಯಗಳಲ್ಲಿಯೂ ಕೂಡ ಪೂರ್ವಪಕ್ಷಸೂತ್ರಗಳಿರುತ್ತವೆಂದು ನಿಶ್ಚಯಿಸಲು ಜೈಮಿನಿ, ಕಾಶಕೃತ್ಸ್ನ ಮೊದಲಾದ ಋಷಿಗಳ ಹೆಸರುಗಳನ್ನು ಸೂತ್ರಗಳಲ್ಲಿ ಉಲ್ಲೇಖ ಮಾಡಿರುವುದಿಲ್ಲ. ಆದ್ದರಿಂದ ಸಮಗ್ರ ಶಾಸ್ತ್ರದಲ್ಲಿ ಪೂರ್ವಪಕ್ಷಸೂತ್ರವೇ ಇಲ್ಲವೆಂದು ನಿರ್ಣಯವಾಗುತ್ತದೆ. ವ್ಯಾಕರಣಸೂತ್ರದಲ್ಲಾಗಲೀ, ಕಲ್ಪಸೂತ್ರದಲ್ಲಾಗಲೀ, ಹೇಗೆ ಪೂರ್ವಪಕ್ಷಸೂತ್ರಗಳಿರುವುದಿಲ್ಲವೋ, ಅದರಂತೆ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿಯೂ ಕೂಡ ಪೂರ್ವಪಕ್ಷ-ಸೂತ್ರಗಳಿರುವುದಿಲ್ಲ. (ಸೂತ್ರಕಾರರ ಪ್ರಾರಂಭದ ಶೈಲಿಯನ್ನು ನೋಡಿ, ಸಮಗ್ರ ಗ್ರಂಥವು ಏನು ಹೇಳುತ್ತಿದೆ ? ಎಂಬುದನ್ನು ತಿಳಿಯಬಹುದು. ಪ್ರಾರಂಭದ ಅಧ್ಯಾಯದಲ್ಲಿ ಪೂರ್ವಪಕ್ಷ-ಸೂತ್ರವಿಲ್ಲವೆಂದು ನೀವೇ ಒಪ್ಪಿರುವುದರಿಂದ ಸಮಗ್ರಶಾಸ್ತ್ರದಲ್ಲಿಯೂ ಕೂಡ ಪೂರ್ವಪಕ್ಷ-ಸೂತ್ರಗಳನ್ನು ಸೂತ್ರಕಾರರು ಬರೆದಿಲ್ಲವೆಂದು ಶೈಲಿಯಿಂದಲೇ ನಿಶ್ಚಯವಾಗುತ್ತದೆ.)

ಪೂರ್ವವಾದಿಮತಂ ಕಿಂಚಿತ್ ಕಿಂಚಿಚ್ಛಾತತ್ತ್ವವೇದಕಮ್ ।
ಉಪಾಸನಾಪರಂ ಕಿಂಚಿತ್ ಇತಿ ಕಸ್ಮಾತ್ ವಿನಾಶ್ಯತೇ ॥೧॥

ಅದ್ವೈತಿಗಳ ಪ್ರಕಾರ ಕೆಲವು ಸೂತ್ರಗಳು ಪೂರ್ವಪಕ್ಷಪ್ರಾಪಕವಾಗಿವೆ. ಇನ್ನು ನೂರಾರು ಸೂತ್ರಗಳು ಅತತ್ತ್ವಾವೇದಕವಾಗಿವೆ. ಉಳಿದ ನೂರಾರು ಸೂತ್ರಗಳು ಉಪಾಸನಾಪರವಾಗಿವೆ. ಹೀಗೆ ಸಮಗ್ರ ಬ್ರಹ್ಮಸೂತ್ರಗಳೇ ಸತ್ಯವಾದ ವಿಷಯವನ್ನು ಹೇಳಲು ಸೋತುಬಿದ್ದು ವ್ಯರ್ಥವೆನಿಸುತ್ತವೆ. ಸಮಗ್ರ ಬ್ರಹ್ಮಮೀಮಾಂಸಾಶಾಸ್ತ್ರವೇ ಅದ್ವೈತಿಗಳ ಪ್ರಕಾರ ನಾಶವಾಯಿತು.

ಒಂದುವೇಳೆ ಬ್ರಹ್ಮಸೂತ್ರದಲ್ಲಿಯೂ ಪೂರ್ವಪಕ್ಷ ಪ್ರಾಪಕವಾದ ಸೂತ್ರಗಳಿವೆ ಎಂದು ಹೇಳುವುದಾದರೆ, ಸಮಗ್ರ ಒಂದು ಪಾದವು ಕೇವಲ ಪೂರ್ವಪಕ್ಷವನ್ನೇ ಮಾಡುತ್ತಿದೆ. ಮತ್ತೊಂದು ಪಾದವು ಸಿದ್ಧಾಂತ ಮಾಡುತ್ತಿದೆ ಎಂದಾದರೆ, ಸಮಗ್ರ ಅಧ್ಯಾಯವು ಪೂರ್ವಪಕ್ಷ ಪ್ರಾಪಕವಾಗಿದೆ. ಮತ್ತೊಂದು ಅಧ್ಯಾಯವು ಸಿದ್ಧಾಂತ ಸ್ಥಾಪಕವಾಗಿದೆ ಎಂದು ಒಪ್ಪಬೇಕಾದೀತು.

ಜಗತ್ತಿಗೂ ಬ್ರಹ್ಮನಿಗೂ ವೈಲಕ್ಷಣ್ಯವಿರುವುದರಿಂದ ಉಪಾದಾನ ಉಪಾದೇಯಭಾವವನ್ನು ಹೇಳಲು ಸಾಧ್ಯವಿಲ್ಲವೆಂಬ ಆಶಂಕೆಯ ಪರಿಹಾರಕ್ಕಾಗಿ ವಿಲಕ್ಷತ್ವಾಧಿಕರಣ ಹೊರಟಿದೆ ಎಂದು ಹೇಳುವುದೂ ಕೂಡ ಸರಿಯಲ್ಲ. ಈಗಾಗಲೇ ವೈಲಕ್ಷಣ್ಯವಿರುವುದರಿಂದ ಉಪಾದಾನತ್ವವು ಬರುವುದಿಲ್ಲವೆಂಬ ಆಶಂಕೆಯನ್ನು ಅದೃಶ್ಯತ್ವಾಧಿಕರಣದಲ್ಲಿ ನೀವು ಪರಿಹರಿಸಿದ್ದೀರಿ. ಪುನಃ ಈ ಅಧಿಕರಣದಲ್ಲಿಯೂ ಅದನ್ನೇ ಸಮರ್ಥನೆ ಮಾಡಲು ಹೊರಟರೆ, ಪುನರುಕ್ತಿ ದೋಷವು ಬರುತ್ತದೆ.

ಮತ್ತು ಕೇವಲ ಯಾವುದು ಉಪಾದಾನಕಾರಣವಾಗಿರುತ್ತದೋ, ಅದಕ್ಕೆ ಉಪಾದೇಯದಿಂದ ಸಾಲಕ್ಷಣ್ಯವಿರಬೇಕೆಂಬ ನಿಯಮವಿದೆ. ಆದರೆ ನಿಮ್ಮ ಮತದಲ್ಲಿ ಜಗತ್ತಿಗೆ ಬ್ರಹ್ಮನು ಕೇವಲ ಉಪಾದಾನಕಾರಣನಾಗಿಲ್ಲ. ನಿಮಿತ್ತಕಾರಣನೂ ಕೂಡ ಆಗಿದ್ದಾನೆ. ತಂತುವಿಗೆ ಊರ್ಣನಾಭಿಯು ಕೇವಲ ಉಪಾದಾನಕಾರಣವಷ್ಟೇ ಅಲ್ಲದೇ ನಿಮಿತ್ತಕಾರಣವೂ ಆಗಿರುವಂತೆ. ಆದ್ದರಿಂದ ಜಗತ್ತಿಗಿಂತ ಬ್ರಹ್ಮನು ವಿಲಕ್ಷಣನಾಗಿದ್ದರೂ ನಿಮ್ಮ ಸಿದ್ಧಾಂತಗಳಿಗೆ ಅಭಿಪ್ರೇತವಾದ ನಿಮಿತ್ತತ್ವೇ ಸತಿ ಉಪಾದಾನತ್ವವು ಯುಕ್ತವಾಗುತ್ತದೆ. ಆದ್ದರಿಂದ ಪೂರ್ವಪಕ್ಷವು ಸಿದ್ಧಾಂತಿಗಳಿಗೆ ವಿರುದ್ಧವೇ ಆಗಿರುವುದಿಲ್ಲ.

ನಿಮ್ಮ ಮತದಲ್ಲಿ ಜಗತ್ತಿಗೆ ಅವಿದ್ಯೆಯು ಉಪಾದಾನಕಾರಣವಾಗಿದೆ. ಅಥವಾ ಅವಿದ್ಯೆಯಿಂದ ವಿಶಿಷ್ಟನಾದ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ. ಇವೆರಡರಲ್ಲಿ ಯಾವುದೊಂದನ್ನೂ

ಕಾರಣವೆಂದು ಹೇಳಿದರೂ ಜಗತ್ತಿನಿಂದ ಸಾಲಕ್ಷಣ್ಯವೇ ಬರುತ್ತದೆ. ಉಪಾದಾನಕಾರಣವಾದ ಅವಿದ್ಯೆಯು ಜಗತ್ತಿನಂತೆ ಜಡವಾಗಿದೆ ಮತ್ತು ಅಸಿದ್ಧವಾಗಿದೆ. ಅವಿದ್ಯಾವಿಶಿಷ್ಟನಾದ ಬ್ರಹ್ಮನೂ ಕೂಡ ಜಗತ್ತಿನಂತೆ ಅಸಿದ್ಧನಾಗಿದ್ದಾನೆ. ಶುದ್ಧನಾದ ಬ್ರಹ್ಮನು ಜಗತ್ತಿಗಿಂತ ವಿಲಕ್ಷಣನಾಗಿದ್ದರೂ ಅವನು ಉಪಾದಾನಕಾರಣನೇ ಅಲ್ಲ ಹೊರತು, ಜಗತ್ತಿನ ಭ್ರಮೆಗೆ ಕೇವಲ ಅಧಿಷ್ಠಾನನಾಗಿದ್ದಾನೆ. ಇದನ್ನೇ ಉಪಾದಾನಕಾರಣವೆಂದು ಹೇಳಲಾಗಿದೆ. ಆತ್ಮನಲ್ಲಿ ಅನಾತ್ಮಭ್ರಮವನ್ನು ಪೂರ್ವಪಕ್ಷಕಾರರಾದ ಸಾಂಖ್ಯಾದಿಗಳೂ ಕೂಡ ಒಪ್ಪಿರುತ್ತಾರೆ. ಹೀಗಿರುವಾಗ ವೈಲಕ್ಷಣ್ಯವನ್ನು ವಿವಕ್ಷಿಸಿ, ಉಪಾದಾನತ್ವವೇ ಕೂಡುವುದಿಲ್ಲವೆಂಬ ಪೂರ್ವಪಕ್ಷವು ಹೇಗೆ ತಾನೇ ಉದಯವಾಗುತ್ತದೆ ?

ಅದ್ವೈತಿಗಳ ಪ್ರಕಾರ ಸೂತ್ರವ್ಯಾಖ್ಯಾನವೂ ಕೂಡ ಅಸಾಧುವಾಗಿದೆ. ನ ವಿಲಕ್ಷಣತ್ವಸೂತ್ರದಲ್ಲಿ 'ತಥಾತ್ವ' ಎಂಬ ಶಬ್ದದಿಂದ ಬ್ರಹ್ಮಕಾರಣಕತ್ವವನ್ನು ವಿವಕ್ಷಿಸುತ್ತಾರೆ. ಆದರೆ ಹಿಂದೆ ಪ್ರಸಕ್ತವಾದ ಅವೈದಿಕಸ್ಮೃತಿಸಾಲಕ್ಷಣ್ಯವನ್ನೇ ತಥಾತ್ವಶಬ್ದದಿಂದ ಪರಾಮರ್ಶಿಸಿ ನಿಷೇಧ ಮಾಡಲು ಬರುವಾಗ ಹಿಂದೆ ಪ್ರಸಕ್ತವಾಗದ ಬ್ರಹ್ಮಕಾರಣಕತ್ವವನ್ನು ಪರಾಮರ್ಶಿಸಿ ಅದನ್ನು ಅಲ್ಲಗಳೆಯುವುದು ತಪ್ಪಾಗುತ್ತದೆ.

ಮತ್ತು 'ವಿಲಕ್ಷಣತ್ವಾತ್' ಎಂಬಲ್ಲಿ 'ಸ್ಮೃತ್ಯನವಕಾಶ' ಎಂಬ ಸೂತ್ರದಿಂದ ಪ್ರಕೃತವಾದ ಸ್ಮೃತ್ಯಾದಿಗಳ ವೈಲಕ್ಷಣ್ಯವನ್ನೇ ವಿವಕ್ಷಿಸಲು ಬರುವಾಗ ಅಪ್ರಕೃತವಾದ ಬ್ರಹ್ಮನನ್ನು ವಿವಕ್ಷಿಸುವುದು ತಪ್ಪಾಗುತ್ತದೆ.

ಮತ್ತು 'ಅಸ್ಯ' ಎಂಬ ಪದದಿಂದ ಹಿಂದೆ 'ನಾನ್ಯಸ್ಮೃತಿ' ಎಂಬುದರಿಂದ ಪ್ರಸಕ್ತವಾದ ಸ್ವಪಕ್ಷಪ್ರಮಾಣವನ್ನೇ ವಿವಕ್ಷಿಸಬೇಕು. ಆದರೆ ನೀವು ಅಪ್ರಸ್ತುತವಾದ ಜಗತ್ತನ್ನು ವಿವಕ್ಷಿಸುತ್ತಿದ್ದೀರಿ. ಇದೂ ಕೂಡ ಅಸಂಗತ.

ಮತ್ತು ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ ಎಂದು ಪ್ರತ್ಯಕ್ಷದಿಂದಲೇ ತಿಳಿಯುತ್ತಿರುವಾಗ ಈ ವಿಷಯದಲ್ಲಿ ಶಬ್ದಪ್ರಮಾಣವನ್ನು ಉಲ್ಲೇಖಿಸುವುದು ಅಯುಕ್ತವಾಗುತ್ತದೆ. ಮತ್ತು 'ವಿಜ್ಞಾನಮ್' ಇತ್ಯಾದಿ ಶ್ರುತಿಯು 'ಜಗತ್ತು ಬ್ರಹ್ಮನಿಗಿಂತ ವಿಲಕ್ಷಣವಾಗಿದೆ' ಎಂಬ ವಿಷಯದಲ್ಲಿ ಪ್ರಮಾಣವಾಗುವುದಾದರೆ, ಉಪಾದಾನತ್ವವಿಷಯದಲ್ಲಿ ಏಕೆ ಪ್ರಮಾಣವಾಗಬಾರದು ?

'ಸಚ್ಚತ್ಯಚ್ಚಾಭವತ್' ಇತ್ಯಾದಿ ಪೂರ್ವವಾಕ್ಯದಿಂದ ಸ್ಪಷ್ಟವಾಗಿ ಉಪಾದಾನತ್ವವೇ ಪ್ರತೀತವಾಗುತ್ತಿದೆ.

ಮತ್ತು ವಿಜ್ಞಾನಂಚಾವಿಜ್ಞಾನಂಚ ಇತ್ಯಾದಿ ಶ್ರುತಿಯಲ್ಲಿರುವ ವಿಜ್ಞಾನಶಬ್ದವು ಕಾರ್ಯಪರವಾಗಿದೆ, ಅವಿಜ್ಞಾನಶಬ್ದವು ಕಾರಣಪರವಾಗಿದೆ ಎಂದು ಹೇಳುವುದೂ ಕೂಡ ಅಯುಕ್ತ. ಹೊರತಾಗಿ, ನಿಮ್ಮ ಪಕ್ಷದಲ್ಲಿ ಯಾವರೀತಿಯಾಗಿ ಸತ್, ತ್ಯತ್ ಮೊದಲಾದ ಶಬ್ದಗಳು ಕೇವಲ ಕಾರ್ಯಪರವೇ ಆಗಿವೆಯೋ, ಅದೇ ರೀತಿಯಾಗಿ ವಿಜ್ಞಾನ ಹಾಗೂ ಅವಿಜ್ಞಾನಗಳೆಲ್ಲವೂ ಕೇವಲ ಕಾರ್ಯಪರವೇ ಆಗಬೇಕು. ವಿಜ್ಞಾನಂ ಚ ಅವಿಜ್ಞಾನಂಚ ಎಂಬ ಶ್ರುತಿಯಲ್ಲಿ ಎರಡು ಬಾರಿ ಚಶಬ್ದವಿರುವುದರಿಂದ ಅಭವತ್ ಎಂಬ ಕ್ರಿಯೆಯಲ್ಲಿ ಪ್ರತ್ಯೇಕವಾಗಿ ಅನ್ವಯವನ್ನು ಹೊಂದುತ್ತವೆ. 'ವಿಜ್ಞಾನಂ ಚ ಅಭವತ್', 'ಅವಿಜ್ಞಾನಂ ಚ ಅಭವತ್' ಎಂದು ಆದ್ದರಿಂದ ವಿಜ್ಞಾನ ಹಾಗೂ ಅವಿಜ್ಞಾನಶಬ್ದಗಳೆರಡು ಕಾರ್ಯಪರವಾಗಿದೆಯೆಂದು ತಿಳಿಯುತ್ತದೆ.

ಹಿಂದೆ ಪೂರ್ವಪಕ್ಷ ಮಾಡುವಾಗ ಜಗತ್ತಿನಿಂದ ಬ್ರಹ್ಮನು ವಿಲಕ್ಷಣನಾಗಿರುವುದರಿಂದ ಉಪಾದಾನಕಾರಣನಾಗುವುದಿಲ್ಲವೆಂದು ಹೇಳಲಾಗಿತ್ತು. ಇದು ಅಯುಕ್ತ. ಯಥಾಕಥಂಚಿತ್ ವೈಲಕ್ಷಣ್ಯವು ಹೇತುವೋ? ಅಥವಾ ಚೇತನಾಚೇತನತ್ವಗಳಿಂದ ವೈಲಕ್ಷಣ್ಯವು ಹೇತುವಾಗಿದೆಯೋ? ಪ್ರಥಮ ಪಕ್ಷದಲ್ಲಿ 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ' ಎಂಬ ಎರಡನೆಯ ಸೂತ್ರವು ವ್ಯರ್ಥವಾಗುತ್ತದೆ. ಏಕೆಂದರೆ ಬ್ರಹ್ಮನು ಹೇಗೆ ಚೇತನನಾಗಿದ್ದಾನೋ, ಅದರಂತೆ ಮೃದಾದಿ ಜಡಪದಾರ್ಥಗಳೂ ಕೂಡ ಚೇತನವೇ ಆಗಿವೆ. ಏಕೆಂದರೆ 'ಮೃದಬ್ರವೀತ್' ಎಂಬ ಶ್ರುತಿಯು ಮೃದಾದಿ ಜಡಪದಾರ್ಥಗಳಲ್ಲಿಯೂ ವಚನಕ್ರಿಯೆಯನ್ನು ಹೇಳುತ್ತಿವೆ. ಆದ್ದರಿಂದ ಮೃದಾದಿಶಬ್ದಗಳು ಜಡಪರವಾಗುವುದಿಲ್ಲ ಎಂದು ಹೇಳಿದ್ದಿರಿ. ಆದರೆ ಹೀಗೆ ನೀವು ಹೇಳಬೇಕಾಗಿಲ್ಲ. ಏಕೆಂದರೆ ಯಥಾ ಕಥಂಚಿತ್ ವೈಲಕ್ಷಣ್ಯವಿದ್ದರೂ ಉಪಾದಾನತ್ವವು ನಾಶವಾಗುತ್ತದೆ ಎಂದು ಹೀಗೆ ಹೇಳುತ್ತಿದ್ದೀರಿ. ಆದ್ದರಿಂದ ಮೃದಾದಿಶಬ್ದಗಳು ಅಭಿಮಾನಿದೇವತಾಪರ ಆಗುವುದೇ ಬೇಡ. ಪ್ರಸಿದ್ಧವಾದ ಮೃದಾದಿಗಳನ್ನೇ ಹೇಳಲಿ. ಅನ್ಯಥಾನುಪಪತ್ಯಾ ಚೇತನವೂ ಆಗಲಿ. ಬ್ರಹ್ಮನಂತೆ ಮೃದಾದಿಗಳೂ ಕೂಡ ಚೇತನವೇ ಆಗುತ್ತವೆ. ಆದರೂ ಕೂಡ ಬ್ರಹ್ಮನು ಮೃದಾದಿಗಳಿಗೆ ಉಪಾದಾನಕಾರಣನಾಗುವುದಿಲ್ಲ. ಏಕೆಂದರೆ ಜಡತ್ವ ಚೇತನತ್ವ ಎಂಬ ವಿರುದ್ಧಧರ್ಮಗಳಿರುವ ಪ್ರಯುಕ್ತ. ಉಪಾದಾನ-

ಉಪಾದೇಯಭಾವವು ಕೂಡದಿರಬಹುದು. ಆದರೆ ಶುದ್ಧ ಹಾಗೂ ಅಶುದ್ಧವೆಂಬ ಕಾರಣದಿಂದ ವೈಲಕ್ಷಣ್ಯವು ಬರುತ್ತದೆ. ಬ್ರಹ್ಮನು ಸಿದ್ಧನಾಗಿದ್ದಾನೆ. ಮೃದಾದಿಗಳು ಅಶುದ್ಧವಾಗಿವೆ. ಆದ್ದರಿಂದ ಇವೆರಡಕ್ಕೆ ಉಪಾದಾನ-ಉಪಾದೇಯಭಾವವು ಯುಕ್ತವಾಗುವುದಿಲ್ಲ. ಇಂತಹ ವೈಲಕ್ಷಣ್ಯವು ಪ್ರತ್ಯಕ್ಷಾದಿಗಳಿಂದಲೇ ಸಿದ್ಧವಾಗಿದೆ. ಹೀಗೆ ಸುಲಭವಾಗಿಯೇ ವೈಲಕ್ಷಣ್ಯವನ್ನು ಉಪಪಾದನೆ ಮಾಡಲು ಬರುತ್ತಿರುವಾಗ ಮೃದಾದಿಶಬ್ದಗಳಿಗೆ ಅಭಿಮಾನಿದೇವತಾಪರತ್ವವನ್ನು ಸಮರ್ಥನೆ ಮಾಡಿ, ಪೂರ್ವಪಕ್ಷವನ್ನು ದೃಢಪಡಿಸಲು ಎರಡನೆಯ ಸೂತ್ರ ಹೊರಟಿದ್ದು ವ್ಯರ್ಥವೇ ಆಗಿದೆ.

**ವಿವರಣೆ** - 'ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್' - ಉಪನಿಷತ್ತಿನಲ್ಲಿ ಭೋಕ್ತೃ ಹಾಗೂ ಭೋಗ್ಯ ಎಂಬ ವಿಭಾಗವನ್ನು ಮಾಡಲಾಗಿದೆ. ಎಲ್ಲವೂ ಚೇತನ ಪದಾರ್ಥವೇ ಆದರೆ ಭೋಗ್ಯಪದಾರ್ಥವೇ ಇಲ್ಲದಿರುವ ಪ್ರಸಂಗ ಬರುತ್ತದೆ. ಆದ್ದರಿಂದ ಪೃಥಿವ್ಯಾದಿ ಜಡಪದಾರ್ಥಗಳು ಚೇತನವಾಗಲು ಸಾಧ್ಯವಿಲ್ಲ. 'ಮೃದಬ್ರವೀತ್' ಇತ್ಯಾದಿ ಕೆಲವು ವೇದವಾಕ್ಯಗಳು ಮಣ್ಣು, ನೀರು ಮೊದಲಾದವುಗಳಲ್ಲಿಯೂ ಚೇತನಧರ್ಮವಾದ ವಕ್ತೃತ್ವವನ್ನು ಹೇಳುವಂತೆ ಆಪಾತತಃ ತೋರಿದರೂ ಅದೇ ಅರ್ಥವನ್ನು ಸ್ವೀಕರಿಸಬಾರದು. ಹೊರತಾಗಿ, ಅಭಿಮಾನಿಚೇತನರನ್ನು ವಿವಕ್ಷಿಸಬೇಕು. ಹೀಗೆ ಜಗತ್ತು ಜಡಭೂತವಾಗಿದೆ, ಬ್ರಹ್ಮನು ಚೇತನನಾಗಿದ್ದಾನೆ. ಜಡಭೂತವಾದ ಜಗತ್ತಿಗಿಂತಲೂ ಬ್ರಹ್ಮನಲ್ಲಿ ವೈಲಕ್ಷಣ್ಯವಿರುವುದರಿಂದ ಉಪಾದಾನ ಉಪಾದೇಯಭಾಗವು ಯುಕ್ತವಾಗುವುದಿಲ್ಲ. ಇದೂ ಕೂಡ ಪೂರ್ವಪಕ್ಷ ಸೂತ್ರ.

ಅದ್ವೈತಿಗಳ ಎರಡನೆಯ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ. ಏಕೆಂದರೆ 'ಮೃದಬ್ರವೀತ್' ಎಂದು ಶ್ರುತಿಯು ಹೇಳುತ್ತಿರುವುದರಿಂದ ಮಣ್ಣು ಚೇತನವಾಗಿದೆ, ಬ್ರಹ್ಮನೂ ಕೂಡ ಚೇತನನಾಗಿದ್ದಾನೆಂದು ತಿಳಿಯುತ್ತದೆ. ಹೀಗಿರುವಾಗ ಬ್ರಹ್ಮನು ಜಗತ್ತಿಗೆ ಉಪಾದಾನನಾಗಬಹುದಲ್ಲವೇ? ಎಂಬ ಪ್ರಶ್ನೆಯು ಪ್ರಾಪ್ತವಾದಾಗ ಇದರ ನಿರಾಕರಣೆಗಾಗಿ ಸೂತ್ರವು ಮಣ್ಣು ಜಡಪದಾರ್ಥವಾಗಿದೆ ಎಂದು ಸಮರ್ಥನೆ ಮಾಡಬೇಕು. ಇದನ್ನು ಬಿಟ್ಟು ಪೂರ್ವಪಕ್ಷಿ ಹೇಳಿದಂತೆ ಮಣ್ಣು ಚೇತನವೆಂದು ಒಪ್ಪಿಕೊಂಡರು ಅದು ಅಶುದ್ಧ , ಬ್ರಹ್ಮನು ಶುದ್ಧರೂಪ ಎಂದು ಸಮರ್ಥನೆ ಮಾಡುತ್ತಿದ್ದೀರಿ. ಹೀಗೆ ಸಮರ್ಥನೆ ಮಾಡಿದ ಮೇಲೆ ಉಪಾದಾನ, ಉಪಾದೇಯಭಾವವು ಯುಕ್ತವೇ ಆಗುವುದಿಲ್ಲ. ಹೀಗಿರುವಾಗ ಮಣ್ಣು, ಚೇತನವೆನ್ನುವ ಪೂರ್ವಪಕ್ಷದ ನಿರಾಕರಣೆ ಅನಾವಶ್ಯಕವಾಗುತ್ತದೆ.

ಬ್ರಹ್ಮನು ಮೃದಾದಿಗಳಿಗೆ ಉಪಾದಾನನಲ್ಲ ಎಂಬುದು ಪೂರ್ವಪಕ್ಷಿಗಳ ಮುಖ್ಯಉದ್ದೇಶ. ಇದು ಬ್ರಹ್ಮನು ಶುದ್ಧನಾಗಿದ್ದಾನೆ, ಮೃದಾದಿಗಳು ಅಶುದ್ಧವಾಗಿವೆ ಎಂದು ಹೇಳುವುದರಿಂದಲೂ ಯುಕ್ತವಾಗುತ್ತದೆ. ಇದಕ್ಕೋಸ್ಕರ ಮೃದಾದಿಗಳಿಗೆ ಅಭಿಮಾನಿದೇವತಾಪರತ್ವವನ್ನು ಸಮರ್ಥನೆ ಮಾಡುವ ಅವಶ್ಯಕತೆಯಿರುವುದಿಲ್ಲ.

ಇನ್ನು ಚೇತನಾಚೇತನತ್ವಗಳಿಂದ ವೈಲಕ್ಷಣ್ಯವೇ ಹೇತುವೆಂಬ ಎರಡನೆಯ ಪಕ್ಷವೂ ಕೂಡ ಅಯುಕ್ತವಾಗಿದೆ. ಹೀಗೆ ಹೇಳಿದಾಗ 'ದೃಶ್ಯತೇ ತು' ಎಂಬ ಮೂರನೆಯ ಸೂತ್ರವು ಅಯುಕ್ತವಾಗುತ್ತದೆ.ವೈಲಕ್ಷಣ್ಯವಿದ್ದರೂ ಕೂಡ ಗೋಮಯ ಮತ್ತು ವೃಶ್ಚಿಕಗಳಿಗೆ ಉಪಾದಾನ ಉಪಾದೇಯಭಾವವಿರುವುದು ಕಂಡಿದೆ ಎಂದು ಸಿದ್ಧಾಂತವನ್ನು ಪ್ರಾರಂಭ ಮಾಡಿದ್ದೀರಿ. ಆದರೆ ಗೋಮಯವು ವೃಶ್ಚಿಕದ ಶರೀರಕ್ಕೆ ಉಪಾದಾನಕಾರಣವಾಗಿದೆ ಹೊರತು, ವೃಶ್ಚಿಕವೆಂಬ ಚೇತನಕ್ಕೆ ಉಪಾದಾನಕಾರಣವಾಗಿಲ್ಲ. ಹೀಗಿರುವಾಗ ಗೋಮಯ-ವೃಶ್ಚಿಕದ ದೃಷ್ಟಾಂತದ ಚೇತನಾಚೇತನತ್ವಗಳಿಂದ ಬರುವ ವೈಲಕ್ಷಣ್ಯವೇ ಹೇತುವೆಂದು ಹೇಳಲು ಸಾಧ್ಯವಿಲ್ಲ. ಚೇತನವು ಅಚೇತನಕ್ಕೆ ಉಪಾದಾನಕಾರಣವಾಗಿದ್ದು, ಬೇರೆ ಎಲ್ಲಿಯೂ ಕೂಡ ಕಂಡಿರುವುದಿಲ್ಲ. ಆದ್ದರಿಂದ 'ದೃಶ್ಯತೇ ತು' ಎಂಬ ಸೂತ್ರವು ಸಮರ್ಥನೆ ಮಾಡುವ ವಿಷಯವು ಅಯುಕ್ತವಾಗಿದೆ.

ಮತ್ತು 'ಅಸ್ಯ ತಥಾತ್ವಂ ಚ ಶಬ್ದಾತ್' ಎಂಬ ಎರಡನೆಯ ಸೂತ್ರದಲ್ಲಿ ಜಗತ್ತಿಗೂ ಬ್ರಹ್ಮನಿಗೂ ವೈಲಕ್ಷಣ್ಯವಿದೆಯೆನ್ನಲು ಶ್ರುತಿಯನ್ನೇ ಪ್ರಮಾಣವನ್ನಾಗಿ ಹೇಳಿದಿರಿ. ಆದರೆ 'ಮೃದಬ್ರವೀತ್' ಇತ್ಯಾದಿ ಶ್ರುತಿಗಳಲ್ಲಿ ಮೃದಾದಿ ಜಡಪದಾರ್ಥಗಳಿಗೂ ವಕ್ತೃತ್ವ ಜ್ಞಾತೃತ್ವ ಮೊದಲಾದವುಗಳನ್ನು ಹೇಳಿದ್ದಾರೆ. ಆದ್ದರಿಂದ ಬ್ರಹ್ಮನಿಗೂ ಉಪಾದೇಯವಾದ ಮೃದಾದಿಗಳಿಗೂ ವೈಲಕ್ಷಣ್ಯವು ಬಾರದೇ ಸಾಲಕ್ಷಣ್ಯವೇ ಬರುತ್ತದಲ್ಲವೇ? ಎಂಬ ಆಶಂಕೆಯೇ ತಪ್ಪು. ಇದು ಅಯುಕ್ತ. 'ಮೃದಬ್ರವೀತ್' ಇತ್ಯಾದಿ ಸೂತ್ರಗಳಲ್ಲಿ ವಕ್ತೃತ್ವ ಜ್ಞಾತೃತ್ವವನ್ನು ಜಡಪದಾರ್ಥಕ್ಕೆ ಹೇಳಿದ್ದರೂ ಕೂಡ ವಿಜ್ಞಾನತ್ವ, ಅವಿಜ್ಞಾನತ್ವ ಎಂಬ ಧರ್ಮದಿಂದಾಗಿ ವೈಲಕ್ಷಣ್ಯವು ಬಂದೇ ಬರುತ್ತದೆ. ಪ್ರಕೃತ ವಿಜ್ಞಾನಂಚ ಅವಿಜ್ಞಾನಂಚ ಎಂಬ ಶ್ರುತಿಯೇ ಪ್ರಸಕ್ತವಾಗಿದೆ. ಮೃದಾದಿಗಳು ವಿಜ್ಞಾನಾತ್ಮಕವಂತೂ ಆಗಿರುವುದಿಲ್ಲ. ಆದ್ದರಿಂದ ಪ್ರಾಣಾತ್ಮಕತ್ವವು ಮೃದಾದಿಗಳಲ್ಲಿ ಇದೆಯೆಂದು ಹೇಳಲಾಗದು. ವಿಜ್ಞಾನಾತ್ಮಕತ್ವವು ಕೂಡುವುದಿಲ್ಲ. ಆದ್ದರಿಂದ 'ತಥಾತ್ವಂ ಚ ಶಬ್ದಾತ್' ಎಂಬ ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ವಿಜ್ಞಾನ ಅವಿಜ್ಞಾನತ್ವ ಇತ್ಯಾದಿ ರೂಪವಾದ ವೈಲಕ್ಷಣ್ಯವಿದೆ

ಎಂಬ ಆಶಂಕೆಯು ಪರಿಹಾರವೇ ಆಗುವುದಿಲ್ಲ. ಮತ್ತು ಮೃದಾದಿ ಜಡಪದಾರ್ಥಗಳಲ್ಲಿ ವಕ್ತೃತ್ವವು ಬರುವುದರಿಂದ ಮಣ್ಣು ಚೇತನವಾಗುತ್ತದೆ ಎಂಬ ಆಶಂಕೆಯೇ ಬರುವುದಿಲ್ಲ. ಪ್ರತ್ಯಕ್ಷವಿರುದ್ಧವಾದ ಆಶಂಕೆಯನ್ನು ಮಾಡಿ, ಅದರ ಪರಿಹಾರಕ್ಕಾಗಿ ಎರಡನೆಯ ಸೂತ್ರ ಹೊರಟಿದೆ ಎಂದು ಹೇಳುವುದು ಅಯುಕ್ತವಾಗಿದೆ.

'ದೃಶ್ಯತೇ ಚ' ಎಂಬ ಮೂರನೆಯ ಸೂತ್ರವು ಮತ್ತೊಂದು ಕಾರಣದಿಂದಲೂ ಅಯುಕ್ತವಾಗಿದೆ. ಗೋಮಯವು ತನ್ನ ಸ್ವರೂಪವನ್ನು ಕಳಚಿಕೊಂಡು ವೃಶ್ಚಿಕವಾಗುತ್ತದೆ. ಆದರೆ ಬ್ರಹ್ಮನು ತನ್ನ ಸ್ವರೂಪವನ್ನು ಕಳೆದುಕೊಂಡು ಜಗತ್ತಾಗಿ ಪರಿಣಾಮ ಹೊಂದುತ್ತಾನೆಂದು ನೀವೇ ಒಪ್ಪುವುದಿಲ್ಲ. ಆದ್ದರಿಂದ ಗೋಮಯದ ದೃಷ್ಟಾಂತವನ್ನು ಹೇಳಲು ಮೂರನೆಯ ಸೂತ್ರ ಹೊರಟಿದ್ದು ಅಯುಕ್ತವಾಗಿದೆ.

'ದೃಶ್ಯತೇ ತು' ಕಾರ್ಯಕಾರಣಗಳಿಗೆ ವೈಲಕ್ಷಣ್ಯವು ಲೋಕದಲ್ಲಿ ಕಂಡಿರುವುದರಿಂದ, ಚೇತನನಿಶ್ರಿತವಾದ ಶರೀರದಿಂದ ಅಚೇತನವಾದ ನಚಕೇಶಾದಿಗಳು ಹೇಗೆ ಹುಟ್ಟುತ್ತವೋ, ಅಚೇತನಾದಿ ಗೋಮಯಗಳಿಂದ ಚೇತನನಿಶ್ರಿತವಾದ ಚೇಳು ಮೊದಲಾದವುಗಳು ಹೇಗೆ ಹುಟ್ಟುತ್ತವೋ, ಅದರಂತೆ ಚೇತನನಾದ ಮತ್ತು ಶುದ್ಧನೂ ಆದ ಬ್ರಹ್ಮನಿಂದ ಅಚೇತನವಾದ ಮತ್ತು ಅಶುದ್ಧವಾದ ಜಗತ್ತೂ ಕೂಡ ಹುಟ್ಟಬಹುದು.

ಮೂರನೆಯ ಈ ಸೂತ್ರದಲ್ಲಿ ಸಿದ್ಧಾಂತವನ್ನು ಅದ್ವೈತಿಗಳು ಪ್ರಾರಂಭಿಸಿದ್ದಾರೆ. ಇದೂ ಕೂಡ ಸರಿಯಲ್ಲ. ಗೋಮಯದಿಂದ ಚೇಳು ಹುಟ್ಟುವುದೇ ಅಲ್ಲ. ಪಾರ್ಥಿವವಾದ ಗೋಮಯದಿಂದ ಪಾರ್ಥಿವವಾದ ಚೇಳಿನ ಶರೀರವಷ್ಟೇ ಹುಟ್ಟುತ್ತದೆ. ಚೇತನ ಅಚೇತನಗಳಿಗೆ ಉಪಾದಾನ ಉಪಾದೇಯಭಾವವು ಕಂಡಿರುವುದೇ ಇಲ್ಲ.

'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ನಾಲ್ಕನೆಯ ಸೂತ್ರದ ವ್ಯಾಖ್ಯಾನವು ಅಯುಕ್ತವಾಗಿದೆ. ನಾವು ವ್ಯಾಖ್ಯಾನ ಮಾಡಿದಾಗ ಅನೇಕ ಪದಗಳ ಅಧ್ಯಾಹಾರವು ಇರುವುದಿಲ್ಲ. ಮತ್ತು ಹೇತುಸಾಧ್ಯಗಳಿಗೆ ಸಾಮಾನಾಧಿಕರಣ್ಯವೂ ಕೂಡ ಇರುತ್ತದೆ. ಬ್ರಹ್ಮಕಾರಣತ್ವಕ್ಕೆ ಆಕ್ಷೇಪಕವಾದ ಪ್ರಾಗಭಾವ ಕರ್ತೃತ್ವಕ್ಕೆ ಪೂರಕವಾದ ಅಂಶವೂ ಕೂಡ ಇದೆ. ಏಕೆಂದರೆ ಪ್ರಾಗಭಾವವು ಪ್ರತೀಷೇಧ್ಯೈಕಸ್ವರೂಪವಾಗಿದೆ. 'ಪ್ರಾಗಭಾವಃ ನ ಜಗತ್‌ಕರ್ತಾ ಪ್ರತಿಷೇಧಮಾತ್ರತ್ವಾತ್' ಹೀಗೆ ಸೂತ್ರಾರ್ಥವನ್ನು ಸುಲಭವಾಗಿ ಹೇಳಬಹುದು. ಆದರೆ ನೀವು

ಕಾರ್ಯವಾದ ಜಗತ್ತು ಉತ್ಪತ್ತಿಗಿಂತ ಮೊದಲು ಅಸತ್ತಾಗಬೇಕಾದೀತು ಎಂದು ಹೇಳಿದಾಗ 'ಪ್ರಸಜ್ಯೇತ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. ಉತ್ತರಿಸುವಾಗಲೂ ಸತ್ಕಾರ್ಯಪ್ರತಿಷೇಧಮಾತ್ರತ್ವಾತ್ ಎಂಬುದನ್ನೂ ಕೂಡ ಅಧ್ಯಾಹಾರ ಮಾಡಬೇಕು. ಏಕೆಂದರೆ ಸತ್ಕಾರ್ಯವಾದವನ್ನು ನೈಯಾಯಿಕರು ನಿರಾಕರಣೆ ಮಾಡುತ್ತಾರಲ್ಲವೇ? ಎಂದರೆ ನೈಯಾಯಿಕರು ನಿರಾಕರಣೆ ಮಾಡುವ ಸತ್ಕಾರ್ಯವಾದ ಪ್ರತಿಷೇಧವು ಸತ್ಕಾರ್ಯವಾದ ಪ್ರತಿಷೇಧಕ ಸ್ವರೂಪವಾಗಿದೆ ಎಂದು ಹೇಳುತ್ತೀರಿ. ಹೀಗೆ ಅನೇಕ ಪದಗಳನ್ನು ಅಧ್ಯಾಹಾರ ಮಾಡುತ್ತಿದ್ದೀರಿ. ಮತ್ತು ವೈಯಧಿಕರಣ್ಯವು ಬರುತ್ತದೆ. ಹೇತುವು ಸತ್ಕಾರ್ಯವಾದದ ಪ್ರತಿಷೇಧದಲ್ಲಿ ಇದೆ. 'ಪ್ರಾಗುಕ್ತೇಃ ಅಸದ್ಭವಿತಮರ್ಹತಿ' ಎಂಬ ಸಾಧ್ಯವು ಮತ್ತೊಂದು ಕಡೆ ಇದೆ. ಹೀಗೆ ಹೇತುಸಾಧ್ಯಗಳಿಗೆ ವೈಯಧಿಕರಣ್ಯವು ಬರುತ್ತದೆ. ಜಗತ್ತು ಹುಟ್ಟುವ ಮೊದಲು ಸತ್ಯವಾಗಿದೆ ಎಂದಷ್ಟೇ ಹೇಳಿದಂತಾಯಿತು. ಬ್ರಹ್ಮನು ಕಾರಣನಾಗಿದ್ದಾನೆಂಬ ವಿಷಯದಲ್ಲಿ ಯಾವುದೇ ಆಕ್ಷೇಪವನ್ನು ತೋರಿಸಿದಂತಾಗಲಿಲ್ಲ.

'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಜಗತ್ತಿನಲ್ಲಿ ಅನೇಕ ಗುಣದೋಷಗಳಿವೆ. ಇದಕ್ಕೆ ಕಾರಣನಾದ ಬ್ರಹ್ಮನು ನಿರ್ಗುಣನು, ಶುದ್ಧನಾಗಿದ್ದಾನೆ. ಸೃಷ್ಟಿಯ ಮೊದಲು ಕಾರ್ಯಭೂತವಾದ ಪ್ರಪಂಚವು ಸರ್ವಥಾ ಇರಲಿಲ್ಲ. ಆದ್ದರಿಂದ ಸತ್ಕಾರ್ಯವಾದಕ್ಕೆ ಭಂಗ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಸೃಷ್ಟಿಕಾಲದಲ್ಲಿಯೂ ಜಗತ್ತು ಬ್ರಹ್ಮರೂಪದಿಂದ ಇದೆ ಎಂದು ಒಪ್ಪಬೇಕು. ಆದ್ದರಿಂದ ಸತ್ಕಾರ್ಯವಾದಕ್ಕೆ ಭಂಗವು ಬರುವುದಿಲ್ಲ ಎಂಬುದು ನಾಲ್ಕನೆಯ ಸೂತ್ರ ವ್ಯಾಖ್ಯಾನ.

ಇದೂ ಕೂಡ ತಪ್ಪು. ಪ್ರಾಗಭಾವವು ಜಗತ್ತಿಗೆ ಕಾರಣವಲ್ಲ ಏಕೆಂದರೆ ಅದು ಪ್ರತಿಷೇಧಸ್ವರೂಪವಾಗಿದೆ ಎಂದು ನೇರವಾಗಿಯೇ ಸೂತ್ರಕ್ಕೆ ವ್ಯಾಖ್ಯಾನ ಮಾಡಲು ಬರುವಾಗ ತತ್ಕಾರ್ಯವಾದ ಪ್ರತಿಜ್ಞೆಯನ್ನು ಈ ಸೂತ್ರವು ಮಾಡುತ್ತಿದೆಯೆಂದು ಇಲ್ಲದ ಪದಗಳನ್ನೆಲ್ಲಾ ಅಧ್ಯಾಹಾರ ಮಾಡಿ, ಅರ್ಥೈಸಬೇಕಾಗುತ್ತದೆ. ಇದು ಅತ್ಯಂತ ಅಯುಕ್ತ.

'ಅಪೀತೌ ತದ್ವತ್‌ಪ್ರಸಂಗಾದಸಮಂಜಸಮ್' ಎಂಬ ಐದನೆಯ ಸೂತ್ರವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. ಕಾರ್ಯವು ಸ್ವಯಂ ದುಷ್ಟವಾದ್ದರಿಂದ ಕಾರಣದ ಸಂಶ್ಲೇಷವನ್ನು ಹೊಂದಿದರೆ, ಅದನ್ನೂ ಕೂಡ ದುಷ್ಟವನ್ನಾಗಿ ಮಾಡುತ್ತದೆ. ಜಗತ್ತು ಪ್ರಳಯಕಾಲದಲ್ಲಿ ಬ್ರಹ್ಮನಲ್ಲಿ ಸಂಶ್ಲೇಷವನ್ನು ಹೊಂದುವುದಾದರೆ, ಸ್ವಯಂ ದುಷ್ಟವಾದ ಜಗತ್ತು ಕಾರಣವಾದ

ಬ್ರಹ್ಮನನ್ನೂ ಕೂಡ ದುಷ್ಟವನ್ನಾಗಿ ಮಾಡುತ್ತದೆ ಎಂದು ಐದನೆಯ ಸೂತ್ರವು ಕೇವಲ ಪೂರ್ವಪಕ್ಷವನ್ನು ಸ್ಥಾಪನೆ ಮಾಡುತ್ತಿದೆ ಎಂದು ವ್ಯಾಖ್ಯಾನ ಮಾಡುತ್ತಿದ್ದೀರಿ.

ಇದು ಅಯುಕ್ತ. 'ಕಾರ್ಯಭೂತವಾದ ಜಗತ್ತು ಬ್ರಹ್ಮನಲ್ಲಿ ಸಂಶ್ಲೇಷವನ್ನು ಹೊಂದಿದಾಗ ತನ್ನಲ್ಲಿರುವ ಧರ್ಮಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾದೀತು' ಎಂದು ನೀವು ಸಾಧನೆ ಮಾಡುತ್ತಿದ್ದೀರಿ. ಇದಕ್ಕೆ ಕಾರ್ಯನಾಶವೇ ಹೇತುವೋ, ಅಥವಾ ಕಾರ್ಯಕಾರಣಗಳಿಗಿರುವ ಅಭೇದವು ಹೇತುವೋ ?

ಪ್ರಳಯಕಾಲದಲ್ಲಿ 'ಕಾರ್ಯಭೂತವಾದ ಜಗತ್ತೇ ನಾಶವಾಗಿರುವುದರಿಂದ ಜಗತ್ತಿನ ಧರ್ಮಗಳೆಲ್ಲವೂ ಬ್ರಹ್ಮನಲ್ಲೇ ಬರಬೇಕಾದೀತು' ಎಂಬ ಮೊದಲನೇ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ಕಾರ್ಯವೇ ನಾಶವಾದ ಮೇಲೆ ಅದರ ಧರ್ಮಗಳೂ ಕೂಡ ಸುತರಾಂ ನಾಶವನ್ನು ಹೊಂದುತ್ತವೆ. ಹೀಗಿರುವಾಗ ಜಗತ್ತಿನ ಧರ್ಮಗಳು ಬ್ರಹ್ಮನಲ್ಲಿ ಬರಲು ಸಾಧ್ಯವೇ ಆಗುವುದಿಲ್ಲ.

ಕಾರ್ಯ ಹಾಗೂ ಕಾರಣಗಳಿಗೆ ಅಭೇದವಿರುವ ಪ್ರಯುಕ್ತ ಕಾರ್ಯದ ಧರ್ಮಗಳು ಕಾರಣದಲ್ಲಿ ಬರುತ್ತದೆಂಬ ಎರಡನೆಯ ಪಕ್ಷವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಕಾರ್ಯಕಾರಣಗಳಿಗೆ ಅಭೇದವು ಉತ್ಪತ್ತಿಯ ಪೂರ್ವದಲ್ಲಷ್ಟೇ ಅಲ್ಲ, ಉತ್ಪತ್ತಿಯ ಅನಂತರದಲ್ಲಿಯೂ ಇದ್ದೇ ಇರುತ್ತದೆ. ಯಾರ ಮತದಲ್ಲಿಯೂ ಕೂಡ ಕಾರ್ಯ ಹಾಗೂ ಕಾರಣಗಳಿಗೆ ಅಭೇದವನ್ನು ಒಪ್ಪದಿರಲು ಸಾಧ್ಯವೇ ಇಲ್ಲ. ಆದ್ದರಿಂದ ಜಗತ್ತಿಗೂ ಬ್ರಹ್ಮನಿಗೂ ಅಭೇದವಿರುವುದರಿಂದ ಕಾರ್ಯಭೂತವಾದ ಜಗತ್ತಿನ ಧರ್ಮಗಳು ಬ್ರಹ್ಮನಲ್ಲಿ ಬರಲಿ ಎಂಬ ಆಕ್ಷೇಪವನ್ನು ಸ್ಥಿತಿಕಾಲದಲ್ಲಿಯೂ ಕೂಡ ಮಾಡಬಹುದು. ಹೀಗಿರುವಾಗ ಸೂತ್ರದಲ್ಲಿ 'ಅಪೀತೌ' = ಪ್ರಳಯಕಾಲದಲ್ಲಿ ಎಂಬ ಪದವನ್ನು ಉಲ್ಲೇಖ ಮಾಡಿದ್ದಕ್ಕೆ ಅರ್ಥವೇ ಇಲ್ಲವೆಂದಾಯಿತು.

'ಅಪೀತೌ ತದ್ವತ್ಪ್ರಸಂಗಾದಸಮಂಜಸಮ್' - ಜಗತ್ತು ಬ್ರಹ್ಮನಿಂದ ಹುಟ್ಟುವುದಾದರೆ ಘಟನಾಶವಾದಾಗ ಘಟವು ಹೇಗೆ ಮಣ್ಣಾಗುತ್ತದೋ, ಅದರಂತೆ ಈ ಜಗತ್ತೂ ಕೂಡ ನಾಶವಾದಾಗ ಬ್ರಹ್ಮಸ್ವರೂಪವೇ ಆಗಬೇಕು. ಆವಾಗ ಜಗತ್ತಿನಲ್ಲಿರುವ ಗುಣದೋಷಗಳೆಲ್ಲವೂ ಬ್ರಹ್ಮನಲ್ಲಿ ಬರಬೇಕಾಗುತ್ತದೆ. ಹಾಗೇ ಗುಣದೋಷಗಳನ್ನು ಬ್ರಹ್ಮನಲ್ಲಿ ಹೇಳಿದರೆ 'ನಿರ್ವಿಕಾರ ಸರ್ವಶಬ್ದಃ' ಇತ್ಯಾದಿ ಶ್ರುತಿಯ ವಿರೋಧ ಬರುತ್ತದೆ. (ಇದು ಪೂರ್ವಪಕ್ಷ ಸೂತ್ರ)

ಇದೂ ಕೂಡ ಅಯುಕ್ತವಾಗಿದೆ. ಏಕೆಂದರೆ ಯಾವಾಗ ಪ್ರಳಯಕಾಲದಲ್ಲಿ ಕಾರ್ಯಭೂತವಾದ ಜಗತ್ತು ನಾಶವಾಗಿದೆಯೋ, ಅದರ ಧರ್ಮಗಳೂ ಕೂಡ ಸುತರಾಂ ನಾಶವಾಗಿದೆಯೆಂದೇ ಸಿದ್ಧವಾಗುತ್ತದೆ. ಮತ್ತು ಪ್ರಳಯಕಾಲದಲ್ಲಿ ಜಗತ್ತು ಬ್ರಹ್ಮಸ್ವರೂಪವಾಗುವುದಾದರೆ, ಸೃಷ್ಟಿಕಾಲದಲ್ಲಿಯೂ ಕೂಡ ಬ್ರಹ್ಮಸ್ವರೂಪವೇ ಆಗಿರಬೇಕು. ಹೀಗಿರುವಾಗ 'ಅಪಿ ತೌ'ಎಂಬ ಪದವು ಅಸ್ವರಸವಾಗುತ್ತದೆ.

ಮತ್ತು 'ನತು ದೃಷ್ಟಾಂತಭಾವಾತ್' - ಐದನೆಯ ಸೂತ್ರದಲ್ಲಿ ಮಾಡಿದ ಪೂರ್ವಪಕ್ಷವು ಅಯುಕ್ತವಾಗಿದೆ. ಜಗತ್ತಿಗೆ ಬ್ರಹ್ಮನು ಕಾರಣನಾಗಿದ್ದಾನೆಂದು ಹೇಳಿದಾಗ ಯಾವ ಆಕ್ಷೇಪಗಳು ಬರುವುದಿಲ್ಲ. ಕಾರ್ಯಕಾರಣಗಳಿಗೆ ಅಭೇದವಿದ್ದರೂ ಕಾರ್ಯದ ಧರ್ಮಗಳು ಕಾರಣದಲ್ಲಿ ಬರುವುದಿಲ್ಲ ಎನ್ನಲು ಅನೇಕ ದೃಷ್ಟಾಂತಗಳಿವೆ. ಐಂದ್ರಜಾಲಿಕನು ತನ್ನ ಕಪಟವಾದ ವಿದ್ಯೆಯಿಂದ ಬೇರೆಯವರನ್ನು ಮೋಹಗೊಳಿಸುತ್ತಾನೆ. ಆದರೆ ತಾನು ಆ ಮೋಹಜಾಲದಲ್ಲಿ ಸಿಲುಕುವುದಿಲ್ಲ. ಮಣ್ಣಿನಿಂದ ಘಟವು ಹುಟ್ಟುತ್ತದೆ. ಆದರೆ ಘಟದಲ್ಲಿ ಜಲಾಹರಣಾದಿ ಸಾಮರ್ಥ್ಯವಿದ್ದರೂ ಮಣ್ಣಿನಲ್ಲಿ ಅಂತಹ ಸಾಮರ್ಥ್ಯವಿರುವುದಿಲ್ಲ. ಆದ್ದರಿಂದ ಕಾರ್ಯದಲ್ಲಿರುವ ಧರ್ಮಗಳೆಲ್ಲವೂ ಕಾರಣದಲ್ಲಿ ಬರಬೇಕೆಂಬ ನಿಯಮವಿರುವುದಿಲ್ಲ.

ಇದೂ ಕೂಡ ತಪ್ಪು. ವಿಲಕ್ಷಣವಾದ ಧರ್ಮಗಳನ್ನು ಹೊಂದಿರುವ ವಸ್ತುಗಳಿಗೆ ಕಾರ್ಯಕಾರಣಭಾವವು ಇರುತ್ತದೆನ್ನಲು ದೃಷ್ಟಾಂತ ಹೇಳಲು ಈ ಸೂತ್ರ ಹೊರಡಬೇಕಾಗಿಲ್ಲ. ಈಗಾಗಲೇ 'ದೃಶ್ಯತೇ ತು' ಎಂಬ ಸೂತ್ರದಿಂದಲೇ ಈ ವಿಷಯವು ಸಿದ್ಧವಾಗಿದೆ. ಅದೇ ವಿಷಯವನ್ನು ಹೇಳಿದರೆ ಪುನರುಕ್ತಿ ಬರುತ್ತದೆ.

'ನತು ದೃಷ್ಟಾಂತಭಾವತ್' ಎಂಬ ಆರನೆಯ ಸೂತ್ರವು ಐದನೆಯ ಸೂತ್ರದ ಪೂರ್ವಪಕ್ಷಕ್ಕೆ ನಿರಾಸಕವಾಗಿ ಹೊರಟಿದೆ ಎನ್ನುತ್ತೀರಿ. ಸ್ವಪ್ನದ್ರಷ್ಟ್ರುವಿನ ಪದಾರ್ಥಗಳು ನಾಶವಾದಾಗ ಅವುಗಳ ಧರ್ಮವು ದ್ರಷ್ಟ್ರುವಿನಲ್ಲಿ ಬರುವುದಿಲ್ಲ. ಐಂದ್ರಜಾಲಿಕನ ಪದಾರ್ಥಗಳು ನಾಶವಾದಾಗ ಅವುಗಳ ಧರ್ಮವು ಐಂದ್ರಜಾಲಿಕನಲ್ಲಿ ಬರುವುದಿಲ್ಲ ಇತ್ಯಾದಿಯಾಗಿ ವೈಲಕ್ಷಣ್ಯವನ್ನು ನೀವು ಹೇಳುತ್ತಾ ವ್ಯಾಖ್ಯಾನ ಮಾಡುತ್ತೀರಿ.

ಇದು ತಪ್ಪು. ವಿಲಕ್ಷಣವಾಗಿದ್ದರೂ ಕಾರ್ಯಕಾರಣಭಾವವಿರಬಹುದೆನ್ನಲು ದೃಷ್ಟಾಂತವನ್ನು ಹೇಳಲು ಈ ಸೂತ್ರವು ಹೊರಡಬೇಕಾಗಿಲ್ಲ. ಈಗಾಗಲೇ 'ದೃಶ್ಯತೇ ತು' ಎಂಬ ಸೂತ್ರದಿಂದಲೇ

ವಿಲಕ್ಷಣವಾದ ಪದಾರ್ಥಗಳಿಗೂ ಕಾರ್ಯಕಾರಣಭಾವವು ಕಂಡಿದೆಯೆಂದು ದೃಷ್ಟಾಂತ ಹೇಳಿದ್ದೀರಿ. ವೃಶ್ಚಿಕದ ಧರ್ಮಗಳು ಕಾರಣವಾದ ಗೋಮಯದಲ್ಲಿ ಬರುವುದಿಲ್ಲವೆಂದು ಹೇಳಿದ್ದೀರಿ. ಅದೇ ಸೂತ್ರದಿಂದಲೇ ಈ ಸೂತ್ರದ ಪ್ರಮೇಯವು ಸಿದ್ಧವಾಗುವಾಗ ಪುನಃ 'ದೃಷ್ಟಾಂತಭಾವಾತ್' ಎಂಬ ಸೂತ್ರದಿಂದ ಅದನ್ನೇ ಹೇಳಿದರೆ ಪುನರುಕ್ತಿದೋಷವು ಬರುತ್ತದೆ. ಆದ್ದರಿಂದ ಆರನೆಯ ಸೂತ್ರವು ಅಯುಕ್ತವಾಗಿದೆ.

'ಸ್ವಪಕ್ಷದೋಷಾಚ್ಚ' ಎಂಬ ಏಳನೆಯ ಸೂತ್ರವ್ಯಾಖ್ಯಾನವೂ ಕೂಡ ಅದ್ವೈತಮತದಲ್ಲಿ ಅಯುಕ್ತವಾಗಿದೆ. ಕೇವಲ ಮಣ್ಣಿಗೆ ಜಲಾಹರಣಾದಿ ಸಾಮರ್ಥ್ಯವು ಇರುವುದಿಲ್ಲ. ಆದರೂ ಕೂಡ ಜಲಾಹರಣಾದಿಗಳಿಗೆ ಸಮರ್ಥವಾದ ಘಟಕ್ಕೆ ಉಪಾದಾನಕಾರಣವಾಗಿದೆ. ಇದರಂತೆ ಶಬ್ದ, ಸ್ಪರ್ಶ, ರೂಪ, ರಸ ಮೊದಲಾದ ಗುಣಗಳು ಪ್ರಕೃತಿಯಲ್ಲಿಲ್ಲದಿದ್ದರೂ ಶಬ್ದಸ್ಪರ್ಶಾದಿಗುಣಗಳನ್ನು ಹೊಂದಿರುವ ಜಗತ್ತಿಗೆ ಪ್ರಕೃತಿಯು ಉಪಾದಾನಕಾರಣವಾಗಬಹುದು. ಆದರೆ ಅಚೇತನಪದಾರ್ಥವು ಚೇತನಪದಾರ್ಥವು ಉಪಾದಾನಕಾರಣವಾಗಲು ಸಾಧ್ಯವೇ ಇಲ್ಲ. ಹಾಗೇ ಎಲ್ಲಿಯೂ ಕೂಡ ಕಂಡಿಲ್ಲ. ಮತ್ತು ನಿಮ್ಮ ಸಿದ್ಧಾಂತದಲ್ಲಿ ಚೇತನನಾದ ಬ್ರಹ್ಮನು ನಿರ್ವಿಕಾರನಾದ್ದರಿಂದ ಉಪಾದಾನಕಾರಣನಾಗಲಾರ. ಆದ್ದರಿಂದ ಸಾಂಖ್ಯನು ಅದ್ವೈತಿಗಳಾದ ನಿಮಗೆ ಯಾವ ದೋಷವನ್ನು ಹೇಳಿದ್ದಾನೋ, ಆ ದೋಷವನ್ನು ಸಾಂಖ್ಯನಿಗೆ ಹೇಳಲು ಬರುವುದಿಲ್ಲ.

'ಸ್ವಪಕ್ಷದೋಷಾಚ್ಚ' - ಬ್ರಹ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ವಾದಕ್ಕೆ ಸಾಂಖ್ಯರು ದೋಷವನ್ನು ಹೇಳುತ್ತಾರೆ. ಅದೇ ದೋಷವು ಸಾಂಖ್ಯರ ಪ್ರಕೃತಿಕಾರಣವಾದದಲ್ಲಿಯೂ ಕೂಡ ಸಮಾನವಾಗಿದೆ. ಏಕೆಂದರೆ ಪ್ರಕೃತಿಯಲ್ಲಿಯೂ ಕೂಡ ರೂಪರಸಾದಿಗುಣಗಳಿಲ್ಲ. ಅಂತಹ ಪ್ರಕೃತಿಯಿಂದ ರೂಪರಸಾದಿಗುಣಗಳನ್ನು ಹೊಂದಿರುವ ಪ್ರಪಂಚವು ಹುಟ್ಟುತ್ತದೆ. ಹೀಗೆ ಸಾಂಖ್ಯಮತದ ನಿರಾಕರಣೆಗಾಗಿ ಈ ಸೂತ್ರ ಹೊರಟಿದೆ.

ಇದೂ ಕೂಡ ತಪ್ಪು. ಜಲಾಹರಣಾದಿ ಸಾಮರ್ಥ್ಯವನ್ನು ಹೊಂದದ ಮಣ್ಣು, ಮಣ್ಣು ಜಲಾಹರಣಾದಿ ಸಾಮರ್ಥ್ಯವನ್ನು ಹೊಂದಿರುವ ಘಟಕ್ಕೆ ಕಾರಣವಾಗಬಹುದು. ಅದರಂತೆ ರೂಪರಸಾದಿಧರ್ಮಗಳನ್ನು ಹೊಂದಿರುವ ಜಗತ್ತಿಗೆ, ರೂಪರಸಾದಿಧರ್ಮಗಳನ್ನು ಹೊಂದದ ಪ್ರಧಾನವು ಕಾರಣವಾಗಬಹುದು. ನಮಗೆ ದೃಷ್ಟಾಂತವಿದೆ. ಆದರೆ ಅಚೇತನವಾದ ಜಗತ್ತಿಗೆ

ಚೇತನನಾದ ಬ್ರಹ್ಮನು ಉಪಾದಾನಕಾರಣನಾಗುತ್ತಾನೆ ಎಂಬ ವಿಷಯದಲ್ಲಿ ನಿಮ್ಮಿಂದ ಯಾವುದೇ ದೃಷ್ಟಾಂತವನ್ನು ಹೇಳಲಾಗದು.

'ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ' ಎಂಬ ಎಂಟನೆಯ ಸೂತ್ರವ್ಯಾಖ್ಯಾನವು ಅದ್ವೈತಿಗಳ ಮತದಲ್ಲಿ ಅಯುಕ್ತವಾಗಿದೆ. 'ತರ್ಕಾಪ್ರತಿಷ್ಠಾನಾತ್' ಎಂಬ ಸೂತ್ರವನ್ನು ಸಿದ್ಧಾಂತಶೇಷವೆಂದು 'ಅನ್ಯಥಾನುಮೇಯಮಿತಿ ಚೇತ್' ಎಂಬ ಸೂತ್ರಶೇಷವನ್ನು ಪೂರ್ವಪಕ್ಷಭಾಗವೆಂದು 'ಸ್ಯಾದೇವಮಪ್ಯನಿರ್ಮೋಕ್ಷಪ್ರಸಂಗಃ' ಎಂಬುದನ್ನು ಸಿದ್ಧಾಂತಭಾಗವನ್ನು ಒಪ್ಪಿರುತ್ತಾರೆ. ಆದರೆ ನಮ್ಮ ಮತದಲ್ಲಿ 'ತರ್ಕಾಪ್ರತಿಷ್ಠಾನಾದನ್ಯಥಾನುಮೇಯಮಿತಿ ಚೇತ್' ಎಂಬುದನ್ನು ಸಮಗ್ರವಾಗಿ ಪೂರ್ವಪಕ್ಷಭಾಗವನ್ನಾಗಿಯೇ ಒಪ್ಪಲಾಗಿದೆ. ನಾವು ವ್ಯಾಖ್ಯಾನ ಮಾಡುವಂತೆ ಅದ್ವೈತಿಗಳೂ ಸಹ ಅನಿವಾರ್ಯವಾಗಿ ಸೂತ್ರಕ್ಕೆ ವ್ಯಾಖ್ಯಾನ ಮಾಡಬೇಕು. ಇಲ್ಲದಿದ್ದರೆ ಅನೇಕ ದೋಷಗಳು ಬರುತ್ತವೆ. ತರ್ಕಾಪ್ರತಿಷ್ಠಾನವು ಸಿದ್ಧಾಂತಕ್ಕೆ ಹೇತ್ವಂತರವಾಗಿದೆ ಎಂದು ನೀವು ಹೇಳುವುದಾದರೆ ಸೂತ್ರದಲ್ಲಿ ಚಶಬ್ದವಿರಬೇಕು. ಮತ್ತು 'ಅನ್ಯಥಾನುಮೇಯಮ್' ಎಂಬುದನ್ನು ನೀವು ಬೇರೆ ಸೂತ್ರವೆಂದೂ ಕೂಡ ಪರಿಗಣಿಸಿಲ್ಲ. ಇದೇ ಸೂತ್ರದಲ್ಲಿಯೇ ಸೇರಿಸಿದ್ದೀರಿ. ಹೀಗಿರುವಾಗ ನಾವು ಹೇಳುವಂತೆ ಅನ್ಯಥಾನುಮೇಯಕ್ಕೆ ಹೇತುಸಮರ್ಪಕವಾಗಿ ತರ್ಕಾಪ್ರತಿಷ್ಠಾನವನ್ನೇ ಹೇಳಬೇಕು. 'ಸ್ವಪಕ್ಷದೋಷಾಚ್ಚ' ಇತ್ಯಾದಿ ಸೂತ್ರಗಳಲ್ಲಿ ಸಾಧಿಸಲ್ಪಟ್ಟ ಸತ್ಕಾರಣತ್ವವನ್ನು ಸಮರ್ಥಿಸಲು ಮತ್ತು ಅಸತ್ಕಾರಣತ್ವವನ್ನು ಬಾಧಿಸಲು ನೀವು ಯಾವ ಅನುಮಾನವನ್ನು ಮಾಡುತ್ತೀರೋ ಅದಕ್ಕೆ ವಿಪರೀತವಾಗಿಯೂ ಕೂಡ ಅನುಮಾನವನ್ನು ಮಾಡಬಹುದು ಎಂಬುದನ್ನು 'ಅನ್ಯಥಾನುಮೇಯಮ್' ಎಂಬ ಸೂತ್ರಭಾಗವು ಹೇಳುತ್ತಿದೆ. ಹೀಗೆ 'ಅನ್ಯಥಾನುಮೇಯಮ್' ಎಂಬುದಕ್ಕೆ ಹೇತುಸಮರ್ಪಕವಾಗಿ 'ತರ್ಕಾಪ್ರತಿಷ್ಠಾನಾತ್'ಎಂಬ ಸೂತ್ರಭಾಗವು ಇರುತ್ತದೆ. ಹೀಗೆ 'ತರ್ಕಾಪ್ರತಿಷ್ಠಾನಾತ್' ಎಂಬುದನ್ನು ಏಕವಾಕ್ಯತ್ವೇನ ಪರಿಗಣಿಸಿ ಸಾಧ್ಯದಲ್ಲಿಯೇ ಅನ್ವಯವನ್ನು ಮಾಡಿ, ಪೂರ್ವಪಕ್ಷಶೇಷವನ್ನಾಗಿಯೇ ವ್ಯಾಖ್ಯಾನ ಮಾಡಲು ಬರುತ್ತಿರುವಾಗ, ಇದನ್ನು ಬಿಟ್ಟು 'ಶ್ರೌತಸ್ಯ ವಿಲಕ್ಷಣಯೋರಪಿ ಕಾರ್ಯಕಾರಣಭಾವಸ್ಯ ನ ಹಾನಿಃ । ತರ್ಕಸ್ಯಾಪ್ರತಿಷ್ಠಿತತ್ವಾತ್' ಎಂಬ ಅಧ್ಯಾಹೃತವಾದ ಸಾಧ್ಯದಲ್ಲಿ ನೀವು ಅನ್ವಯ ಮಾಡುತ್ತಿದ್ದೀರಿ. ಶ್ರುತಿಸಿದ್ಧವಾದ ವಿಚಾರದಲ್ಲಿ ತರ್ಕವು ಪ್ರವೇಶ ಮಾಡಲು ಸಾಧ್ಯವಿಲ್ಲ. ಶ್ರುತಿಯಿಂದ ಬ್ರಹ್ಮನಿಗೂ ಜಗತ್ತಿಗೂ ಕಾರ್ಯಕಾರಣಭಾವವು ಉಪಾದಾನ ಉಪಾದೇಯಭಾವರೂಪವಾಗಿ ಸಿದ್ಧವಾಗಿದೆ. ಈ

ವಿಷಯದಲ್ಲಿ ತರ್ಕದ ವಿರೋಧವು ಬರುವುದಿಲ್ಲವೆಂದು ನೀವು ವ್ಯಾಖ್ಯಾನ ಮಾಡಿದ್ದೀರಿ. ಹೀಗೆ ಮಾಡಿದಾಗ ತರ್ಕಾಪ್ರತಿಷ್ಠಾನಾತ್' ಎಂಬುದೇ ಬೇರೆ ವಾಕ್ಯ. 'ಅನ್ಯಥಾನುಮೇಯಮಿತಿ ಚೇತ್' ಎಂಬುದೇ ಬೇರೆ ವಾಕ್ಯವಾಗುತ್ತದೆ. ಮತ್ತು 'ತರ್ಕಾಪ್ರತಿಷ್ಠಾನಾತ್' ಎಂಬುದನ್ನು ಸಿದ್ಧಾಂತಶೇಷವನ್ನಾಗಿಯೂ ಕೂಡ ನಿಮ್ಮಿಂದ ಸಮರ್ಥಿಸಲಾಗದು. 'ಸ್ಯಾದೇವಾನಿರ್ಮೋಕ್ಷ-ಪ್ರಸಂಗಃ' ಎಂಬುದನ್ನು ಸಿದ್ಧಾಂತಭಾಗವನ್ನಾಗಿ ಹೇಳಬೇಕಾದರೆ ಅದಕ್ಕೆ ಪ್ರತಿಯೋಗಿಯಾದ್ದನ್ನು ಅನುಷಂಗ ಮಾಡಿಕೊಳ್ಳಬೇಕಾಗುತ್ತದೆ. ನಮ್ಮ ಪ್ರಕಾರ ಆಗಮದಿಂದ ಉಪೋದ್ಬಲಿತವಾದ ತರ್ಕವು ಪ್ರತಿಷ್ಠಿತವಾಗುತ್ತದೆ. ನಿಮ್ಮ ಪ್ರಕಾರ ಆಗಮದಿಂದ ಉಪೋದ್ಬಲಿತವಾದ ತರ್ಕವೂ ಕೂಡ ಅಸಾಧುವಾಗುವುದಾದರೆ, ಮೋಕ್ಷವೆಂಬ ಪುರುಷಾರ್ಥವೇ ಇಲ್ಲದಿರಬೇಕಾದೀತು. ಯಾವ ಬೌದ್ಧಾದಿಗಳು ವೇದಪ್ರಾಮಾಣ್ಯವನ್ನೇ ಒಪ್ಪುವುದಿಲ್ಲವೋ ಅಂಥವನಿಗೆ ತರ್ಕದಿಂದಲೇ ಮೋಕ್ಷವನ್ನು ಸಮರ್ಥನೆ ಮಾಡಬೇಕು. ಅದು ನಿಮ್ಮಿಂದ ಸಾಧ್ಯವಾಗುವುದಿಲ್ಲ. ಪ್ರಸಂಗಶಬ್ದಕ್ಕೆ ಯಾವುದೇ ಅರ್ಥವನ್ನೂ ಕೂಡ ನೀವು ಹೇಳಿರುವುದಿಲ್ಲ. 'ಅಪಿ'ಶಬ್ದವೂ ಕೂಡ ನಿಮ್ಮ ಮತದಲ್ಲಿ ವ್ಯರ್ಥವಾಗಿದೆ.

ಮತ್ತು ತರ್ಕವು ಅಪ್ರತಿಷ್ಠಿತವಾಗಿದೆ ಎಂಬುದನ್ನು ಸಿದ್ಧಾಂತಶೇಷವನ್ನಾಗಿ ನೀವು ಹೇಳುತ್ತಿದ್ದೀರಿ. ನಿಮ್ಮ ಅಭಿಪ್ರಾಯವೇನೆಂದು ಸ್ಪಷ್ಟವಾಗಿ ತಿಳಿಸಿರಿ. ಎಲ್ಲಾ ಬಗೆಯ ತರ್ಕಗಳು ಅಪ್ರತಿಷ್ಠಿತವಾಗಿದೆಯೆಂದೋ ? ಅಥವಾ ಶ್ರುತ್ಯಾದಿಗಳ ಅನುಗ್ರಹವಿಲ್ಲದ ತರ್ಕವಷ್ಟೇ ಅಪ್ರತಿಷ್ಠಿತವಾಗಿದೆಯೆಂದೋ?

ಸಕಲವಿಧತರ್ಕಗಳು ಅಪ್ರತಿಷ್ಠಿತವಾಗಿವೆ ಎಂಬ ಮೊದಲನೆಯ ಪಕ್ಷವು ಅಸಾಧುವಾಗಿದೆ. ಏಕೆಂದರೆ 'ತರ್ಕಸ್ಯಾಪ್ರತಿಷ್ಠಿತತ್ವಾತ್' ಎಂಬ ಹೇತುವನ್ನು ಸಾಧನೆ ಮಾಡಲು ಯಾವ ತರ್ಕವನ್ನು ಮಾಡುತ್ತಿದ್ದೀರೋ ಅದೂ ಕೂಡ ಅಪ್ರತಿಷ್ಠಿತವಾಗಿದೆ ಎಂದು ಒಪ್ಪಿಕೊಂಡಂತಾಯಿತು. ಆದರಿಂದ ತರ್ಕಾಪ್ರತಿಷ್ಠಾನವು ಸಿದ್ಧವಾಗುವುದಿಲ್ಲ. ಮತ್ತು ಮೀಮಾಂಸಾಶಾಸ್ತ್ರವೇ ಅನಾರಂಭಣೀಯ-ವಾಗುತ್ತದೆ. ಸಕಲ ಮೀಮಾಂಸಾಸೂತ್ರಗಳು ತರ್ಕದಿಂದಲೇ ಕೂಡಿರುತ್ತವೆಯಷ್ಟೇ.

ಮತ್ತು 'ಶ್ರೋತವ್ಯ ಮಂತವ್ಯಃ' 'ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ' 'ಯಸ್ತರ್ಕೇಣಾನುಸಂಧತ್ತೇ' ಇವೇ ಮೊದಲಾದ ಶ್ರುತಿ-ಸ್ಮೃತಿಗಳಲ್ಲಿ ಬ್ರಹ್ಮನ ವಿಷಯದಲ್ಲಿ ತರ್ಕಗಳಿಗೆ ಪ್ರತಿಷ್ಠಿತತ್ವವನ್ನು ಸ್ಪಷ್ಟವಾಗಿ ಹೇಳಲಾಗಿದೆ.

ಶ್ರುತ್ಯಾದಿಗಳ ಅನುಗ್ರಹವಿಲ್ಲದ ತರ್ಕಗಳು ಬ್ರಹ್ಮನ ವಿಷಯದಲ್ಲಿ ಅಪ್ರತಿಷ್ಠಿತವಾಗುತ್ತಿವೆ ಎಂಬ ಎರಡನೆಯ ಪಕ್ಷವು ಅಯುಕ್ತವಾಗಿದೆ. ಏಕೆಂದರೆ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಲ್ಲ ಎಂಬುದನ್ನು ಸಾಧನೆ ಮಾಡಲು ಯಾವ ವೈಲಕ್ಷಣ್ಯರೂಪವಾದ ತರ್ಕವನ್ನು ಪ್ರಯೋಗಿಸುತ್ತಿದ್ದೀರೋ ಅದು 'ನಿರ್ವಿಕಾರಮ್' ಇತ್ಯಾದಿ ಶ್ರುತಿಗಳಿಂದ ಅನುಗೃಹೀತವೇ ಆಗಿದೆ.

ಅದ್ವೈತಿಗಳು 'ಏತೇನ ಶಿಷ್ಟಾಃ ಅಪರಿಗ್ರಹಾಃ ವ್ಯಾಖ್ಯಾತಾಃ' ಎಂಬ ಸೂತ್ರವನ್ನು ವಿಲಕ್ಷಣತ್ವಾಧಿಕರಣದಲ್ಲಿ ಸೇರಿಸುವುದಿಲ್ಲ. ಹೊರತಾಗಿ, ಶಿಷ್ಟಪರಿಗ್ರಹಾಧಿಕರಣವೆಂದು ಪ್ರತ್ಯೇಕ ಅಧಿಕರಣವೆಂದಿದ್ದಾರೆ. ಬ್ರಹ್ಮಕಾರಣತ್ವವಾದವು ವೈದಿಕವಾಗಿರುವುದರಿಂದ, ಮನು, ವ್ಯಾಸ ಮೊದಲಾದ ಶಿಷ್ಟಜನರಿಂದ, ಸ್ವಲ್ಪ ಅಂಶದಿಂದಲಾದರೂ ಪರಿಗೃಹೀತವಾದ ವೈದಿಕದರ್ಶನಕ್ಕೆ ಹತ್ತಿರವಾದ ಸಾಂಖ್ಯಮತವನ್ನು ನಿರಾಕರಣೆ ಮಾಡಿರುವುದರಿಂದ ಕೆಲವು ಅಂಶಗಳಿಂದಲೂ ಕೂಡ ಪರಿಗ್ರಹಿಸಲು ಯೋಗ್ಯವಲ್ಲದ ವೈದಿಕದರ್ಶನಕ್ಕೆ ಹತ್ತಿರವಾಗದ ವೈಶೇಷಿಕರ ಪರಮಾಣ್ವಾದಿಕಾರಣತಾವಾದವು ಪ್ರತ್ಯಾಖ್ಯಾತವಾಯಿತು ಎಂಬುದು ಸೂತ್ರಾರ್ಥ.

ಇದು ತಪ್ಪು. ಈಗಾಗಲೇ 'ಏತೇನ ಸರ್ವೇ ವ್ಯಾಖ್ಯಾತಾಃ'ಎಂಬ ಪ್ರಥಮಾಧ್ಯಾಯದ ಕೊನೆಯ ಸೂತ್ರಕ್ಕೆ ಇದೇ ಅರ್ಥವನ್ನು ನೀವು ಹೇಳಿದ್ದೀರಿ. ಪುನಃ ಆ ಅರ್ಥವನ್ನೇ ಈ ಸೂತ್ರಕ್ಕೆ ಹೇಳಿದರೂ ಕೂಡ ಪುನರುಕ್ತಿ ಬರುತ್ತದೆ.

ಒಟ್ಟು ಅಭಿಪ್ರಾಯ - 'ತರ್ಕಾಪ್ರತಿಷ್ಠಾನದಪ್ಯನ್ಯಥಾಽನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ' - ಅತೀಂದ್ರಿಯವಿಷಯದಲ್ಲಿ ನಿತ್ಯವಾದ ವೇದವೇ ನಿಶ್ಚಾಯಕ. ತರ್ಕದಿಂದ ವೇದಸಿದ್ಧವಾದ ವಿಷಯವನ್ನು ಅಲ್ಲಗಳೆಯಬಾರದು. ಆದ್ದರಿಂದಲೇ ಅನುಮಾನದ ಆಧಾರದಿಂದ ಪ್ರಕೃತಿಯೇ ಜಗತ್ತಿಗೆ ಕಾರಣವೆಂದು ಹೇಳಿ, ಶ್ರುತಿಶುದ್ಧವಾದ ಬ್ರಹ್ಮನ ಜಗತ್ ಕಾರಣತ್ವವಾದವನ್ನು ನಿರಾಕರಣೆ ಮಾಡಬಾರದು. ಈ ಸೂತ್ರದಲ್ಲಿ 'ತರ್ಕಾಪ್ರತಿಷ್ಠಾನಾತ್' ಎಂಬುದು ಸಿದ್ಧಾಂತಭಾಗ, 'ಅನ್ಯಥಾಽನುಮೇಯಮಿತಿ' ಎಂಬುದು ಪೂರ್ವಪಕ್ಷಭಾಗ. ಪುನಃ 'ಏವಮಪ್ಯನಿರ್ಮೋಕ್ಷಪ್ರಸಂಗಃ' ಎಂಬುದು ಸಿದ್ಧಾಂತಭಾಗವಾಗಿದೆ.

ಈ ಸೂತ್ರ ವ್ಯಾಖ್ಯಾನವೂ ಕೂಡ ಅಯುಕ್ತ. 'ಅನ್ಯಥಾಽನುಮೇಯಮ್' ಎಂಬುದಕ್ಕೆ ಶ್ರುತವಾದ 'ತರ್ಕಾಪ್ರತಿಷ್ಠಾನಾತ್' ಎಂಬಲ್ಲಿಯೇ ಅನ್ವಯವನ್ನು ತಿಳಿಯಲು ಬರುವಾಗ

'ಶ್ರೋತಸ್ಯ ವಿಲಕ್ಷಣ್ಯೆವರಪಿ ಕಾರ್ಯಕಾರತ್ವಾಭಾವನಹಾಹಿನಿ ತರ್ಕಸ್ಯಅಪ್ರತಿಷ್ಠಿತತ್ವಾತ್' ಎಂಬುದಾಗಿ ಅಧ್ಯಾಹೃತವಾದ ಸಾಧ್ಯದ ಜೊತೆಗೆ ಅನ್ವಯವನ್ನು ಮಾಡುವುದು ಅಯುಕ್ತವಾಗುತ್ತದೆ. ಪ್ರಸಂಗಶಬ್ದ ಹಾಗೂ ಅಪಿಶಬ್ದಗಳು ವ್ಯರ್ಥವಾಗುತ್ತವೆ. ಎಲ್ಲಾ ಬಗೆಯ ತರ್ಕಗಳನ್ನು ಅಪ್ರಮಾಣವೆನ್ನುವುದಾದರೆ ಬ್ರಹ್ಮಮೀಮಾಂಸಾಶಾಸ್ತ್ರವೇ ಅನಾರಂಭಣೀಯ-ವಾಗಬೇಕಾಗುತ್ತದೆ. 'ಯಃ ತರ್ಕೇನ ಅನುಸಂಧತ್ತೇ ಇತ್ಯಾದಿ ಶ್ರುತಿ-ಸ್ಮೃತಿಗಳ ವಿರೋಧವೂ ಕೂಡ ಪ್ರಾಪ್ತವಾಗುತ್ತದೆ. ಹೀಗೆ ಅದ್ವೈತಿಗಳ ಪ್ರಕಾರ ವಿಲಕ್ಷಣತ್ವಾಧಿಕರಣದಲ್ಲಿರುವ ಎಂಟುಸೂತ್ರಗಳ ವ್ಯಾಖ್ಯಾನವು ಅತ್ಯಂತ ಅಯುಕ್ತವಾಗಿದೆ ಎಂದು ಹೇಳಿದಂತಾಯಿತು.

'ಏತೇನ ಶಿಷ್ಟಾಽಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಒಂದೇ ಸೂತ್ರವನ್ನು ಶಿಷ್ಟಪರಿಗ್ರಹಾಧಿಕರಣವೆನ್ನುತ್ತಾರೆ. ಈ ಅಧಿಕರಣದಲ್ಲಿ ಬ್ರಹ್ಮಕಾರಣತ್ವವಾದವು ವೈದಿಕಮತವಾಗಿರುವುದರಿಂದ ವ್ಯಾಸ, ಮನು ಮೊದಲಾದ ಶಿಷ್ಟಜನರಿಂದ ಅನಾದೃತವಾದ ವೈಶೇಷಿಕರ ಪರಮಾಣುವಿನ ಕಾರಣತ್ವವಾದವು ನಿರಾಕೃತವಾಯಿತು ಎಂದು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ.

ಇದೂ ಕೂಡ ಅಯುಕ್ತ. ಪ್ರತ್ಯೇಕಅಧಿಕರಣವೆನ್ನಲು ಯಾವುದೇ ಅಭ್ಯಧಿಕಾ-ಶಂಕೆಯಾಗಲೀ, ಹೊಸದಾದ ಸಿದ್ಧಾಂತಯುಕ್ತಿಗಳಾಗಲೀ ಸೂತ್ರದಲ್ಲಿ ಕಾಣಿಸುತ್ತಿಲ್ಲ. ಮತ್ತು ಪರಮಾಣ್ವಾಧಿಕಾರಣತಾವಾದವನ್ನು ಪ್ರಥಮಾಧ್ಯಾಯದ ಕೊನೆಯ ಸೂತ್ರವೆನಿಸಿದ 'ಏತೇನ ಸರ್ವಾ ವ್ಯಾಖ್ಯಾತಾಃ' ಎಂಬಲ್ಲಿ ನೀವು ನಿರಾಕರಣೆ ಮಾಡಿದ್ದೀರಿ. ಪುನಃ ಅದೇ ವಿಷಯವನ್ನು ಇಲ್ಲಿಯೂ ಹೇಳಿದರೆ ಪುನರುಕ್ತಿಯು ಬರುತ್ತದೆ. ವೈಶೇಷಿಕರು ಈಶ್ವರನನ್ನು ಒಪ್ಪಿರುವುದರಿಂದ ವ್ಯಾಸಾದಿ ಶಿಷ್ಟರಿಗೆ ಸ್ವಲ್ಪವಾದರೂ ಹತ್ತಿರವಾಗಿದ್ದಾರೆ. ಆದರೆ ಸಾಂಖ್ಯರು ಈಶ್ವರನನ್ನು ಒಪ್ಪದ ಕಾರಣ ಶಿಷ್ಟಜನರಿಂದ ಅತ್ಯಂತ ತಿರಸ್ಕೃತರಾಗಿದ್ದಾರೆ. ಆದರೆ ನೀವು ಇದಕ್ಕೆ ವಿರುದ್ಧವಾಗಿ ಸಾಂಖ್ಯರನ್ನೇ ವ್ಯಾಸಾದಿಶಿಷ್ಟರಿಂದ ಪರಿಗ್ರಹೀತರಾಗಿದ್ದಾರೆಂದು ವ್ಯಾಖ್ಯಾನ ಮಾಡಿರುತ್ತೀರಿ. ಹೀಗೆ ಅದ್ವೈತಮತದಲ್ಲಿ ಪ್ರತಿಯೊಂದು ಸೂತ್ರಗಳ ವ್ಯಾಖ್ಯಾನವೂ ಕೂಡ ಅತ್ಯಂತ ಅಯುಕ್ತವಾಗಿವೆ ಎಂದು ನಿರ್ಣಯವಾಯಿತು.

ಇಲ್ಲಿಗೆ ಅಸದಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು.

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಭೋಕ್ತ್ರಧಿಕರಣ

## ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ, ತತ್ತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಭೋಕ್ತ್ರಧಿಕರಣ

## ಬ್ರಹ್ಮಸೂತ್ರ

'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – भोक्त्रापत्तेरविभागश्चेत् स्याल्लोकवत् ।।**

ಮೋಕ್ಷದಲ್ಲಿ ಎಲ್ಲ ಜೀವರೂ ಬ್ರಹ್ಮಸ್ವರೂಪವನ್ನು ತಾಳುತ್ತಾರೆ. ಬ್ರಹ್ಮನೊಂದಿಗೆ ಐಕ್ಯವನ್ನು ಪಡೆಯುತ್ತಾರೆ. ಎಂಬುದಾಗಿ ಶ್ರುತಿಯು ಬ್ರಹ್ಮನಿಂದ ಐಕ್ಯವನ್ನು ಮೋಕ್ಷಕಾಲದಲ್ಲಿ ಹೇಳುತ್ತದೆ. ಆದ್ದರಿಂದ ಅಲ್ಪನಾದ ಜೀವನಿಗಿಂತ ಬ್ರಹ್ಮನು ಅಭಿನ್ನನಾದ ಕಾರಣ ಜಗತ್ಕಾರಣತ್ವವು ಹೇಗೆ ಕೂಡುತ್ತದೆ? ಈ ಆಕ್ಷೇಪವು ತಪ್ಪು. ಒಂದು ನೀರು ಮತ್ತೊಂದು ನೀರಿನ ಜೊತೆಗೆ ಸೇರುತ್ತದೆ ಹೊರತು ಐಕ್ಯವನ್ನು ಹೊಂದುವುದಿಲ್ಲ. ಏಕೆಂದರೆ ನೀರನ್ನು ಸೇರಿಸಿದಾಗ ಮೊದಲಿದ್ದ ನೀರು ಹೆಚ್ಚಾಗುತ್ತದೆ. ಅದರಂತೆ ಜೀವನು ಪರಮಾತ್ಮನೊಂದಿಗೆ ಐಕ್ಯವನ್ನು ಪಡೆಯುತ್ತಾನೆ ಎಂದು ಶ್ರುತಿ ಹೇಳಿದ್ದರೂ ಪರಮಾತ್ಮನೇ ಜೀವನಾಗುವುದಿಲ್ಲ. ಮೋಕ್ಷದಲ್ಲಿ ಒಂದೇ ಸ್ಥಾನದಲ್ಲಿ ಇರುತ್ತಾರೆ ಎಂದಷ್ಟೇ ಶ್ರುತಿಯ ಅಭಿಪ್ರಾಯ.

ಅರ್ಥ -- ಭೋಕ್ತ್ರಾಪತ್ತೇಃ = ಭೋಕ್ತೃವಾದ ಜೀವನಿಗೆ 'ಪರೇ ಅವ್ಯಯೇ ಸರ್ವ ಏಕೀ ಭವಂತಿ' ಎಂಬ ಶ್ರುತಿಯು ಬ್ರಹ್ಮಸ್ವರೂಪವನ್ನು ಹೇಳುತ್ತಿದೆ. ಆದ್ದರಿಂದ ಜೀವೋತ್ತಮರಿಗೆ ಅವಿಭಾಗಃ = ಭೇದವಿರುವುದಿಲ್ಲ. ಅಲ್ಪನಾದ ಜೀವನಿಗಿಂತಲೂ ಅಭಿನ್ನನಾದ ಬ್ರಹ್ಮನಿಗೆ ಜಗತ್ಕಾರಣತ್ವವು ಅಯುಕ್ತವಾಗುತ್ತದೆ. ಚೇತ್ = ಇದು ಸರಿಯಲ್ಲ. ಏಕೆಂದರೆ ಯಾವ ಕಾರಣದಿಂದ ಲೋಕವತ್ = ಲೋಕವ್ಯವಹಾರದಲ್ಲಿ ನೀರು ಮತ್ತೊಂದು

ನೀರಿನಲ್ಲಿ ಐಕ್ಯ ಹೊಂದಿತು ಎಂಬ ಪ್ರಯೋಗವಿದೆ. ಆದರೆ ಒಂದು ನೀರು ಮತ್ತೊಂದು ನೀರಿನ ಜೊತೆಗೆ ಬೆರೆಯುತ್ತದೆ ಹೊರತು ಐಕ್ಯವನ್ನು ಹೊಂದುವುದಿಲ್ಲ. ಅದರಂತೆ ಇಲ್ಲಿಯೂ ಕೂಡ ಸ್ಥಾನೈಕ್ಯದ ದೃಷ್ಟಿಯಿಂದ ಈಶ್ವರನಿಗೆ ಐಕ್ಯವನ್ನು ಶ್ರುತಿಯು ಹೇಳುತ್ತಿದೆ. ಸ್ಯಾತ್ = ಐಕ್ಯವ್ಯವಹಾರವು ಔಪಚಾರಿಕವಾದದ್ದು. ಆದ್ದರಿಂದ ಆಕ್ಷೇಪವು ಅಯುಕ್ತವಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಭೋಕ್ತ್ರಧಿಕರಣವು ಸಮಾಪ್ತವಾಯಿತು ॥

## ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

### ಮೊದಲು ಭಿನ್ನವಾದದ್ದು ಅನಂತರ ಅಭಿನ್ನವಾಗಲು ಸಾಧ್ಯವಿಲ್ಲ

**ब्रह्मसूत्रभाष्यम् – ।। भोक्त्रापत्तेरविभागश्चेत् स्याल्लोकवत् ।।१।।**

**'कर्माणि विज्ञानमयश्च आत्मा परेऽव्यये सर्व एकीभवन्ति' (मुं.३.२.७) इति मुक्तजीवस्य परापत्तिरुच्यते । अतस्तयोरविभागः। अतः पूर्वमपि स एव । न ह्यन्यस्यान्यत्वं युज्यत इति चेत् –**

ಅನುವಾದ - ಕರ್ಮಗಳು ವಿಜ್ಞಾನಮಯನಾದ ಜೀವ ಇವರೆಲ್ಲರೂ ನಾಶರಹಿತನಾದ ಉತ್ತಮನಾದ ಪರಮಾತ್ಮನಲ್ಲಿ ಐಕ್ಯವನ್ನು ಪಡೆಯುತ್ತಾರೆ. ಹೀಗೆ ಮುಕ್ತನಾದ ಜೀವನಿಗೆ ಪರಮಾತ್ಮನಿಂದ ಐಕ್ಯವನ್ನು ಶ್ರುತಿಯು ಹೇಳುತ್ತಿದೆ. ಮೋಕ್ಷದಲ್ಲಿ ಅಭೇದವಿಲ್ಲ. ಮೋಕ್ಷಕ್ಕಿಂತ ಮೊದಲು ಸಂಸಾರಾವಸ್ಥೆಯಲ್ಲಿಯೂ ಅಭೇದವಿರಲೇಬೇಕು. ಏಕೆಂದರೆ ಮೊದಲು ಭಿನ್ನವಾದ ಎರಡು ಪದಾರ್ಥಗಳು ಮುಂದೆ ಅಭಿನ್ನವಾಗಲು ಸಾಧ್ಯವಿಲ್ಲ. ಇಷ್ಟು ಪೂರ್ವಪಕ್ಷ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಅನೇಕ ಶ್ರುತಿಗಳಿಂದ ಸಿದ್ಧವಾದ ಪ್ರಬಲವಾದ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಪೂರ್ವಪಕ್ಷದ ಭಾಗವನ್ನು ಮೊದಲು ವ್ಯಾಖ್ಯಾನ ಮಾಡಿದ್ದಾರೆ.

ಕರ್ಮಾಣಿ = ಎಲ್ಲಾ ಬಗೆಯ ಕರ್ಮಗಳು, ವಿಜ್ಞಾನಮಯಶ್ಚ = ವಿಜ್ಞಾನಮಯನಾದ, ಆತ್ಮಾ = ಜೀವನು, ಸರ್ವೇ = ಎಲ್ಲವೂ ಕೂಡ, ಪರೇ = ಸರ್ವೋತ್ತಮನಾದ, ಅವ್ಯಯಃ = ನಾಶರಹಿನಾದ ಪರಮಾತ್ಮನಲ್ಲಿ, ಏಕೀಭವಂತಿ = ಐಕ್ಯವನ್ನು ಹೊಂದುತ್ತಾರೆ. ಇತಿ = ಹೀಗೆ, ಮುಕ್ತಜೀವಸ್ಯ = ಮುಕ್ತನಾದ ಜೀವನಿಗೆ, ಪರಾಪತ್ತಿಃ = ಪರಮಾತ್ಮನಿಂದ ಐಕ್ಯವು, ಉಚ್ಯತೇ = ಹೇಳಲಾಗಿದೆ, ಅತಃ = ಆದ್ದರಿಂದ, ತಯೋಃ = ಜೀವ ಬ್ರಹ್ಮರಿಗೆ, ಅವಿಭಾಗಃ = ಅಭೇದವಿರುತ್ತದೆ. ಅತಃ = ಮೋಕ್ಷಾವಸ್ಥೆಯಲ್ಲಿ ಅಭೇದವಿರುವುದರಿಂದ, ಪೂರ್ವಮಪಿ = ಸಂಸಾರಾವಸ್ಥೆಯಲ್ಲೂ ಕೂಡ, ಸಏವ = ಅಭೇದವನ್ನು ಹೇಳಲೇ ಬೇಕು. ಅನ್ಯಥಾ = ಮೊದಲು ಭಿನ್ನವಾದ ವಸ್ತುವಿಗೆ, ಅನ್ಯತ್ವಂ = ಅಭೇದವು, ನಹಿ ಯುಜ್ಯತೇ = ಯುಕ್ತವಾಗುವುದಿಲ್ಲ. ಇತಿ ಚೇತ್ = ಇಷ್ಟು ಪೂರ್ವಪಕ್ಷ.

### ಮೋಕ್ಷವ್ಯವಹಾರವೂ ಕೂಡ ಲೋಕವ್ಯವಹಾರದಂತೆ

**ब्रह्मसूत्रभाष्यम् – न, स्याल्लोकवत् । यथा लोके उदके उदकान्तरस्यैकीभावव्यवहारेऽप्यन्तर्भेदोऽस्त्येव, एवं स्यादत्रापि ।**

ಅನುವಾದ - ಈ ಆಕ್ಷೇಪ ತಪ್ಪು. ಉಪನಿಷತ್ತಿನಲ್ಲಿರುವ ಐಕ್ಯವ್ಯವಹಾರವು ಗೌಣ ಪ್ರಯೋಗವಾಗಿದೆ. ಯಾವ ರೀತಿಯಾಗಿ ಲೋಕದಲ್ಲಿ ನೀರಿನ ಜೊತೆ ಮತ್ತೊಂದು ನೀರು ಸೇರಿದಾಗ 'ಏಕೀಭಾವವಾಯಿತು' ಎಂಬ ವ್ಯವಹಾರವಿದ್ದರೂ ಎರಡು ನೀರುಗಳಲ್ಲಿ ಭೇದವು ಇರುತ್ತದೋ, ಇದೇ ರೀತಿಯಾಗಿ ಮೋಕ್ಷದಲ್ಲಿಯೂ ಕೂಡ ಜೀವ ಹಾಗೂ ಬ್ರಹ್ಮರಿಗೆ ಭೇದವು ಇದ್ದೇ ಇರುತ್ತದೆ.

ಪ್ರತಿಪದಾರ್ಥ -- ನಞ್ ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳುವ ಮೂಲಕ 'ಅವಿಭಾಗಃ' ಎಂಬ ಪದವನ್ನು ಅನುಷಂಗ ಮಾಡಿಕೊಳ್ಳುವ ಮೂಲಕ ಸಿದ್ಧಾಂತ ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ನ = ಈ ಆಕ್ಷೇಪವು ತಪ್ಪು. ಲೋಕವತ್ = ಲೋಕದಲ್ಲಿ ಏಕೀಭಾವವ್ಯವಹಾರ ಇರುವಂತೆ, ಸ್ಯಾತ್ = ಇಲ್ಲಿಯೂ ಇದೆ. ಜೀವಬ್ರಹ್ಮರ ಭೇದವು

ಯುಕ್ತವಾಗುತ್ತದೆ. ಯಥಾ = ಯಾವ ರೀತಿಯಾಗಿ, ಲೋಕೇ = ಲೋಕದಲ್ಲಿ, ಉದಕೇ = ನೀರಿನಲ್ಲಿ ಉದಕಾಂತರಸ್ಯ = ಮತ್ತೊಂದು ನೀರನ್ನು ಸೇರಿಸಿದಾಗ, ಏಕೀಭಾವವ್ಯವಹಾರೇಽಪಿ = ಒಂದೇ ಎಂಬ ವ್ಯವಹಾರವಿದ್ದರೂ, ಅಂತರ್ಭೇದಃ = ಅವುಗಳಲ್ಲಿ ಪರಸ್ಪರ ಭೇದವು, ಅಸ್ತ್ಯೇವ = ಇದ್ದೇ ಇದೆಯೊ, ಏವಂ = ಅದೇ ರೀತಿಯಾಗಿ, ಅತ್ರಾಪಿ = ಮೋಕ್ಷದಲ್ಲಿಯೂ ಕೂಡ, ಸ್ಯಾತ್ = ಜೀವಬ್ರಹ್ಮರ ಭೇದವು ಇದ್ದೇ ಇರುತ್ತದೆ.

ಈ ವಿಷಯದಲ್ಲಿ ಉಪನಿಷತ್ತಿನಲ್ಲಿ ಹೇಳಿದ ದೃಷ್ಟಾಂತ

**ब्रह्मसूत्रभाष्यम् – तथा च श्रुतिः – 'यथोदकं शुद्धे शुद्धमासिक्तं तादृगेव भवति' (कठ.४.१५.) इति ॥**

ಅನುವಾದ - ಕಾಠಕದ ಶ್ರುತಿ ಹೀಗೆ ಹೇಳಿದೆ - ಶುದ್ಧವಾದ ನೀರಿನಲ್ಲಿ ಮತ್ತೊಂದು ಶುದ್ಧವಾದ ನೀರನ್ನು ಸೇರಿಸಿದಾಗ ಒಂದೇ ಆಗುವುದಿಲ್ಲ. ಒಂದರಂತೆ ಮತ್ತೊಂದು ಆಗುತ್ತದೆ.

ಪ್ರತಿಪದಾರ್ಥ -- ಶ್ರುತಿಗೆ ಗೌಣವಾದ ಅರ್ಥವನ್ನು ನಿರಾಧಾರವಾಗಿ ಕಲ್ಪನೆ ಮಾಡುತ್ತಿಲ್ಲ. ಶ್ರುತಿಯ ಆಧಾರದಿಂದಲೇ ಹೇಳುತ್ತಿದ್ದೇವೆಂದು ಸಮರ್ಥಿಸುತ್ತಿದ್ದಾರೆ. ಯಥಾ = ಯಾವ ರೀತಿಯಾಗಿ, ಶುದ್ಧೇ ಉದಕೇ = ಶುದ್ಧವಾದ ನೀರಿನಲ್ಲಿ, ಶುದ್ಧಂ = ಮತ್ತೊಂದು ಶುದ್ಧವಾದ ನೀರನ್ನು, ಆಸಿಕ್ತಂ = ಬೆರೆಸಿದಾಗ, ತಾದೃಗೇವ = ಮೊದಲಿನ ಶುದ್ಧನೀರಿನಂತೆ, ಭವತಿ = ಆಗುತ್ತದೆ. ಇತಿ = ಹೀಗೆ, ಶ್ರುತಿಃ = ಕಾಠಕೋಪನಿಷತ್ತು ಹೇಳಿದೆ.

ಮುಕ್ತಿಯಲ್ಲಿ ಪರಮಾತ್ಮನ ಸ್ವರೂಪವನ್ನು ತಾಳಲಾರ

**ब्रह्मसूत्रभाष्यम् – स्कान्दे च –**

**'उदकं तूदके सिक्तं मिश्रमेव यथा भवेत् ।**
**न चैतदेव भवति यतो वृद्धिः प्रदृश्यते ।**

**एवमेव हि जीवोऽपि तादात्म्यं परमात्मना ।**
**प्राप्तोऽपि नासौ भवति स्वातन्त्र्यादिविशेषणात् ।।' इति ।**

ಅನುವಾದ - ಸ್ಕಾಂದಪುರಾಣದಲ್ಲಿ ಹೀಗೆ ಹೇಳಲಾಗಿದೆ - ನೀರಿನಲ್ಲಿ ಮತ್ತೊಂದು ನೀರನ್ನು ಸೇರಿಸಿದಾಗ ಎರಡು ವಿಶ್ರಣವಾಗುತ್ತವೆ ಹೊರತು ಐಕ್ಯವನ್ನು ಹೊಂದುವುದಿಲ್ಲ. ಆದ್ದರಿಂದಲೇ ನೀರನ್ನು ಬೆರಸಿದ ಮೇಲೆ ಮೊದಲೇ ಇರುವ ನೀರಿಗಿಂತ ಪ್ರಮಾಣವು ಹೆಚ್ಚಾಗುತ್ತದೆ. ಅದೇ ರೀತಿಯಾಗಿ ಜೀವನು ಪರಮಾತ್ಮನೊಂದಿಗೆ ತಾರತಮ್ಯವನ್ನು ಹೊಂದುತ್ತಾನೆ ಎಂದು ಶ್ರುತಿ ಹೇಳಿದ್ದರೂ ಪರಮಾತ್ಮನ ಸ್ವರೂಪವನ್ನು ತಾಳುವುದಿಲ್ಲ. ಏಕೆಂದರೆ ಪರಮಾತ್ಮನಲ್ಲಿ ಜೀವನಲ್ಲಿಲ್ಲದ ಸ್ವಾತಂತ್ರ್ಯ ಮೊದಲಾದ ವಿಶೇಷಗುಣಗಳಿರುತ್ತವೆ.

ಪ್ರತಿಪದಾರ್ಥ -- ಎರಡೂ ಜಲಗಳಿಗೆ ಐಕ್ಯವೇ ಇರುವುದರಿಂದ ವ್ಯಭಿಚಾರವು ಬರುವುದಿಲ್ಲ. ಮತ್ತು ಔಪಚಾರಿಕ ಅರ್ಥವನ್ನು ಮಾಡಿದಂತಾಗುವುದಿಲ್ಲ. ಈ ಪ್ರಶ್ನೆಗೆ ಹಿಂದೆ ಹೇಳಿದ ವಿಷಯದಲ್ಲಿ ಶ್ರುತಿಪ್ರಮಾಣವನ್ನು ತೋರಿಸುತ್ತಿದ್ದಾರೆ. ಸ್ಕಾಂದೇ ಚ = ಸ್ಕಾಂದಪುರಾಣದಲ್ಲಿ ಹೀಗೆ ಹೇಳಲಾಗಿದೆ - ಉದಕೇ = ಮೊದಲಿರುವ ನೀರಿನಲ್ಲಿ, ಉದಕಂ = ಮತ್ತಷ್ಟು ನೀರನ್ನು, ಸಿಕ್ತಂ = ಸೇರಿಸಿದಾಗ, ಯಥಾ = ಯಾವರೀತಿಯಾಗಿ, ಮಿಶ್ರಮೇವ = ವಿಶ್ರಣವೇ, ಭವೇತ್ = ಹೊಂದುತ್ತದೋ, ಏತದೇವ = ಅದೇ ನೀರು, ನ ಚ ಭವತಿ = ಆಗುವುದಿಲ್ಲ, ಯತಃ = ಏಕೆಂದರೆ, ವೃದ್ಧಿಃ = ಪ್ರಮಾಣದಲ್ಲಿ, ಆಧಿಕ್ಯವು, ಪ್ರದೃಶ್ಯತೇ = ಸ್ಪಷ್ಟವಾಗಿ ಕಾಣಿಸುತ್ತದೆ. ಏವಮೇವ ಹಿ = ಇದರಂತೆ, ಜೀವೋಽಪಿ = ಜೀವನೂ ಕೂಡ, ಪರಮಾತ್ಮನಾ = ಪರಬ್ರಹ್ಮನಿಂದ, ಅಸೌ = ಈ ಜೀವನು, ತಾದಾತ್ಮ್ಯಂ = ಐಕ್ಯವನ್ನು, ಪ್ರಾಪ್ತೋಽಪಿ = ಹೊಂದಿದವನಾದರೂ, ನ ಭವತಿ = ಬ್ರಹ್ಮನೇ ಆಗುವುದಿಲ್ಲ. ಸ್ವಾತಂತ್ರ್ಯಾದಿವಿಶೇಷಣಾತ್ = ಸ್ವಾತಂತ್ರ್ಯ ಸರ್ವತಂತ್ರ-ಸ್ವತಂತ್ರತ್ವ ಮೊದಲಾದ ಧರ್ಮಗಳು ಶ್ರೀಹರಿಯಲ್ಲಿರುತ್ತವೆ.

### ಬ್ರಹ್ಮಾದಿಗಳಿಗೂ ಐಕ್ಯವಿಲ್ಲ

**ब्रह्मसूत्रभाष्यम् —**

**'ब्रह्मेशानादिभिर्देवैर्यत् प्राप्तुं नैव शक्यते ।**
**तद्यत्स्वभावः कैवल्यं स भवान् केवलो हरे ।।' इति च ।।**

ಅನುವಾದ - ಬ್ರಹ್ಮ, ರುದ್ರ ಮೊದಲಾದ ದೇವತೆಗಳಿಂದಲೂ ಯಾವ ಪರಮಾತ್ಮನನ್ನು ಹೊಂದಲು ಸಾಧ್ಯವಿಲ್ಲವೋ ಅಂಥ ಮೋಕ್ಷವು ನಿನ್ನ ಸ್ವಭಾವವಾಗಿದೆ. ಆದ್ದರಿಂದಲೇ ನೀನು ಕೇವಲ ಎಂದು ಕರೆಸಿಕೊಳ್ಳುವೆ.

ಪ್ರತಿಪದಾರ್ಥ -- 'ನಾಸೌ ಭವತಿ' ಎಂಬ ವಚನವು ಉಳಿದ ಜೀವರ ವಿಷಯದಲ್ಲಿ ಮಾತ್ರ ಹೊರತು ಬ್ರಹ್ಮಾದಿಗಳನ್ನು ಕುರಿತು ಅಲ್ಲ. ಆದ್ದರಿಂದ ಚತುರ್ಮುಖಬ್ರಹ್ಮಾದಿಗಳಿಗೆ ಪರಮಾತ್ಮನ ಜೊತೆ ಐಕ್ಯವನ್ನು ಹೇಳಬಹುದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಯತ್ = ಯಾವ ಬ್ರಹ್ಮತ್ವವನ್ನು, ಪ್ರಾಪ್ತುಂ = ಹೊಂದಲು, ಬ್ರಹ್ಮೇಶಾನಾದಿಭಿಃ = ಚತುರ್ಮುಖ ರುದ್ರ ಮೊದಲಾದ, ದೇವೈಃ = ದೇವತೆಗಳಿಂದ, ನೈವ ಶಕ್ಯತೇ = ಎಂದೂ ಕೂಡ ಹೊಂದಲು ಸಾಧ್ಯವಿಲ್ಲವೋ, ತತ್ = ಅಂಥ. ಸ್ವಭಾವಃ = ಸ್ವರೂಪವುಳ್ಳವನು. ಭವಾನ್ = ನೀನು. ಹೇ ಹರೇ = ಎಲೈ ಹರಿಯೇ. ಇತಿ = ಆದ್ದರಿಂದ. ಭವಾನ್ = ನೀನು. ಕೇವಲಃ = ಕೇವಲ ಎಂದು ಕರೆಸಿಕೊಳ್ಳುವಿ. ಇತಿ ಚ = ಹೀಗೆ ಸ್ಕಾಂದಪುರಾಣವು ಹೇಳುತ್ತಿದೆ.

### ಪರಮಾತ್ಮ ಭೇದವಿಷಯದಲ್ಲಿ ಅನೇಕ ಪ್ರಮಾಣಗಳು

**ब्रह्मसूत्रभाष्यम् – 'न ते महित्वमन्वश्नुवन्ति' (ऋ.७.९९.१) 'न ते विष्णो जायमानो न जातः' (ऋ. ७.११.२) इत्यादि च ।**

ಅನುವಾದ - ಎಲೈ ವಿಷ್ಣುವೇ ! ನಿನ್ನ ಜಗತ್ಸೃಷ್ಟ್ಯಾದಿ ಮಹಿಮೆಯನ್ನು ಯಾರೂ ಕೂಡ ಹೊಂದಲು ಸಾಧ್ಯವಿಲ್ಲ. ಎಲೈ ವಿಷ್ಣುವೇ ! ನಿನ್ನ ಮಹಿಮೆಯನ್ನು ಇದುವರೆಗೆ ಹುಟ್ಟಿದ ಯಾರೂ ಹೊಂದಿರುವುದಿಲ್ಲ. ಮುಂದೆ ಹುಟ್ಟುವವರೂ ಕೂಡ ಹೊಂದುವುದಿಲ್ಲ. ಹೀಗೆ ಅನೇಕ ಶ್ರುತಿಗಳು ಪರಮಾತ್ಮನು ಭಿನ್ನನಾಗಿದ್ದಾನೆ ಎನ್ನಲು ಪ್ರಮಾಣವಾಗಿವೆ.

ಪ್ರತಿಪದಾರ್ಥ -- ಚತುರ್ಮುಖಾದಿಗಳ ಜೊತೆ ಪರಮಾತ್ಮನಿಗೆ ಐಕ್ಯವು ಸರ್ವಥಾ ಯುಕ್ತವಾಗುವುದಿಲ್ಲ ಎಂಬ ವಿಷಯದಲ್ಲಿ ಶ್ರುತಿ ಪ್ರಮಾಣವನ್ನು ಆಧಾರವನ್ನಾಗಿ ನೀಡುತ್ತಿದ್ದಾರೆ. ತೇ = ನಿನ್ನ, ಮಹಿತ್ವಮ್ = ಮಹಿಮೆಯನ್ನು, ನ ಅನ್ವಶ್ನುವಂತಿ = ಯಾರೂ ಕೂಡ

ಅನುಭವಿಸಲು ಸಾಧ್ಯವಿಲ್ಲ. ವಿಷ್ಣೋ= ಎಲೈ ವಿಷ್ಣುವೇ, ತೇ = ನಿನ್ನ ಮಹಿಮೆಯನ್ನು, ಜಾತಃ = ಇದುವರೆಗೂ ಹುಟ್ಟಿದ ಬ್ರಹ್ಮಾದಿಗಳು, ನ = ಹೊಂದಲಾರರು. ಮುಂದೆ ಹುಟ್ಟುವ ಬ್ರಹ್ಮಾದಿಗಳೂ ಕೂಡ, ನ = ಹೊಂದಲಾರರು, ಇತ್ಯಾದಿ ಚ = ಇವೇ ಮೊದಲಾದ ಪ್ರಮಾಣಗಳಿವೆ.

ಅವಿರೋಧಾಧ್ಯಾಯದಲ್ಲಿ ಭೋಕ್ತೃಧಿಕರಣಕ್ಕೆ ಅಂತರ್ಭಾವ

**ब्रह्मसूत्रभाष्यम् – फलत्वेऽपि युक्तिविरोधेऽन्तर्भावादत्रोक्तम् ।।१।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये भोक्त्रधिकरणम् ।। ९ ।।**

ಮೋಕ್ಷರೂಪವಾದ ಫಲದ ವಿಷಯದಲ್ಲಿ ಈ ಪ್ರಮೇಯವು ಸಂಬಂಧವನ್ನು ಹೊಂದುತ್ತದೆ. ಆದರೂ ಕೂಡ ಯುಕ್ತಿವಿರೋಧದಲ್ಲಿಯೂ ಇದು ಸೇರುವುದರಿಂದ ಅವಿರೋಧಾಧ್ಯಾಯದಲ್ಲಿ ಈ ಅಧಿಕರಣವನ್ನು ಅಂತರ್ಭಾವ ಮಾಡಿದ್ದು ಸಮಂಜಸವೇ ಆಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಮುಕ್ತರಿಗೂ ಈಶ್ವರನಿಗೂ ಭೇದವನ್ನು ಸಮರ್ಥನೆ ಮಾಡುತ್ತಿರುವುದರಿಂದ ಫಲಾಧ್ಯಾಯದಲ್ಲಿ ಇದು ಸಂಗತವಾಗ-ಬೇಕಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಫಲತ್ವೇಽಪಿ = ಮೋಕ್ಷದ ವಿಷಯದಲ್ಲಿ ಈ ಅಧಿಕರಣವು ಸಂಗತವಾದರೂ ಯುಕ್ತಿವಿರೋಧದ ವಿಷಯದಲ್ಲಿಯೂ, ಅಂತರ್ಭಾವಾತ್ = ಅಂತರ್ಭಾವವನ್ನು ಹೊಂದುತ್ತದೆ. ಆದ್ದರಿಂದ ಅತ್ರ = ಈ ಅಧಿಕರಣದಲ್ಲಿ, ಉಕ್ತಮ್ = ಹೇಳಲ್ಪಟ್ಟಿದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಭೋಕ್ತೃಧಿಕರಣವು ಸಮಾಪ್ತವಾಯಿತು ॥

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

### ಜೀವೇಶರ ಭೇದಸ್ಥಾಪನೆಗೆ ಭೋಕ್ತ್ರಧಿಕರಣ

**सत्तर्कदीपावलिः – यत् जगज्जन्मादिकर्तृत्वमुक्तं विष्णोः, तन्न युज्यते । तस्य जीवाभिन्नस्य जीववत् जगत्कर्तृत्वायोगात् । 'परेऽव्यये सर्व एकीभवन्ति' इति श्रुत्यन्यथानुपपत्त्या जीवेशाभेदसिद्धिः - इति न वाच्यम् । 'एकीभवन्ति' इति श्रुतेः 'नीरेण क्षीरमेकीभवति' इतिवत् संसर्गविषयत्वेन जीवविष्णोरभेदासम्भवात् । न च नीरक्षीरयोरभेद एव । हंसेन पृथक् क्रियमाणत्वात् । 'नीरप्रक्षेपे क्षीरस्य परिमाणाधिक्यदर्शनाच्च' इत्येतमर्थं विस्तृत्य दर्शयति – भोक्त्रापत्तेरित्यादिना ।।**

ವಿಷ್ಣುವಿಗೆ ಜಗಜ್ಜನ್ಮಾದಿಕರ್ತೃತ್ವವನ್ನು ಸಮರ್ಥನೆ ಮಾಡಲಾಯಿತು. ಇದು ಅಯುಕ್ತವಾಗಿದೆ. ಆ ವಿಷ್ಣು ಜೀವಾಭಿನ್ನನಾಗಿದ್ದಾನೆ. ಇಂಥವನಿಗೆ ಜಗತ್‌ಕರ್ತೃತ್ವವು ಹೇಗೆ ಯುಕ್ತವಾಗುತ್ತದೆ ? ಏಕೆಂದರೆ 'ಪರೇऽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಜೀವಾಭೇದವನ್ನು ಒಪ್ಪದೇ ಯುಕ್ತವಾಗುವುದಿಲ್ಲ. ಇದರ ಅನ್ಯಥಾನುಪಪತ್ತಿಯಿಂದ ಜೀವೇಶರಿಗೆ ಅಭೇದವು ಸಿದ್ಧವಾಗುತ್ತದೆ.

ಈ ಆಕ್ಷೇಪ ತಪ್ಪು. ಏಕೀಭವಂತಿ ಎಂಬ ಶ್ರುತಿಯು ಅಭೇದವಿಷಯಕವೇ ಅಲ್ಲ. ನೀರು ಹಾಲಿನ ಜೊತೆಗೆ ಬೆರೆತಿತು ಎಂಬಂತೆ ಸಂಸರ್ಗವಿಷಯವಾಗಿದೆ. ಹೇಗೆ ಹಾಲು-ನೀರುಗಳಿಗೆ ಅಭೇದವನ್ನು ಹೇಳುವುದಿಲ್ಲವೋ, ಅದರಂತೆ ಜೀವ ಪರಮಾತ್ಮರಿಗೂ ಕೂಡ ಅಭೇದವನ್ನು ಹೇಳಬಾರದು. ಹಾಲು ಮತ್ತು ನೀರುಗಳಿಗೆ ಅಭೇದವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಹಂಸವು ನೀರು ಮತ್ತು ಹಾಲುಗಳನ್ನು ಬೇರ್ಪಡಿಸುತ್ತದೆ. ಅಷ್ಟೇ ಅಲ್ಲದೇ ಹಾಲಿಗೆ ನೀರನ್ನು

ಅನುಭವಿಸಲು ಸಾಧ್ಯವಿಲ್ಲ. ವಿಷ್ಣೋ= ಎಲೈ ವಿಷ್ಣುವೇ, ತೇ = ನಿನ್ನ ಮಹಿಮೆಯನ್ನು, ಜಾತಃ = ಇದುವರೆಗೂ ಹುಟ್ಟಿದ ಬ್ರಹ್ಮಾದಿಗಳು, ನ = ಹೊಂದಲಾರರು. ಮುಂದೆ ಹುಟ್ಟುವ ಬ್ರಹ್ಮಾದಿಗಳೂ ಕೂಡ, ನ = ಹೊಂದಲಾರರು, ಇತ್ಯಾದಿ ಚ = ಇವೇ ಮೊದಲಾದ ಪ್ರಮಾಣಗಳಿವೆ.

ಅವಿರೋಧಾಧ್ಯಾಯದಲ್ಲಿ ಭೋಕ್ತ್ರಧಿಕರಣಕ್ಕೆ ಅಂತರ್ಭಾವ

**ब्रह्मसूत्रभाष्यम् – फलत्वेऽपि युक्तिविरोधेऽन्तर्भावादत्रोक्तम् ॥१॥**

**॥ इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये भोक्तृधिकरणम् ॥ ९ ॥**

ಮೋಕ್ಷರೂಪವಾದ ಫಲದ ವಿಷಯದಲ್ಲಿ ಈ ಪ್ರಮೇಯವು ಸಂಬಂಧವನ್ನು ಹೊಂದುತ್ತದೆ. ಆದರೂ ಕೂಡ ಯುಕ್ತಿವಿರೋಧದಲ್ಲಿಯೂ ಇದು ಸೇರುವುದರಿಂದ ಅವಿರೋಧಾಧ್ಯಾಯದಲ್ಲಿ ಈ ಅಧಿಕರಣವನ್ನು ಅಂತರ್ಭಾವ ಮಾಡಿದ್ದು ಸಮಂಜಸವೇ ಆಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಮುಕ್ತರಿಗೂ ಈಶ್ವರನಿಗೂ ಭೇದವನ್ನು ಸಮರ್ಥನೆ ಮಾಡುತ್ತಿರುವುದರಿಂದ ಫಲಾಧ್ಯಾಯದಲ್ಲಿ ಇದು ಸಂಗತವಾಗ-ಬೇಕಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಫಲತ್ವೇऽಪಿ = ಮೋಕ್ಷದ ವಿಷಯದಲ್ಲಿ ಈ ಅಧಿಕರಣವು ಸಂಗತವಾದರೂ ಯುಕ್ತಿವಿರೋಧದ ವಿಷಯದಲ್ಲಿಯೂ, ಅಂತರ್ಭಾವಾತ್ = ಅಂತರ್ಭಾವವನ್ನು ಹೊಂದುತ್ತದೆ. ಆದ್ದರಿಂದ ಅತ್ರ = ಈ ಅಧಿಕರಣದಲ್ಲಿ, ಉಕ್ತಮ್ = ಹೇಳಲ್ಪಟ್ಟಿದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಭೋಕ್ತ್ರಧಿಕರಣವು ಸಮಾಪ್ತವಾಯಿತು ॥

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

### ಜೀವೇಶರ ಭೇದಸ್ಥಾಪನೆಗೆ ಭೋಕ್ತ್ರಧಿಕರಣ

**सत्तर्कदीपावळिः – यत् जगज्जन्मादिकर्तृत्वमुक्तं विष्णोः, तन्न युज्यते । तस्य जीवाभिन्नस्य जीववत् जगत्कर्तृत्वायोगात् । 'परेऽव्यये सर्व एकीभवन्ति' इति श्रुत्यन्यथानुपपत्त्या जीवेशाभेदसिद्धिः - इति न वाच्यम् । 'एकीभवन्ति' इति श्रुतेः 'नीरेण क्षीरमेकीभवति' इतिवत् संसर्गविषयत्वेन जीवविष्णोरभेदासम्भवात् । न च नीरक्षीरयोरभेद एव । हंसेन पृथक् क्रियमाणत्वात् । 'नीरप्रक्षेपे क्षीरस्य परिमाणाधिक्यदर्शनाच्च' इत्येतमर्थं विस्तृत्य दर्शयति – भोक्त्रापत्तेरित्यादिना ।।**

ವಿಷ್ಣುವಿಗೆ ಜಗಜ್ಜನ್ಮಾದಿಕರ್ತೃತ್ವವನ್ನು ಸಮರ್ಥನೆ ಮಾಡಲಾಯಿತು. ಇದು ಅಯುಕ್ತವಾಗಿದೆ. ಆ ವಿಷ್ಣು ಜೀವಾಭಿನ್ನನಾಗಿದ್ದಾನೆ. ಇಂಥವನಿಗೆ ಜಗತ್ಕರ್ತೃತ್ವವು ಹೇಗೆ ಯುಕ್ತವಾಗುತ್ತದೆ ? ಏಕೆಂದರೆ 'ಪರೇऽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯು ಜೀವಾಭೇದವನ್ನು ಒಪ್ಪದೇ ಯುಕ್ತವಾಗುವುದಿಲ್ಲ. ಇದರ ಅನ್ಯಥಾನುಪಪತ್ತಿಯಿಂದ ಜೀವೇಶರಿಗೆ ಅಭೇದವು ಸಿದ್ಧವಾಗುತ್ತದೆ.

ಈ ಆಕ್ಷೇಪ ತಪ್ಪು. ಏಕೀಭವಂತಿ ಎಂಬ ಶ್ರುತಿಯು ಅಭೇದವಿಷಯಕವೇ ಅಲ್ಲ. ನೀರು ಹಾಲಿನ ಜೊತೆಗೆ ಬೆರೆತಿತು ಎಂಬಂತೆ ಸಂಸರ್ಗವಿಷಯವಾಗಿದೆ. ಹೇಗೆ ಹಾಲು-ನೀರುಗಳಿಗೆ ಅಭೇದವನ್ನು ಹೇಳುವುದಿಲ್ಲವೋ, ಅದರಂತೆ ಜೀವ ಪರಮಾತ್ಮರಿಗೂ ಕೂಡ ಅಭೇದವನ್ನು ಹೇಳಬಾರದು. ಹಾಲು ಮತ್ತು ನೀರುಗಳಿಗೆ ಅಭೇದವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಹಂಸವು ನೀರು ಮತ್ತು ಹಾಲುಗಳನ್ನು ಬೇರ್ಪಡಿಸುತ್ತದೆ. ಅಷ್ಟೇ ಅಲ್ಲದೇ ಹಾಲಿಗೆ ನೀರನ್ನು

ಹಾಕಿದರೆ ಅದರ ಆಳತೆಯೂ ಕೂಡ ಹೆಚ್ಚುಗುವುದು ಕಂಡಿದೆ. ಈ ಎಲ್ಲಾ ವಿಷಯವನ್ನು ವಿಸ್ತಾರವಾಗಿ ಉಪಪಾದನೆ ಮಾಡಲು 'ಭೋಕ್ತ್ರಾಪತ್ತ್ಯಾದಿ' ಇತ್ಯಾದಿ ಭಾಷ್ಯವು ಹೊರಟಿದೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಭೋಕ್ತ್ರಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

'ಕರ್ಮಾಣಿ ವಿಜ್ಞಾನಮಯಶ್ಚ' ಎಂಬ ಶ್ರುತಿಯು ಐಕ್ಯಪರವಲ್ಲ

**तत्वप्रदीपः – भोक्त्रापत्तेरविभागश्चेत्स्याल्लोकवत् ।। कर्माणि विज्ञानमयश्चेत्यत्र न स्वरूपैकत्वम् उच्यते । कर्मणां तदनभ्युपगमात् । प्रपञ्चितं चैतत् तत्वनिर्णये भगवत्पादैरेव – 'स्वरूपैक्याभिप्राये कर्माणि विज्ञानमयश्चेति न युज्यते । नहि तत्पक्षेऽपि कर्मणां ब्रह्मैक्यं मुक्तावस्ति । निवृत्त्यभिप्राये पञ्चदशकलानामपि समत्वात्' इत्यादि ।**

'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ' ಎಂಬ ಶ್ರುತಿಯಲ್ಲಿ ಜೀವನಿಗೂ, ಪರಮಾತ್ಮನಿಗೂ ಸ್ವರೂಪೈಕ್ಯವನ್ನು ಹೇಳುತ್ತಿಲ್ಲ. ಏಕೆಂದರೆ ವಿಜ್ಞಾನಮಯನೆನಿಸಿದ ಜೀವನಿಗೆ ಪರಮಾತ್ಮನ ಜೊತೆ ಐಕ್ಯವನ್ನು ಹೇಳುವ ಉದ್ದೇಶವಿರುವುದಾಗಿದ್ದಲ್ಲಿ, ಕರ್ಮಾಣಿ ಎಂಬ ಪದದಿಂದ ಹೇಳಲ್ಪಟ್ಟ ಕರ್ಮಗಳಿಗೂ ಕೂಡ ಸ್ವರೂಪೈಕ್ಯವನ್ನು ಹೇಳಬೇಕಾದೀತು. ಆದರೆ ಅದ್ವೈತಿಗಳಾದ ನೀವು ಕರ್ಮಗಳಿಗೆ ಆತ್ಮನ ಜೊತೆ ಐಕ್ಯವನ್ನು ಅಂಗೀಕಾರ ಮಾಡಿರುವುದಿಲ್ಲ. ಇದೇ ವಿಷಯವನ್ನು ತತ್ವನಿರ್ಣಯದಲ್ಲಿ ಶ್ರೀಮದಾನಂತೀರ್ಥಭಗವತ್ಪಾದರೇ ಹೀಗೆ ವಿವರಿಸಿದ್ದಾರೆ - 'ಸ್ವರೂಪೈಕ್ಯಾಭಿಪ್ರಾಯೇ ಕರ್ಮಾಣಿ ವಿಜ್ಞಾನಮಯಶ್ಚೇತಿ ನ ಯುಜ್ಯತೇ । ನಹಿ ತತ್ಪಕ್ಷೇऽಪಿ ಕರ್ಮಣಾಂ ಬ್ರಹ್ಮೈಕ್ಯಂ ಮುಕ್ತಾವಸ್ತಿ । ನಿವೃತ್ತ್ಯಭಿಪ್ರಾಯೇ ಪಂಚದಶಕಲಾನಾಮಪಿ ಸಮತ್ವಾತ್'

'ಕರ್ಮಾಣಿ ವಿಜ್ಞಾನಮಯಶ್ಚ' ಎಂಬ ಇತ್ಯಾದಿ ಶ್ರುತಿಗೆ ಸ್ವರೂಪೈಕ್ಯವು ಅಭಿಪ್ರೇತವಲ್ಲ. ಸ್ವರೂಪೈಕ್ಯವು ಅಭಿಪ್ರೇತವಾಗಿದ್ದಲ್ಲಿ 'ಕರ್ಮಾಣಿ ವಿಜ್ಞನಮಯಶ್ಚ' ಎಂಬುದೇ ಯುಕ್ತವಾಗುವುದಿಲ್ಲ. ಏಕೆಂದರೆ ವಿಜ್ಞಾನಮಯನೆನಿಸಿದ ಜೀವಾತ್ಮನಿಗೆ ಐಕ್ಯವು ಯುಕ್ತವಾದರೂ ಕೂಡ ಕರ್ಮಗಳಿಗೆ ಬ್ರಹ್ಮನ ಜೊತೆ ಐಕ್ಯವನ್ನು ಅದ್ವೈತಿಗಳೂ ಕೂಡ ಅಂಗೀಕಾರ ಮಾಡಿರುವುದಿಲ್ಲ. ಇನ್ನು ಕರ್ಮಗಳು ನಿವೃತ್ತವಾಗುತ್ತವೆ ಎಂಬ ಅಭಿಪ್ರಾಯವನ್ನು ಐಕ್ಯಶಬ್ದಕ್ಕೆ ವಿವಕ್ಷಿಸಬೇಕು. ಹಾಗಾದಲ್ಲಿ ಪಂಚದಶಕಲೆಗಳಿಗೂ ಕೂಡ ಅದು ಸಮಾನವಾಗುತ್ತದೆ ಎಂದು.

ವಿವರಣೆ - ಅಥರ್ವಣೋಪನಿಷತ್ತಿನ ಮೂರನೆಯ ಮುಂಡಕದ ಎರಡನೆಯ ಖಂಡದಲ್ಲಿ ಹೀಗೆ ಶ್ರುತಿಯು ಪ್ರಾಪ್ತವಾಗಿದೆ -

'ಗತಾಃ ಕಲಾಃ ಪಂಚದಶಪ್ರತಿಷ್ಠಾ
ದೇವಾಶ್ಚ ಸರ್ವೇ ಪ್ರತಿದೇವತಾಸು।
ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ
ಪರೇಽವ್ಯಯೇ ಸರ್ವ ಏಕೀಭವಂತಿ ॥

ಪ್ರಾಣ, ಶ್ರದ್ಧಾ, ಆಕಾಶ, ವಾಯು, ಜ್ಯೋತಿಸ್, ಜಲ, ಪೃಥಿವೀ, ಇಂದ್ರಿಯ, ಮನಸ್ಸು, ಅನ್ನ, ವೀರ್ಯ, ತಪಸ್ಸು, ಮಂತ್ರ, ಲೋಕ ಮತ್ತು ನಾಮ ಇವು ಹದಿನೈದು ಕಲೆಗಳಿಗೆ ಪ್ರಾಣ, ವಾಣಿ, ವಿನಾಯಕ, ವಾಯುದೇವರ ಮಗನಾದ ಮರುತ್, ಅಗ್ನಿಯ ಮಗನಾದ ಪಾವಕ, ಬುಧ, ಶನಿ, ಇಂದ್ರ, ರುದ್ರ, ಚಂದ್ರ, ವರುಣ, ವಹ್ನಿ, ಸ್ವಾಹಾ, ಪರ್ಜನ್ಯ ಮತ್ತು ಉಷಾ ಈ ಹದಿನೈದು ದೇವತೆಗಳು ಕ್ರಮವಾಗಿ ನಿಯಾಮಕರು. ಮುಕ್ತಿಯಲ್ಲಿಯೂ ತಮಗಿಂತ ಕೆಳಗಿನವರಿಗೆ ನಿಯಾಮಕರಾದ ಈ ದೇವತೆಗಳು, ಬೇರೆ ಎಲ್ಲ ದೇವತೆಗಳು, ಕರ್ಮಾಭಿಮಾನಿಯಾದ ಪುಷ್ಕರ ಮತ್ತು ಜೀವಾತ್ಮ ಈ ಎಲ್ಲರೂ ಸರ್ವೋತ್ತಮನಾದ ಪರಮಾತ್ಮನನ್ನು ಪ್ರವೇಶಿಸುತ್ತಾರೆ ಮತ್ತು ಅವನಂತೆಯೇ ನಿರ್ದುಃಖಾನಂದ ಅನುಭವಿಸುತ್ತಾರೆ. ಅವನ ಜೊತೆಯಲ್ಲಿ ಒಂದೇ ಸ್ಥಾನದಲ್ಲಿ ವಾಸಿಸುತ್ತಾರೆ. ಹಾಗೂ ಅವನ ಸಂಕಲ್ಪಕ್ಕೆ ವಿರುದ್ಧವಾಗದ ರೀತಿಯಲ್ಲಿಯೇ ಸದಾ ನಡೆಯುತ್ತಾರೆ.

ಈ ಉಪನಿಷತ್ತಿನಲ್ಲಿ ಹದಿನೈದು ಕಲಾಭಿಮಾನಿದೇವತೆಗಳು ಮುಕ್ತರಾಗುವರು. ಜೀವನು ಯಾವಾಗ ಮುಕ್ತನಾಗುತ್ತಾನೋ, ಅವನ ಜೊತೆ ಹದಿನೈದು ಕಲೆಗಳ ಅಭಿಮಾನಿಗಳಾದ ದೇವತೆಗಳು ಮುಕ್ತರಾಗಿ ಮುಕ್ತಿಯಲ್ಲೂ ಕೂಡ ಜೀವರಿಗೆ ನಿಯಾಮಕರಾಗುತ್ತಾರೆ. ಹಾಗೂ ಕಲಾಭಿಮಾನಿದೇವತೆಗಳನ್ನು ಬಿಟ್ಟು, ಬೇರೆ ದೇವತೆಗಳೂ ಕೂಡ ತಮಗೆ ಪ್ರತಿಬಿಂಬರಾಗಿರುವ ಜೀವರಲ್ಲಿ ನೆಲೆಸಿರುತ್ತಾರೆ.

ಕರ್ಮಾಭಿಮಾನಿದೇವತೆಯಾದ ಪುಷ್ಕರನೂ ಕೂಡ ಜೀವನು ಮುಕ್ತನಾದ ಮೇಲೆ ಮೋಕ್ಷದಲ್ಲಿ ಪರಮಾತ್ಮನ ಜೊತೆ, ಜೀವನ ಜೊತೆ ಇರುತ್ತಾನೆ ಎಂಬುದಾಗಿ ಈ ಶ್ರುತಿಯು ಹೇಳುತ್ತಿದೆ. ಈ ಶ್ರುತಿಯಲ್ಲಿ ಹೇಳಲ್ಪಟ್ಟ ಷೋಡಶ ಕಲೆಗಳು ಹಾಗೂ ತದಭಿಮಾನಿದೇವತೆಗಳ ಹೆಸರು ಹೀಗಿದೆ - ೧. ಜೀವ- ತದಭಿಮಾನಿ ಮುಖ್ಯಪ್ರಾಣ, ೨. ಶ್ರದ್ಧಾ - ತದಭಿಮಾನಿ ಭಾರತಿ, ೩. ಮನಸ್ಸು - ತದಭಿಮಾನಿ ರುದ್ರ, ೪. ಇಂದ್ರಿಯಗಳು - ತದಭಿಮಾನಿ ಇಂದ್ರ, ೫. ಅನ್ನ - ತದಭಿಮಾನಿ ಸೋಮ, ೬. ವೀರ್ಯ - ತದಭಿಮಾನಿ ವರುಣ, ೭. ತಪಸ್ಸು- ತದಭಿಮಾನಿ ವಹ್ನಿ, ೮. ಆಕಾಶ - ತದಭಿಮಾನಿ ವಿನಾಯಕ, ೯. ವಾಯು-ವಾಯುಪುತ್ರರಲ್ಲಿ ಪ್ರಧಾನರಾದ ಮರೀಚಿ, ೧೦. ತೇಜಸ್ಸು - ಅಗ್ನಿಪುತ್ರರಲ್ಲಿ ಪ್ರಧಾನನಾದ ಪಾವಕ, ೧೧. ಲೋಕ - ತದಭಿಮಾನಿ ಪರ್ಜನ್ಯ, ೧೨. ಮಂತ್ರ - ತದಭಿಮಾನಿನೀ ಸ್ವಾಹಾ ೧೩. ಜಲ - ತದಭಿಮಾನಿ ಬುಧ, ೧೪. ನಾಮ - ತದಭಿಮಾನಿನೀ ಅಶ್ವಿನಿದೇವತೆಗಳ ಹೆಂಡತಿ ಉಷಾ, ೧೫. ಪೃಥಿವೀ - ತದಭಿಮಾನಿ ಶನಿ, ೧೬. ಕರ್ಮ - ವರುಣಪುತ್ರನಾದ ಪುಷ್ಕರ.

ಈ ಉಪನಿಷತ್ತಿನ ವಾಕ್ಯವನ್ನು ಗಮನಿಸಿ ಅದ್ವೈತಿಗಳು ಜೀವಾತ್ಮನು ಬ್ರಹ್ಮನ ಜೊತೆ ಐಕ್ಯವನ್ನು ಹೊಂದುತ್ತಾನೆ ಎಂದು ತಿಳಿಯುತ್ತಾರೆ. ಇದು ತಪ್ಪು. ಇಲ್ಲಿ ವಿಜ್ಞಾನಮಯಶಬ್ದವಷ್ಟೇ ಇರುವುದಲ್ಲ. ಕರ್ಮಾಣಿ ಎಂಬುದಾಗಿಯೂ ಕೇಳಿಸುತ್ತಿದೆ. ಜೀವನಿಗೆ ಐಕ್ಯವನ್ನು ವಿವಕ್ಷಿಸಿದರೆ ಈ ಕರ್ಮಗಳಿಗೂ ಕೂಡ ಐಕ್ಯವನ್ನು ವಿವಕ್ಷಿಸಬೇಕಾಗುತ್ತದೆ. ಆದರೆ ಅದ್ವೈತಿಗಳು ಕರ್ಮಕ್ಕೆ ಐಕ್ಯವನ್ನು ಹೇಳಿರುವುದಿಲ್ಲ. ಒಂದುವೇಳೆ ಕರ್ಮವು ನಿವೃತ್ತವಾಗುತ್ತದೆಂದು ವಿವಕ್ಷಿಸಿದರೆ ಪಂಚದಶಕಲೆಗಳೂ ಕೂಡ ನಿವೃತ್ತವಾಗುತ್ತವೆ ಎಂದು ಹೇಳಬೇಕಾಗುತ್ತದೆ. ಏಕೆಂದರೆ ಉಪನಿಷತ್ತಿನಲ್ಲಿ ಹದಿನಾರು ಕಲೆಗಳೂ ಕೂಡ ಕರ್ಮದಂತೆ ಪ್ರಸಕ್ತವಾಗಿವೆ. ಹೀಗೆ ಸಮಾನವಾಗಿ ಪ್ರಸಕ್ತವಾಗಿರುವ ಷೋಡಶಕಲೆಗಳನ್ನು ಬಿಟ್ಟು, ಹದಿನಾರನೆಯ ಕರ್ಮಕ್ಕೆ ಮಾತ್ರ ನಿವೃತ್ತಿಯನ್ನು ಹೇಳುವುದು ಸ್ವರಸವಾಗುವುದಿಲ್ಲ.

ಮುಕ್ತಿಯಲ್ಲಿ ಕರ್ಮಕ್ಷಯವಿಲ್ಲವೆಂಬುದು ಇದರ ಅಭಿಪ್ರಾಯ

**तत्वप्रदीपः – अतो ज्ञानोत्तरकालीनकर्मभिः सह मुक्तजीवस्य परोपकण्ठे स्थितिस्तद्बुद्धि सारूप्यं वेह विवक्षितम् । 'स य आत्मानमेव लोकमुपास्ते न हास्य कर्म क्षीयते' इति च श्रुतिर्ब्रह्मविदः कर्मणामक्षयमाचष्टे ।**

ಆದ್ದರಿಂದ 'ಕರ್ಮಾಣಿ ವಿಜ್ಞಾನಮಯಶ್ಚ' ಎಂಬ ಶ್ರುತಿಯ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - ಅಪರೋಕ್ಷಜ್ಞಾನದ ಅನಂತರ ಕೆಲವು ಕರ್ಮಗಳನ್ನು ಆಚರಣೆ ಮಾಡುತ್ತಾನೆ.

ಇದರಿಂದ ಮುಕ್ತಜೀವನು ಪರಮಾತ್ಮನ ಅತ್ಯಂತಸಾಮೀಪ್ಯವನ್ನು ಪಡೆಯುತ್ತಾನೆ. ಹಾಗೂ ಪರಮಾತ್ಮನ ಬುದ್ಧಿಸಾರೂಪ್ಯವನ್ನು ಪಡೆಯುತ್ತಾನೆ. ಹೀಗೆ ಸ್ಥಾನೈಕ್ಯ ಮತ್ಯೈಕ್ಯಗಳನ್ನು ಕರ್ಮಗಳ ಜೊತೆ ಪಡೆಯುತ್ತಾನೆ ಎಂಬರ್ಥವನ್ನು ಈ ಶ್ರುತಿಯು ಹೇಳುತ್ತಿದೆ. ಈ ವಿಷಯವು ಮತ್ತೊಂದು ಶ್ರುತಿಯಲ್ಲಿ ಅತ್ಯಂತ ಸ್ಪಷ್ಟವಾಗಿದೆ - 'ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷಿಯತೇ' ಯಾವ ಜೀವನು ಪರಮಾತ್ಮನನ್ನೇ ಆಶ್ರಯ ಎಂಬುದಾಗಿ ಉಪಾಸನೆ ಮಾಡುತ್ತಾನೋ, ಅವನಿಗೆ ಕರ್ಮಕ್ಷಯ ಆಗುವುದಿಲ್ಲ ಎಂದು. ಹೀಗೆ ಬ್ರಹ್ಮಜ್ಞಾನಿಗೆ ಕರ್ಮಗಳ ಫಲವು ಅಕ್ಷಯವೆಂದು ಹೇಳಲಾಗಿದೆ. ಆದ್ದರಿಂದ ಮುಕ್ತಿಯಲ್ಲೂ ಕೂಡ ಸಂಸಾರಾವಸ್ಥೆಯಲ್ಲಿ ಮಾಡಲ್ಪಟ್ಟ ಕರ್ಮಗಳು ನಿರಂತರವಾಗಿ ಫಲವನ್ನು ನೀಡುತ್ತವೆಂದು ತಿಳಿಯಬೇಕು.

### ತಾದಾತ್ಮ್ಯವು ಅನೇಕ ವಿಧ

**तत्वप्रदीपः – 'तादृक्त्वम्' एकस्थानगतत्वेन मिश्रत्वम् । तादात्म्यं तादात्म्यसादृश्यादेव, न स्वरूपैक्यम् । 'नासौ भवति' इति प्रकटप्रतिषेधात् तदधीनत्वं तत्प्राधान्यं तन्मत्यैक्यं तत्सामीप्यं तत्सारूप्यं तत्स्वारूप्यम् इत्यनेकविधम् हि तादात्म्यम् ।**

ಭಾಷ್ಯದಲ್ಲಿ 'ತಾದೃಗೇವ ಭವತಿ' ಎಂದು ಹೇಳಿದ್ದಾರೆ. ಇಲ್ಲಿ 'ತಾದೃಕ್ತ್ವ' ಎಂದರೆ ಒಂದೇ ಸ್ಥಾನದಲ್ಲಿದ್ದು ಮಿಶ್ರವಾಗುವಿಕೆ ಎಂದರ್ಥ. ನೀರು ಹಾಲಿನ ಜೊತೆ ಸೇರಿ ಮಿಶ್ರಣವಾಗುತ್ತದೆ ಹೊರತು, ಐಕ್ಯವನ್ನು ಹೊಂದುವುದಿಲ್ಲ ಎಂಬುದು ಇದರ ಅಭಿಪ್ರಾಯ. ಸ್ಕಾಂದಪುರಾಣದ ಮಾತಿನಲ್ಲಿ ಜೀವನು ಪರಮಾತ್ಮನ ಜೊತೆ ತಾದಾತ್ಮ್ಯವನ್ನು ಹೊಂದಿದರೂ ಕೂಡ ಎಂದು ಹೇಳಲಾಗಿದೆ. ಇಲ್ಲಿ ತಾದಾತ್ಮ್ಯ ಶಬ್ದಕ್ಕೆ ಸಾದೃಶ್ಯ ಎಂಬರ್ಥ. ಸ್ವರೂಪೈಕ್ಯಾತ್ ಎಂದರ್ಥವಲ್ಲ. ಏಕೆಂದರೆ 'ನಾಸೌ ಭವತಿ' ಎಂಬುದಾಗಿ ಮುಂದೆ ಜೀವಾತ್ಮನು ಪರಮಾತ್ಮನ ಸ್ವರೂಪನಾಗುವುದಿಲ್ಲ ಎಂಬುದಾಗಿ ಸ್ಪಷ್ಟವಾಗಿ ನಿಷೇಧ ಮಾಡಲಾಗಿದೆ. ಈ ತಾದಾತ್ಮ್ಯವು ಅನೇಕ ವಿಧವಾಗಿದೆ - ೧. ತದಧೀನತ್ವ, ೨. ತತ್‌ಪ್ರಾಧಾನ್ಯ, ೩. ತನ್ಮತ್ಯೈಕ್ಯ, ೪. ತತ್ ಸಾಮೀಪ್ಯ, ೫. ತತ್‌ಸಾರೂಪ್ಯ, ೬. ತತ್‌ಸ್ವರೂಪ ಇತ್ಯಾದಿಯಾಗಿ.

ಈ ಅಧಿಕರಣಕ್ಕೆ ಅವಿರೋಧಾಧ್ಯಾಯದಲ್ಲಿ ಸಂಗತಿ ಸಮರ್ಥನೆ

**तत्वप्रदीपः – कुत एतत् ज्ञानफलं निर्वाणमात्रोक्तमित्यत आह - फलत्वेऽपि इति । फलत्वेऽपि एतदत्रोक्तम्, जीवैक्य ईशितुः कर्तृत्वविरोधस्य युक्तिविरोधेऽन्तर्भावात् । यावन्न जीवादात्यन्तिकभेदसिद्धिः तावद्युक्तिविरुद्धमीश्वरस्य कर्तृत्वम् । न खल्वितोऽधिको यौक्तिको विरोधोऽस्ति। न हि परतन्त्रेणाल्पविदाऽल्प शक्तिना दुःखिनाऽभिन्नस्य परस्य सर्वकर्तृत्वं युक्तम् । अनीश्वरत्वादिप्रसङ्गात् । अपरथा कथम् 'इतरव्यपदेशात्' इत्यादि । अतोऽस्य विचारस्य फलगोचरत्वेऽपि प्रधानयुक्तिविरोधविचारेऽन्तर्भावात् प्रथमप्राप्तत्वाच्च अविरोधप्रस्तावस्य अत्रोपपत्तिः ।**

ಮೋಕ್ಷವು ಅಪರೋಕ್ಷಜ್ಞಾನಫಲರೂಪವಾಗಿದೆ. ಇದನ್ನು ನಿರೂಪಣೆ ಮಾಡಲು ಈ ಅಧಿಕರಣವು ಹೊರಟಿದೆ. ಹಾಗಾದರೆ ಫಲಾಧ್ಯಾಯದಲ್ಲಿ ಈ ಅಧಿಕರಣವನ್ನು ಉಲ್ಲೇಖ ಮಾಡಬೇಕಿತ್ತು. ಎರಡನೆಯ ಅವಿರೋಧಾಧ್ಯಾಯದಲ್ಲಿ ಏಕೆ ಉಲ್ಲೇಖ ಮಾಡಿದ್ದೀರಿ? ಈ ಪ್ರಶ್ನೆಗೆ 'ಫಲತ್ವೇऽಪಿ' ಎಂಬ ಭಾಷ್ಯದ ವಾಕ್ಯವು ಉತ್ತರಿಸುತ್ತಿದೆ. ಈ ಅಧಿಕರಣವು ಜ್ಞಾನಫಲದ ಬಗ್ಗೆಯೂ ಹೇಳುತ್ತಿದೆ. ಹೌದು. ಯುಕ್ತಿವಿರೋಧ ಪರಿಹಾರ ಮಾಡುವ ಎರಡನೆಯ ಅಧ್ಯಾಯದಲ್ಲಿ ಇದನ್ನು ಸೇರಿಸಿದ್ದು ಅಸಂಗತವಲ್ಲ. ಏಕೆಂದರೆ ಜೀವನು ಪರಮಾತ್ಮನ ಜೊತೆ ಐಕ್ಯವನ್ನು ಹೊಂದಿದರೆ ಆಗ ಜಗಜ್ಜನ್ಮಾದಿಕರ್ತೃತ್ವವು ಈಶ್ವರನಲ್ಲಿ ಯುಕ್ತವಾಗುವುದಿಲ್ಲ ಎಂಬ ಯುಕ್ತಿವಿರೋಧವು ಪ್ರಾಪ್ತವಾದರೆ ಜ್ಞಾನಫಲದ ಮೋಕ್ಷದ ಬಗ್ಗೆ ವಿಷಯಪ್ರಸ್ತಾವವೇ ಸಮಂಜಸವಾಗುವುದಿಲ್ಲ. 'ಪರಮಾತ್ಮಾ ನ ಜಗಜ್ಜನ್ಮಾದಿಕರ್ತಾ ಜೀವೇನ ಅಭೇದಾತ್' ಎಂಬ ಯುಕ್ತಿವಿರೋಧವನ್ನು ಇಲ್ಲಿ ತಿಳಿಯಬೇಕು.

ಎಲ್ಲಿಯತನಕ ಜೀವನ ದೆಸೆಯಿಂದ ಪರಮಾತ್ಮನಿಗೆ ಆತ್ಯಂತಿಕವಾದ ಭೇದವು ಸಿದ್ಧವಾಗುವುದಿಲ್ಲವೋ, ಅಲ್ಲಿಯತನಕ ಈಶ್ವರನ ಜಗಜ್ಜನ್ಮಾದಿಕರ್ತೃತ್ವವು ಯುಕ್ತಿವಿರುದ್ಧವಾಗಿರುತ್ತದೆ. ಇದಕ್ಕಿಂತ ಅಧಿಕವಾದ ಯುಕ್ತಿವಿರೋಧವು ಮತ್ತೊಂದು ಇರಲು ಸಾಧ್ಯವೇ ಇಲ್ಲವಷ್ಟೇ. ಪರತಂತ್ರನಾದ, ಅಲ್ಪಜ್ಞಾನಿಯಾದ, ಅಲ್ಪಶಕ್ತಿಯುಳ್ಳ ದುಃಖಿಯಾದ ಜೀವನ ಜೊತೆ

ಪರಮಾತ್ಮನು ಅಭಿನ್ನನಾದರೆ ಸರ್ವಕರ್ತೃತ್ವವು ಹೇಗೆ ತಾನೆ ಯುಕ್ತವಾಗುತ್ತದೆ ? ದುಃಖಿಯಾದ ಜೀವನಂತೆ ಅವನೂ ಕೂಡ ಅನೀಶ್ವರನೇ ಆಗುತ್ತಾನೆ ಅಲ್ಲವೇ? ಆದ್ದರಿಂದ ಯುಕ್ತಿವಿರೋಧವನ್ನು ಮೊದಲು ಪರಿಹಾರ ಮಾಡಲೇಬೇಕು. ಒಂದು ವೇಳೆ ಫಲವನ್ನು ಹೇಳುತ್ತಿದೆ ಎಂಬ ಉದ್ದೇಶದಿಂದ ಇದನ್ನು ಯುಕ್ತಿಪಾದದಲ್ಲಿ ಸೇರಿಸದೇ ಇದ್ದರೆ, ಆಗ 'ಇತರವ್ಯಪದೇಶಾತ್' ಇತ್ಯಾದಿ ಸೂತ್ರಗಳಿಗೂ ಕೂಡ ಹೇಗೆ ತಾನೆ ಪ್ರಸಕ್ತಿ ಬರುತ್ತದೆ ? ಅಲ್ಲೂ ಕೂಡ ಹೇಗೆ ಹಿತಾಕರಣಾದಿದೋಷಗಳೆಂಬ ಯುಕ್ತಿಗಳಿಂದ ಜೀವಬ್ರಹ್ಮೈಕ್ಯವನ್ನು ಪರಿಹರಿಸಲಾಗಿದೆಯೋ, ಅದರಂತೆ ಇಲ್ಲೂ ಕೂಡ ಐಕ್ಯವಿಷಯದಲ್ಲಿ ಬರುವ ಯುಕ್ತಿವಿರೋಧವನ್ನು ಪರಿಹರಿಸಿದ್ದಾರೆ. ಆದ್ದರಿಂದ ಈ ವಿಚಾರವು ಫಲವಿಷಯಕವಾಗಿದ್ದರೂ ಕೂಡ ಪ್ರಧಾನವಾದ ಯುಕ್ತಿವಿರೋಧವನ್ನು ಪರಿಹರಿಸುವುದರಿಂದ ಈ ಅಧ್ಯಾಯದಲ್ಲಿ ಇದು ಸಂಗತವಾಗುತ್ತದೆ. ಮತ್ತು ಈ ಅಧಿಕರಣವು ಯುಕ್ತಿವಿರೋಧವನ್ನೂ ಪರಿಹಾರ ಮಾಡುತ್ತಿದೆ. ಬ್ರಹ್ಮಜ್ಞಾನದ ಫಲವನ್ನೂ ಕೂಡ ನಿರೂಪಣೆ ಮಾಡುತ್ತಿದೆ. ಇವೆರಡರಲ್ಲಿ ವಿರೋಧಪರಿಹಾರ ಮಾಡುವುದೇ ಪ್ರಥಮಪ್ರಾಪ್ತವಾಗುವುದರಿಂದ ಈ ಅಧ್ಯಾಯದಲ್ಲಿ ಇದನ್ನು ಸೇರಿಸಿದ್ದು ಸಂಗತವೇ ಆಗಿದೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ತ್ವಪ್ರದೀಪದಲ್ಲಿ
ಭೋಕ್ತ್ರಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ತ್ವಪ್ರಕಾಶಿಕಾ

### ಅಧಿಕರಣಕ್ಕೆ ಅಧ್ಯಾಯಾದಿ ಸಂಗತಿಗಳು

**अत्र पुनर्विष्णोजगत्कारणत्वादौ युक्तिविरोधस्य परिह्रियमाणत्वादस्ति शास्त्रादिसङ्गतिः ।**

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವವಿಷಯದಲ್ಲಿ ಪುನಃ ಯುಕ್ತಿವಿರೋಧವನ್ನೇ

ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿಗಳು ಇರುತ್ತವೆ.

ಯುಕ್ತಿವಿರೋಧವನ್ನು ಇದು ಹೇಗೆ ಪರಿಹರಿಸುತ್ತಿದೆ ?

**तत्वप्रकाशिका – विष्णोर्जगत्कर्तृत्वादिपूर्वमभिहितं तस्य च युक्तिविरूद्धत्वे लक्षणमसम्भवि स्यादतोऽसौ निराकरणीय एव ।**

ವಿಷ್ಣು ಜಗಜ್ಜನ್ಮಾದಿಕಾರಣನಾಗಿದ್ದಾನೆಂದು ಈ ಹಿಂದೆ ಪ್ರತಿಪಾದಿಸಲಾಯಿತು. ಅದಕ್ಕೆ ಯುಕ್ತಿವಿರೋಧವು ಬರುವುದರಿಂದ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ಅಸಂಭವದೋಷ ಗ್ರಸ್ತವಾಗುತ್ತದೆ. ಆದ್ದರಿಂದ ಮೊದಲು ಯುಕ್ತಿವಿರೋಧವನ್ನು ಪರಿಹಾರ ಮಾಡಲೇಬೇಕು.

ಅಧಿಕರಣದ ವಿಷಯಾದಿಗಳು

**तत्वप्रकाशिका – जगजन्मादिकर्तृत्वं विषयः । परमात्मनो युक्तमयुक्तं वेति सन्देहः । वादिविवादः सन्देहबीजम् । पूर्वपक्षस्य सूत्र एवोक्तत्वात्तदुपन्यस्य पूर्वपक्षांशं तावद् व्याचष्टे ।। भोक्त्रापत्तेरिति ।।**

ಈ ಅಧಿಕರಣದಲ್ಲಿ ಜಗಜ್ಜನ್ಮಾದಿಕರ್ತೃತ್ವವು ವಿಷಯವಾಗಿದೆ. ಪರಮಾತ್ಮನಿಗೆ ಇದು ಯುಕ್ತವಾಗುತ್ತದೋ ಇಲ್ಲವೋ ? ಎಂಬುದು ಸಂದೇಹ. ವಾದಿ-ಪ್ರತಿವಾದಿಗಳ ವಿವಾದವು ಸಂದೇಹಕ್ಕೆ ಬೀಜ. ಪೂರ್ವಪಕ್ಷವನ್ನು ಸೂತ್ರದಲ್ಲೇ ಹೇಳಿರುವುದರಿಂದ ಪೂರ್ವಪಕ್ಷಾಂಶವನ್ನು ವ್ಯಾಖ್ಯಾನ ಮಾಡಲು 'ಭೋಕ್ತ್ರಾಪತ್ತೇಃ' ಇತ್ಯಾದಿ ಭಾಷ್ಯವು ಹೊರಟಿದೆ.

ಅಧಿಕರಣದ ಪೂರ್ವಪಕ್ಷ

**तत्वप्रकाशिका – न विष्णोर्जगत्कर्तृत्वादि युक्तम् । तस्य जीवाभिन्नत्वात्। न हि जीवाभिन्नस्य जगत्कर्तृत्वाद्युपपद्यते । जीवाभेदो ह्युभयगतविरूद्धधर्मपरित्यागेन जीवस्य ईश्वरसालक्षण्यग्रहणेनेश्वरस्य**

**जीवसालक्षण्यग्रहणेन वा सम्भवति । सर्वथा न जगत्कारणत्वादीश्वरैकनिष्ठं सम्भवति ।**

ವಿಷ್ಣುವಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ವಿಷ್ಣು ಜೀವನಿಗಿಂತ ಅಭಿನ್ನನಾಗಿದ್ದಾನೆ. ಜೀವಾಭಿನ್ನನಾದ ವಿಷ್ಣುವಿನಲ್ಲಿ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ವಿಷ್ಣುವಿಗೆ ಜೀವಾಭೇದವನ್ನು ಹೇಳಬೇಕೆಂದರೆ ಜೀವ ಹಾಗೂ ವಿಷ್ಣು ಇಬ್ಬರಲ್ಲಿಯೂ ಇರುವ ವಿರುದ್ಧಧರ್ಮವನ್ನು ಪರಿತ್ಯಾಗ ಮಾಡಬೇಕು.ಅಥವಾ ಜೀವನಿಗೆ ಈಶ್ವರನ ಸಮಾನಧರ್ಮವನ್ನು ಒಪ್ಪಬೇಕು. ಅಥವಾ ಈಶ್ವರನಿಗೆ ಜೀವನ ಸಮಾನಧರ್ಮವನ್ನು ಒಪ್ಪಬೇಕು. ಈ ಮೂರುಪಕ್ಷಗಳಲ್ಲಿ ಯಾವುದನ್ನು ಒಪ್ಪಿದರೂ ಕೂಡ ಜಗತ್ಕಾರಣತ್ವವು ಕೇವಲ ವಿಷ್ಣುನಿಷ್ಠವಾಗಲು ಸಾಧ್ಯವಿಲ್ಲ.

### ವಿಷ್ಣು ಜೀವಾಭಿನ್ನನಾಗಿದ್ದಾನೆ

**तत्वप्रकाशिका – तस्य जीवाभेद एव कुत इति चेत् । कर्माणिविज्ञानमयश्च आत्मेत्यादौ मुक्तजीवस्य परमात्मत्वप्राप्तिः श्रूयते ।**

ವಿಷ್ಣು ಜೀವನಿಗಿಂತ ಭಿನ್ನನಾಗಿದ್ದಾನೆಂದು ಹೇಗೆ ಹೇಳುತ್ತೀರಿ ಎಂದರೆ 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ' ಇತ್ಯಾದಿ ವೇದವಾಕ್ಯಗಳಲ್ಲಿ ಮುಕ್ತಜೀವನು ಪರಮಾತ್ಮಸ್ವರೂಪವೆಂದು ಹೇಳಲಾಗಿದೆ.

### ಅಭೇದವಿಷಯದಲ್ಲಿ ಶ್ರುತಿಯ ಆಧಾರ

**तत्वप्रकाशिका – किं चातः । तेनैव हेतुना मुक्तेश्वरयोरभेदसिद्धिः । यो यथा श्रूयते स तथेति व्याप्तेः ।**

ಇದರಿಂದ ಯಾವ ಪ್ರಮೇಯವನ್ನು ಹೇಳಿದಂತಾಯಿತು ? ಎಂದರೆ ಈಶ್ವರಪ್ರಾಪ್ತಿಯು ಶ್ರುತ್ಯುಕ್ತವಾಗಿದೆ ಎಂಬ ಹೇತುವಿನಿಂದಲೇ ಮುಕ್ತರಿಗೂ ಹಾಗೂ ಈಶ್ವರನಿಗೂ ಅಭೇದವು ಸಿದ್ಧವಾಗುತ್ತದೆ. ಯಾವುದು ಹೇಗೆ ಶ್ರುತವಾಗಿದೆಯೋ ಅದು ಹಾಗೆಯೇ ಇರಬೇಕು. ಎಂಬ ವ್ಯಾಪ್ತಿಯು ಲೋಕಸಿದ್ಧವಾಗಿದೆ.

### ಸಂಸಾರದಲ್ಲೂ ಐಕ್ಯವಿದೆ

**तत्वप्रकाशिका – मुक्तजीवाभिन्नस्यापि कथञ्चिज्जगत्कारणत्वं निर्वोढुं शक्यमिति चेन्न । मुक्तावैक्ये संसारेऽप्यैक्यस्याऽऽवश्यकत्वात् ।**

ಮುಕ್ತಜೀವನಿಂದ ಅಭಿನ್ನನಾಗಿದ್ದರೂ ಕಥಂಚಿತ್ ಜಗಜ್ಜನ್ಮಾದಿಕಾರಣತ್ವವನ್ನು ಹೊಂದಿಸಬಹುದು ಎಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ ಮೋಕ್ಷದಲ್ಲಿ ಐಕ್ಯವಿದ್ದ ಮೇಲೆ ಸಂಸಾರಾವಸ್ಥೆಯಲ್ಲಿಯೂ ಕೂಡ ಐಕ್ಯವು ಇರಲೇಬೇಕು.

### ಜಗತ್‌ಕಾರಣತ್ವವು ನಷ್ಟವಾಯಿತು

**तत्वप्रकाशिका – न हि भिन्नमभिन्नतां यातीति युक्तम् । अतो जीवाभिन्नत्वादीश्वरस्यैव परमार्थतो जगत्कारणत्वाद्यनुपपन्नमिति लक्षणसूत्रं न युक्तमिति भावः ।**

ಮೊದಲು ಬೇರೆಬೇರೆಯಾದ ಎರಡು ಪದಾರ್ಥಗಳು ಅನಂತರ ಒಂದೇ ಆಗಲು ಸಾಧ್ಯವಿಲ್ಲ. ಆದ್ದರಿಂದ ಈಶ್ವರನು ಜೀವನಿಗಿಂತ ಅಭಿನ್ನನಾಗಿದ್ದಾನೆ. ಆದ್ದರಿಂದ ಪಾರಮಾರ್ಥಿಕವಾಗಿ ಜಗತ್ಕಾರಣತ್ವವು ಈಶ್ವರನಲ್ಲಿ ಉಪಪನ್ನವಾಗುವುದಿಲ್ಲ. ಹೀಗಿರುವಾಗ ಜಗಜ್ಜನ್ಮಾದಿಕಾರಣತ್ವವನ್ನು ಪರಮಾತ್ಮನ ಲಕ್ಷಣವೆಂದು 'ಜನ್ಮಾದ್ಯಸ್ಯ' ಎಂಬ ಸೂತ್ರದಲ್ಲಿ ಹೇಳಿದ್ದು ಅಯುಕ್ತವಾಗಿದೆ. ಇಷ್ಟು ಪೂರ್ವಪಕ್ಷ.

### ವಿಷ್ಣುವೇ ಜಗತ್ಕಾರಣನೆಂದು ಸಿದ್ಧಾಂತ

**तत्वप्रकाशिका – नञध्याहारेण सिद्धान्तांशं व्याचष्टे – नेति ।। जीवेशयोरभेदाभावान्नेश्वरस्य जगत्कारणत्वादि विरुद्ध' ऐक्येनोक्तत्वान्मुक्त-जीवस्य परमात्माभिन्नत्वेन तत्सिद्धिरिति चेन्न । एकीभूतत्वेनोक्तजलेऽतर्भेद-दर्शनेन व्यभिचारात् ।**

ಸೂತ್ರದಲ್ಲಿ 'ನಞ್' ಎಂಬುದನ್ನು ಅಧ್ಯಾಹಾರ ಮಾಡಿಕೊಳ್ಳುವ ಮೂಲಕ ಸಿದ್ಧಾಂತದ ಅಂಶವನ್ನು 'ನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವೇಶ್ವರರಿಗೆ ಅಭೇದವಿಲ್ಲದ

ಕಾರಣ ಈಶ್ವರನಿಗೆ ಜಗಜ್ಜನ್ಮಾದಿಕಾರಣತ್ವವು ವಿರುದ್ಧವಾಗುವುದಿಲ್ಲ. ಪರಮಾತ್ಮನಿಂದ ಮುಕ್ತಜೀವನು ಅಭಿನ್ನನಾಗಿದ್ದಾನೆಂದು ಶ್ರುತಿಯು ಹೇಳುತ್ತಿರುವುದರಿಂದ ಜೀವೇಶ್ವರರ ಅಭೇದವು ಸಿದ್ಧವಾಗಿದೆಯಲ್ಲವೆ? ಎಂದು ಪ್ರಶ್ನಿಸಬಾರದು. 'ಏಕೀಭೂತರಾದರು' ಎಂಬ ಪದಕ್ಕೆ ಅಭಿನ್ನರಾದರು ಎಂಬರ್ಥವನ್ನು ಹೇಳುವುದೇ ತಪ್ಪು. ಏಕೆಂದರೆ ನೀರು ಏಕೀಭೂತವಾಯಿತು ಎಂಬ ಪ್ರಯೋಗವಿದೆ. ಇದಕ್ಕೆ ಅಭಿನ್ನವಾಯಿತು ಎಂದರ್ಥವಲ್ಲ. ಮೊದಲಿದ್ದ ನೀರಿಗೂ ಅನಂತರ ಬಂದ ನೀರಿಗೂ ಇರುವ ಭೇದವು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಆದ್ದರಿಂದ ಏಕೀಭವನವಿದ್ದರೂ ಅಭೇದವಿಲ್ಲದ ಪ್ರಯುಕ್ತ ಜಲದಲ್ಲಿ ವ್ಯಭಿಚಾರದೋಷ ಬರುತ್ತದೆ.

### ಸ್ಥಾನೈಕ್ಯ ಮತ್ಯೈಕ್ಯಗಳಿಂದ ಐಕ್ಯಶ್ರುತಿಗೆ ವ್ಯಾಖ್ಯಾನ

**तत्वप्रकाशिका – ऐक्योक्तिस्तु स्यानैक्याद्यालम्बनत्वेन जलैकीभावोक्तिवदुपचरिता स्यादिति भावः ।**

ಶ್ರುತಿಯಲ್ಲಿ ಐಕ್ಯವನ್ನು ನೇರವಾಗಿ ಹೇಳಿದ್ದಾರಲ್ಲವೇ? ಎಂದರೆ ಅದೂ ಕೂಡ ಸ್ಥಾನೈಕ್ಯ ಮತ್ಯೈಕ್ಯ ಮೊದಲಾದವುಗಳನ್ನು ಆಧರಿಸಿ ಔಪಚಾರಿಕವಾಗಿ ಪ್ರಯೋಗಿಸಲಾಗಿದೆ. ನೀರಿನ ಏಕೀಭವನದಂತೆ ಇದನ್ನು ಕೂಡ ಔಪಚಾರಿಕವಾಗಿ ಕೂಡಿಸಬೇಕು.

### ಶ್ರುತಿಯ ಆಧಾರದಿಂದಲೇ ಶ್ರುತಿಗೆ ಔಪಚಾರಿಕಾರ್ಥ

**तत्वप्रकाशिका – न श्रुतेः स्वातन्त्र्येणोपचरितार्थत्वकल्पनं किन्तु श्रुत्याप्युक्तमित्याह – तया चेति ।।**

ಶ್ರುತಿಗೆ ಗೌಣಾರ್ಥವನ್ನು ಆಶ್ರಯಿಸುತ್ತಿರುವುದು ಸ್ವೇಚ್ಛೆಯಿಂದಲ್ಲ. ಶ್ರುತಿಯಿಂದಲೇ ವರ್ಣಿತವಾಗಿದೆ ಎಂಬುದನ್ನು 'ತಥಾ ಚ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

### 'ಯಥೋದಕಂ' ಎಂಬ ಶ್ರುತಿಯ ಬಗ್ಗೆ

**तत्वप्रकाशिका – एवं मुनेर्विजानत आत्मा भवति गौतमेति वाक्यशेषः। एतेन बाधकं विनोपचारकल्पनमयुक्तमित्येतदपि परास्तम् । निरञ्जनः परमं साम्यमुपैति परात्परं पुरुषमुपैत दिव्यमित्यादिसन्निहितवाक्यविरोधाच ।**

'ಏವಂ ಮುನೇರ್ವಿಜಾನತಃ ಆತ್ಮಾ ಭವತಿ ಗೌತಮ' ಎಂಬ ವಾಕ್ಯಶೇಷವನ್ನು 'ಯಥೋದಕಂ ಶುದ್ಧೇ ಶುದ್ಧಂ' ಎಂಬ ಶ್ರುತಿಯ ಮುಂದೆ ಶೇಷಪೂರಣ ಮಾಡಿಕೊಳ್ಳಬೇಕು.

ಶುದ್ಧಜಲದಲ್ಲಿ ಬೇರೆ ಜಲವನ್ನು ಹಾಕಿದಾಗ ಎರಡೂ ಒಂದಾಗುವುದಿಲ್ಲ. ಒಂದೇ ರೀತಿಯಾಗುತ್ತದೆ. ಅದೇ ರೀತಿಯಾಗಿ ಜ್ಞಾನಿಯಾದ ಚತುರ್ಮುಖನು ಪರಮಾತ್ಮನನ್ನು ಪಡೆದಾಗ ಅವನಂತೆ ಆಗುತ್ತಾನೆ ಹೊರತು ಅವನೇ ಆಗುವುದಿಲ್ಲ ಎಂಬುದು ಶ್ರುತಿಯ ಅಭಿಪ್ರಾಯ. ಹೀಗೆ ಹೇಳಿದ್ದರಿಂದ ಬಾಧಕವಿಲ್ಲದೆ ಔಪಚಾರಿಕವಾದ ಅರ್ಥದ ಕಲ್ಪನೆಯು ಅಯುಕ್ತವಾಗಿದೆ ಎಂಬ ಆಕ್ಷೇಪವನ್ನು ನಿರಾಕರಿಸಿದಂತಾಯಿತು. ಏಕೆಂದರೆ 'ನಿರಂಜನಃ ಪರಮಂ ಸಾಮ್ಯಮುಪೈತಿ' 'ಪರಾತ್ಪರಂ ಪುರುಷಮ್' ಪಾಪರಹಿತನಾದ ಜೀವನು ವಿಷ್ಣುವಿನ ಸಾಮ್ಯವನ್ನು ಪಡೆಯುತ್ತಾನೆ. ಪರಾತ್ಪರನಾದ ದಿವ್ಯಪುರುಷನಾದ ನಾರಾಯಣನನ್ನು ಹೊಂದುತ್ತಾನೆ. ಎಂಬುದಾಗಿ ಹತ್ತಿರವಿರುವ ವಾಕ್ಯಗಳಿಂದ ಮುಖ್ಯಾರ್ಥವಾದ ಐಕ್ಯಕ್ಕೆ ವಿರೋಧ ಬರುತ್ತದೆ.

### ಪರಮಾತ್ಮನಿಂದ ತಾದಾತ್ಮ್ಯವಿಲ್ಲ

**तत्वप्रकाशिका – जलयोरप्यैक्यान्न व्यभिचार (रादित्यत) इत्यत उक्तार्थे स्मृतिं चाह – स्कान्दे चेति ।। तादात्म्यं परमात्मना प्राप्त इत्युक्तोऽपीत्यर्थः।**

ಎರಡು ಜಲಗಳಲ್ಲಿಯೂ ಐಕ್ಯವಿರುವುದರಿಂದ ವ್ಯಭಿಚಾರ ಬರುವುದಿಲ್ಲವೆಂಬ ಪ್ರಶ್ನೆಗೆ ಹಿಂದೆ ಹೇಳಿದ ವಿಷಯದಲ್ಲಿ ಸ್ಮೃತಿಯನ್ನು ಪ್ರಮಾಣವನ್ನಾಗಿ 'ಸ್ಕಾಂದೇ ಚ' ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ. ತಾದಾತ್ಮ್ಯವನ್ನು ಪರಮಾತ್ಮನಿಂದ ಹೊಂದಿದ್ದಾನೆ ಎಂದು ಉಕ್ತನಾದರೂ ಕೂಡ ಎಂದು ಇದರ ಅರ್ಥ.

### ತಾದಾತ್ಮ್ಯಶಬ್ದಕ್ಕೆ ಮೋಕ್ಷ ಎಂದರ್ಥ

**तत्वप्रकाशिका – मुक्तोऽपीति वा । 'हरौ नियतचित्तत्वाद् ग्रहवत्तत्प्रवेशनात् । मोक्षं तादात्म्यमित्याहुर्न तु तद्रूपतः क्वचित्' इति वचनात् । अल्पमुक्तानामेतदस्त्वित्यत आह – ब्रह्मेति ।। वर्तमाननिषेधात् स्यादुत्तरत्रेत्यत आह – नेति ।।**

'ತಾದಾತ್ಮ್ಯಮ್ ಪರಮಾತ್ಮನಾ ಪ್ರಾಪ್ತೋಽಪಿ' ಎಂಬ ಮಾತಿನಲ್ಲಿ 'ಉಕ್ತೋಽಪಿ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ಇಲ್ಲದಿದ್ದರೆ ಪರಮಾತ್ಮನ ತಾದಾತ್ಮ್ಯವನ್ನು ಹೊಂದಿದರೂ ಪರಮಾತ್ಮ ಆಗಲಾರ ಎನ್ನುವುದು ಪರಸ್ಪರ ವಿರುದ್ಧವಾಗುತ್ತದೆ. ಅಥವಾ ತಾದಾತ್ಮ್ಯಶಬ್ದಕ್ಕೆ ಅಭೇದವೆಂದರ್ಥವಲ್ಲ. ಮೋಕ್ಷವೆಂದರ್ಥ.

ಶ್ರೀಹರಿಯಲ್ಲಿ ನಿಯಮೇನ ಮನಸ್ಸನ್ನು ನೆಲೆಗೊಳಿಸಿದ್ದರಿಂದ ಅಥವಾ ಗ್ರಹದಂತೆ ಶ್ರೀಹರಿಯಲ್ಲಿ ಪ್ರವೇಶ ಮಾಡಿದ್ದರಿಂದ ಮೋಕ್ಷವನ್ನು ತಾದಾತ್ಮ್ಯವೆಂದು ಹೇಳುತ್ತಾರೆ ಹೊರತು, ಪರಮಾತ್ಮಸ್ವರೂಪವನ್ನು ಹೊಂದಿದ್ದರಿಂದ ಎಂದರ್ಥವಲ್ಲ. ಹೀಗೆ 'ಹರೌ ನಿಯತಚಿತ್ತತ್ವಾದ್ ಗ್ರಹವತ್ ತತ್ಪ್ರವೇಶನಾತ್ । ಮೋಕ್ಷಂ ತಾದಾತ್ಮ್ಯಮಿತ್ಯಾಹುರ್ನತು ತದ್ರೂಪತಃ ಕ್ವಚಿತ್' ಎಂದು ಭಾಗವತತಾತ್ಪರ್ಯದಲ್ಲಿ ಹೇಳಿರುತ್ತಾರೆ.

ಅಲ್ಪಮುಕ್ತರಿಗೆ ಐಕ್ಯವು ಇಲ್ಲದಿದ್ದರೂ ಚತುರ್ಮುಖ ಮೊದಲಾದ ಉತ್ತಮರಿಗೆ ಐಕ್ಯವು ಕೂಡಬಹುದಲ್ಲವೆ ? ಎಂಬ ಪ್ರಶ್ನೆಗೆ 'ಬ್ರಹ್ಮೇಶಾನಾದಿಭಿಃ' ಎಂಬ ಮಾತಿನಿಂದ ಉತ್ತರಿಸಿದ್ದಾರೆ. 'ನ ಅನ್ವಶ್ನುವಂತಿ' ಎಂಬುದಾಗಿ ಈಗ ಐಕ್ಯವಿಲ್ಲವೆಂದು ನಿಷೇಧ ಮಾಡಿದ್ದರಿಂದ ಮುಂದೆ ಜೀವಬ್ರಹ್ಮರಿಗೆ ಐಕ್ಯವು ಪ್ರಾಪ್ತವಾಗಬಹುದುಲ್ಲವೆ ? ಎಂಬ ಪ್ರಶ್ನೆಗೆ 'ನೇತಿ' ಎಂಬುದಾಗಿ ಎರಡು ಮಂತ್ರಗಳನ್ನು ಉದಾಹರಿಸಿ ಉತ್ತರಿಸುತ್ತಿದ್ದಾರೆ. ಶ್ರೀಹರಿಯಿಂದ ಜೀವರಿಗೆ ಎಂದೆಂದೂ ಕೂಡ ಐಕ್ಯವು ಪ್ರಾಪ್ತವಾಗುವುದಿಲ್ಲ ಎಂದು ಅರ್ಥ.

### ಅದ್ವೈತಿಗಳ ಆಕ್ಷೇಪ

**ತತ्वप्रकाशिका – ननु मुक्तेश्वरयोर्भेदसमर्थनं फलाध्यायसङ्गतमतो नैतत्सूत्रार्थः किन्तु चेतनाचेतनात्मकप्रपञ्चस्य ब्रह्मात्मकत्वे विषयस्य विषयित्वं स्यात् । तथा च विषयविषयिविभागो न स्यादित्याशङ्क्य समुद्रात्मनामपि फेनतरङ्गादीनां विभागवदुपपद्यत इति अत्र निरस्यत इत्यत आह – फलत्वेऽपीति।।**

ಮುಕ್ತರಾದ ಜೀವರಿಗೂ ಈಶ್ವರನಿಗೂ ಭೇದವನ್ನು ಈ ಅಧಿಕರಣದಲ್ಲಿ ಸಮರ್ಥನೆ ಮಾಡುತ್ತಿದ್ದೀರಿ. ಹಾಗಾದರೆ ಇದು ಫಲಾಧ್ಯಾಯದಲ್ಲಿ ಸಂಗತವಾಗಬೇಕು. ಹೊರತು ಈ ಇಲ್ಲಿ ಸಂಗತವಾಗುವುದಿಲ್ಲ. ಆದ್ದರಿಂದ ಚೇತನಾಚೇತನಾತ್ಮಕವಾದ ಪ್ರಪಂಚವು ಬ್ರಹ್ಮಸ್ವರೂಪವಾದರೆ ವಿಷಯವೇ ವಿಷಯೀ ಎನಿಸಿಕೊಳ್ಳಬೇಕಾಗುತ್ತದೆ. ವಿಷಯವೆಂದರೆ ಅಚೇತನಾದ ವಸ್ತುಗಳು, ವಿಷಯೀ ಎಂದರೆ ಚೇತನವಾದ ಭೋಕ್ತೃವರ್ಗ, ಈ ವಿಭಾಗವೇ ಕೂಡದಿರಬೇಕಾದೀತು ಎಂಬುದು ಇದರ ಅಭಿಪ್ರಾಯ. ಆದ್ದರಿಂದ 'ವಿಷಯವಿಷಯೀ' ಎಂಬ ವಿಭಾಗವೇ ಅಯುಕ್ತವಾಗಬೇಕಾದೀತು. ಹೀಗೆ ಆಶಂಕಿಸಿ ಸಮುದ್ರದ ನೊರೆ ತರಂಗ ಮೊದಲಾದವು ಸಮುದ್ರಸ್ವರೂಪವೇ ಆಗಿದ್ದರೂ ಅಲೆ ಸಮುದ್ರಗಳಿಗೆ ವಿಭಾಗವನ್ನು ಹೇಳುತ್ತೇವೆ. ಅದರಂತೆ ಇಲ್ಲಿಯೂ ಕೂಡ ವಿಷಯ ಮತ್ತು ವಿಷಯಿಗಳ ವಿಭಾಗವನ್ನು ಹೇಳಬಹುದು. ಹೀಗೆ ಈ ಅಧಿಕರಣದಲ್ಲಿ ವಿಷಯವಿಷಯಿಗಳ ವಿಭಾಗದ ಅಭಾವವನ್ನು ನಿರಾಕರಣೆ ಮಾಡಲಾಗಿದೆಯೆಂದು ಅದ್ವೈತಿಗಳು ಆಕ್ಷೇಪ ಮಾಡಿದರೆ 'ಫಲತ್ವೇಪಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

### ಫಲಾಧ್ಯಾಯದಲ್ಲಿ ಈ ಅಧಿಕರಣ ಸೇರಬೇಕಲ್ಲವೇ?

**ತತ್ವಪ್ರಕಾಶಿಕಾ – एतदधिकरणस्य फलाध्यायसङ्गत्वेऽप्यत्र नासङ्गतिर्येना-न्यार्थकल्पनम् । उक्तरीत्या युक्तिविरोधपरिहारेऽप्यन्तर्भावात् । अन्यथोभयान्तर्गतस्यैकत्राप्यनुक्तिप्रसङ्ग इति भावः ।**

ಈ ಅಧಿಕರಣವು ಫಲಾಧ್ಯಾಯದಲ್ಲಿ ಸಂಗತವಾಗಬೇಕು. ಆದರೂ ಕೂಡ ಈ ಪಾದದಲ್ಲಿ ಅಸಂಗತಿಯು ಇರುವುದಿಲ್ಲ. ಹಾಗೆ ಅಸಂಗತಿಯು ಇದ್ದಲ್ಲಿ ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಕಲ್ಪನೆ ಮಾಡಬಹುದಿತ್ತು. ಹಿಂದೆ ಹೇಳಿದ ಪ್ರಕಾರ ಯುಕ್ತಿವಿರೋಧವನ್ನು ಪರಿಹಾರ ಮಾಡಿದರೂ ಯುಕ್ತಿವಿರೋಧವನ್ನು ಪರಿಹರಿಸುತ್ತಿರುವುದರಿಂದ ಇಲ್ಲಿ ಸಂಗವಾಗುತ್ತದೆ. ಇಲ್ಲದಿದ್ದರೆ ಮುಕ್ತೇಶ್ವರರಿಗೆ ಭೇದವಿಚಾರ ಹಾಗೂ ಯುಕ್ತಿವಿರೋಧ ಎರಡರಲ್ಲೂ ಅಂತರ್ಗತವಾಗುವುದರಿಂದ ಎರಡರಲ್ಲೂ ಹೇಳದಿರಬೇಕಾದ ಪರಿಸ್ಥಿತಿ ಬರುತ್ತದೆ.

ಅದ್ವೈತಿಗಳ ನಿರಾಕರಣೆ

तत्वप्रकाशिका – अर्थान्तरं तु प्रपञ्चस्य ब्रह्मात्मकत्वनिरासेन निरस्तम्। भोक्तृत्वापत्तेरिति भावप्रधाननिर्देशाभावाच्च । अतो विष्णोर्जगत्कारणत्वादौ युक्तिविरोधाभावादुपपन्नं लक्षणसूत्रमिति सिद्धम् ।।

।। इति श्रीमज्जयतीर्थभिक्षुविरचितायां तत्वप्रकाशिकायाम् भोक्त्रधिकरणम् ।।

ಪ್ರಪಂಚಕ್ಕೆ ಬ್ರಹ್ಮಾತ್ಮಕತ್ವನ್ನು ನಿರಾಕರಣೆ ಮಾಡಿದ್ದರಿಂದ ಅದ್ವೈತಿಗಳು ಸೂತ್ರಕ್ಕೆ ಹೇಳಿದ ಅರ್ಥಾಂತರವು ನಿರಾಕೃತವಾಯಿತು. ಪ್ರಕೃತ್ಯಧಿಕರಣದ ಭಾಷ್ಯದಲ್ಲಿ ಪ್ರಪಂಚಕ್ಕೆ ಬ್ರಹ್ಮನು ಉಪಾದಾನ- ಕಾರಣನಲ್ಲವೆಂದು ನಿರಾಕರಣೆ ಮಾಡಿದ್ದರಿಂದ ಬ್ರಹ್ಮನಿಗೂ ಮತ್ತು ಜಗತ್ತಿಗೂ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. 'ಭೋಕ್ತ್ರಾಪತ್ತೇಃ' ಎಂಬ ಸೂತ್ರದಲ್ಲಿ ಭಾವಪ್ರಧಾನವನ್ನು ಸೂತ್ರಕಾರರು ನಿರ್ದೇಶ ಮಾಡಿಲ್ಲ. ಅದ್ವೈತಿಗಳು ಹೇಳಿದ ಅರ್ಥವು ಯುಕ್ತವಾಗಿದ್ದರೆ ಸೂತ್ರಕಾರರು ಭಾವಪ್ರಧಾನವನ್ನು ನಿರ್ದೇಶ ಮಾಡುತ್ತಿದ್ದರು. ಆದ್ದರಿಂದ ವಿಷ್ಣುವಿನ ಜಗತ್ಕಾರಣತ್ವಾದಿಗಳಲ್ಲಿ ಯಾವುದೇ ಯುಕ್ತಿವಿರೋಧವು ಬರುವುದಿಲ್ಲ. ಬ್ರಹ್ಮನಿಗೆ ಹೇಳಿದ ಲಕ್ಷಣವು ಉಚಿತವಾಗಿದೆ ಎಂದು ಸಿದ್ಧವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಭೋಕ್ತ್ರಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

### ಬಹುಶ್ರುತಿಸಿದ್ಧವಾದ ಪ್ರಬಲವಾದ ಯುಕ್ತಿಗಳ ವಿರೋಧಪರಿಹಾರಕ್ಕಾಗಿ ಭೋಕ್ತ್ರಧಿಕರಣ

**भावदीपः – ।। भोक्त्रापत्तेरविभागश्चेत्स्याल्लोकवत् ।।१४ ।। युक्तीति ।।** पूर्वं श्रुतिसंवादितया प्रबलयुक्त्या विरोध उक्तः। अत्र तु बहुश्रुतिसिद्धतया प्रबलयुक्त्यविरोध उच्यत इति सुधोक्तदिशा एकीभवन्तीत्यादि बह्वभेदश्रुतिसिद्धजीवा-भिन्नत्वरूपयुक्तिविरोधस्येत्यर्थः। एतावता पादसङ्गतिसिद्धेर्युक्तीत्येवोक्तम्। तदपेक्षयैव पुनरित्युक्तिः। पूर्वसङ्गतिमाह – **विष्णोरिति ।।**

ಟೀಕೆಯಲ್ಲಿ 'ಯುಕ್ತಿವಿರೋಧಸ್ಯ' ಎಂಬುದಾಗಿ ಹೇಳಿದ್ದಾರೆ. ಈ ಅಧಿಕರಣದಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡಲಾಗಿದೆ ಎಂಬುದು ಈ ವಚನದಿಂದ ತಿಳಿಯುತ್ತದೆ. ಶ್ರುತಿಸಂವಾದಿಯಾದ್ದರಿಂದ ಪ್ರಬಲವಾದ ಯುಕ್ತಿಯ ವಿರೋಧವನ್ನು ಹಿಂದೆ ಪರಿಹರಿಸಲಾಯಿತು. ಈ ಅಧಿಕರಣದಲ್ಲಿ ಬಹು ಶ್ರುತಿಯಿಂದ ಸಿದ್ಧವಾದ ಪ್ರಬಲ ಯುಕ್ತಿಗಳ ವಿರೋಧವನ್ನು ಪರಿಹರಿಸಲಾಗಿದೆ. ಹೀಗೆ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಅಭೇದ ಪ್ರತಿಪಾದಕವಾದ 'ಏಕೀಭವಂತಿ' ಇವೇ ಮೊದಲಾದ ಅನೇಕ ಶ್ರುತಿಗಳಿಂದ ಯಾವ ಜೀವಾಭೇದವು ಸಿದ್ಧವಾಗಿದೆಯೋ ಅಂತಹ ಜೀವಾಭೇದವೆಂಬ ಯುಕ್ತಿವಿರೋಧವನ್ನು ಇಲ್ಲಿ ಪರಿಹರಿಸುತ್ತಿದ್ದಾರೆ ಎಂಬುದಾಗಿ ತಿಳಿಯಬೇಕು. ಹಾಗಾದರೆ ಟೀಕೆಯಲ್ಲೇಕೆ ಕೇವಲ 'ಯುಕ್ತಿವಿರೋಧಸ್ಯ' ಎಂದರು? ಎಂದರೆ ಪಾದಸಂಗತಿಯು ಇಷ್ಟರಿಂದಲೇ ಸಿದ್ಧವಾಗುವುದರಿಂದ ಯುಕ್ತಿ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಹಿಂದೆ ಹೇಳಿದ ವಿಷಯದ ಸಂಗ್ರಹಕ್ಕೋಸ್ಕರ ಪುನಃ ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಪ್ರಾಪ್ತವಾಗುವ ಸಂಗತಿಯನ್ನು 'ವಿಷ್ಣೋಃ' ಇತ್ಯಾದಿಯಾಗಿ ನಿರೂಪಣೆ ಮಾಡಿದ್ದಾರೆ.

ಜೀವಾಭಿನ್ನತ್ವವೆಂಬ ಯುಕ್ತಿಯು ಪೂರ್ಣಗುಣತ್ವಕ್ಕೂ ವಿರೋಧಿ

**भावदीपः** – जन्मादिसूत्र इति भावः ॥ **वादीति** ॥ भेदाभेदवादीत्यर्थः। भाष्यं युक्तेरसिद्धिनिरसनपरतया व्याकुर्वन्विरोधियुक्तिं व्यनक्ति॥ **न विष्णोरिति** ॥ इयं च युक्तिः पूर्णगुणत्वस्यापि विरोधिनीत्यादिपदम्। युक्तेरप्रयोजकत्वं निराह – **न हीति** ॥ कुत इत्यतः साध्येन विना हेतोरनुपपत्तिं व्यनक्ति॥ **जीवेति** ॥

'ವಿಷ್ಣೋಃ' ಎಂಬ ವಾಕ್ಯದಲ್ಲಿ ಯಾವ ಜಗತ್ಕರ್ತೃತ್ವವನ್ನು ಹೇಳಿದ್ದೇವೆ ಎಂದಿದ್ದಾರೋ ಅದು ಜನ್ಮಾದಿ ಸೂತ್ರದಲ್ಲಿ ಎಂದು ತಿಳಿಯಬೇಕು. 'ವಾದಿವಿವಾದಃ' ಎಂಬುದಕ್ಕೆ ಭೇದವಾದಿ ಹಾಗೂ ಅಭೇದವಾದಿಗಳು ಮಾಡುತ್ತಿರುವ ವಿವಾದವು ಎಂಬುದು ಇದರ ಅರ್ಥ. ಭಾಷ್ಯವು ಯುಕ್ತಿಗೆ ಅಸಿದ್ಧಿ ಪರಿಹಾರಕ್ಕೋಸ್ಕರ ಹೊರಟಿದೆ ಎಂಬ ದೃಷ್ಟಿಯಲ್ಲಿ ವ್ಯಾಖ್ಯಾನ ಮಾಡುವವರಾಗಿ ವಿರೋಧ ಯುಕ್ತಿಯನ್ನು 'ನ ವಿಷ್ಣೋಃ' ಇತ್ಯಾದಿ ವಾಕ್ಯದಿಂದ ಉಲ್ಲೇಖ ಮಾಡುತ್ತಿದ್ದಾರೆ. ಈ 'ಜೀವಾಭಿನ್ನತ್ವ' ಎಂಬ ಯುಕ್ತಿಯು ಕೇವಲ ವಿಷ್ಣುವಿನ ಜಗತ್ಕರ್ತೃತ್ವಕ್ಕೆ ಮಾತ್ರ ವಿರೋಧಿಯಾಗಿರುವುದಲ್ಲ, ಪೂರ್ಣಗುಣತ್ವಕ್ಕೂ ಕೂಡ ವಿರೋಧಿಯಾಗಿದೆ. ಇದನ್ನು 'ಜಗತ್ಕರ್ತೃತ್ವಾದಿ' ಎಂಬಲ್ಲಿರುವ ಆದಿ ಪದವು ಹೇಳುತ್ತಿದೆ. ಈ ಪೂರ್ವಪಕ್ಷ ಯುಕ್ತಿಗೆ ಅಪ್ರಯೋಜಕತ್ವವನ್ನು ನಿರಾಕರಣೆ ಮಾಡಲು 'ನ ಹಿ' ಎಂಬ ವಾಕ್ಯವು ಹೊರಟಿದೆ. ಏಕೆ? ಎಂದು ಪ್ರಶ್ನಿಸಿದರೆ ಸಾಧ್ಯವನ್ನು ಬಿಟ್ಟು ಹೇತುವು ಉಪಪನ್ನವೇ ಆಗುವುದಿಲ್ಲ ಎಂಬ ಕಾರಣವನ್ನು 'ಜೀವಾಭೇದಃ' ಎಂಬ ವಾಕ್ಯದಿಂದ ಉಪಪಾದನೆ ಮಾಡಿದ್ದಾರೆ.

ಚಂದ್ರಿಕೆಯ ಆಧಾರದಿಂದ ಟೀಕೆಗೆ ವ್ಯಾಖ್ಯಾನ

**भावदीपः** – उभयगतविरुद्धधर्मत्यागेन वेत्यग्रेतनो वाशब्दोऽत्राप्यनुषञ्जनीय इति चन्द्रिका। एवं चाद्यतृतीयपक्षयोर्लक्षणमसंभवि द्वितीये त्वतिव्याप्तमिति भावेनाह – **सर्वथा न जगत्कारणत्वादीश्वरैकनिष्ठं सम्भवतीति** ॥

ವಿಷ್ಣುವಿನಲ್ಲಿ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ ಎನ್ನಲು 'ಜೀವಾಭೇದಃ' ಎಂಬ ವಾಕ್ಯದಲ್ಲಿ ಮೂರು ಕಾರಣಗಳನ್ನು ಹೇಳಿರುತ್ತಾರೆ. ಆದ್ದರಿಂದ 'ಉಭಯಗತವಿರುದ್ಧಧರ್ಮತ್ಯಾಗೇನ' ಎಂಬ ಪದದ ಅನಂತರ ಮುಂದೆ ಇರುವ 'ವಾ' ಶಬ್ದವನ್ನು ಅನುಷಂಗ ಮಾಡಬೇಕು ಎಂಬುದಾಗಿ ತಾತ್ಪರ್ಯಚಂದ್ರಿಕಾ ಗ್ರಂಥವು ಹೇಳುತ್ತದೆ. ಹೀಗೆ 'ವಾ' ಶಬ್ದವನ್ನು ಅನುಷಂಗ ಮಾಡಿದಾಗ ಮೂರು ಶಬ್ದಗಳು ಅತ್ಯಂತ

ಸ್ಪಷ್ಟವಾಗಿ ತಿಳಿಯುತ್ತದೆ. ಈ ಮೂರರಲ್ಲಿ ಮೊದಲನೇ ಹಾಗೂ ಮೂರನೇ ಪಕ್ಷಗಳಲ್ಲಿ ಹೇಳಲ್ಪಟ್ಟ ಲಕ್ಷಣವು ಅಸಂಭಾವಿತವಾಗಿವೆ. ಎರಡನೇ ಪಕ್ಷದಲ್ಲಿ ಹೇಳಲ್ಪಟ್ಟ ಲಕ್ಷಣವು ಅತಿವ್ಯಾಪ್ತವಾಗಿದೆ. ಈ ಅಭಿಪ್ರಾಯದಿಂದ 'ಸರ್ವಥಾ ನ ಜಗತ್ಕಾರಣತ್ವಾತ್ ಈಶ್ವರೇಕನಿಷ್ಠಂ ಸಂಭವತಿ' ಎಂಬ ಟೀಕಾ ಪಂಕ್ತಿಯು ಹೊರಟಿದೆ.

### 'ಕರ್ಮಾಣಿ' ಎಂಬ ಶ್ರುತಿಭಾಗವನ್ನೇಕೆ ಉಲ್ಲೇಖಿಸಿದರು

**भावदीपः** – इदानीं भाष्यमवतारयति॥ **तस्येति**॥ विज्ञानमयशब्दितो जीवात्मा परेऽव्यये परमात्मनीति वाच्ये एकीभवन्तीति बहुवचनघटनाय कर्माणीत्यंशोक्तिः। कर्मणामेकीभावो निवृत्तिरेव पूर्वपक्षे श्रूयते आथर्वण इत्यर्थः। अतस्तयोरविभाग इति भाष्यमवतारयति॥ **किं चात इति**॥ **यो यथा श्रूयत इति**॥ तात्पर्येण श्रुत्योच्यते इत्यर्थः, तेन मृदब्रवीदित्यादौ न व्यभिचारः ऐक्यं च तात्पर्यविषय इति शङ्कितुर्भावः।

ಭಾಷ್ಯಕ್ಕೆ ಅವತಾರಿಕೆಯನ್ನು ತಸ್ಯ ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ವಿಜ್ಞಾನಮಯ ಎನಿಸಿದ ಜೀವಾತ್ಮನು ಪರಮಾತ್ಮನಲ್ಲಿ ಲಯ ಹೊಂದುತ್ತಾನೆ ಎಂದಷ್ಟೇ ಹೇಳಿದರೆ ಸಾಕು. ಕರ್ಮಾಣಿ' ಎಂಬ ಶ್ರುತಿಯ ಹಿಂದಿನ ಭಾಗವನ್ನು ಉಲ್ಲೇಖ ಮಾಡುವ ಅವಶ್ಯಕತೆ ಇರಲಿಲ್ಲ. ಆದರೆ 'ಏಕೀಭವಂತಿ' ಎಂಬ ಬಹುವಚನದ ಘಟನೆಗೋಸ್ಕರ 'ಕರ್ಮಾಣಿ' ಎಂಬ ಶ್ರುತಿಯ ಅಂಶವನ್ನು ಉಲ್ಲೇಖ ಮಾಡಿದ್ದಾರೆ. ಆದ್ದರಿಂದ ಎಲ್ಲಾ ಕರ್ಮಗಳು ಮುಕ್ತಿಯಲ್ಲಿ ಏಕೀಭವವನ್ನು ಹೊಂದುತ್ತದೆ ಎಂದು ಅನ್ವಯವನ್ನು ತಿಳಿಯಬೇಕು. ಪೂರ್ವಪಕ್ಷದ ಪ್ರಕಾರ ಕರ್ಮಗಳಲ್ಲಿ ಏಕೀಭಾವ ಎಂದರೆ ನಿವೃತ್ತಿ ಎಂದೇ ಅರ್ಥ. 'ಶ್ರೂಯತೇ' ಎಂಬ ಪದಕ್ಕೆ ಆಥರ್ವಣ ಉಪನಿಷತ್ತಿನಲ್ಲಿ ಶ್ರುತವಾಗಿದೆ ಎಂದರ್ಥ.

'ಅತಸ್ತಯೋರವಿಭಾಗಃ' ಎಂಬ ಭಾಷ್ಯಕ್ಕೆ ಅವತಾರಿಕೆಯನ್ನು ನೀಡಲು 'ಕಿಂಚಾತಃ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಯೋ ಯಥಾ ಶ್ರೂಯತೇ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ಯಾವುದು ಹೇಗೆ ಶ್ರುತವಾಗಿದೆಯೋ ಅದನ್ನು ಹಾಗೆಯೇ ಒಪ್ಪಬೇಕು' ಎಂಬುದು ಇದರ ಅರ್ಥ. ಶಂಕೆ ಮಾಡುವವನಿಗೆ ಶ್ರುತಿಯ ತಾತ್ಪರ್ಯಕ್ಕೆ ಯಾವುದು ಹೇಗೆ ವಿಷಯವಾಗಿದೆಯೋ ಎಂಬ ಅಭಿಪ್ರಾಯವಿದೆ. ಹೀಗೆ ಹೇಳಿದ್ದರಿಂದ 'ಮೃದಬ್ರವೀತ್' ಇತ್ಯಾದಿ ಸ್ಥಳದಲ್ಲಿ ಪೂರ್ವಪಕ್ಷಿಯ ಪ್ರಕಾರ ವ್ಯಭಿಚಾರಕ್ಕೆ ಅವಕಾಶವಿಲ್ಲ. ಪ್ರಕೃತ ಶ್ರುತಿಯ ತಾತ್ಪರ್ಯ ಐಕ್ಯದಲ್ಲಿದೆ ಎಂಬುದು ಪೂರ್ವಪಕ್ಷಿಯ ಅಭಿಪ್ರಾಯ.

### ವೇದವಾದರತರ ನಿರಾಕರಣೆ

**भावदीपः** – यद्वा वेदेन सह वादो यो वेदवाद इतीरित इत्याद्युक्तलक्षणवेदवादिनामत्र निरस्यत्वात्। वेदे आपातप्रतीतस्यैव तदर्थत्वेन स्वीकाराच्छूयत इत्येवोक्तम्। अत एव पूर्वत्रापि भाष्ये श्रुतिप्राप्ता इत्येवोक्तिः। भेदपक्ष एव जगद्व्यापारवर्जमिति विश्वकर्तृत्वस्य निषेत्स्यमानत्वादभेदपक्षे मुक्तस्य विश्वकर्तृत्वेऽक्षादिविरोधाभावात् । तादृशमुक्तजीवाभिन्नस्य विष्णोर्विश्वकारणत्वमविरुद्धमिति भावेनाशङ्क्यातः पूर्वमपीत्यादि भाष्यं तन्निरासकत्वेन व्याचष्टे॥ **मुक्तजीवाभिन्नस्यापीति**॥

ಅಥವಾ 'ವೇದೇನ ಸಹ ವಾದಃ ಯೋ ವೇದವಾದಃ ಇತೀರಿತಃ' ಎಂದು ಹೇಳಿದಂತೆ ವೇದವಾದಿಗಳು ಇಲ್ಲಿ ನಿರಾಕರಣೆಗೆ ಅರ್ಹರಾಗಿದ್ದಾರೆ. ವೇದದಿಂದ ಆಪಾತತಃ ಪ್ರತೀತವಾದ ಅರ್ಥವನ್ನೇ ವೇದದ ನಿಜಾರ್ಥ ಎಂದು ಇವರು ಅಂಗೀಕರಿಸುತ್ತಾರೆ. ಇಂತಹ ವೇದವಾದಿಗಳನ್ನು ಸ್ವೀಕಾರ ಮಾಡುವುದಕ್ಕಾಗಿ 'ಶ್ರೂಯತೇ' ಎಂಬ ಪದವನ್ನು ಉಪಯೋಗಿಸಿದ್ದಾರೆ. ಆದ್ದರಿಂದಲೇ ಹಿಂದೆಯೂ ಕೂಡ ಭಾಷ್ಯದಲ್ಲಿ 'ಶ್ರುತಿಪ್ರಾಪ್ತಾಃ' ಎಂದೇ ಹೇಳಿರುತ್ತಾರೆ. ಭೇದಪಕ್ಷದಲ್ಲಷ್ಟೇ 'ಜಗದ್ವ್ಯಾಪಾರವರ್ಜಂ' ಎಂಬುದಾಗಿ ವಿಶ್ವಕರ್ತೃತ್ವವನ್ನು ನಿಷೇಧ ಮಾಡಲಾಗಿದೆ. ಅಭೇದ ಪಕ್ಷದಲ್ಲಿ ಮುಕ್ತನಿಗೆ ವಿಶ್ವಕರ್ತೃತ್ವವನ್ನು ಒಪ್ಪಿದರೆ ಪ್ರತ್ಯಕ್ಷಾದಿ ವಿರೋಧವನ್ನು ಹೇಳಲು ಸಾಧ್ಯವಿಲ್ಲ. ಇಂತಹ ಮುಕ್ತ ಜೀವನಿಗೆ ಅಭಿನ್ನನಾದ ವಿಷ್ಣುವಿಗೆ ಜಗತ್ಕಾರಣತ್ವವು ವಿರುದ್ಧವಾಗುವುದಿಲ್ಲ. ಈ ಅಭಿಪ್ರಾಯದಿಂದ ಆಶಂಕಿಸಿ 'ಅತಃ ಪೂರ್ವಮಪಿ' ಇತ್ಯಾದಿ ಭಾಷ್ಯವನ್ನು ಈ ಪೂರ್ವಪಕ್ಷದ ನಿರಾಕರಣೆಯ ಪರವಾಗಿ ವ್ಯಾಖ್ಯಾನ ಮಾಡಲು 'ಮುಕ್ತಜೀವಾಭಿನ್ನಸ್ಯಾಪಿ' ಎಂಬ ಟೀಕಾ ಪಂಕ್ತಿಯು ಹೊರಟಿದೆ.

### ಪೂರ್ವಪಕ್ಷದ ಉಪಸಂಹಾರ

**भावदीपः** – पूर्वपक्षभाष्यं फलोक्त्योपसंहरति॥ **अत इति**॥ उक्तश्रुतिबलादित्यर्थः। ननु श्रुतिबलात्परमार्थतो जीवाभिन्नत्वेऽपि ईश्वरस्य काल्पनिकभेदेन जगत्कारणत्वं स्यादित्यत उक्तं॥ **परमार्थत इति**॥ परमार्थतो ब्रह्मैव कारणत्वादिमत् न तु जीव इति यत्सिद्धान्तिनोऽभिमतं तदनुपपन्नमित्यर्थः।

ಪೂರ್ವಪಕ್ಷ ಭಾಷ್ಯವನ್ನು ಫಲವನ್ನು ಹೇಳುವ ಮೂಲಕ ಉಪಸಂಹಾರ ಮಾಡಲು 'ಅತಃ' ಇತ್ಯಾದಿ ವಾಕ್ಯವು ಹೊರಟಿದೆ. 'ಅತಃ' ಎಂಬ ಪದಕ್ಕೆ ಹಿಂದೆ ಉಲ್ಲೇಖ ಮಾಡಿದ 'ಏಕೀಭವಂತಿ' ಎಂಬ ಶ್ರುತಿಯ ಬಲದಿಂದ ಎಂದರ್ಥ. ಈ ಶ್ರುತಿಯ ಬಲದಿಂದ ಪಾರಮಾರ್ಥಿಕವಾಗಿ ಜೀವಾಭೇದವಿದ್ದರೂ ಕೂಡ ಕಾಲ್ಪನಿಕವಾದ ಭೇದವಿರುವುದರಿಂದ ಈಶ್ವರನಿಗೆ ಜಗತ್ಕಾರಣತ್ವವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರವನ್ನು ನೀಡಲು 'ಪರಮಾರ್ಥತಃ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಬ್ರಹ್ಮನೊಬ್ಬನೇ ಪಾರಮಾರ್ಥಿಕವಾಗಿ ಜಗತ್ಕಾರಣತ್ವವನ್ನುಳ್ಳವನು ಜೀವನಲ್ಲ ಎಂಬ ಸಿದ್ಧಾಂತಿಗಳಿಗೆ ಅಭಿಮತವಾದ ಯಾವ ಪ್ರಮೇಯವಿದೆಯೋ ಇದು ಅನುಪಪನ್ನವಾಗಿದೆ ಎಂಬುದು ಈ ಪದದಿಂದ ತಿಳಿಯುವ ಅರ್ಥ. ಭಾಷ್ಯದಲ್ಲಿ ಉಲ್ಲೇಖ ಮಾಡಿದ ಐಕ್ಯಶ್ರುತಿಯು ಸಾವಕಾಶವಾಗಿದೆ ಎಂದು ಹೇಳಿದ್ದು ಯುಕ್ತಿಗೆ ಅಸಿದ್ಧಿಯನ್ನು ಹೇಳಿದ ಅಭಿಪ್ರಾಯದಿಂದ. ಇದರ ತಾತ್ಪರ್ಯವನ್ನು 'ಜೀವೇಶಯೋಃ' ಎಂಬ ವಾಕ್ಯದಿಂದ ಉಪಪಾದನೆ ಮಾಡಿದ್ದಾರೆ. ಐಕ್ಯ ಶ್ರುತಿಗೆ ಏನು ಗತಿ ? ಎಂಬ ಪ್ರಶ್ನೆಗೆ 'ಏಕೀಭಾವ' ಶಬ್ದವು ಸಾನ್ನಿಧ್ಯವಿದ್ದರೂ ಕೂಡ ಉಪಪನ್ನವಾಗುತ್ತದೆ ಎಂಬ ನ್ಯಾಯವಿವರಣಕ್ಕೆ ಅನುಸಾರಿಯಾದ ಗತಿಯನ್ನು 'ಐಕ್ಯೋಕ್ತಿಸ್ತು' ಎಂಬ ವಾಕ್ಯದಿಂದ ಉಪಪಾದನೆ ಮಾಡಿದ್ದಾರೆ.

### 'ಸ್ಥಾನೈಕ್ಯ' 'ಮತ್ಯೈಕ್ಯ' ಗಳೆರಡೂ ವಿವಕ್ಷಿತ

**भावदीपः** – भाष्ये ऐक्यश्रुतेः सावकाशत्वोक्तियुक्तेरसिद्ध्यभिप्रायेणेति भावेन तत्तात्पर्यमाह – **जीवेशयोरिति** ।। ऐक्यश्रुतेः कागतिरित्यत एकाभावशब्दस्तु सान्निध्येऽपि भवतीति न्यायविवरणानुरोधेन गतिमाह – **ऐक्योक्तिस्त्विति** ।। सान्निध्यपदस्य मत्यैक्यमप्यर्थ इति भावेनादिपदप्रयोगः। अत एव तत्रोभयानुगुण्येन एकीभूता तु सा सेना पाण्डवानभ्यवर्धतेतिवदित्युक्तमिति भावः। भाष्ये दृष्टान्तभाग-मात्रस्योक्तत्वेऽपि न्यायविवरणे शेषस्याप्युक्त्यात्रापि दार्ष्टान्तिकांशोऽप्यभिमत इति भावेन तदानुगुप्येनैव भाष्यमवतार्य शेषमाह – **न श्रुतेरिति** ।। एकीभवन्तीति श्रुतेरित्यर्थः ।।

ಸಾನ್ನಿಧ್ಯ ಪದಕ್ಕೆ ಸ್ಥಾನೈಕ್ಯವನ್ನಷ್ಟೇ ವಿವಕ್ಷಿಸಬಾರದು, ಮತ್ಯೈಕ್ಯವನ್ನೂ ಕೂಡ ವಿವಕ್ಷಿಸಬೇಕು. ಇದನ್ನು ತಿಳಿಸಲು ಸ್ಥಾನಾದಿ ಎಂಬಲ್ಲಿ ಆದಿ ಪದವನ್ನು ಪ್ರಯೋಗಿಸಿದ್ದಾರೆ. ಸ್ಥಾನೈಕ್ಯ ಹಾಗೂ ಮತ್ಯೈಕ್ಯ ಇವೆರಡರಲ್ಲಿ

ಅನುಗತವಾದ ಐಕ್ಯವನ್ನು ವಿವಕ್ಷಿಸುವುದಕ್ಕಾಗಿ 'ಏಕೀಭೂತಾ ತು ಸಾ ಸೇನಾ ಪಾಂಡವಾನಭ್ಯವರ್ತತ' ಎಂಬ ಉದಾಹರಣೆಯನ್ನು ನೀಡಿದ್ದಾರೆ. 'ಆ ಸೇನೆಯು ಒಂದೆಡೆ ಸೇರಿ ಪಾಂಡವರನ್ನು ಅಭಿವೃದ್ಧಿ ಪಡಿಸಿತು' ಎಂದು ಹೇಳಿದಾಗ ಈ ದೃಷ್ಟಾಂತದಲ್ಲಿ ಸ್ಥಾನೈಕ್ಯವು ಇದೆ, ಮತ್ಯೈಕ್ಯವೂ ಕೂಡ ಇದೆ ಎಂಬುದನ್ನು ಗಮನಿಸಬೇಕು. ಭಾಷ್ಯದಲ್ಲಿ ದೃಷ್ಟಾಂತ ಭಾಗವನ್ನಷ್ಟೇ ಹೇಳಿದ್ದಾರೆ. ನ್ಯಾಯವಿವರಣದಲ್ಲಿ ಉಳಿದದ್ದನ್ನೂ ಕೂಡ ಹೇಳಿರುವುದರಿಂದ ಪ್ರಕೃತ ಭಾಷ್ಯದಲ್ಲಿ ದಾರ್ಷ್ಟಾಂತಿಕಾಂಶವನ್ನು ವಿವಕ್ಷಿಸಬೇಕು. ಈ ಅಭಿಪ್ರಾಯವುಳ್ಳವರಾಗಿ ಭಾಷ್ಯಕ್ಕೆ ಅವತಾರಿಕೆಯನ್ನು ನೀಡಿ ಶೇಷಪೂರಣ ಮಾಡಿಕೊಳ್ಳುವ ಮೂಲಕ ವ್ಯಾಖ್ಯಾನ ಮಾಡಲು 'ನ ಶ್ರುತೇಃ' ಇತ್ಯಾದಿ ವಾಕ್ಯವು ಹೊರಟಿದೆ. 'ಶ್ರುತೇಃ' ಎಂದರೆ ಏಕೀಭವಂತಿ ಎಂಬ ಶ್ರುತಿಗೆ ಎಂದರ್ಥ.

### ವಾಕ್ಯಶೇಷದ ಮೂಲಕ ಭಾಷ್ಯಕ್ಕೆ ವ್ಯಾಖ್ಯಾನ

**भावदीपः – एवमिति ।।** विजानतो मुनेरात्मा स्वरूपमप्येवं भवतीत्यर्थः। (एवमेव हि जीवोऽपीति स्मृत्युक्तेः अत्र काठकभाष्योक्तब्रह्मार्थग्रहणे तु ब्रह्मेशानादिभिरिति स्मृत्युक्तिरयुक्ता स्यात्। एवमेव छान्दोग्यभाष्यटीकोक्तेश्च ॥ **एतेनेति ।।** सदृष्टान्तजीवेशभेदबोधकश्रुत्युदाहरणेनेत्यर्थः। न्यायविवरणोक्तपूर्वोत्तरवाक्यविरोधं चाह – **निरञ्जन इति ।।**

ಟೀಕೆಯಲ್ಲಿ 'ಏವಂ ಮುನೇಃ' ಇತ್ಯಾದಿಯಾಗಿ ವಾಕ್ಯಶೇಷವನ್ನು ಉಲ್ಲೇಖ ಮಾಡಿದ್ದಾರೆ. 'ತಿಳಿಯಲು ಉತ್ಸುಕನಾದ ಮುನಿಯ ಸ್ವರೂಪವೂ ಕೂಡ ಹೀಗೆ ಆಗುತ್ತದೆ' ಎಂದು ಇದರ ಅರ್ಥ. 'ಏತೇನ' ಎಂಬ ಪದಕ್ಕೆ ದೃಷ್ಟಾಂತ ಸಹಿತವಾದ, ಜೀವೇಶಭೇದಬೋಧಕವಾದ ಶ್ರುತಿಯನ್ನು ಉದಾಹರಣೆ ಮಾಡಿರುವುದರಿಂದ ಎಂದರ್ಥ. ನ್ಯಾಯವಿವರಣದಲ್ಲಿ ಹೇಳಿದ ಪೂರ್ವೋತ್ತರ ವಾಕ್ಯಗಳಿಗೆ ವಿರೋಧವನ್ನು 'ನಿರಂಜನಃ' ಎಂಬುದರಿಂದ ಹೇಳಿದ್ದಾರೆ.

### ವಿಷ್ಣುತತ್ವನಿರ್ಣಯ ಟೀಕೆಯಲ್ಲಿ ಶ್ರುತ್ಯರ್ಥ

**भावदीपः –** उपलक्षणमेतत्। विष्णुतत्वनिर्णयतट्टीकाद्युक्तबाधकान्तराण्यपि ध्येयानीति। व्याख्यातैषा श्रुतिः सम्यक्तत्रैव टीकादौ प्रथमपरिच्छेदान्तिमभागे,

आथर्वणभाष्ये च । व्याघातनिरासायाह **– इत्युक्तोऽपीति ।।** तादात्म्यं मुक्तिरित्यत्र मानमाह **– हराविति ।। तादात्म्यमिति ।।** हरिणेति योज्यम्।। **इति वचनादिति ।।** चतुर्थस्कन्धतात्पर्योक्तादिति ज्ञेयम् ।।

ಉಪಲಕ್ಷಣಯಾ ಇದನ್ನು ವಿವಕ್ಷಿಸಬೇಕು. ವಿಷ್ಣುತತ್ವನಿರ್ಣಯ ಹಾಗೂ ಅದರ ಟೀಕೆಯಲ್ಲಿ ಹೇಳಲ್ಪಟ್ಟ ಬೇರೆ ಬಾಧಕಗಳನ್ನೂ ಕೂಡ ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು. ಪ್ರಥಮ ಪರಿಚ್ಛೇದದ ಕೊನೆಯ ವಿಷ್ಣುತತ್ವನಿರ್ಣಯ ಟೀಕೆಯಲ್ಲಿ ಈ ಶ್ರುತಿಯನ್ನು ಸ್ಪಷ್ಟವಾಗಿ ವ್ಯಾಖ್ಯಾನ ಮಾಡಲಾಗಿದೆ. ಮತ್ತು ಆಥರ್ವಣ ಭಾಷ್ಯದಲ್ಲೂ ಕೂಡ ಈ ಶ್ರುತಿಯನ್ನು ವ್ಯಾಖ್ಯಾನ ಮಾಡಿದ್ದಾರೆ. ವ್ಯಾಘಾತ ಪರಿಹಾರಕ್ಕೋಸ್ಕರ 'ಇತ್ಯುಕ್ತೋಽಪಿ' ಎಂದು ಹೇಳಿದ್ದಾರೆ. 'ತಾದಾತ್ಮ್ಯಂ ಮುಕ್ತಿಃ' ಎಂಬ ವಿಷಯದಲ್ಲಿ ಪ್ರಮಾಣವನ್ನು 'ಹರೌ' ಎಂಬುದರಿಂದ ಹೇಳಿರುತ್ತಾರೆ. ತಾದಾತ್ಮ್ಯವೆಂಬಲ್ಲಿ 'ಹರಿಣಾ' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. 'ಇತಿ ವಚನಾತ್' ಎಂದರೆ ಚತುರ್ಥಸ್ಕಂದದ ತಾತ್ಪರ್ಯದಲ್ಲಿ ಹೇಳಿದ ಮಾತಿನಿಂದ ಎಂದರ್ಥ.

### ಮಾಯಾವಾದಿಗಳ ಸೂತ್ರಾರ್ಥ

**भावदीपः – अल्पेति ।।** असायुज्यमुक्तानामेतत्। नासौ भवतीति स्मृत्युक्तं प्रमेयमित्यर्थः।। **वर्तमानेति ।।** नान्वश्नुवन्तीति वर्तमाननिषेधादित्यर्थः। न ते विष्णाविति श्रुतिः प्राग्जन्मादिसूत्रे व्याख्यातेति भावः। तर्ह्यनर्थकं सूत्रं स्यादिति शङ्कते ।। **किंत्विति ।।** ब्रह्मण उपादानत्वे भोक्तुः शरीरस्य भोग्यत्वापत्तेर्भोग्यस्य च शब्दादेर्भोक्तृत्वापत्तेस्तयोरविभागः स्यात् द्वयोरपि परमकारणब्रह्मणोऽनन्यत्वादित्यादिना मायावाद्युक्तं सूत्रार्थमाह **– चेतनेति ।।**

ಟೀಕೆಯಲ್ಲಿ 'ಅಲ್ಪಮುಕ್ತಾನಾಂ' ಎಂದು ಹೇಳಿದ್ದಾರೆ. 'ಸಾಯುಜ್ಯ ಮೋಕ್ಷ ಇಲ್ಲದವರಿಗೆ' ಎಂದು ಇದರ ಅರ್ಥ. 'ಏತತ್' ಎಂದರೆ 'ನಾಸೌ ಭವತಿ' ಎಂಬ ಸ್ಮೃತಿಯಲ್ಲಿ ಹೇಳಿದ ಪ್ರಮೇಯವು ಎಂದರ್ಥ. 'ವರ್ತಮಾನ ನಿಷೇಧಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ.ಇದಕ್ಕೆ 'ನಾನ್ವಶ್ನುವಂತಿ' 'ವರ್ತಮಾನಕಾಲದಲ್ಲಿ ನಿಷೇಧ ಮಾಡಿರುವುದರಿಂದ' ಎಂದು ಅರ್ಥ. 'ನ ತೇ ವಿಷ್ಣೋಃ' ಎಂಬ ಶ್ರುತಿಯನ್ನು ಹಿಂದೆ

ಜನ್ಮಾದ್ಯಧಿಕರಣದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಸೂತ್ರವು ವ್ಯರ್ಥವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಕಿಂತು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಬ್ರಹ್ಮನು ಜಗತ್ತಿಗೆ ಉಪಾದಾನ ಕಾರಣನಾಗಿದ್ದಾನೆ ಎಂದು ಹೇಳುವುದಾದರೆ ಭೋಕ್ತೃವಾದ ಶರೀರವು ಭೋಗ್ಯ ಆಗಬೇಕಾಗುತ್ತದೆ. ಭೋಗ್ಯವಾದ ಶಬ್ದಾದಿಗಳು ಭೋಕ್ತೃ ಆಗಬೇಕಾಗುತ್ತದೆ. ಹೀಗೆ ವಿಷಯವಿಷಯೀಭಾವಗಳಿಗೆ ವ್ಯತ್ಯಾಸವೇ ಇಲ್ಲದಂತಾಗಬೇಕಾಗುತ್ತದೆ. ಏಕೆಂದರೆ ಭೋಕ್ತೃ ಹಾಗೂ ಭೋಗ್ಯಗಳೆರಡು ಪರಮಕಾರಣನಾದ ಬ್ರಹ್ಮನಿಂದ ಅಭಿನ್ನವಾಗಿವೆ. ಹೀಗೆ ಮಾಯಾವಾದಿಗಳು ಹೇಳಿದ ಸೂತ್ರಾರ್ಥಗಳನ್ನು 'ಚೇತನಾಚೇತನ' ಎಂಬುದರಿಂದ ಹೇಳಿರುತ್ತಾರೆ.

ವಿಷ್ಣುವಿನ ಜಗತ್ಕಾರಣತ್ವಕ್ಕೆ ಯುಕ್ತಿವಿರೋಧವಿಲ್ಲವೆಂದು ಸಿದ್ಧವಾಯಿತು

**भावदीपः** – विषयस्य शब्दादेरित्यर्थः। विषयित्वं भोक्तृत्वम्। ब्रह्मात्मकत्वनिरासेनेति॥ उत्तरनये न चान्यत्रेत्यादिना भाष्ये करिष्यमाणेनेति भावः। भोक्तृत्वापत्तिरिति तु यन्मतं तत्कुतो हरिः। भोक्त्रापत्तेरिति प्राहेत्यनुभाष्योक्तमाह **–भोक्तृत्वेति**॥ अवान्तरफलोक्तिपूर्वं प्रधानफलोक्त्या सूत्रार्थमुपसंहरति ॥ **अत इति**॥ जीवेश्वरयोरैक्याभावादित्यर्थः॥

**॥ इति राघवेन्द्रयतिकृते भावदीपे भोक्तृधिकरणम् ॥**

'ವಿಷಯಸ್ಯ' ಎಂದರೆ 'ಶಬ್ದಾದಿ ವಿಷಯಗಳಿಗೆ' ಎಂದರ್ಥ. 'ವಿಷಯಿತ್ವಂ' ಎಂದರೆ 'ಭೋಕ್ತೃತ್ವ' ಎಂದರ್ಥ. 'ಬ್ರಹ್ಮಾತ್ಮಕತ್ವನಿರಾಸೇನ' ಎಂಬುದಕ್ಕೆ 'ಮುಂದಿನ ಅಧಿಕರಣದಲ್ಲಿ 'ನ ಚಾನ್ಯತ್ರ' ಇತ್ಯಾದಿ ಭಾಷ್ಯದಿಂದ ಬ್ರಹ್ಮಾತ್ಮಕತ್ವವನ್ನು ನಿರಾಕರಣೆ ಮಾಡುವುದರಿಂದ' ಎಂದರ್ಥ. 'ಭೋಕ್ತೃತ್ವಾಪತ್ತಿರಿತಿ ತು ಯನ್ಮತಂ ತತ್ಕುತೋ ಹರಿಃ । ಭೋಕ್ತ್ರಾಪತ್ತೇರಿತಿ ಪ್ರಾಹ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನು 'ಭೋಕ್ತೃತ್ವಾಪತ್ತೇಃ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. ಅಧಿಕರಣಕ್ಕೆ ಅವಾಂತರ ಫಲವನ್ನು ಹೇಳುವ ಮೂಲಕ ಪ್ರಧಾನ ಫಲವನ್ನು ಹೇಳುತ್ತಾ ಸೂತ್ರಾರ್ಥವನ್ನು ಉಪಸಂಹಾರ ಮಾಡಲು 'ಅತಃ' ಇತ್ಯಾದಿ ವಾಕ್ಯವು ಹೊರಟಿದೆ. 'ಅತಃ' ಎಂಬ ಪದಕ್ಕೆ ಜೀವೇಶ್ವರರಿಗೆ ಐಕ್ಯವಿರುವುದರಿಂದ ಎಂದರ್ಥ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಭೋಕ್ತ್ರಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## भोक्त्रधिकरणम् (२-१-५)

ಜೀವಬ್ರಹ್ಮರ ಐಕ್ಯದಲ್ಲಿ ಪೂರ್ವಪಕ್ಷ

भोक्त्रापत्तेरविभागश्चेत् स्याल्लोकवत् ।। २-१-१४।।

अत्र बहुश्रुतिसिद्धतया प्रबलयुक्त्यविरोध उच्यते । भोक्तृजीर्वस्य मोक्षे ब्रह्मत्वापत्तेः ''परेऽव्यये सर्व एकीभवन्ति'' इत्यादिषु श्रवणात् तयोरविभागो भेदाभावः । ततश्चासर्वकर्तृजीवाभिन्नत्वान्न ब्रह्मणः सर्वकर्तृतेति चेत्

ಯಾವ ಯುಕ್ತಿಯು ಬಹಳವಾದ ಶ್ರುತಿಯಿಂದ ಸಿದ್ಧವಾಗಿರುವುದರಿಂದಲೇ ಪ್ರಬಲವಾಗಿದೆಯೋ, ಅಂಥ ಯುಕ್ತಿಯ ವಿರೋಧ ಪರಿಹಾರವನ್ನು ಈ ಭೋಕ್ತ್ರಧಿಕರಣದಲ್ಲಿ ಮಾಡಲಾಗಿದೆ. ಭೋಕ್ತೃ ಎನಿಸಿದ ಜೀವನು ಮುಕ್ತನಾದಾಗ ಬ್ರಹ್ಮಭಾವವನ್ನು ಹೊಂದುತ್ತಾನೆ ಎಂದು 'ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯಾದಿ ಶ್ರುತಿಗಳು ಹೇಳುತ್ತಿವೆ. ಆದ್ದರಿಂದ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಬೇಕು. ಆದ್ದರಿಂದ ಸರ್ವಕರ್ತೃವಲ್ಲದ ಜೀವನಿಂದ ಅಭಿನ್ನನಾಗಿರುವ ಕಾರಣ ಬ್ರಹ್ಮನೂ ಕೂಡ ಸರ್ವಕರ್ತೃ ಆಗಲಾರ. ಇಷ್ಟು ಪೂರ್ವಪಕ್ಷ.

ಸೂತ್ರದಲ್ಲಿ ಐಕ್ಯಶ್ರುತಿ ವ್ಯಾಖ್ಯಾನ

नेति शेषः । ब्रह्मणो जीवाभेद एव नास्ति । श्रौतस्त्वेकीभावप्रयोगः स्याल्लोकवत् । यथा लोके उदके उदकस्यैकीभावव्यवहारो, यथा वा

प्राग्विभिन्ना ब्राह्मणाः साम्प्रतमेकीभूता इति व्यपदेशस्तथा प्राग्भिन्नस्थाना भिन्नमतयो जीवाः मुक्तौ ब्रह्मणैकस्थाना एकमतय इति स्थानैक्यादिनिमित्तक इत्यर्थः ।

'ನ' ಎಂಬುದನ್ನು ಸೂತ್ರದಲ್ಲಿ ಸೇರಿಸಿಕೊಳ್ಳಬೇಕು. ಬ್ರಹ್ಮನಿಗೆ ಜೀವನ ದೆಸೆಯಿಂದ ಅಭೇದವೇ ಇರುವುದಿಲ್ಲ. 'ಏಕೀಭವಂತಿ' ಎಂಬುದಾಗಿ ಶ್ರುತಿಯು ಐಕ್ಯವನ್ನು ಹೇಳುತ್ತಿದೆ ಅಲ್ಲವೇ? ಎಂದರೆ ಈ ಐಕ್ಯಪ್ರಯೋಗವನ್ನು ಲೋಕದ ದೃಷ್ಟಾಂತದಿಂದ ಅರ್ಥ ಮಾಡಿಕೊಳ್ಳಬೇಕು. ಹೇಗೆ ಲೋಕದಲ್ಲಿ ನೀರಿಗೆ ಮತ್ತೊಂದು ನೀರನ್ನು ಸೇರಿಸಿದಾಗ ಎರಡು ನೀರುಗಳು ಐಕ್ಯವಾದವು ಎಂಬುದಾಗಿ ವ್ಯವಹರಿಸುತ್ತಾರೋ, ಅಥವಾ ಮೊದಲು ವಿಭಿನ್ನರಾದ ಬ್ರಾಹ್ಮಣರು ಈಗ ಐಕ್ಯವನ್ನು ಹೊಂದಿದರು ಎಂದು ವ್ಯವಹರಿಸುತ್ತಾರೋ, ಅದೇ ರೀತಿಯಲ್ಲಿ ಮೊದಲು ಭಿನ್ನಸ್ಥಾನದಲ್ಲಿದ್ದ ಅಥವಾ ಭಿನ್ನಮತಿಯನ್ನು ಪಡೆದ ಜೀವರುಗಳು ಮುಕ್ತಿಯಲ್ಲಿ ಬ್ರಹ್ಮನ ಜೊತೆ ಏಕಸ್ಥಾನವನ್ನು ಪಡೆಯುತ್ತಾರೆ. ಮತ್ತು ಸಮಾನಮತಿಯನ್ನು ಬ್ರಹ್ಮನ ಜೊತೆ ಹೊಂದುತ್ತಾರೆ. ಹೀಗೆ ಸ್ಥಾನೈಕ್ಯ ಹಾಗೂ ಮತ್ಯೈಕ್ಯನಿಮಿತ್ತದಿಂದ ಐಕ್ಯಶ್ರುತಿಯ ಅಭಿಪ್ರಾಯವನ್ನು ಅರ್ಥಮಾಡಿಕೊಳ್ಳಬೇಕು.

ಭಿನ್ನವಾದ ಪದಾರ್ಥಗಳು ಅಭಿನ್ನಗಳಾಗುವುದಿಲ್ಲ

कुत एवं लक्षितलक्षणाश्रयणं श्रुतेरित्यतोऽपि स्याल्लोकवत् । लोकेऽप्यन्यद्वस्तु वस्त्वन्तरेणाभेदमापन्नं न दृष्टम् । अतः प्राग्भिन्नतया प्रतीतस्य जीवस्य मुक्तावभेदायोगाद् बाधकादेवमाश्रयणं युक्तम् । न च प्राग्भेदप्रतितिर्भ्रमः बाधकाभावादिति भावः ॥

'ಏಕೀಭವಂತಿ' ಎಂಬ ಶ್ರುತಿಗೆ ಲಕ್ಷಿತಲಕ್ಷಣವನ್ನು ಏಕೆ ಆಶ್ರಯಿಸಬೇಕು? ಎಂಬ ಪ್ರಶ್ನೆಗೂ 'ಲೋಕವತ್' ಎಂಬುದರಿಂದಲೇ ಉತ್ತರಿಸಿದ್ದಾರೆ. ಲೋಕದಲ್ಲಿ ಒಂದು ವಸ್ತು ಮತ್ತೊಂದು ವಸ್ತುವಿನ ಜೊತೆ ಐಕ್ಯವನ್ನು ಹೊಂದುವುದು ಕಂಡಿಲ್ಲ. ಆದ್ದರಿಂದ ಮೊದಲು ಭಿನ್ನರಾಗಿ ಪ್ರತೀತರಾದ ಜೀವರು ಮುಕ್ತರಾದಾಗ ಅಭಿನ್ನರಾಗಲು ಸಾಧ್ಯವಿಲ್ಲ. ಹೀಗೆ ಬಾಧಕವಿರುವುದರಿಂದ ಲಕ್ಷಿತಲಕ್ಷಣವನ್ನು ಆಶ್ರಯಿಸಲಾಗಿದೆ. ಮುಕ್ತಿಯ ಮೊದಲು ಇರುವ ಭೇದಜ್ಞಾನವನ್ನು ಭ್ರಾಂತಿ ಎಂದು ಹೇಳಬಾರದು. ಹಾಗೇ ಭ್ರಾಂತಿಯೆನ್ನಲು ಯಾವುದೇ ಬಾಧಕವಿರುವುದಿಲ್ಲ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಭೋಕ್ತ್ರಧಿಕರಣವು ಮುಗಿಯಿತು ॥

## ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ಭೋಕ್ತೃಧಿಕರಣ ಮತ್ತು

## ವಿಮರ್ಶೆ

ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನಾಗಿದ್ದಾನೆ ಎಂದು ಹಿಂದಿನ ಅಸದಧಿಕರಣದಲ್ಲಿ ಸಮರ್ಥನೆ ಮಾಡಲಾಯಿತು. ಹಾಗಾದಲ್ಲಿ ಶಾರೀರನಾದ ಭೋಕ್ತೃಜೀವನು ಬ್ರಹ್ಮನಿಂದ ಅಭಿನ್ನನಾಗಿದ್ದಾನೆ. ಭೋಕ್ತೃವಾದ ಶಬ್ದಾದಿವಿಷಯಗಳೂ ಕೂಡ ಬ್ರಹ್ಮನಿಂದ ಅಭಿನ್ನವಾಗಿವೆ ಎಂದು ಹೇಳಿದಂತಾಗುತ್ತದೆ. 'ಯತ್ ಯದಭಿನ್ನಾಭಿನ್ನಂ ತತ್ ತದಭಿನ್ನಂ' ಎಂಬ ನಿಯಮದಂತೆ ಶಬ್ದಾದಿವಿಷಯಗಳು ಶಾರೀರದಿಂದ ಅಭಿನ್ನವಾದ ಬ್ರಹ್ಮನಿಂದ ಅಭಿನ್ನವಾಗಿರುವ ಕಾರಣ ಶಾರೀರನಾದ ಜೀವನಿಂದಲೂ ಕೂಡ ಅಭಿನ್ನವಾಗುತ್ತವೆ. ಆವಾಗ ಭೋಕ್ತೃವಾದ ಶಾರೀರಿಗೆ ಭೋಗ್ಯತ್ವವು, ಭೋಗ್ಯವಾದ ಶಬ್ದಾದಿವಿಷಯಗಳಿಗೆ ಭೋಕ್ತೃತ್ವವು ಬರಬೇಕಾಗುತ್ತದೆ. ಶಬ್ದಾದಿಗಳು 'ಭೋಗ್ಯ', ಶಾರೀರನು 'ಭೋಕ್ತೃ' ಎಂಬ ವಿಭಾಗವೇ ಇಲ್ಲದಂತಾಗುತ್ತದೆ. ಏಕೆಂದರೆ ಎರಡೂ ಕೂಡ ಪರಮಕಾರಣನಾದ ಬ್ರಹ್ಮನಿಂದ ಏಕೀಭೂತವಾಗಿವೆ. ಇಷ್ಟು ಪೂರ್ವಪಕ್ಷ.

ಫೇನ ಹಾಗೂ ತರಂಗಗಳೆರಡೂ ಸಮುದ್ರದ ಕಾರ್ಯವೇ ಆಗಿವೆ. ಆದರೂ ಕೂಡ ಫೇನವು ತರಂಗಕ್ಕಿಂತ ಹೇಗೆ ಭಿನ್ನವೋ? ಅದರಂತೆ ಭೋಕ್ತೃನಾದ ಶಾರೀರ, ಭೋಗ್ಯವಾದ ಶಬ್ದಾದಿಗಳೆರಡೂ ಬ್ರಹ್ಮನ ಕಾರ್ಯವೇ ಆಗಿದ್ದರೂ ಪರಸ್ಪರ ಇವುಗಳಲ್ಲಿ ಭೇದವಿರುತ್ತದೆ. ಆದ್ದರಿಂದ ಭೋಕ್ತೃವಿಗೆ ಭೋಗ್ಯತ್ವಾಪತ್ತಿಯು, ಭೋಗ್ಯಕ್ಕೆ ಭೋಕ್ತೃತ್ವಾಪತ್ತಿಯು ಬರುವುದಿಲ್ಲ. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣ ಶರೀರ ತಪ್ಪು. ವಿವರ್ತಸಿದ್ಧಾಂತವಾದ ಅದ್ವೈತಮತದಲ್ಲಿ ಹೀಗೆ ಸಾಂಕರ್ಯಶಂಕೆಯೇ ಹುಟ್ಟುವುದಿಲ್ಲ. ಭೋಕ್ತೃನಾದ ಜೀವ, ಭೋಗ್ಯವಾದ ಶಬ್ದಾದಿಗಳು ಎಲ್ಲದರ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಿರುವಾಗ ಸಾಂಕರ್ಯದ ಆಶಂಕೆಯೇ ಬರುವುದಿಲ್ಲ.

ಮತ್ತು ಪೂರ್ವಪಕ್ಷ ಮಾಡುವಾಗ ಭೋಕ್ತೃ, ಭೋಗ್ಯಗಳಿಗೆ ವಿಭಾಗವೇ ಇಲ್ಲದಿರಬೇಕಾದೀತೆಂದು ಆಪತ್ತಿಯನ್ನು ಮಾಡಲಾಯಿತು. ಇದರ ಅಭಿಪ್ರಾಯವೇನು ? ಚೇತನಾಚೇತನಸ್ವರೂಪದಿಂದ ವಿಭಾಗವು ಇಲ್ಲದಿರಬೇಕಾದೀತು ಎಂಬುದು ಆಪಾದನೆಯ

ಅಭಿಪ್ರಾಯವೋ ? ಅಥವಾ ಬೇರೆ ಯಾವುದಾದರು ರೂಪದಿಂದ ವಿಭಾಗವು ಇಲ್ಲದಿರಬೇಕಾದೀತು ಎಂಬುದು ಆಪಾದನೆಯ ಅಭಿಪ್ರಾಯವೋ?

ಮೊದಲನೆಯ ಪಕ್ಷ ತಪ್ಪು. ಚೇತನಪದಾರ್ಥವು ಅನಾದಿಯಾಗಿರುವುದರಿಂದ ಕಾರ್ಯದಲ್ಲಿ ಚೇತನವು ಸೇರುವುದೇ ಇಲ್ಲ. ಭೋಗ್ಯವಾದ ಶಬ್ದಾದಿ ಪದಾರ್ಥಗಳಷ್ಟೇ ಕಾರ್ಯಪದಾರ್ಥದಲ್ಲಿ ಸೇರುತ್ತವೆ. ಆದ್ದರಿಂದ 'ಕಾರ್ಯಪದಾರ್ಥಗಳಲ್ಲಿ ಚೇತನಾಚೇತನತ್ವವೆಂಬ ವಿಭಾಗವೇ ಇಲ್ಲದಿರಬೇಕಾದೀತು' ಎಂದು ಆಪತ್ತಿ ಮಾಡಿದರೆ ಇದು ಇಷ್ಟಾಪತ್ತಿಯೇ ಆಗುತ್ತದೆ.

ಆಕ್ಷೇಪ - ಕಾರ್ಯಗಳ ಮಧ್ಯದಲ್ಲಿ ವ್ಯತ್ಯಾಸವಿಲ್ಲದಿರಬೇಕಾದೀತು ಎಂಬುದು ನಮ್ಮ ಆಪಾದನೆಯ ಅಭಿಪ್ರಾಯವಲ್ಲ. ಚೇತನತ್ವ ಮತ್ತು ಅಚೇತನತ್ವರೂಪದಿಂದ ಪ್ರಮಿತವಾದ ವಿಭಾಗವು ಇಲ್ಲದಿರಬೇಕಾದೀತು ಎಂಬುದು ಆಪಾದನೆಯ ಅಭಿಪ್ರಾಯ. ಅನಾದಿಯಾದ ಚೇತನವು ಬ್ರಹ್ಮನಿಂದ ಅಭಿನ್ನವಾಗಿದೆ. ಜಡಪದಾರ್ಥವು ಬ್ರಹ್ಮನ ಕಾರ್ಯವಾಗಿದ್ದು, ಬ್ರಹ್ಮನಿಂದ ಅಭಿನ್ನವಾಗಿದೆ. ಚೇತನವು ಅನಾದಿಯಾಗಿದ್ದರೂ ಕೂಡ ಬ್ರಹ್ಮನಿಂದ ಅಭಿನ್ನವಾಗಿರುವ ಜಡಪದಾರ್ಥದಿಂದ ಐಕ್ಯವನ್ನು ಹೊಂದಬೇಕಾದೀತು ಎಂದು ಆಪಾದನೆ ಮಾಡಬಹುದಲ್ಲವೇ?

ಸಮಾಧಾನ - ಇದು ತಪ್ಪು. ಹೀಗೆ ಹೇಳುವುದಾದರೆ ಪೂರ್ವಪಕ್ಷವೇ ಉದಯವಾಗುವುದಿಲ್ಲ. 'ಅಭಿಮಾನಿವ್ಯಪದೇಶಸ್ತು' ಎಂಬ ಸೂತ್ರದ ಅನಂತರ 'ದೃಶ್ಯತೇ ತು' ಎಂಬ ಸೂತ್ರವು ಪ್ರಸಕ್ತವಾಗಿದೆ. ಆ ಸೂತ್ರದಲ್ಲಿ ವಿಲಕ್ಷಣವಾಗಿದ್ದರೂ ಕೂಡ ಉಪಾದಾನ-ಉಪಾದೇಯಭಾವವು ಯುಕ್ತವಾಗುತ್ತದೆ ಎಂದು ಸಮರ್ಥಿಸಲಾಗಿತ್ತು. ಆ ಸೂತ್ರದಿಂದಲೇ ಜಗತ್ತು ಜಡಭೂತವಾಗಿದ್ದರೂ ಬ್ರಹ್ಮನು ಉಪಾದಾನನಾಗುತ್ತಾನೆಂದು ಸಿದ್ಧವಾಗುತ್ತದೆ. ಜಡಪದಾರ್ಥಕ್ಕೆ ಬ್ರಹ್ಮನು ಉಪಾದಾನನಾಗಿದ್ದಾನೆ ಎಂಬ ಕಾರಣದಿಂದ ಬ್ರಹ್ಮನಲ್ಲಿರುವ ಚೇತನತ್ವಕ್ಕೆ ಹಾನಿಯು ಬರುವುದಿಲ್ಲ. ಈ ವಿಷಯವು 'ದೃಶ್ಯತೇ ತು' ಎಂಬ ಸೂತ್ರದಿಂದ ಸಿದ್ಧವಾಗಿದೆ. ಹೀಗಿರುವಾಗ ಬ್ರಹ್ಮನಿಂದ ಅಭಿನ್ನನಾದ ಜೀವನಿಗೆ ಜಡತ್ವವು ಪ್ರಾಪ್ತವೇ ಆಗುವುದಿಲ್ಲ. ಜಡಕ್ಕೆ ಉಪಾದಾನಕಾರಣನಾಗಿರುವ ಬ್ರಹ್ಮನಲ್ಲಿಯೇ ಚೇತನತ್ವವು ನಾಶವಾಗುವುದಿಲ್ಲ ಎಂದು ಸಿದ್ಧವಾದ ಮೇಲೆ ಜೀವನಿಗೆ ಜಡತ್ವಪ್ರಾಪ್ತಿಯಾದರೂ ಹೇಗೆ ತಾನೇ ಬರುತ್ತದೆ ?

ಬೇರೆ ಯಾವುದಾದರೂ ರೂಪದಿಂದ ವಿಭಾಗವಿಲ್ಲದಿರಬೇಕಾದೀತು ಎಂಬ ಎರಡನೆಯ ಪಕ್ಷವೂ ಕೂಡ ಅಯುಕ್ತ. ಒಂದು ಮಹಾಸುವರ್ಣಪಿಂಡದಿಂದ ಬಳೆ, ಕಿರೀಟ, ಹಾರ ಮೊದಲಾದ ಅನೇಕ ಆಭರಣಗಳು ಉತ್ಪನ್ನವಾಗುತ್ತವೆ. ಈ ಎಲ್ಲಾ ಆಭರಣಗಳಿಗೂ ಪರಸ್ಪರ

ಭೇದವೇ ಲೋಕದಲ್ಲಿ ಕಂಡಿದೆ. ಅದರಂತೆ ಬ್ರಹ್ಮನ ಕಾರ್ಯವೆನಿಸಿದ ಆಕಾಶ ವಾಯು ಮೊದಲಾದವುಗಳಲ್ಲಿಯೂ ಪರಸ್ಪರ ಭೇದವು ಇರಬಹುದು.

ಸುವರ್ಣಪಿಂಡವು ಸಾವಯವವಾಗಿದೆ. ಬ್ರಹ್ಮನು ನಿರಯವನಾಗಿದ್ದಾನೆಂಬ ವ್ಯತ್ಯಾಸವಿದೆ. ಆದ್ದರಿಂದ ಸುವರ್ಣದ ಕಾರ್ಯವಾದ ಆಭರಣಗಳಲ್ಲಿ ಭೇದವಿರಬಹುದು. ಬ್ರಹ್ಮನ ಕಾರ್ಯವಾದ ಪದಾರ್ಥಗಳಲ್ಲಿ ಭೇದವು ಇರಬೇಕಾಗಿಲ್ಲವೆಂದು ಪ್ರಶ್ನಿಸಬಾರದು. ನಿಮ್ಮ ಅದ್ವೈತಮತದಲ್ಲಿ 'ಕೃತ್ಸ್ನಪ್ರಸಕ್ತಿಃ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಂತೆ ನಿರವಯನಾದ ಬ್ರಹ್ಮನು ಒಟ್ಟಿಗೆ ಅನೇಕ ದ್ರವ್ಯಗಳಿಗೆ ಉಪಾದಾನನಾಗುವುದಿಲ್ಲವೆಂದಷ್ಟೇ ನೀವು ಪೂರ್ವಪಕ್ಷ ಮಾಡಬೇಕು. ಅದನ್ನು ಬಿಟ್ಟು ಕಾರ್ಯಗಳಲ್ಲಿ ಪರಸ್ಪರ ಭೇದವಿಲ್ಲದಿರಬೇಕಾದೀತು ಎಂಬ ಪೂರ್ವಪಕ್ಷವು ಅಸಂಗತವಾಗುತ್ತದೆ. ಆದ್ದರಿಂದ ನಿಮ್ಮ ಅಧಿಕರಣಶರೀರದಲ್ಲಿ ಪೂರ್ವಪಕ್ಷದ ಉದಯವೇ ಆಗುವುದಿಲ್ಲ.

ಸಿದ್ಧಾಂತವೂ ಕೂಡ ಅಯುಕ್ತವಾಗಿದೆ. ವಿವರ್ತವಾದದಲ್ಲಿ ಫೇನತರಂಗಾದಿಗಳ ದೃಷ್ಟಾಂತವನ್ನು ನೀಡಿದ್ದೇ ಅಯುಕ್ತವಾಗಿದೆ.

ಫೇನತರಂಗದ ದೃಷ್ಟಾಂತವು ವಿಷಮವಾಗಿದೆ. ಫೇನಕ್ಕೆ ಉಪಾದಾನಕಾರಣವಾದ ಜಲದ ಅವಯವವೇ ಬೇರೆ. ತರಂಗಕ್ಕೆ ಉಪಾದಾನವಾದ ಜಲದ ಅವಯವಗಳೇ ಬೇರೆ. ಎರಡಕ್ಕೂ ಒಂದೇ ಉಪಾದಾನಕಾರಣವೇ ಇರುವುದಿಲ್ಲ. ಆದ್ದರಿಂದ ಫೇನತರಂಗಗಳ ದೃಷ್ಟಾಂತದಿಂದ ಕಾರ್ಯಗಳಲ್ಲಿ ಪರಸ್ಪರ ಭೇದಗಳಿರಬಹುದೆಂಬ ಸಿದ್ಧಾಂತವು ಅಯುಕ್ತವಾಗಿದೆ.

ರಾಮಾನುಜರ ಅಧಿಕರಣಶರೀರ ಹೀಗಿದೆ - ಬ್ರಹ್ಮನು ಶರೀರಿಯಾಗಿದ್ದಾನೆಂದು ಸಮರ್ಥಿಸಿದ್ದಾಯಿತು. ಹಾಗಾದಲ್ಲಿ ಶರೀರಿಯಾದ ಜೀವನಿಗೆ ದುಃಖಾದಿಗಳ ಭೋಗವು ಹೇಗೆ ಇರುತ್ತದೋ, ಅದರಂತೆ ಬ್ರಹ್ಮನಿಗೂ ಕೂಡ ದುಃಖಾದಿಗಳ ಭೋಗವು ಬರಬೇಕಾದೀತು. ಜೀವನಿಗಿಂತ ಬ್ರಹ್ಮನಲ್ಲಿ ಯಾವುದೇ ವ್ಯತ್ಯಾಸವಿಲ್ಲದಿರಬೇಕಾದೀತು. ಈ ಆಶಂಕೆಯನ್ನು ಪರಿಹರಿಸಲು 'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾತ್ ಲೋಕವತ್' ಎಂಬ ಸೂತ್ರವು ಹೊರಟಿದೆ ಎನ್ನುತ್ತಾರೆ.

ಇದು ತಪ್ಪು. ನಾವು ಹೇಳುವಂತೆ 'ಭೋಕ್ತುರ್ಜೀವಸ್ಯ ಬ್ರಹ್ಮತ್ವಾಪತ್ತೇಃ' ಭೋಕ್ತ್ಯವಾದ ಜೀವನಿಗೆ ಬ್ರಹ್ಮತ್ವವು ಬರಬೇಕಾದೀತು ಎಂಬುದಾಗಿ ಒಂದು ಪದವನ್ನು ಅಧ್ಯಾಹಾರ ಮಾಡಿ ಸೂತ್ರವನ್ನು ವ್ಯಾಖ್ಯಾನ ಮಾಡಲು ಬರುವಾಗ 'ಬ್ರಹ್ಮಣಃ ಶರೀರತ್ವೇ' ಇತ್ಯಾದಿಯಾಗಿ ಆಪಾದಕವನ್ನು ಅಧ್ಯಾಹಾರ ಮಾಡಿ, ಪುನಃ ಆಪಾದ್ಯದಲ್ಲಿಯೂ ಕೂಡ ದುಃಖಾದಿಪದಗಳನ್ನು

ಅಧ್ಯಾಹಾರ ಮಾಡುವುದು ತಪ್ಪಾಗುತ್ತದೆ. ಮತ್ತು 'ಭೋಕ್ತ್ರಾಪತ್ತೇಃ' ಎಂಬುದಕ್ಕೆ 'ಭೋಕ್ತೃತ್ವ ಆಪತ್ತೇಃ' ಎಂಬುದಾಗಿ ಭಾವಪ್ರಧಾನವನ್ನೂ ಕೂಡ ನೀವು ಕಲ್ಪನೆ ಮಾಡಬೇಕು.

ಅಷ್ಟೇ ಅಲ್ಲದೇ ನೀವು ಮಾಡುತ್ತಿರುವ ಆಶಂಕೆಯನ್ನು 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿಯೇ ನಿರಾಕರಣೆ ಮಾಡಿದ್ದಾಗಿದೆ.

'ಸಂಭೋಗಪ್ರಾಪ್ತಿಃ ಇತಿ ಚೇನ್ನ' ಎಂಬ ಸೂತ್ರದಲ್ಲಿ ಬೇರೆ ಶರೀರದಲ್ಲಿಯೂ ಬ್ರಹ್ಮನು ಇರುವುದಾದರೆ ತತ್ಪ್ರಯುಕ್ತವಾದ ಸುಖ-ದುಃಖಾದಿಗಳ ಭೋಗವು ಬರಬೇಕಾದೀತು ಎಂಬ ಆಶಂಕೆಯನ್ನು ನಿರಾಕರಣೆ ಮಾಡಲಾಗಿದೆ. ಆದರೆ ಈ ಅಧಿಕರಣದಲ್ಲಿ ಬ್ರಹ್ಮನು ಶರೀರಕ್ಕೆ ಸ್ವಾಮಿಯಾದರೆ ತತ್ಪ್ರಯುಕ್ತವಾದ ಸುಖದುಃಖಾದಿಗಳು ಬ್ರಹ್ಮನಿಗೆ ಬರಬೇಕಾಗುತ್ತದೆ ಎಂಬ ಆಶಂಕೆಯನ್ನು ಪರಿಹರಿಸಲಾಗಿದೆ. ಹೀಗೆ ವ್ಯತ್ಯಾಸವಿರುವುದರಿಂದ 'ಸಂಭೋಗಪ್ರಾಪ್ತಿಃ' ಸೂತ್ರದಿಂದ ಗತಾರ್ಥತ್ವವು ಹೇಗೆ ಬರುತ್ತದೆ ?

ಆದರೂ ಕೂಡ ಆಶಂಕೆಯಲ್ಲಿ ವ್ಯತ್ಯಾಸವಿದ್ದರೂ ಪರಿಹಾರದಲ್ಲಿ ಏನೂ ವ್ಯತ್ಯಾಸವಿಲ್ಲ. ಎರಡು ಅಧಿಕರಣಗಳಲ್ಲಿ ನೀನು ಮಾಡಿದ ವ್ಯಾಖ್ಯಾನದ ಮಾತುಗಳು ಹೀಗಿವೆ - ರಾಮಾನುಜನಾದ ನೀನು ಆ ಸೂತ್ರವನ್ನು ವ್ಯಾಖ್ಯಾನ ಮಾಡಬೇಕಾದರೆ 'ನಹಿ ಶರೀರಾಂತರವರ್ತಿತ್ವಮೇವ ಸುಖದುಃಖಹೇತುಃ । ಅಪಿ ತು ಪುಣ್ಯಪಾಪರೂಪಕರ್ಮವಶತ್ವಮ್ । ತತ್ತ್ವಪಹತಪಾಪ್ಮನಃ ಪರಮಾತ್ಮನೋ ನ ಸಂಭವತಿ' ಕೇವಲ ಶರೀರದ ಒಳಗಿದ್ದ ಮಾತ್ರಕ್ಕೆ ಸುಖದುಃಖಕ್ಕೆ ಕಾರಣನಾಗುವುದಿಲ್ಲ. ಹೊರತಾಗಿ ಪುಣ್ಯಪಾಪರೂಪವಾದ ಧರ್ಮದ ಅಧೀನವಾಗಿಯೇ ಸುಖ-ದುಃಖಾದಿಗಳು ಬರುತ್ತವೆ. ಬ್ರಹ್ಮನು ಅಂಥ ಪುಣ್ಯಪಾಪವೆಂಬ ಕರ್ಮಗಳ ಅಧೀನನಾಗುವುದಿಲ್ಲ. ಏಕೆಂದರೆ ಅವನು ಅಪಹತಪಾಪ್ಮನಾಗಿದ್ದಾನೆಂದು ಶ್ರುತಿಗಳು ಸಾರುತ್ತಿವೆ. ಹೀಗೆ 'ಸಂಭೋಗಪ್ರಾಪ್ತಿರಿತಿ' ಎಂಬ ಸೂತ್ರದಲ್ಲಿ ನೀವು ಹೇಳಿರುತ್ತೀರಿ. ಈ ಅಧಿಕರಣದಲ್ಲಿ 'ನಹಿ ಜೀವಸ್ಯ ಶರೀರಧಾತುಸಾಮ್ಯವೈಷಮ್ಯನಿಮಿತ್ತಸುಖದುಃಖಭೋಕ್ತೃತ್ವಂ ಸಶರೀರತ್ವಕೃತಮ್ । ಅಪಿ ತು ಪುಣ್ಯಪಾಪರೂಪಕರ್ಮಕೃತಮ್ । ಅಪಹತಪಾಪ್ಮನಸ್ತು ಪರಮಾತ್ಮನಃ ಸ್ಥೂಲಸೂಕ್ಷ್ಮರೂಪಕೃತ್ಸ್ನಜಗತ್ ಶರೀರತ್ವೇಽಪಿ ಕರ್ಮಸಂಬಂಧಗಂಧೋ ನಾಸ್ತಿ' ಜೀವನಿಗೆ ಶರೀರಧಾತುಸಾಮ್ಯವೈಷಮ್ಯನಿಮಿತ್ತಕವಾದ ಸುಖದುಃಖರೂಪವಾದ ಭೋಕ್ತೃತ್ವವು ಶರೀರ- ನಿಮಿತ್ತಕವಾಗಿ ಬರುತ್ತಿರುವುದಲ್ಲ. ಪುಣ್ಯಪಾಪರೂಪವಾದ ಕರ್ಮನಿಮಿತ್ತವಾಗಿಯೇ ಅಂಥ ಸುಖದುಃಖಾದಿಗಳನ್ನು ಜೀವನು ಅನುಭವಿಸುತ್ತಿದ್ದಾನೆ. ಅಪಹತಪಾಪ್ಮಸ್ವರೂಪನಾದ ಪರಮಾತ್ಮನಲ್ಲಿ ಸ್ಥೂಲರೂಪವಾದ ಹಾಗೂ ಸೂಕ್ಷ್ಮರೂಪವಾದ ಸಮಸ್ತ ಜಗತ್ತು ಶರೀರವಾಗಿದರೂ ಕೂಡ ಕರ್ಮಸಂಬಂಧದ ಗಂಧವೂ ಕೂಡ ಇರುವುದಿಲ್ಲ. ಹೀಗೆ

ಆಕ್ಷೇಪದಲ್ಲಿ ವ್ಯತ್ಯಾಸವಿದ್ದರೂ ಪರಿಹಾರದಲ್ಲಿ ಯಾವುದೇ ವ್ಯತ್ಯಾಸವನ್ನು ನೀವು ಹೇಳಿರುವುದಿಲ್ಲ. ಒಂದೇ ಪರಿಹಾರವಿದ್ದಾಗ ಪುನಃ ಬೇರೆ ಅಧಿಕರಣವು ಹೊರಡುವ ಅವಶ್ಯಕತೆ ಇಲ್ಲ.

ಒಂದು ವೇಳೆ 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿ ಹೇಳಿದ ಪರಿಹಾರವನ್ನು ಅತಿದೇಶ ಮಾಡಲು ಈ ಅಧಿಕರಣ ಹೊರಟಿದೆ ಎನ್ನುವುದಾದರೆ, ಆ ಸೂತ್ರದ ಅನಂತರವೇ 'ಭೋಕ್ತ್ರಾಪತ್ತೇಃ' ಎಂಬ ಸೂತ್ರವು ಇರಬೇಕಿತ್ತು. ಮಧ್ಯದಲ್ಲಿ ಬೇರೆ ಸೂತ್ರಗಳೆಲ್ಲವನ್ನು ನಿವೇಶ ಮಾಡಿದ್ದಕ್ಕೆ ಯಾವುದೇ ಕಾರಣವಿರುವುದಿಲ್ಲ.

ಆಕ್ಷೇಪ - ಈ ಅಧಿಕರಣದಲ್ಲಿ ಸುಖದುಃಖಾದಿಗಳು ಕರ್ಮೋಪಾಧಿಕವಾಗಿದೆಯೆಂದು ಸಮರ್ಥಿಸಲಾಗಿದೆ. ಇದನ್ನು ಅವಲಂಬಿಸಿ, 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿ ಸುಖ-ದುಃಖಾದಿರಹಿತನಾಗಿದ್ದರೂ ಕೂಡ ಈಶ್ವರನಿಗೆ ಸನ್ನಿಧಾನ ಪ್ರಯುಕ್ತವಾಗಿ ಜೀವನಲ್ಲಿರುವ ದುಃಖಾದಿಗಳ ಭೋಗವು ಬರಲಿ ಎಂದು ಆಶಂಕಿಸಲಾಗಿದೆ. ಅದರ ಪರಿಹಾರವನ್ನು 'ಸಂಭೋಗಪ್ರಾಪ್ತಿಃ ಇತಿ ಚೇನ್ನ ವೈಶೇಷ್ಯಾತ್' ಎಂಬ ಸೂತ್ರವು ಮಾಡುತ್ತಿದೆ.

ಸಮಾಧಾನ - ಹಾಗಾದರೆ 'ಸಂಭೋಗಪ್ರಾಪ್ತಿಃ' ಎಂಬ ಸೂತ್ರದಲ್ಲಿ ಆಶಂಕಿಸಲ್ಪಟ್ಟ ಭೋಕ್ತೃತ್ವವು ಬೇರೆಯವರಲ್ಲಿರುವ ಸುಖಾದಿಗಳ ಅನುಸಂಧಾನವು ಸ್ವಗತವಾಗಿ ಬ್ರಹ್ಮನಿಗೆ ಅನುಭವ ಬರುತ್ತದೋ? ಅಥವಾ ಬೇರೆಯವರಲ್ಲಿ ದುಃಖಾದಿಗಳು ಇದೆ ಎಂಬ ಸಾಕ್ಷಾತ್ಕಾರವಷ್ಟೇ ಬ್ರಹ್ಮನಿಗೆ ಬರುತ್ತದೋ?

ಪ್ರಥಮಪಕ್ಷ ಅಯುಕ್ತ. ಜೀವನಿಗೂ ಕೂಡ ಬೇರೆಯವರಲ್ಲಿರುವ ದುಃಖಾದಿಗಳನ್ನು ನೋಡಿ, ತನ್ನಲ್ಲಿಯೇ ಆ ದುಃಖವು ಉಂಟಾಗುತ್ತಿದೆ ಎಂಬ ಭ್ರಾಂತಿಯು ಬರುವುದಿಲ್ಲ. ಆದ್ದರಿಂದ ಜೀವನಿಗೂ, ಬ್ರಹ್ಮನಿಗೂ ಯಾವುದೇ ವ್ಯತ್ಯಾಸವನ್ನು ತೋರಿಸಲಾಗದು. ಹೀಗಿರುವಾಗ ಆಪಾದನೆಯೂ ಕೂಡ ಅಯುಕ್ತವಾಗುತ್ತದೆ. ಎರಡನೆಯ ಪಕ್ಷವು ತಪ್ಪು. ಕೇವಲ ಬೇರೆಯವರಲ್ಲಿರುವ ದುಃಖಾದಿಗಳ ಸಾಕ್ಷಾತ್ಕಾರವಷ್ಟೇ ಬ್ರಹ್ಮನಿಗೆ ಬರುತ್ತದೆ ಎಂದು ಆಪತ್ತಿ ಮಾಡಿದರೆ ಇದು ಇಷ್ಟಾಪತ್ತಿ. ಏಕೆಂದರೆ ಸಿದ್ಧಾಂತಿಗಳಾದ ನಾವು ಬ್ರಹ್ಮನನ್ನು ಸರ್ವಜ್ಞನೆಂದು ಒಪ್ಪಿರುವುದರಿಂದ, ಬೇರೆಯವರ ದುಃಖಾದಿಗಳ ಸಾಕ್ಷಾತ್ಕಾರವು ಬ್ರಹ್ಮನಿಗಿರುವುದು ದೋಷವಾಗುವುದಿಲ್ಲ.

ಇಲ್ಲಿಗೆ ಭೋಕ್ತ್ರಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ, ತತ್ತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು.

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಆರಂಭಣಾಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ,
ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ
ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ
ಮತ್ತು
ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಆರಂಭಣಾಧಿಕರಣ

## ಬ್ರಹ್ಮಸೂತ್ರ

'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – तदनन्यत्वमारम्भणशब्दादिभ्यः ।।**

'ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕಥಮಸ್ವಿತ್ಕಥಾಸೀತ್' ಎಂಬುದಾಗಿ ಪ್ರಳಯಕಾಲದಲ್ಲಿ ಯಾವ ಉಪಾದಾನವಿತ್ತು ಯಾವ ಅಧಿಷ್ಠಾನವಿತ್ತು ? ಹೀಗೆ ಸ್ವತಂತ್ರವಾದ ಉಪಾದಾನವನ್ನು ಅಧಿಷ್ಠಾನವನ್ನು ಶ್ರುತಿಯು ಆಕ್ಷೇಪ ಮಾಡುತ್ತಿದೆ. ಈ ಆಕ್ಷೇಪ ಬಲದಿಂದಲೇ ಪ್ರಳಯಕಾಲದಲ್ಲಿ ಪರಮಾತ್ಮನನ್ನು ಬಿಟ್ಟು ಇತರ ಯಾವುದೇ ಸ್ವತಂತ್ರ ಪದಾರ್ಥಗಳು ಇರಲಿಲ್ಲವೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಜಗತ್ತಿಗೆ ಸ್ವತಂತ್ರಕಾರಣನಾದವನು ಪರಮಾತ್ಮ ಮಾತ್ರ ಎಂಬುದು ನಿಶ್ಚಯವಾಗುತ್ತದೆ.

ಅರ್ಥ -- ತದನನ್ಯತ್ವಂ = ಸ್ವತಂತ್ರಕಾರಣನಾದವನು ಬ್ರಹ್ಮನು ಮಾತ್ರ ಎಂಬುದು ಸಿದ್ಧವಾಗುತ್ತದೆ. ಏಕೆಂದರೆ 'ಆರಂಭಣಶಬ್ದಾದಿಭ್ಯಃ ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕಥಮಸ್ವಿತ್ಕಥಾಸೀತ್' ಎಂಬುದಾಗಿ ಅಧಿಷ್ಠಾನ ಉಪಾದಾನಗಳನ್ನು ಶ್ರುತಿ ವಾಕ್ಯವು ಆಕ್ಷೇಪ ಮಾಡುತ್ತಿದೆ. ಮತ್ತು ಸ್ವಾತಂತ್ರ್ಯಾದಿ ಯುಕ್ತಿಗಳಿಂದಲೂ ಶ್ರೀಹರಿಯೇ ಜಗತ್ಕಾರಣನಾಗಿದ್ದಾನೆಂದು ಸ್ಪಷ್ಟವಾಗುತ್ತದೆ. (ಆರಂಭಣಪದದಿಂದ ಅಧಿಷ್ಠಾನಾದಿ ಸಾಧನ ಕಲಾಪಗಳನ್ನು ಲಕ್ಷಣಯಾ ತಿಳಿಯಬೇಕು).

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

### ಸ್ವರೂಪಸಾಮರ್ಥ್ಯದಿಂದಲೇ ಬ್ರಹ್ಮನ ಸೃಷ್ಟಿ

**ब्रह्मसूत्रभाष्यम् –॥ तदनन्यत्वमारम्भणशब्दादिभ्यः ॥१॥**

**स्वतन्त्रबहुसाधना सृष्टिर्लोके दृष्टा ।**

**नैवं ब्रह्मणः । स्वरूपसामर्थ्यादेव तस्य सृष्टिः ।**

ಅನುವಾದ - ಲೋಕದಲ್ಲಿ ಅನೇಕ ಬಗೆಯ ಸೃಷ್ಟಿಗಳು ಸ್ವತಂತ್ರವಾದ ಕಾರಣಗಳಿಂದ ಸಹಿತವಾಗಿರುವುದು ಕಂಡಿದೆ. ಆದರೆ ಬ್ರಹ್ಮನ ವಿಷಯದಲ್ಲಿ ಹೀಗಿಲ್ಲ. ಯಾವುದೇ ಸ್ವತಂತ್ರಸಾಧನೆಗಳನ್ನು ಅಪೇಕ್ಷೆ ಪಡದೆ ತನ್ನ ಸ್ವರೂಪಭೂತವಾದ ಸಾಮರ್ಥ್ಯದಿಂದಲೇ ಜಗತ್ತಿನ ಸೃಷ್ಟಿವ್ಯಾಪಾರದಲ್ಲಿ ತೊಡಗಲು ಸಮರ್ಥನಾಗಿದ್ದಾನೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್ಕರ್ತೃತ್ವ ವಿಷಯದಲ್ಲಿ ಅನೇಕ ಬಗೆಯ ಯುಕ್ತಿಯ ವಿರೋಧವನ್ನು ಪರಿಹರಿಸಲಾಗಿದೆ. ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ತೋರಿಸಲು ಸೂತ್ರವನ್ನೇ ಮೊದಲು ಪಠಣ ಮಾಡುತ್ತಿದ್ದಾರೆ. ಲೋಕೇ = ಲೋಕದಲ್ಲಿ ಸ್ವತಂತ್ರಬಹುಸಾಧನಕರ್ತೃವಿಗಿಂತ ಅತಿರಿಕ್ತವಾದ ಸ್ವತಂತ್ರವಾದ ಸತ್ತಾ, ಶಕ್ತಿ, ಪ್ರವೃತ್ತಿ ಮೊದಲಾದವುಗಳನ್ನು ಹೊಂದಿರುವ ಅಧಿಷ್ಠಾನ ಕಾರಣ ಮೊದಲಾದ ಅನೇಕ ಬಗೆಯ ಸಾಮಗ್ರಿಗಳು ಸ್ವತಂತ್ರವಾಗಿರುವುದು. ದೃಷ್ಟಾ = ಕಂಡಿರುತ್ತದೆ. ಬ್ರಹ್ಮಣಃ = ಬ್ರಹ್ಮನ ಸೃಷ್ಟಿವಿಷಯದಲ್ಲಿ, ನೈವಂ = ಹೀಗಿರುವುದಿಲ್ಲ. ಕಿಂತು = ವಿಪರೀತವಾಗಿ, ಸ್ವರೂಪಸಾಮರ್ಥ್ಯಾದೇವ = ಯಾವುದೇ ಸ್ವತಂತ್ರ-ಸಾಧನೆಗಳನ್ನು ಅಪೇಕ್ಷೆ ಪಡೆದೆ ತನ್ನ ಸಾಮರ್ಥ್ಯದಿಂದಲೇ, ತಸ್ಯ = ಬ್ರಹ್ಮನ, ಸೃಷ್ಟಿಃ = ಸೃಷ್ಟಿ ವ್ಯಾಪಾರವು ಯುಕ್ತವಾಗುತ್ತದೆ.

ಸೃಷ್ಟಿಗೆ ಬೇರೆ ಸಾಧನಗಳು ಬೇಡ

**ब्रह्मसूत्रभाष्यम् – किं स्विदासीदधिष्ठानमारम्भणं कतमत्स्वित्कथाऽऽसीत्, इति (ऋ.१०.८१.२.) ह्याक्षेपः ।**

ಅನುವಾದ - ಪರಮಾತ್ಮನ ಸೃಷ್ಟಿವ್ಯಾಪಾರವು ಮತ್ತೊಂದು ಸಾಧನದ ಅಧೀನವಾಗಿ ನಡೆಯಲು ಸಾಧ್ಯವಿಲ್ಲ. ಏಕೆಂದರೆ 'ಕಿಂ ಸ್ವಿದಾಸೀತ್' ಎಂಬ ಶ್ರುತಿಯು ಪರಮಾತ್ಮನ ಸೃಷ್ಟಿಗಾಗಿ ಬೇರೆ ಯಾವ ಸಾಮಗ್ರಿಗಳು ಬೇಕು ? ಎಂದು ಆಕ್ಷೇಪ ಮಾಡುತ್ತದೆ. ಕಿಂ ಶಬ್ದವು ಪ್ರಶ್ನಾರ್ಥಕವಲ್ಲ, ಆಕ್ಷೇಪಾರ್ಥದಲ್ಲೇ ಇರುತ್ತದೆ. ಪ್ರಶ್ನಾರ್ಥಕವಾಗಿದ್ದಲ್ಲಿ ಅಧಿಷ್ಠಾನಾದಿಗಳನ್ನು ಹೇಳಬೇಕಿತ್ತು. ಆದರೆ ಅಧಿಷ್ಠಾನ ಹಾಗೂ ಸಾಮಗ್ರಿಗಳನ್ನು ಶ್ರುತಿಯು ಹೇಳುತ್ತಿಲ್ಲ.

> ಪ್ರತಿಪಾದಾರ್ಥ -- ಪರಮಾತ್ಮನು ಸ್ವತಂತ್ರಸಾಧನೆಗಳನ್ನು ಏಕೆ ಅಪೇಕ್ಷಿಸುವುದಿಲ್ಲ ? ಎಂಬ ಪ್ರಶ್ನೆಗೆ ಆರಂಭಣ ಎಂಬ ಸೂತ್ರದ ಅಂಶವನ್ನು ವ್ಯಾಖ್ಯಾನ ಮಾಡುತ್ತಾ ಉತ್ತರಿಸುತ್ತಿದ್ದಾರೆ. ಕಿಂ ಸ್ವಿದಾಸೀದಧಿಷ್ಠಾನಮ್ = ಸೃಷ್ಟಿ ಮಾಡುವ ಪರಮಾತ್ಮನಿಗೆ ಯಾವ ಆಶ್ರಯ, ಆರಂಭಣಂ ಕತಮಹ = ಸಾಮಗ್ರಿಯಾದರೂ ಯಾವುದು? ಕಥಾऽऽಸೀತ್ = ಯಾವುದು ತಾನೆ ಇದ್ದೀತು? ಇತಿ = ಹೀಗೆ, ಆಕ್ಷೇಪಃ = ಆಕ್ಷೇಪವಷ್ಟೆ?

**ब्रह्मसूत्रभाष्यम् – अधिष्ठानाद्यनुक्तेः आदिशब्दाद् युक्तिभिश्च।**

ಅನುವಾದ - ಪರಮಾತ್ಮನಿಗೆ ಸೃಷ್ಟಿ ಮಾಡಲು ಯಾವುದೇ ಆಶ್ರಯಗಳನ್ನು ಶ್ರುತಿಯು ಹೇಳುತ್ತಿಲ್ಲ. ಸೂತ್ರದಲ್ಲಿರುವ ಆದಿ ಶಬ್ದದಿಂದ ಯುಕ್ತಿಗಳಿಂದಲೂ ಸ್ವತಂತ್ರವಾದ ಅಧಿಷ್ಠಾನಗಳು ಇರಲಿಲ್ಲವೆಂದು ತಿಳಿಯುತ್ತದೆ.

> ಪ್ರತಿಪದಾರ್ಥ -- ಕಿಂ ಶಬ್ದವು ಪ್ರಶ್ನೆ ಹಾಗೂ ಆಕ್ಷೇಪ ಎರಡೂ ಅರ್ಥದಲ್ಲಿ ಸಮಾನವಾಗಿರುವುದರಿಂದ ಪ್ರಶ್ನಾರ್ಥಕವೆಂದು ಹೇಗೆ ನಿಶ್ಚಯಿಸಬೇಕು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಅಧಿಷ್ಠಾನಾದ್ಯನುಕ್ತೇಃ = ಅಧಿಷ್ಠಾನ ಮೊದಲಾದವುಗಳನ್ನು ಹೇಳದಿರುವುದರಿಂದ, ಆದಿಶಬ್ದಾದ್ = ಸೂತ್ರದಲ್ಲಿರುವ ಆದಿಶಬ್ದದಿಂದ, ಯುಕ್ತಿಭಿಶ್ಚ = ಮುಂದೆ ಹೇಳುವ ಯುಕ್ತಿಗಳಿಂದಲೂ ಮೇಲಿನ ವಿಷಯವು ಸಿದ್ಧವಾಗುತ್ತದೆ.

**ब्रह्मसूत्रभाष्यम् – परतन्त्रो ह्यपेक्षेत स्वतन्त्रः किमपेक्षते।
साधनानां साधनत्वं यतः किं तस्य साधनैः ।। इत्यादिभिः**

ಅನುವಾದ - ಯಾವ ಕರ್ತೃವು ಅಸ್ವತಂತ್ರನಾಗಿರುತ್ತಾನೋ ಅವನು ತಾನು ಮಾಡುವ ಸೃಷ್ಟಿಗೆ ಮತ್ತೊಂದು ಸಾಮಗ್ರಿಯನ್ನು ಅಪೇಕ್ಷೆ ಪಡಬೇಕು? ಸ್ವತಂತ್ರನಾದ ಪರಮಾತ್ಮನಾದರೂ ಬೇರೆ ಯಾವುದನ್ನು ತಾನೆ ಅವಲಂಬಿಸಬೇಕು? ಸಾಧನಗಳಲ್ಲಿರುವ ಸಾಧನತ್ವವೂ ಕೂಡ ಯಾರ ಅಧೀನವಾಗಿದೆಯೋ ಅಂಥ ವ್ಯಕ್ತಿಗೆ ಸಾಧನೆಗಳಿಂದ ಏನು ಪ್ರಯೋಜನ ?

ಪ್ರತಿಪದಾರ್ಥ -- ಯುಕ್ತಿಗಳಿಗೆ ಆಭಾಸತ್ವಶಂಕೆಯನ್ನು ನಿರಾಸ ಮಾಡಲು ಸ್ಮೃತಿಸಿದ್ಧತ್ವವನ್ನು ಹೇಳುತ್ತಿದ್ದಾರೆ. ಪರತಂತ್ರಃ = ಅಸ್ವತಂತ್ರನಾದವನು, ಅಪೇಕ್ಷತೇ = ಬೇರೆ ಸಾಧನೆಗಳನ್ನು ಅಪೇಕ್ಷಿಸುತ್ತಾನೆ. ಸ್ವತಂತ್ರಃ = ಸ್ವತಂತ್ರನಾದ ಪರಮಾತ್ಮನು, ಕಿಮಪೇಕ್ಷತೇ = ಯಾವುದನ್ನು ತಾನೆ ಅಪೇಕ್ಷಿಸುತ್ತಾನೆ. ಸಾಧನಾನಾಂ = ಸಾಧನೆಗಳಾದ ಪ್ರಕೃತ್ಯಾದಿಗಳಿಗೆ, ಸಾಧನತ್ವಮ್ = ಸಾಧನತ್ವವು, ಯತಃ = ಯಾವ ಪರಮಾತ್ಮನಿಂದ ಬಂದಿರುತ್ತದೋ, ತಸ್ಯ = ಅಂಥ ಪರಮಾತ್ಮನಿಗೆ, ಸಾಧನಾದಿಭಿಃ = ಸಾಧನೆಗಳಿಂದ, ಕಿಂ = ಆಗಬೇಕಾದುದ್ದೇನು? ಇತ್ಯಾದಿಭಿಃ = ಇವೇ ಮೊದಲಾದ ಪ್ರಮಾಣವಚನಗಳಿಂದ ಶ್ರೀಹರಿಯು ಸ್ವತಂತ್ರನೆಂದು ಸಿದ್ಧವಾಗುತ್ತದೆ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

ಜಗತ್ತನ್ನು ಸೃಷ್ಟಿ ಮಾಡಲು ವಿಷ್ಣುವಿಗೆ ಮತ್ತೊಂದರ ಅಪೇಕ್ಷೆ ಇಲ್ಲ

**सत्तर्कदीपावळिः** – साधननिरपेक्षमेव जगज्जन्मादिकर्तृत्वम् अभिप्रेतं यद्विष्णोः तद्युक्तिविरुद्धम् इत्याक्षिप्य समर्थयति – तदनन्यत्वमित्यादिना ।।

**यदुक्तं कुलालादेः साधनसापेक्षं कर्तृत्वम् असमर्थत्वाद् विष्णुस्तु अचिन्त्यशक्तित्वात् साधननिरपेक्षोऽपि विश्वं सृजति इत्यत्र श्रुतिमुदाहरति – किं स्विदिति ।।**

ಮಹಾವಿಷ್ಣುವು ಯಾವುದೇ ಸಾಧನೆಗಳನ್ನು ಅಪೇಕ್ಷೆ ಪಡದೇ ಸಮಸ್ತ ಜಗತ್ತನ್ನು ಸೃಷ್ಟಿ ಮಾಡುತ್ತಾನೆಂಬುದು ಸಿದ್ಧಾಂತಿಗಳಿಗೆ ಅಭಿಪ್ರೇತವಾದ ಪ್ರಮೇಯವಾಗಿದೆ. ಈ ವಿಷಯದಲ್ಲಿ ಯಾವ ಯುಕ್ತಿವಿರೋಧವು ಬರುತ್ತದೋ, ಅದನ್ನು ಆಕ್ಷೇಪ ಮಾಡಿ, ಉತ್ತರಿಸಲು ಈ ಅಧಿಕರಣವು ಹೊರಟಿದೆ. ಅದನ್ನೇ 'ತದನನ್ಯತ್ವಮ್' ಇತ್ಯಾದಿ ಭಾಷ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

ಕುಲಾಲಾದಿಗಳು ದಂಡ, ಚಕ್ರ, ಮಣ್ಣು ಮೊದಲಾದ ಸಾಧನೆಗಳನ್ನು ಅಪೇಕ್ಷಿಸಿಯೇ ಘಟಪಟಾದಿಗಳನ್ನು ಸೃಷ್ಟಿ ಮಾಡುತ್ತಾರೆ. ಏಕೆಂದರೆ ಇವುಗಳ ಅಪೇಕ್ಷೆಯಿಲ್ಲದೇ ಘಟಪಟಾದಿಗಳನ್ನು ಸೃಷ್ಟಿ ಮಾಡುವ ಸಾಮರ್ಥ್ಯ ಕುಲಾಲಾದಿಗಳಿಗೆ ಇರುವುದಿಲ್ಲ. ಆದರೆ ಮಹಾವಿಷ್ಣುವಿಗೆ ಹೀಗಲ್ಲ. ಅಚಿಂತ್ಯಾದ್ಭುತಶಕ್ತಿಯುಳ್ಳವನಾಗಿರುವುದರಿಂದ ಯಾವುದೇ ಸಾಧನೆಗಳನ್ನು ಅಪೇಕ್ಷೆ ಪಡದಿದ್ದರೂ ಕೂಡ ಸಮಸ್ತ ವಿಶ್ವವನ್ನು ಸೃಷ್ಟಿ ಮಾಡುತ್ತಾನೆ. ಈ ವಿಷಯವನ್ನು 'ಕಿಂಸ್ವಿತ್' ಇತ್ಯಾದಿ ಶ್ರುತಿಯು ಉಪಪಾದನೆ ಮಾಡುತ್ತಿದೆ. ಈ ಶ್ರುತಿಯನ್ನು ಭಾಷ್ಯದಲ್ಲಿ 'ಕಿಂಸ್ವಿತ್' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ.

'ಕಿಂಸ್ವಿದಾಸೀತ್' ಎಂಬ ಶ್ರುತಿಗೆ ವ್ಯಾಖ್ಯಾನ

**सत्तर्कदीपावलिः – आरभ्यते येन तदारम्भणम् यतो येन कारणादिना भूमिं जनयन् विश्वकर्मा विश्वद्रष्टा यां च निर्मितवान् महिना माहात्म्येन तदधिष्ठानमारम्भणं च किमासीत् । पार्थिवात्यतैजसावयवि अवयवानां प्रलयात् किमासीत् कतमदासीत् कथमासीत् न किमपि न कतमदपि न कथमप्यासीत् इत्याक्षेपार्थः किं शब्दोऽत्र, न तु प्रश्नार्थः ।**

ಶ್ರುತಿಯಲ್ಲಿರುವ ಅಧಿಷ್ಠಾನ ಶಬ್ದಕ್ಕೆ 'ಆರಭ್ಯತೇ ಯೇನ ತತ್ ಆರಂಭಣಂ' ಎಂಬ ನಿಷ್ಪತ್ತಿಯಿಂದ ಸೃಷ್ಟಿಸಾಧನ ಎಂದರ್ಥ. ಯಾವ ಕಾರಣದಿಂದ ಭೂಮಿಂ = ಭೂಲೋಕವನ್ನು,

ಜನಯನ್ = ಸೃಷ್ಟಿಸುವನೋ, ವಿಶ್ವಕರ್ಮ = ಆ ಜಗತ್ಕರ್ತೃವಾದ ಶ್ರೀಹರಿಯು ಸಮಸ್ತ ಜಗತ್ತಿನ ಜ್ಞಾನವುಳ್ಳವನಾಗಿದ್ದಾನೆ. ದ್ಯಾಂ ಚ = ಭೂಮಿಯನ್ನು, ಮಹಿನಾ = ತನ್ನ ಮಹಿಮೆಯಿಂದ ಸೃಷ್ಟಿ ಮಾಡಿದನು. ತದಧಿಷ್ಠಾನಂ = ಅಂಥ ಶ್ರೀಹರಿಗೆ ಪ್ರಳಯಕಾಲದಲ್ಲಿ ಯಾವ ಆಶ್ರಯವಿತ್ತು ? ಆರಂಭಣಂ ಚ ಕಿಮಾಸೀತ್ = ಸೃಷ್ಟಿ ಸಾಧನವಾದರೂ ಯಾವುದಿತ್ತು? ಎಂಬುದು ಶ್ರುತ್ಯರ್ಥ. ಪಾರ್ಥಿವ, ಆಪ್, ತೈಜಸ ಇವುಗಳ ಅವಯವ ಅವಯವಿಗಳು ಪ್ರಳಯಕಾಲದಲ್ಲಿ ಯಾವುದಿತ್ತು ? ಯಾವುದೂ ಇರಲಿಲ್ಲ. ಹೇಗೂ ಇರಲಿಲ್ಲ ಎಂಬುದು 'ಕಿಂ' ಶಬ್ದದ ಅಭಿಪ್ರಾಯವಾಗಿದೆ. ಶ್ರುತಿಯಲ್ಲಿರುವ 'ಕಿಂ' ಶಬ್ದವು ಆಕ್ಷೇಪಾರ್ಥಕವಾಗಿದೆ ಹೊರತು ಪ್ರಶ್ನಾರ್ಥಕವಲ್ಲ.

ಆದಿಶಬ್ದದಿಂದ ಮೂರು ಯುಕ್ತಿಗಳು ವಿವಕ್ಷಿತ

**सत्तर्कदीपावळिः – वाक्यशेषे अधिष्ठानादेरुत्तरत्वेनाश्रवणात् । 'द्यावाभूमी जनयन् देव एकः' इति श्रवणाद् विश्वकर्ता विष्णुरेक एव आसीदित्यर्थः । सूत्रगतादिशब्दोपात्तास्तिस्रो युक्तीर्दर्शयति – परतन्त्र इति ।।**

ಈ ಶ್ರುತಿಯ ವಾಕ್ಯಶೇಷದಲ್ಲಿ ಅಧಿಷ್ಠಾನಾದಿಗಳಿದ್ದವು ಎಂಬುದಾಗಿ ಉತ್ತರವನ್ನು ಹೇಳುತ್ತಿರುವುದು ಕೇಳಿಸುತ್ತಿಲ್ಲ. ಮತ್ತೇನೆಂದರೆ ಪೃಥಿವೀ, ಅಂತರಿಕ್ಷ ಇವುಗಳನ್ನು ಸೃಷ್ಟಿ ಮಾಡುವ ವಿಷ್ಣುವೊಬ್ಬನೇ ಇದ್ದನೆಂದು ಕೇಳಿಸುತ್ತಿದೆ. ವಿಶ್ವಕರ್ತೃವಾದ ವಿಷ್ಣುವೊಬ್ಬನೇ ಪ್ರಳಯಕಾಲದಲ್ಲಿ ಇದ್ದನು. ಸೂತ್ರದಲ್ಲಿರುವ ಆದಿಶಬ್ದದಿಂದ ಸ್ವೀಕರಿಸಲ್ಪಡಬೇಕಾದ ಮೂರು ಯುಕ್ತಿಗಳನ್ನು 'ಪರತಂತ್ರಃ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

## ಕುವಿಂದನಂತೆ ಈಶ್ವರನಲ್ಲ

**तत्वप्रदीपः – तदनन्यत्वमारम्भणशब्दादिभ्यः । स्वतन्त्राणि बहूनि च साधनानि पटादिसृष्टौ दृष्टानि । नहि तुरीतन्तुवेमादेः प्रातिस्विककार्यशक्तिः कुविन्दाद्यधीना । अतोऽन्यसामर्थ्यसहकृतः पटादिनिर्माता । ब्रह्मणस्त्वन्यसामर्थ्यादेव जगत्सृष्टिः । तदनन्यत्वं स्वतन्त्रकारणस्य ब्रह्मणोऽन्यत्वेनाभावः । कुतः? 'किं स्विदासीत्' इत्यारम्भणशब्दादिभ्यः । आक्षेपस्वरूपो ह्ययं व्यपदेशः, न प्रश्नस्वरूपः । उत्तरत्राधिष्ठानारम्भणाद्यनुक्तेः ।**

'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬ ಸೂತ್ರದಿಂದ ಆರಂಭಣಾಧಿಕರಣವು ಪ್ರಾರಂಭವಾಗುತ್ತಿದೆ. ಪಟಾದಿಗಳನ್ನು ಸೃಷ್ಟಿ ಮಾಡುವಾಗ ಕುವಿಂದನು ಸ್ವತಂತ್ರವಾದ ಬಹುಸಾಧನೆಗಳನ್ನು ಅಪೇಕ್ಷೆ ಪಡುತ್ತಾನೆ. ಯಾವ ಸಾಧನೆಗಳನ್ನು ಕುವಿಂದನು ಅಪೇಕ್ಷೆ ಪಡುತ್ತಾನೋ, ಅಂಥ ತುರೀತಂತುವೇಮಾದಿಗಳು ಸ್ವಾಭಾವಿಕವಾದ ಸ್ವತಂತ್ರವಾದ ಕಾರ್ಯಶಕ್ತಿವುಳ್ಳವುಗಳಾಗಿವೆ. ಆದ್ದರಿಂದ ಕುವಿಂದನ ಅಧೀನವಲ್ಲ. ಹೀಗೆ ಕುವಿಂದನು ಸ್ವತಂತ್ರವಾದ ತುರೀತಂತುವೇಮಾದಿಗಳ ಸಹಕಾರದಿಂದ ಪಟಾದಿಗಳನ್ನು ನಿರ್ಮಾಣ ಮಾಡುತ್ತಾನೆ. ಆದರೆ ಬ್ರಹ್ಮನು ಜಗತ್ತನ್ನು ಸೃಷ್ಟಿ ಮಾಡುವಾಗ ಸ್ವತಂತ್ರವಾದ ಮತ್ತೊಂದು ಕಾರಣವನ್ನು ಅಪೇಕ್ಷೆ ಪಡುವುದಿಲ್ಲ. ತನ್ನ ಸಾಮರ್ಥ್ಯದಿಂದಲೇ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಏಕೆಂದರೆ ಪ್ರಳಯಕಾಲದಲ್ಲಿ ಬ್ರಹ್ಮನಿಗಿಂತ ಅತಿರಿಕ್ತವಾದ ಬೇರೆ ಯಾವುದೇ ಸಾಧನೆಗಳು ಸ್ವತಂತ್ರವಾಗಿ ಇರುವುದಿಲ್ಲ. ಈ ವಿಷಯವನ್ನು ಹೇಗೆ ಹೇಳುತ್ತೀರಿ ? ಎಂದು ಪ್ರಶ್ನಿಸಿದರೆ 'ಕಿಂ ಸ್ವಿದಾಸೀತ್' ಎಂಬ ಶ್ರುತಿಯಲ್ಲಿ ಆರಂಭಣ ಮೊದಲಾದ ಶಬ್ದಗಳು ಇರುವುದರಿಂದ. ಇಲ್ಲಿರುವ 'ಕಿಂ' ಶಬ್ದವು ಆಕ್ಷೇಪಾರ್ಥಕವಾಗಿದೆ, ಪ್ರಶ್ನಾರ್ಥಕವಲ್ಲ. ಹೀಗೆ ಆಕ್ಷೇಪವನ್ನು ಮಾಡಿದ ಶ್ರುತಿಯು ಮುಂದೆ ಅಧಿಷ್ಠಾನ ಆರಂಭಣ ಮೊದಲಾದವುಗಳು ಯಾವುದೂ ಕೂಡ ಇರಲಿಲ್ಲವೆಂದು ಹೇಳುತ್ತಿದೆ. ಆದ್ದರಿಂದ ಈಶ್ವರನು ಸ್ವತಂತ್ರವಾಗಿಯೇ ಜಗತ್ತನ್ನು ಸೃಷ್ಟಿ ಮಾಡುತ್ತಾನೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

### ಆರಂಭಣಾಧಿಕರಣಕ್ಕೆ ಸಂಗತಿ

**तत्वप्रकाशिका – अत्र हरेः स्वातन्त्र्येण जगत्कारणत्वे युक्तिविरोधपरिहारादस्ति शास्त्रादिसङ्गतिः ।**

ಶ್ರೀಹರಿಯು ಜಗತ್ತಿಗೆ ಸ್ವತಂತ್ರಕಾರಣನಾಗಿದ್ದಾನೆ. ಈ ವಿಷಯದಲ್ಲಿ ಪ್ರಾಪ್ತವಾಗುವ ಯುಕ್ತಿ ವಿರೋಧವನ್ನು ಪರಿಹಾರ ಮಾಡಲು ಆರಂಭಣಾಧಿಕರಣವು ಹೊರಡುತ್ತಿದೆ. ಆದ್ದರಿಂದ ಈ ಅಧಿಕರಣಕ್ಕೆ ಶಾಸ್ತ್ರಸಂಗತಿ ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳು ಇರುತ್ತವೆ.

### ಸೃಷ್ಟಿಕಾರಣತ್ವ ವಿಷಯದಲ್ಲಿ ಯುಕ್ತಿವಿರೋಧ ಪರಿಹಾರ

**तत्वप्रकाशिका – विष्णुर्जगत्सृष्ट्यादिकर्तेति उक्तम् । तस्य च स्वतन्त्रसाधनानपेक्षत्वे युक्तिविरोधप्राप्तौ न सर्वगुणत्वं तेन सिध्यतीत्यसौ निराकर्तव्य एव ।**

ಮಹಾವಿಷ್ಣುವು ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣನಾಗಿದ್ದಾನೆಂದು ಈ ಹಿಂದೆ ಪ್ರತಿಪಾದನೆ ಮಾಡಲಾಗಿದೆ. ಅಂಥ ಮಹಾವಿಷ್ಣು ಸ್ವತಂತ್ರವಾದ ಸಾಧನವನ್ನು ಅಪೇಕ್ಷೆಪಡದೆ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ ಎಂದು ಹೇಳುವುದಾದರೆ ಯುಕ್ತಿವಿರೋಧವು ಪ್ರಾಪ್ತವಾಗುತ್ತದೆ. ಆದ್ದರಿಂದ ಬ್ರಹ್ಮನು ಸ್ವತಂತ್ರ ಕಾರಣನಲ್ಲವೆಂದು ಹೇಳಬೇಕು. ಆವಾಗ ಸರ್ವಗುಣತ್ವವು ಅವನಲ್ಲಿ ಸಿದ್ಧವಾಗುವುದಿಲ್ಲ. ಅದಕ್ಕಾಗಿ ಯುಕ್ತಿವಿರೋಧವನ್ನು ಪರಿಹಾರ ಮಾಡುವುದು ಅತ್ಯಂತ ಅನಿವಾರ್ಯ.

ಅಧಿಕರಣದ ಪೂರ್ವಪಕ್ಷ

**तत्वप्रकाशिका – तज्जगत्सृष्ट्यादिकं विषयः । किं स्वतन्त्रसाधनसापेक्षं न वेति संशयः । लोकदृष्टिरलौकिकत्वं च सन्देहबीजम् । स्वतन्त्रसाधनसापेक्षमिति पूर्वः पक्षः ।**

ಈ ಅಧಿಕರಣದಲ್ಲಿ ಜಗತ್‌ಸೃಷ್ಟ್ಯಾದಿಗಳು ವಿಷಯ. ಜಗತ್‌ಸೃಷ್ಟ್ಯಾದಿಗಳಿಗೆ ಸ್ವತಂತ್ರಸಾಧನದ ಅಪೇಕ್ಷೆ ಇದೆಯೋ ಅಥವಾ ಇಲ್ಲವೋ ? ಎಂಬುದೇ ಸಂದೇಹ. ಲೋಕದಲ್ಲಿ ಘಟ ಮೊದಲಾದ ಪದಾರ್ಥಗಳು ಉತ್ಪತ್ತಿಯಾಗಬೇಕಾದರೆ ಕರ್ತೃವಿಗಿಂತ ಅತಿರಿಕ್ತವಾದ ಮಣ್ಣು ಮೊದಲಾದವುಗಳನ್ನು ಅಪೇಕ್ಷೆ ಪಡುವುದು ಕಂಡಿದೆ. ಆದರೆ ಅಲೌಕಿಕವಾದ ಜಗತ್ತಿನ ಸೃಷ್ಟಿವಿಷಯದಲ್ಲಿ ಮಣ್ಣು ಮೊದಲಾದವುಗಳಂತೆ ಮತ್ತೊಂದು ಸಾಧನೆಗಳು ಬೇಕಾಗಿರುವುದಿಲ್ಲ. ಇದು ಸಂದೇಹಬೀಜ ಸ್ವತಂತ್ರವಾದ ಸಾಧನೆಯನ್ನು ಅಪೇಕ್ಷಿಸುತ್ತಾನೆ ಎಂಬುದು ಈ ಅಧಿಕರಣದ ಪೂರ್ವಪಕ್ಷ.

ಸ್ವತಂತ್ರಸಾಧನಾಂತರಗಳನ್ನು ಅಪೇಕ್ಷಿಸುವನು

**तत्वप्रकाशिका – विप्रतिपन्ना सृष्टिः कर्तृव्यतिरिक्तस्वतन्त्रसाधनसापेक्षा सृष्टित्वात् घटादिसृष्टिवदिति युक्तिसिद्धत्वात् । अन्यथा तद्विरोधात् ।**

'ವಿಪ್ರತಿಪನ್ನಾ ಸೃಷ್ಟಿಃ ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್ ಘಟಾದಿಸೃಷ್ಟಿವತ್' ಘಟ ಸೃಷ್ಟಿಯು ಸೃಷ್ಟಿಯಾದ್ದರಿಂದ ಕರ್ತೃವ್ಯತಿರಿಕ್ತವಾದ ಸ್ವತಂತ್ರಸಾಧನೆಯನ್ನು ಅಪೇಕ್ಷೆಪಡುತ್ತದೆ. ಅದೇ ರೀತಿಯಾಗಿ ವಿಪ್ರತಿಪನ್ನವಾದ ಸೃಷ್ಟಿಯೂ ಕೂಡ ಸೃಷ್ಟಿಯಾಗಿರುವುದರಿಂದ ಕರ್ತೃವ್ಯತಿರಿಕ್ತವಾಗಿರುವುದರಿಂದ ಸ್ವತಂತ್ರಸಾಧನವನ್ನು ಅಪೇಕ್ಷೆಪಡುತ್ತದೆಂಬುದು ಯುಕ್ತಿಯಿಂದ ಸಿದ್ಧವಾಗುತ್ತದೆ. ಹೀಗೆ ಒಪ್ಪದಿದ್ದರೆ ಯುಕ್ತಿಯ ವಿರೋಧವು ಜಗತ್‌ಸೃಷ್ಟ್ಯಾದಿಗಳಿಗೆ ತಪ್ಪಿದ್ದಲ್ಲ.

ಲೌಕಿಕ ದೃಷ್ಟಾಂತ

**तत्वप्रकाशिका – घटसृष्टौ मृदादीनि खलु स्वतन्त्रसाधनानि । तानि विना सृष्ट्यनुपपत्तेः ।**

ಘಟದ ಉತ್ಪತ್ತಿಯಾಗಬೇಕಾದರೆ ಮಣ್ಣು ಮೊದಲಾದವುಗಳು ಸ್ವತಂತ್ರಸಾಧನೆಯಾಗಿವೆ. ಮಣ್ಣು ಮೊದಲಾದವುಗಳು ಇಲ್ಲದೆ ಘಟದ ಉತ್ಪತ್ತಿನಡೆಯಲು ಸಾಧ್ಯವೇ ಇಲ್ಲ.

### ಪೂರ್ವಪಕ್ಷದ ಉಪಸಂಹಾರ

**तत्वप्रकाशिका – अतो ब्रह्म स्वतन्त्रसाधनसापेक्षमेव सृष्ट्यादिकर्त्रिति न तस्य जगज्जन्मादिकारणत्वेन सर्वगुणपूर्णत्वसिद्धिरिति प्राप्ते सिद्धान्तयत्सूत्रमुपन्यस्य व्याचष्टे ।। तदनन्यत्वमिति ।।**

ಅದರಂತೆ ಬ್ರಹ್ಮನೂ ಕೂಡ ಜಗತ್ತನ್ನು ಸೃಷ್ಟಿಮಾಡಬೇಕಾದರೆ ಸ್ವತಂತ್ರವಾದ ಸಾಧನೆಯನ್ನು ಅಪೇಕ್ಷಿಪಟ್ಟು ಸೃಷ್ಟಿಯನ್ನು ಮಾಡಬೇಕು. ಆದ್ದರಿಂದ ಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವೇನ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಪೂರ್ವಪಕ್ಷ.

ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಉಪನ್ಯಾಸ ಮಾಡಿ 'ತದನನ್ಯತ್ವಮ್' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಸ್ವತಂತ್ರಸಾಧನಾಂತರದ ಅಪೇಕ್ಷೆ ಇಲ್ಲ

**तत्वप्रकाशिका – यद्यपि घटादिसृष्टिः स्वतन्त्रबहुसाधनसापेक्षा दृष्टा तथाऽपि नैतद्दृष्टान्ते न ब्रह्मणो जगत्सृष्टिस्तया कल्प्या । किन्तु स्वतन्त्रसाधनस्य तदनन्यत्वं । किमुक्तं भवति - स्वरूपसामर्थ्यादेव तस्य सृष्टिः । कुतः ? यतः किंस्विदिति श्रुतावधिकष्ठानादिसाधनाद्याक्षेपः क्रियते । आक्षेपस्य विपर्यये पर्यवसानात् । अनुमानं तु श्रुतिविरोधादप्रमाणमेवेति भावः ।**

ವಾಸ್ತವಿಕವಾಗಿ ಘಟ ಮೊದಲಾದವುಗಳ ಉತ್ಪತ್ತಿಯು ಸ್ವತಂತ್ರವಾದ ಅನೇಕ ಸಾಧನೆಯನ್ನು ಅಪೇಕ್ಷೆ ಪಟ್ಟಿರುವುದು ಲೋಕದಲ್ಲಿ ಕಂಡಿದೆ. ಆದರೂ ಕೂಡ ಈ ದೃಷ್ಟಾಂತದಿಂದ ಬ್ರಹ್ಮನ ಜಗತ್‌ಸೃಷ್ಟಿಯಲ್ಲಿ ಸ್ವತಂತ್ರವಾದ ಸಾಧನೆಯನ್ನು ಕಲ್ಪಿಸುವುದು ತಪ್ಪು.

ಇದರಿಂದ ಏನು ಹೇಳಿದಂತಾಯಿತು ? ಎಂದರೆ ಸ್ವರೂಪಸಾಮರ್ಥ್ಯದಿಂದಲೇ ಬ್ರಹ್ಮನು ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ. ಏಕೆಂದರೆ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿ ಅಧಿಷ್ಠಾನ ಮುಂತಾದ ಸಾಧನೆಗಳು ಬ್ರಹ್ಮನ ಸೃಷ್ಟಿಗೆ ಏಕೆ ಬೇಕು ? ಎಂದು ಆಕ್ಷೇಪ ಮಾಡಲಾಗಿದೆ. ಈ ಆಕ್ಷೇಪವನ್ನು ವಿಪರ್ಯಪರ್ಯವಸಾನ ಮಾಡಬೇಕು. ಮತ್ತು ಬ್ರಹ್ಮನ ಸೃಷ್ಟಿಗೆ ಸಾಧನೆಗಳನ್ನು ಶ್ರುತಿಯಲ್ಲಿ ಹೇಳಿಯೇ ಇಲ್ಲ. ಆದ್ದರಿಂದ ಅಂಥ ಸ್ವತಂತ್ರಸಾಧನೆಗಳು ಯಾವುದೂ ಕೂಡ ಇಲ್ಲವೆಂದೇ ಸ್ಪಷ್ಟವಾಗಿ ತಿಳಿಯುತ್ತದೆ. ಅನುಮಾನವು ಶ್ರುತಿವಿರುದ್ಧವಾದ್ದರಿಂದ ಅಪ್ರಮಾಣವೆಂದು ತಿಳಿಯಬೇಕು.

ಅನುಮಾನದಲ್ಲಿ 'ಬಹು' ಎಂಬುದರ ಸಾರ್ಥಕ್ಯ ಚಿಂತನೆ

**तत्वप्रकाशिका – ईश्वरसृष्टेः स्वतन्त्रसाधनसापेक्षत्वमात्रसाधने सिद्धसाधनता स्यादिति बह्वित्युक्तम् ।**

ಈಶ್ವರಸೃಷ್ಟಿಗೆ ಸ್ವತಂತ್ರವಾದ ಸಾಧನೆಯ ಅಪೇಕ್ಷೆಯಿದೆ ಎಂದು ಅನುಮಾನದಿಂದ ಸಾಧಿಸುವುದಾದರೆ ಸಿದ್ಧಸಾಧನತಾದೋಷ ಬರುತ್ತದೆ. ಏಕೆಂದರೆ ಸ್ವತಂತ್ರವಾದ ತನ್ನ ಜ್ಞಾನ ಇಚ್ಛಾದಿಗಳನ್ನು ಈಶ್ವರನು ಅಪೇಕ್ಷೆ ಪಡುತ್ತಾನೆಂದು ನಾವೂ ಕೂಡ ಒಪ್ಪಿದ್ದೇವೆ. ಈ ಸಿದ್ಧಸಾಧನ ದೋಷವನ್ನು ಪರಿಹಾರ ಮಾಡಿಕೊಳ್ಳಲು ಈಶ್ವರನಿಗಿಂತ ಬೇರೆಯಾದ ಅನೇಕ ಸಾಧನೆಗಳ ಅಪೇಕ್ಷೆಯು ಬರಬೇಕಾದೀತೆಂದು ಸಾಧಿಸಬೇಕು. ಈಶ್ವರಸೃಷ್ಟಿಗೆ ಬಹುಸಾಧನಸಾಪೇಕ್ಷತ್ವವನ್ನು ಒಪ್ಪಿಲ್ಲವೆಂದು ಸಿದ್ಧಸಾಧನತಾದೋಷಕ್ಕೆ ಅವಕಾಶವಿಲ್ಲ.

ಸೃಷ್ಟಿಯ ಆದಿಯಲ್ಲಿ ಯಾವ ಸ್ವತಂತ್ರಸಾಧನವಿತ್ತು ?

**तत्वप्रकाशिका – विश्वकर्मा हरिः यतो येनाधिष्ठानादिना भूमिं द्यां च जनयन् जनयिता विशेषेण बभूव । येन च महिम्ना विश्वतश्चक्षुरावृणोत् तदधिष्ठानं किमासीत् ।**

ಸಮಗ್ರ ಜಗತ್ತನ್ನು ಸೃಷ್ಟಿ ಮಾಡುವ ಶ್ರೀಹರಿಯು ಯಾವ ಅಧಿಷ್ಠಾನಾದಿಗಳಿಂದ ಭೂಮಿಯನ್ನು ಹಾಗೂ ಅಂತರಿಕ್ಷವನ್ನು ಸೃಷ್ಟಿ ಮಾಡಿ ವಿಶೇಷನಾಗಿ ಇದ್ದನೋ ಯಾವ

ಮಹಿಮೆಯಿಂದ ವಿಶ್ವತಶ್ಚಕ್ಷುವಾಗಿ ಎಲ್ಲಾ ಅಧಿಷ್ಠಾನವನ್ನು ಆವರಿಸಿರುವನೋ ಅಂಥ ಅಧಿಷ್ಠಾನವಾದರೂ ಸೃಷ್ಟಿಯ ಆದಿಯಲ್ಲಿ ಯಾವುದಿತ್ತು ?

### ಆರಂಭಣಶಬ್ದದ ನಿಷ್ಪತ್ತಿ

**तत्वप्रकाशिका – आरभ्यतेऽनेनेत्यारम्भणं साधनं वा कतमदासीत् । कथंरूपं चाऽसीत् । न किञ्चित्कथमपीत्यर्थः । किंशब्दस्य प्रश्नाक्षेपयोः समत्वात्प्रश्नोऽयं किं न स्यादित्यत आह – अधिष्ठानादिति ।।**

'ಆರಭ್ಯತೇ ಅನೇನೇತಿ ಆರಂಭಣಮ್' ಎಂಬ ವ್ಯುತ್ಪತ್ತಿಯಿಂದ ಸೃಷ್ಟಿಯ ಪ್ರಾರಂಭದಲ್ಲಿ ಯಾವ ಸಾಧನವಿತ್ತು ಮತ್ತು ಅದು ಯಾವ ರೂಪದಿಂದ ಇತ್ತು ? ಮತ್ತು ಹೇಗಿತ್ತು ? ಯಾವುದೂ ಇರಲಿಲ್ಲ ಹೇಗೂ ಇರಲಿಲ್ಲ ಎಂಬುದು ಈ ಶ್ರುತಿಯು ಅಭಿಪ್ರಾಯ.

'ಕಿಂ' ಶಬ್ದಕ್ಕೆ ಆಕ್ಷೇಪವೆಂದಷ್ಟೆ ಅರ್ಥವಲ್ಲ. ಪ್ರಶ್ನೆ ಎಂಬರ್ಥವೂ ಇರುತ್ತದೆ. ಆದ್ದರಿಂದ ಪ್ರಶ್ನಾರ್ಥದಲ್ಲಿ 'ಕಿಂ' ಶಬ್ದವನ್ನೇಕೆ ಇಲ್ಲಿ ಹೇಳಬಾರದು ? ಎಂಬ ಪ್ರಶ್ನೆಗೆ ಉತ್ತರಿಸಲು 'ಅಧಿಷ್ಠಾನಾನುಕ್ತೇಃ ಎಂಬ ಭಾಷ್ಯದ ಮಾತು ಹೊರಟಿದೆ.

### 'ಕಿಂ' ಶಬ್ದವು ಆಕ್ಷೇಪಾರ್ಥಕ

**तत्वप्रकाशिका – प्रश्नश्चेत्परिहारो वक्तव्यः । किंस्विद्धिमस्य भेषजमित्यादिवत् । अत्र परिहारायाधिष्ठानाद्यनुक्तेर्नायं प्रश्नः किं त्वाक्षेप एवेति भावः । युक्तिविरुद्धं चानुमानमिति भावेनाऽह – आदीति ।। अत्रापरतन्त्रत्वात्स्वतन्त्रत्वात्साधनसत्ताप्रदत्वादिति व्यतिरेकिहेतुत्रयं सूचितं भवति ।। १९ ।।**

ಒಂದುವೇಳೆ ಕಿಂಶಬ್ದವು ಪ್ರಶ್ನಾರ್ಥದಲ್ಲಿ ಇದ್ದಿದ್ದರೆ ಉತ್ತರವನ್ನು ನೀಡುವ ವಾಕ್ಯವಿರಬೇಕಿತ್ತು. ಉದಾ - 'ಕಿಂಸ್ವಿದ್ಧಿಮಸ್ಯ ಭೇಷಜಮ್' ಛಳಿಗೆ ಯಾವುದು ಔಷಧಿಯೆಂದು ತೈತ್ತಿರೀಯೋಪನಿಷತ್ತಿನಲ್ಲಿ ಪ್ರಶ್ನಿಸಿದಾಗ ಅಗ್ನಿಯು ಔಷಧಿಯೆಂದು ಉತ್ತರಿಸಲಾಗಿದೆ. ಆದೇ

ಇದರಿಂದ ಏನು ಹೇಳಿದಂತಾಯಿತು ? ಎಂದರೆ ಸ್ವರೂಪಸಾಮರ್ಥ್ಯದಿಂದಲೇ ಬ್ರಹ್ಮನು ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ. ಏಕೆಂದರೆ 'ಕಿಂಸ್ವಿದಾಸೀತ್' ಎಂಬ ಶ್ರುತಿಯಲ್ಲಿ ಅಧಿಷ್ಠಾನ ಮುಂತಾದ ಸಾಧನೆಗಳು ಬ್ರಹ್ಮನ ಸೃಷ್ಟಿಗೆ ಏಕೆ ಬೇಕು ? ಎಂದು ಆಕ್ಷೇಪ ಮಾಡಲಾಗಿದೆ. ಈ ಆಕ್ಷೇಪವನ್ನು ವಿಪರ್ಯಪರ್ಯವಸಾನ ಮಾಡಬೇಕು. ಮತ್ತು ಬ್ರಹ್ಮನ ಸೃಷ್ಟಿಗೆ ಸಾಧನೆಗಳನ್ನು ಶ್ರುತಿಯಲ್ಲಿ ಹೇಳಿಯೇ ಇಲ್ಲ. ಆದ್ದರಿಂದ ಅಂಥ ಸ್ವತಂತ್ರಸಾಧನೆಗಳು ಯಾವುದೂ ಕೂಡ ಇಲ್ಲವೆಂದೇ ಸ್ಪಷ್ಟವಾಗಿ ತಿಳಿಯುತ್ತದೆ. ಅನುಮಾನವು ಶ್ರುತಿವಿರುದ್ಧವಾದ್ದರಿಂದ ಅಪ್ರಮಾಣವೆಂದು ತಿಳಿಯಬೇಕು.

ಅನುಮಾನದಲ್ಲಿ 'ಬಹು' ಎಂಬುದರ ಸಾರ್ಥಕ್ಯ ಚಿಂತನೆ

**तत्वप्रकाशिका – ईश्वरसृष्टेः स्वतन्त्रसाधनसापेक्षत्वमात्रसाधने सिद्धसाधनता स्यादिति बह्वित्युक्तम् ।**

ಈಶ್ವರಸೃಷ್ಟಿಗೆ ಸ್ವತಂತ್ರವಾದ ಸಾಧನೆಯ ಅಪೇಕ್ಷೆಯಿದೆ ಎಂದು ಅನುಮಾನದಿಂದ ಸಾಧಿಸುವುದಾದರೆ ಸಿದ್ಧಸಾಧನತಾದೋಷ ಬರುತ್ತದೆ. ಏಕೆಂದರೆ ಸ್ವತಂತ್ರವಾದ ತನ್ನ ಜ್ಞಾನ ಇಚ್ಛಾದಿಗಳನ್ನು ಈಶ್ವರನು ಅಪೇಕ್ಷೆ ಪಡುತ್ತಾನೆಂದು ನಾವೂ ಕೂಡ ಒಪ್ಪಿದ್ದೇವೆ. ಈ ಸಿದ್ಧಸಾಧನ ದೋಷವನ್ನು ಪರಿಹಾರ ಮಾಡಿಕೊಳ್ಳಲು ಈಶ್ವರನಿಗಿಂತ ಬೇರೆಯಾದ ಅನೇಕ ಸಾಧನೆಗಳ ಅಪೇಕ್ಷೆಯು ಬರಬೇಕಾದೀತೆಂದು ಸಾಧಿಸಬೇಕು. ಈಶ್ವರಸೃಷ್ಟಿಗೆ ಬಹುಸಾಧನಸಾಪೇಕ್ಷತ್ವವನ್ನು ಒಪ್ಪಿಲ್ಲವೆಂದು ಸಿದ್ಧಸಾಧನತಾದೋಷಕ್ಕೆ ಅವಕಾಶವಿಲ್ಲ.

ಸೃಷ್ಟಿಯ ಆದಿಯಲ್ಲಿ ಯಾವ ಸ್ವತಂತ್ರಸಾಧನವಿತ್ತು ?

**तत्वप्रकाशिका – विश्वकर्मा हरिः यतो येनाधिष्ठानादिना भूमिं द्यां च जनयन् जनयिता विशेषेण बभूव । येन च महिम्ना विश्वतश्चक्षुरावृणोत् तदधिष्ठानं किमासीत् ।**

ಸಮಗ್ರ ಜಗತ್ತನ್ನು ಸೃಷ್ಟಿ ಮಾಡುವ ಶ್ರೀಹರಿಯು ಯಾವ ಅಧಿಷ್ಠಾನಾದಿಗಳಿಂದ ಭೂಮಿಯನ್ನು ಹಾಗೂ ಅಂತರಿಕ್ಷವನ್ನು ಸೃಷ್ಟಿ ಮಾಡಿ ವಿಶೇಷನಾಗಿ ಇದ್ದನೋ ಯಾವ

ಮಹಿಮೆಯಿಂದ ವಿಶ್ವತಶ್ಚಕ್ಷುವಾಗಿ ಎಲ್ಲಾ ಅಧಿಷ್ಠಾನವನ್ನು ಆವರಿಸಿರುವನೋ ಅಂಥ ಅಧಿಷ್ಠಾನವಾದರೂ ಸೃಷ್ಟಿಯ ಆದಿಯಲ್ಲಿ ಯಾವುದಿತ್ತು ?

### ಆರಂಭಣಶಬ್ದದ ನಿಷ್ಪತ್ತಿ

**तत्वप्रकाशिका – आरभ्यतेऽनेनेत्यारम्भणं साधनं वा कतमदासीत् । कथंरूपं चाऽसीत् । न किञ्चित्कथमपीत्यर्थः । किंशब्दस्य प्रश्नाक्षेपयोः समत्वात्प्रश्नोऽयं किं न स्यादित्यत आह – अधिष्ठानादिति ।।**

'ಆರಭ್ಯತೇ ಅನೇನೇತಿ ಆರಂಭಣಮ್' ಎಂಬ ವ್ಯುತ್ಪತ್ತಿಯಿಂದ ಸೃಷ್ಟಿಯ ಪ್ರಾರಂಭದಲ್ಲಿ ಯಾವ ಸಾಧನವಿತ್ತು ಮತ್ತು ಅದು ಯಾವ ರೂಪದಿಂದ ಇತ್ತು ? ಮತ್ತು ಹೇಗಿತ್ತು ? ಯಾವುದೂ ಇರಲಿಲ್ಲ ಹೇಗೂ ಇರಲಿಲ್ಲ ಎಂಬುದು ಈ ಶ್ರುತಿಯು ಅಭಿಪ್ರಾಯ.

'ಕಿಂ' ಶಬ್ದಕ್ಕೆ ಆಕ್ಷೇಪವೆಂದಷ್ಟೆ ಅರ್ಥವಲ್ಲ. ಪ್ರಶ್ನೆ ಎಂಬರ್ಥವೂ ಇರುತ್ತದೆ. ಆದ್ದರಿಂದ ಪ್ರಶ್ನಾರ್ಥದಲ್ಲಿ 'ಕಿಂ' ಶಬ್ದವನ್ನೇಕೆ ಇಲ್ಲಿ ಹೇಳಬಾರದು ? ಎಂಬ ಪ್ರಶ್ನೆಗೆ ಉತ್ತರಿಸಲು 'ಅಧಿಷ್ಠಾನಾನುಕ್ತೇಃ ಎಂಬ ಭಾಷ್ಯದ ಮಾತು ಹೊರಟಿದೆ.

### 'ಕಿಂ' ಶಬ್ದವು ಆಕ್ಷೇಪಾರ್ಥಕ

**तत्वप्रकाशिका – प्रश्नश्चेत्परिहारो वक्तव्यः । किंस्विद्धिमस्य भेषजमित्यादिवत् । अत्र परिहारायाधिष्ठानाद्यनुक्तेर्नायं प्रश्नः किं त्वाक्षेप एवेति भावः । युक्तिविरुद्धं चानुमानमिति भावेनाऽह – आदीति ।। अत्रापरतन्त्रत्वात्स्वतन्त्रत्वात्साधनसत्ताप्रदत्वादिति व्यतिरेकिहेतुत्रयं सूचितं भवति ।। १९ ।।**

ಒಂದುವೇಳೆ ಕಿಂಶಬ್ದವು ಪ್ರಶ್ನಾರ್ಥದಲ್ಲಿ ಇದ್ದಿದ್ದರೆ ಉತ್ತರವನ್ನು ನೀಡುವ ವಾಕ್ಯವಿರಬೇಕಿತ್ತು. ಉದಾ - 'ಕಿಂಸ್ವಿದ್ಧಿಮಸ್ಯ ಭೇಷಜಮ್' ಛಳಿಗೆ ಯಾವುದು ಔಷಧಿಯೆಂದು ತೈತ್ತಿರೀಯೋಪನಿಷತ್ತಿನಲ್ಲಿ ಪ್ರಶ್ನಿಸಿದಾಗ ಅಗ್ನಿಯು ಔಷಧಿಯೆಂದು ಉತ್ತರಿಸಲಾಗಿದೆ. ಅದೇ

ರೀತಿಯಾಗಿ ಇಲ್ಲಿಯೂ ಕೂಡ ಅಧಿಷ್ಠಾನಾದಿಗಳನ್ನು ಹೇಳಬೇಕಾಗಿತ್ತು. ಹೇಳಿಲ್ಲವಾದ್ದರಿಂದ 'ಕಿಂ' ಶಬ್ದವು ಪ್ರಶ್ನಾರ್ಥದಲ್ಲಿ ಇಲ್ಲವೆಂದು ಸ್ಪಷ್ಟವಾಗುತ್ತದೆ. ಆಕ್ಷೇಪಾರ್ಥದಲ್ಲೇ 'ಕಿಂ' ಶಬ್ದವನ್ನು ವಿವಕ್ಷಿಸಬೇಕು. ಅನುಮಾನವು ಯುಕ್ತಿವಿರುದ್ಧವಾಗಿದೆ ಎಂಬುದಾಗಿ 'ಆದಿ' ಇತ್ಯಾದಿ ಭಾಷ್ಯದ ಮಾತಿನಿಂದ ಸಮರ್ಥಿಸುತ್ತಿದ್ದಾರೆ.

'ಅಪರತಂತ್ರತ್ವಾತ್, ಸ್ವತಂತ್ರತ್ವಾತ್, ಸಾಧನಸತ್ತಾಪ್ರದತ್ವಾತ್' ಎಂಬ ಮೂರು ವ್ಯತಿರೇಕ ಹೇತುಗಳನ್ನು ಭಾಷ್ಯದಲ್ಲಿ ಸೂಚಿಸಿದ್ದಾರೆ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

ಈ ಅಧಿಕರಣದಲ್ಲಿ ಮಾಡುತ್ತಿರುವ ಯುಕ್ತಿವಿರೋಧಪರಿಹಾರ.

**ಭಾವದೀಪः** – ॥ तदनन्यत्वमारंभणशब्दादिभ्यः ॥ १५ ॥ युक्तीति ॥ साधनान्तराणां सत्ताशक्त्यादेः स्वातन्त्र्यसाधकबहुयुक्तिविरोधपरिहारादित्यर्थः। तेन जगत्सृष्ट्यादि कर्तृत्वेनेत्यर्थः। तादृशसाधनसापेक्षकर्तरि ब्रह्मादौ सर्वगुणत्वादृष्टेरिति भावः।

ಟೀಕೆಯಲ್ಲಿ 'ಯುಕ್ತಿವಿರೋಧಪರಿಹಾರಾತ್' ಎಂದು ಹೇಳಿದ್ದಾರೆ. ಪರಮಾತ್ಮನು ಜಗತ್ತನ್ನು ಸೃಷ್ಟಿಮಾಡಲು ಯಾವ ಸಾಧನಗಳನ್ನು ಅಪೇಕ್ಷಿಸುತ್ತಾನೋ ಅವುಗಳ ಸತ್ತಾ ಹಾಗೂ ಶಕ್ತಿ ಮೊದಲಾದವುಗಳು ಸ್ವತಂತ್ರವಾಗಿವೆ. ಹೀಗೆ ಬೇರೆ ಸಾಧನೆಗಳ ಸತ್ತಾದಿಗಳಲ್ಲಿ ಸ್ವಾತಂತ್ರ್ಯಸಾಧಕವಾದ ಬಹುಬಗೆಯ ಯುಕ್ತಿಗಳ ವಿರೋಧವನ್ನು ಈ ಅಧಿಕರಣವು ಪರಿಹರಿಸುತ್ತಿದೆ. ಆದ್ದರಿಂದ ಈ ಅಧಿಕರಣಕ್ಕೆ ಈ ಪಾದದಲ್ಲಿ ಸಂಗತಿಯು ಯುಕ್ತವಾಗುತ್ತದೆ. 'ತೇನ' ಎಂಬ ಪದಕ್ಕೆ 'ಜಗತ್ಸೃಷ್ಟ್ಯಾದಿಕರ್ತೃತ್ವದಿಂದ' ಎಂದರ್ಥ. ಜಗತ್ಸೃಷ್ಟ್ಯಾದಿಕರ್ತೃತ್ವದಿಂದ ಸರ್ವಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲವೆಂದು ಇದರ ಅಭಿಪ್ರಾಯ. ಏಕೆಂದರೆ ಯಾವ ಚತುರ್ಮುಖ ಬ್ರಹ್ಮಾದಿಗಳು ಸ್ವತಂತ್ರಸಾಧನೆಯನ್ನು ಅಪೇಕ್ಷೆ ಪಡುತ್ತಾರೋ ಆದ್ದರಿಂದಲೇ ಅವರು ಸರ್ವಗುಣಪರಿಪೂರ್ಣರಾಗಿರುವುದಿಲ್ಲ. ವಿಷ್ಣುವು ಕೂಡ ಸ್ವತಂತ್ರಸಾಧನೆಯನ್ನು ಅಪೇಕ್ಷೆ ಪಡುವುದರಿಂದ ಸರ್ವಗುಣಪರಿಪೂರ್ಣನಾಗುವುದಿಲ್ಲ ಎಂಬುದು ಇದರ ಅಭಿಪ್ರಾಯ.

ಪ್ರಥಮಸೂತ್ರದ ಜೊತೆ ಅಧಿಕರಣದ ಸಂಗತಿ.

**भावदीपः** – अत्र जन्मादिसूत्रे विवक्षितं स्वतन्त्रसाधनान्तरानपेक्षकर्तृत्वं न सिद्ध्यतीत्येवोक्त्वा जन्मादिसूत्रेणास्य सङ्गतत्वे वाच्ये तेन सर्वगुणत्वं न सिध्यतीति जिज्ञासासूत्रस्थब्रह्मपदोक्तगुणपूर्त्यसिद्ध्युक्तिस्तु जन्मादिसूत्रे तादृशकर्तृत्वविवक्षाभावे गुणपूर्त्यसिद्ध्या जिज्ञासाया एवासिद्धिरिति बाधकोपदर्शनमुखेन तत्सूत्रेण तादृशकर्तृत्वस्य विवक्षितत्वं दर्शयितुम्– **स्वतन्त्रेति** ।। कर्त्रन्येति योज्यम्। स्वातन्त्र्यं च कर्त्रनधीनसत्तादिमत्त्वम् ।।

ಈ ಅಧಿಕರಣಕ್ಕೆ ಜನ್ಮಾದಿಸೂತ್ರದಿಂದ ಸಂಗತಿ ತೋರಿಸಿದರೆ ಸಾಕು, ಜನ್ಮಾದಿಸೂತ್ರದಲ್ಲಿ ಪರಮಾತ್ಮನು ಸ್ವತಂತ್ರವಾದ ಯಾವುದೇ ಸಾಧನೆಗಳನ್ನು ಅಪೇಕ್ಷೆ ಪಡುವುದಿಲ್ಲ. ಹಾಗೆಯೇ ಜಗತ್ತನ್ನು ಸೃಷ್ಟಿಮಾಡುತ್ತಾನೆ ಎಂದು ಪ್ರತಿಪಾದನೆ ಮಾಡಲಾಗಿದೆ. ಈ ಪ್ರಮೇಯವು ಯುಕ್ತವಾಗುವುದಿಲ್ಲ ಏಕೆಂದರೆ ಯುಕ್ತಿವಿರೋಧವು ಬರುತ್ತದೆ. ಹೀಗೆ ನೇರವಾಗಿ ಜನ್ಮಾದಿಸೂತ್ರದಿಂದಲೇ ಸಂಗತಿಯನ್ನು ಹೇಳಬಹುದು. ಗುಣಪರಿಪೂರ್ಣತ್ವವನ್ನು ಹೇಳುವ ಪ್ರಥಮಸೂತ್ರದಿಂದ ಸಂಗತಿಯನ್ನು ಏಕೆ ಹೇಳಿದ್ದಾರೆ?

ಹೌದು, ಆದರೆ ಜನ್ಮಾದಿಸೂತ್ರದಲ್ಲಿ ಹೇಳಲ್ಪಟ್ಟ ಜಗತ್ಕರ್ತೃತ್ವವು ಬ್ರಹ್ಮನಲ್ಲಿ ಕೂಡದಿದ್ದರೆ ಗುಣಪರಿಪೂರ್ಣತ್ವವು ಕೂಡ ಸಿದ್ಧವಾಗುವುದಿಲ್ಲ. ಆಗ ಪರಮಾತ್ಮನ ಬಗ್ಗೆ ಜಿಜ್ಞಾಸೆಯೇ ಅಸಿದ್ಧವಾಗುತ್ತದೆ. ಹೀಗೆ ಬಾಧಕವನ್ನು ತೋರಿಸುವ ಮೂಲಕ ಪ್ರಥಮಸೂತ್ರದ ಜೊತೆ ಸಂಗತಿಯನ್ನು ಹೇಳಿದ್ದಾರೆ. ಆದಕ್ಕೆ ಪೂರಕವಾಗಿ ಜನ್ಮಾದಿಸೂತ್ರದಲ್ಲಿ ಹೇಳಿರುವ ಜಗತ್ಕರ್ತೃತ್ವವನ್ನು ವಿವಕ್ಷಿಸಿದ್ದಾರೆ. 'ಸ್ವತಂತ್ರಸಾಧನಸಾಪೇಕ್ಷಂ' ಎಂಬಲ್ಲಿ 'ಕರ್ತನ್ಯಸ್ವತಂತ್ರಸಾಧನಸಾಪೇಕ್ಷಂ' ಎಂದು ಯೋಜನೆ ಮಾಡಿಕೊಳ್ಳಬೇಕು. ಕರ್ತೃವಿಗಿಂತ ಭಿನ್ನವಾದ ಸ್ವತಂತ್ರಸಾಧನವನ್ನು ಅಪೇಕ್ಷೆ ಪಡುವಿಕೆಯು ಇದರ ಅರ್ಥ. 'ಸ್ವಾತಂತ್ರ್ಯ'ಪದಕ್ಕೆ ಕರ್ತ್ರಧೀನವಾದ ಸತ್ತಾ, ಶಕ್ತಿ ಮೊದಲಾದವುಗಳ ಇರುವಿಕೆ ಎಂದರ್ಥ.

ಅಲೌಕಿಕತ್ವಂ ಎಂಬ ಸಂದೇಹ ಕೋಟಿಯ ವಿವರಣೆ

**भावदीपः** – **अलौकिकत्वमिति** ।। अन्यभावव्यावृत्तेश्चेत्यत्रोक्तदिशा स्रष्टुरीशस्यालौकिकत्वाद्वा परमतस्सेतून्मानसम्बंधभेदव्यपदेशेभ्य इत्यत्र वक्ष्यमाणदिशा

सृष्ट्यादीशगुणजातस्यालौकिकत्वाद्वा उत्ताना वै देवगवा वहन्तीत्यादेरलौकिकानां देवगवानां उत्तानानामेव वहनमिव स्वतन्त्रसाधनानपेक्षमपि सृष्ट्यादिकं संभाव्यत इति भावः।

ಟೀಕೆಯಲ್ಲಿ 'ಅಲೌಕಿಕತ್ವಮ್' ಎಂದು ಹೇಳಿದ್ದಾರೆ. ಲೋಕದಲ್ಲಿ ಯಾವ ಸೃಷ್ಟಿ ಇದೆಯೋ ಅದು ಸ್ವತಂತ್ರವಾದ ಸಾಧನೆಯನ್ನು ಅಪೇಕ್ಷೆ ಪಡುತ್ತದೆ. ಏಕೆಂದರೆ ಇದು ಲೌಕಿಕವಾಗಿದೆ. ಆದರೆ ಜಗತ್ತಿನ ಸೃಷ್ಟಿಯು ಅಲೌಕಿಕವಾದ್ದರಿಂದ ಸ್ವತಂತ್ರವಾದ ಸಾಧನವನ್ನು ಅಪೇಕ್ಷೆ ಪಡದಿರಬಹುದು ಎಂಬುದಾಗಿ ಟೀಕೆಯ ವಾಕ್ಯಕ್ಕೆ ಅಭಿಪ್ರಾಯ. ಜಗತ್ತಿನ ಸೃಷ್ಟಿಯು ಏಕೆ ಅಲೌಕಿಕ ಎಂಬುದನ್ನು 'ಅನ್ಯಭಾವವ್ಯಾವೃತ್ತೇಶ್ಚ' (೧-೩-೧೨) ಎಂಬ ಸೂತ್ರದಲ್ಲಿ ಬೇರೆ ವಸ್ತುಗಳಲ್ಲಿರುವ ಧರ್ಮವು ಬ್ರಹ್ಮನಲ್ಲಿ ಇರುವುದಿಲ್ಲ ಲೋಕವಿರುದ್ಧವಾದ ಧರ್ಮವೇ ಬ್ರಹ್ಮನಲ್ಲಿದೆ ಎಂಬುದಾಗಿ ಹಿಂದೆ ಹೇಳಲಾಗಿದೆ. ಮತ್ತು. 'ಪರಮತಃ ಸೇತೂನ್ಮಾನಸಂಬಂಧವ್ಯಪದೇಶೇಭ್ಯಃ' (೩-೨-೩೨) ಎಂಬ ಸೂತ್ರದಲ್ಲಿ ಬ್ರಹ್ಮನಲ್ಲಿರುವ ಗುಣಗಳು ಲೋಕವಿಲಕ್ಷಣವಾಗಿವೆ ಎಂಬುದಾಗಿ ಮುಂದೆ ಸಮರ್ಥನೆ ಮಾಡುವವರಿದ್ದಾರೆ. ಆದ್ದರಿಂದ ಪರಮಾತ್ಮನಲ್ಲಿರುವ ಸೃಷ್ಟ್ಯಾದಿ ಗುಣಗಳ ಸಮೂಹವು ಅಲೌಕಿಕವಾಗಿದೆ. ಆದ್ದರಿಂದ ಸ್ವತಂತ್ರಸಾಧನವನ್ನು ಅಪೇಕ್ಷೆ ಪಡುವುದಿಲ್ಲ ಎಂಬುದು ಸಂದೇಹದ ಎರಡನೇ ಕೋಟಿಯ ಅಭಿಪ್ರಾಯವಾಗಿದೆ. 'ಉತ್ತಾನಾ ವೈ ದೇವಗವಾ ವಹಂತಿ' ಎಂಬುದಾಗಿ ವೇದಮಂತ್ರಗಳು ಹೇಳುವಂತೆ ಅಲೌಕಿಕವಾದ ದೇವಲೋಕದ ಹಸುಗಳು ಹೇಗೆ ಕೆಳಮುಖವಾಗಿ ಸಂಚಾರ ಮಾಡುತ್ತವೆಂದು ಹೇಳಲಾಗಿದೆ. ಅದರಂತೆ ಲೋಕದಲ್ಲಿ ಪ್ರತಿಯೊಬ್ಬರು ಕೂಡ ಸ್ವತಂತ್ರಸಾಧನವನ್ನು ಅಪೇಕ್ಷೆ ಪಟ್ಟು ಸೃಷ್ಟಿಮಾಡಬಹುದು. ಆದರೆ ಪರಮಾತ್ಮನು ಹಾಗೆ ಮಾಡಬೇಕಾಗಿಲ್ಲ ಏಕೆಂದರೆ ಲೋಕವಿಲಕ್ಷಣನಾಗಿದ್ದಾನೆ ಎಂದು ಕೂಡ ತಿಳಿಯಬೇಕು.

ಅಕರ್ತೃತಂತ್ರತ್ವಂ ಎಂಬ ನ್ಯಾಯವಿವರಣದ ವಿವರಣೆ.

**भावदीपः** – लौकिककार्याणामनुसारेणाकर्तृतन्त्रत्वमिति न्यायविवरणेऽकर्तृतन्त्रत्वमित्यस्य कर्तृव्यतिरिक्तस्वतन्त्रसाधनाधीनत्वमित्यर्थमुपेत्य दृष्टान्तोक्तिपरस्वतन्त्रेत्यादिभाष्यसूचितां युक्तिमाह – **विप्रतिपन्नेति।।**

ಟೀಕೆಯಲ್ಲಿ 'ವಿಪ್ರತಿಪನ್ನಾ, ಸೃಷ್ಟಿಃ, ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ, ಸೃಷ್ಟಿತ್ವಾತ್ ಘಟಾದಿಸೃಷ್ಟಿವತ್' ಎಂಬುದಾಗಿ ಅನುಮಾನವನ್ನು ಪ್ರಯೋಗ ಮಾಡಿದ್ದಾರೆ. ನ್ಯಾಯವಿವರಣದಲ್ಲಿರುವ

'ಅಕರ್ತೃತಂತ್ರತ್ವಂ' ಎಂಬುದನ್ನೇ ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ ಎಂಬುದಾಗಿ ವಿವರಣೆ ಮಾಡುವ ಮೂಲಕ ಸಾಧ್ಯನಿರ್ದೇಶವನ್ನು ಮಾಡಿದ್ದಾರೆ. ಭಾಷ್ಯದಲ್ಲಿ ಲೋಕದೃಷ್ಟಾಂತವನ್ನು ಹೇಳಲು ಹೊರಟಿರುವ 'ಸ್ವತಂತ್ರ ಬಹುಸಾಧನ' ಇತ್ಯಾದಿಯಾದ ಮಾತಿನಿಂದ ಸೂಚಿತವಾದ ಯುಕ್ತಿಯನ್ನು ಇದೇ ಅನುಮಾನಪ್ರಯೋಗದ ಮೂಲಕ ತಿಳಿಸಿದ್ದಾರೆ.

### ಭಾಷ್ಯಕ್ಕೆ ಅನುಗುಣವಾದ ಸಾಧ್ಯನಿರ್ದೇಶ ಏಕಿಲ್ಲ?

**भावदीपः** – सिद्धसाधनतानिरासाय साध्यविशेषणम्। अत्र भाष्यदिशा स्वतन्त्रबहुसाधनसापेक्षेति साध्ये निर्देष्टव्ये न्यायविवरणरीत्या साध्यनिर्देशस्तु ज्ञानेच्छादिकमादाय सिद्धसाधनताव्युदासाय।

ಭಾಷ್ಯದ ಪ್ರಕಾರ ಈ ಅನುಮಾನದಲ್ಲಿ 'ಸ್ವತಂತ್ರಬಹುಸಾಧನಸಾಪೇಕ್ಷಾ' ಎಂಬ ಸಾಧ್ಯನಿರ್ದೇಶವನ್ನು ಮಾಡಬೇಕಿತ್ತು. ಆದರೆ ನ್ಯಾಯವಿವರಣಕ್ಕೆ ಅನುಗುಣವಾಗಿ 'ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ' ಎಂಬುದಾಗಿ ಸಾಧ್ಯನಿರ್ದೇಶವನ್ನು ಮಾಡಿದ್ದಾರೆ. ಹೀಗೆ ನ್ಯಾಯವಿವರಣವನ್ನು ಅನುಸರಿಸಿದ್ದರಿಂದ ಸಿದ್ಧಸಾಧನತಾ ದೋಷವನ್ನು ಪರಿಹರಿಸಿದ್ದಾರೆ. ಆದ್ದರಿಂದ ಭಾಷ್ಯಕ್ಕೆ ಅನುಗುಣವಾಗಿ ಏಕೆ ಸಾಧ್ಯನಿರ್ದೇಶ ಮಾಡಿಲ್ಲ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಒಂದು ವೇಳೆ ಸ್ವತಂತ್ರವಾದ ಬಹುಸಾಧನೆಯನ್ನು ಅಪೇಕ್ಷೆ ಪಡುತ್ತದೆ ಎಂದಷ್ಟೇ ಸಾಧ್ಯನಿರ್ದೇಶವನ್ನು ಮಾಡಿದ್ದಲ್ಲಿ ಜ್ಞಾನ ಹಾಗೂ ಇಚ್ಛೆಗಳನ್ನು ವಿವಕ್ಷಿಸಿ ಸಿದ್ಧಸಾಧನತಾದೋಷವು ಪ್ರಾಪ್ತವಾಗುತ್ತಿತ್ತು. ಏಕೆಂದರೆ ಯಾವುದೇ ಸೃಷ್ಟಿಗೆ ಜ್ಞಾನ ಹಾಗೂ ಇಚ್ಛೆಗಳ ಅಪೇಕ್ಷೆ ಇದ್ದೇ ಇರುತ್ತದೆ. ಅವು ಸ್ವತಂತ್ರವೂ ಆಗಿರುವುದರಿಂದ ಪ್ರತಿವಾದಿಗೆ ಅದು ಸಿದ್ಧವೇ ಆಗುತ್ತಿತ್ತು. ಆದ್ದರಿಂದ 'ಕರ್ತೃವ್ಯತಿರಿಕ್ತ' ಎಂಬ ವಿಶೇಷಣವನ್ನು ನ್ಯಾಯವಿವರಣಕ್ಕೆ ಅನುಗುಣವಾಗಿ ಹೇಳಿದ್ದಾರೆ. ಇದರಿಂದ ಜ್ಞಾನೇಚ್ಛೆಗಳನ್ನು ವಿವಕ್ಷಿಸಿ ಸಿದ್ಧಸಾಧನತಾದೋಷವನ್ನು ಹೇಳಲು ಬರುವುದಿಲ್ಲ.

### ಕರ್ತೃತ್ವದ ಪರಿಷ್ಕಾರ

**भावदीपः** – कर्मनिर्णयटीकायां कर्तृत्वं च कार्यकारणक्रियाफलाभिज्ञानतदिच्छा प्रयत्नपूर्वकः स्पन्द इत्युक्तेः कर्तृव्यतिरिक्तेत्युक्त्यैव ज्ञानेच्छाद्यन्यस्वतन्त्रसाधनसापेक्षेत्यर्थलाभ इति भावः।

ಕರ್ಮನಿರ್ಣಯಟೀಕೆಯಲ್ಲಿ 'ಕರ್ತೃತ್ವ' ಎಂದರೆ ಕಾರ್ಯಕಾರಣಕ್ರಿಯಾಫಲಾಭಿಜ್ಞಾನತದಿಚ್ಛಾ-ಪ್ರಯತ್ನ ಪೂರ್ವಕವಾದ ಸ್ಪಂದ ಎಂಬರ್ಥವನ್ನು ಹೇಳಿದ್ದಾರೆ. ಹೀಗೆ ಕರ್ತೃವ್ಯತಿರಿಕ್ತ ಎಂಬುದರಿಂದಲೇ ಜ್ಞಾನೇಚ್ಛಾಗಳಿಗಿಂತ ಅನ್ಯವಾದ ಸ್ವತಂತ್ರಸಾಧನೆಯನ್ನು ಅಪೇಕ್ಷೆ ಪಡಬೇಕು ಎಂಬರ್ಥವು ತಿಳಿಯುತ್ತದೆ.

ವಿವರಣೆ – ಅನುಮಾನದಲ್ಲಿ 'ಸ್ವತಂತ್ರಸಾಧನಸಾಪೇಕ್ಷಾ' ಎಂದಷ್ಟೇ ಹೇಳಿದರೆ ಜ್ಞಾನೇಚ್ಛೆಗಳ ಅಪೇಕ್ಷೆ ಇರುವಿಕೆಯು ಪ್ರತಿವಾದಿಗೆ ಸಿದ್ಧವಾದ್ದರಿಂದ ಸಿದ್ಧಸಾಧನತಾದೋಷವು ಬರುತ್ತಿತ್ತು. ಇದರ ಪರಿಹಾರಕ್ಕಾಗಿ 'ಕರ್ತೃವ್ಯತಿರಿಕ್ತ' ಎಂಬ ವಿಶೇಷಣವನ್ನು ನೀಡಿದ್ದಾರೆ. ಇದರಿಂದ ಸಿದ್ಧಸಾಧನತಾ ಹೇಗೆ ಪರಿಹಾರವಾಯಿತು? ಎಂಬ ಪ್ರಶ್ನೆಗೆ ಪ್ರಕೃತ 'ಕರ್ಮನಿರ್ಣಯಟೀಕಾಯಾಂ' ಇತ್ಯಾದಿ ವಾಕ್ಯದಿಂದ ಉತ್ತರವನ್ನು ನೀಡುತ್ತಿದ್ದಾರೆ. ಕರ್ತೃತ್ವಶಬ್ದಕ್ಕೆ ಕಾರ್ಯ, ಕಾರಣ, ಕ್ರಿಯೆ ಹಾಗೂ ಫಲ ಇವುಗಳ ಪರಿಪೂರ್ಣಜ್ಞಾನವು ಇರಬೇಕು. ಹಾಗೂ ಯಾವ ವಸ್ತುವನ್ನು ಸೃಷ್ಟಿಮಾಡುವನೋ ಅದರಲ್ಲಿ ಇಚ್ಛೆ ಇರಬೇಕು. ಅನಂತರ ಪ್ರಯತ್ನದಲ್ಲಿ ತೊಡಗಬೇಕು. ಹೀಗೆ ಅಭಿಜ್ಞಾನ, ಇಚ್ಛಾ, ಪ್ರಯತ್ನಪೂರ್ವಕವಾದ ಯಾವ ಕ್ರಿಯೆ ಇರುತ್ತದೋ ಅವನನ್ನೇ 'ಕರ್ತೃ' ಎಂದು ಕರೆಯುತ್ತಾರೆ. ಹೀಗೆ ಕರ್ಮನಿರ್ಣಯಟೀಕೆಯಲ್ಲಿ ಹೇಳಿದ್ದಾರೆ. ಪ್ರಕೃತ ಕರ್ತೃವ್ಯತಿರಿಕ್ತ ಎಂದು ಹೇಳಿದ್ದರಿಂದ ಕರ್ತೃವನ್ನು ನಿಷೇಧಮಾಡುವ ಮೂಲಕವೇ ಜ್ಞಾನ ಹಾಗೂ ಇಚ್ಛೆಗಳನ್ನು ಕೂಡ ನಿಷೇಧ ಮಾಡಿದಂತಾಯಿತು. ಪ್ರತಿವಾದಿಗೆ ಇಂತಹ ಜ್ಞಾನೇಚ್ಛಾದಿಗಳಿಗಿಂತ ಅತಿರಿಕ್ತವಾದ ಸ್ವತಂತ್ರಸಾಧನದ ಅಪೇಕ್ಷೆಯ ಇರುವಿಕೆಯು ಅಸಿದ್ಧವಾಗಿರುವುದರಿಂದ ಸಿದ್ಧಸಾಧನತಾ-ದೋಷಕ್ಕೆ ಅವಕಾಶವಿಲ್ಲ. ಹೀಗೆ ಕರ್ತೃಪದದಲ್ಲಿ ಜ್ಞಾನ ಹಾಗೂ ಇಚ್ಛೆಗಳು ಘಟಿತವಾಗಿವೆ ಎಂಬುದನ್ನು ಗಮನಿಸಬೇಕು.

### ಬಹುಯುಕ್ತಿವಿರೋಧಪರಿಹಾರದ ಸಮರ್ಥನೆ

**भावदीपः** – अत्र साध्ये स्वतन्त्रेत्यनन्तरं सत्ताकेतिप्रवृत्तिकेत्यादिपदप्रक्षेपेण तथा पक्षे सृष्टिपदस्थाने स्थितिसंहत्यादिपदप्रक्षेपेण च युक्तेर्बाहुल्यं बोध्यम्। वियत्पादे तु श्रुतिप्राप्तं साधनान्तरसत्तादेः स्वातन्त्र्यं निरसिष्यते। अत्र तु युक्तिप्राप्तमिति भावेनोक्तम्– **युक्तिसिद्धत्वादिति ।।**

ಪ್ರಕೃತ ಸಾಧ್ಯದಲ್ಲಿ 'ಸ್ವತಂತ್ರ' ಎಂಬ ಪದದ ನಂತರ 'ಸತ್ತಾಕ' ಎಂಬ ಪದವನ್ನು ಮತ್ತೊಮ್ಮೆ 'ಪ್ರವೃತ್ತಿಕ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ಅದರಂತೆ ಪಕ್ಷದಲ್ಲಿ 'ಸೃಷ್ಟಿ' ಎಂಬ ಪದದ ಬದಲು

'ಸ್ಥಿತಿ' ಅಥವಾ 'ಸಂಹೃತಿ' ಎಂಬ ಪದವನ್ನು ಇಟ್ಟುಕೊಳ್ಳಬೇಕು. ಆಗ ಅನೇಕ ಯುಕ್ತಿಗಳನ್ನು ಹೇಳಿದಂತಾಗುತ್ತದೆ.

ವಿಯದಧಿಕರಣದಲ್ಲಿ ಶ್ರುತಿಪ್ರಾಪ್ತವಾದ ಇತರ ಸಾಧನಗಳ ಸತ್ತಾದಿಗಳಿಗೆ ಸ್ವಾತಂತ್ರ್ಯವನ್ನು ನಿರಾಕರಣೆ ಮಾಡಿದ್ದಾರೆ. ಈ ಅಧಿಕರಣದಲ್ಲಿ ಯುಕ್ತಿಪ್ರಾಪ್ತವಾದ ಇತರ ಸಾಧನಗಳ ಸ್ವಾತಂತ್ರ್ಯವನ್ನು ನಿರಾಕರಣೆ ಮಾಡಿದ್ದಾರೆ. ಈ ಅಭಿಪ್ರಾಯದಿಂದ 'ಯುಕ್ತಿಸಿದ್ಧತ್ವಾತ್' ಎಂಬ ಪದಪ್ರಯೋಗವನ್ನು ಟೀಕೆಯಲ್ಲಿ ಮಾಡಿರುತ್ತಾರೆ.

ವಿವರಣೆ – 'ವಿಪ್ರತಿಪನ್ನಾ ಸೃಷ್ಟಿಃ ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್ ಘಟಾದಿ ಸೃಷ್ಟಿವತ್' ಎಂಬ ಒಂದೇ ಯುಕ್ತಿಯನ್ನು ಟೀಕೆಯಲ್ಲಿ ಹೇಳಿದ್ದಾರೆ. ಹೀಗಿರುವಾಗ ಪ್ರಾರಂಭದಲ್ಲಿ ಹೇಳಿದಂತೆ ಪೂರ್ವಪಕ್ಷಕ್ಕೆ ಬಹುಯುಕ್ತಿಗಳನ್ನು ಹೇಗೆ ಹೇಳಿದಂತಾಗುತ್ತದೆ?

ಹೌದು. ಆದರೆ ಟೀಕೆಯಲ್ಲಿ ಹೇಳಿದ ಈ ಯುಕ್ತಿಯು ಉಪಲಕ್ಷಣವಾಗಿದೆ. ಇದರಂತೆ ಅನೇಕಯುಕ್ತಿಗಳನ್ನು ತಿಳಿದುಕೊಳ್ಳಬೇಕು. ಅದು ಹೀಗೆ – ಸಾಧ್ಯದಲ್ಲಿ 'ಕರ್ತೃವ್ಯತಿರಿಕ್ತ-ಸ್ವತಂತ್ರಸಾಧನಸಾಪೇಕ್ಷಾ' ಎಂಬುದರ ಬದಲು 'ಸ್ವತಂತ್ರಸತ್ತಾಕಸಾಪೇಕ್ಷಾ' ಎಂದು ವಿವಕ್ಷಿಸಬೇಕು. ಅದರಂತೆ 'ಸ್ವತಂತ್ರಪ್ರವೃತ್ತಿಕಸಾಪೇಕ್ಷಾ' ಎಂದು ವಿವಕ್ಷಿಸಬೇಕು. ಈಗ ಅನೇಕ ಅನುಮಾನಗಳನ್ನು ಹೇಳಿದಂತಾಯಿತು. ಇಷ್ಟೇ ಅಲ್ಲದೆ 'ಸೃಷ್ಟಿಃ' ಎಂಬ ಪಕ್ಷವನ್ನು ತಿಳಿಯುವ ಬದಲು 'ಸ್ಥಿತಿಃ' ಎಂಬ ಪಕ್ಷವನ್ನು, ಅಥವಾ 'ಸಂಹೃತಿಃ' ಎಂಬ ಪಕ್ಷವನ್ನು ವಿವಕ್ಷಿಸಬೇಕು. ಆಗಲೂ ಕೂಡ ಅನೇಕ ಯುಕ್ತಿಗಳನ್ನು ವಿವಕ್ಷಿಸಿದಂತಾಗುತ್ತದೆ. ಅನುಮಾನಗಳ ಸ್ವರೂಪ ಹೀಗಿದೆ – ವಿಪ್ರತಿಪನ್ನಾ ಸ್ಥಿತಿಃ ಕರ್ತೃವ್ಯತಿರಿಕ್ತ ಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್ । (೨) ವಿಪ್ರತಿಪನ್ನಾ ಸೃಷ್ಟಿಃ ಕರ್ತೃವ್ಯತಿರಿಕ್ತಸ್ವತಂತ್ರಸತ್ತಾಕಸಾಪೇಕ್ಷಾ ಸೃಷ್ಟಿತ್ವಾತ್ (೩) ವಿಪ್ರತಿಪನ್ನಾ ಸ್ಥಿತಿಃ ಕರ್ತೃವ್ಯತಿರಿಕ್ತಸ್ವತಂತ್ರಪ್ರವೃತ್ತಿಕಸಾಪೇಕ್ಷಾ ಸೃಷ್ಟಿತ್ವಾತ್. ಇದರಂತೆ ಸೃಷ್ಟಿ ಹಾಗೂ ಸಂಹೃತಿಗಳನ್ನು ಪಕ್ಷವನ್ನಾಗಿ ಮಾಡಿದಾಗಲೂ ಮೂರುಬಗೆಯ ಅನುಮಾನಗಳನ್ನು ತಿಳಿಯಬೇಕು.

ಈ ಅಧಿಕರಣದಲ್ಲಿ ಪರಮಾತ್ಮನು ಸೃಷ್ಟಿಯನ್ನು ಮಾಡಲು ಸ್ವತಂತ್ರವಾದ ಬೇರೆ ಸಾಧನಗಳ ಅಪೇಕ್ಷೆ ಇದೆ ಎಂಬುದನ್ನು ನಿರಾಕರಣೆ ಮಾಡುತ್ತಿದ್ದಾರೆ. ಆದರೆ ವಿಯದಧಿ-ಕರಣದಲ್ಲೂ ಇದೇ ವಿಷಯವನ್ನು ಪ್ರತಿಪಾದನೆ ಮಾಡುವುದರಿಂದ ಪುನರುಕ್ತ-ವಾಗುತ್ತದಲ್ಲವೇ?

ಈ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ವಿಯದಧಿಕರಣದಲ್ಲಿ ಶ್ರುತಿಪ್ರಾಪ್ತವಾದ ಸ್ವತಂತ್ರಸಾಧನಗಳ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಈ ಅಧಿಕರಣದಲ್ಲಿ

ಯುಕ್ತಿಪ್ರಾಪ್ತವಾದ ಸ್ವತಂತ್ರಸಾಧನಗಳ ವಿರೋಧವನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಪುನರುಕ್ತಿಯು ಬರುವುದಿಲ್ಲ.

ಸೃಷ್ಟಿ ಮಾಡಲು ಸ್ವತಂತ್ರಸಾಧನವನ್ನು ಅಪೇಕ್ಷೆ ಪಡಲೇ ಬೇಕು.

**भावदीपः** – स्वतन्त्रसाधनसापेक्षत्वस्येति योज्यम्। अन्यथा तादृक्साधनानपेक्षत्वे। भाष्योक्तं दृष्टान्तांशं व्यनक्ति – **घटेति**।। साधनतां तावद्व्यनक्ति – **तानीति**।। मृदादिसत्ताशक्त्यादेः कुलालानधीनत्वस्य स्फुटत्वात्स्वातन्त्र्यांशो नोपपादितः।। **अत इति**।। युक्तिसिद्धत्वादित्यर्थः ।।

'ಯುಕ್ತಿಸಿದ್ಧತ್ವಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದರ ನಂತರ 'ಸ್ವತಂತ್ರಸಾಧನಸಾಪೇಕ್ಷತ್ವಸ್ಯ' ಎಂಬುದನ್ನು ಯೋಜಿಸಿಕೊಳ್ಳಬೇಕು. 'ಅನ್ಯಥಾ' ಎಂಬ ಪದಕ್ಕೆ ಸ್ವತಂತ್ರಸಾಧನವನ್ನು ಅಪೇಕ್ಷೆ ಪಡದಿದ್ದರೆ ಎಂದರ್ಥ. ಭಾಷ್ಯದಲ್ಲಿ ಹೇಳಿದ ದೃಷ್ಟಾಂತಭಾಗವನ್ನು 'ಘಟಸೃಷ್ಟೌ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. 'ತಾನಿ' ಎಂಬ ವಾಕ್ಯದಿಂದ ಸಾಧನತ್ವವನ್ನು ಸ್ಪಷ್ಟಪಡಿಸಿದ್ದಾರೆ. ಮೃದಾದಿಗಳ ಸತ್ತಾ ಶಕ್ತಿ ಮೊದಲಾದವುಗಳು ಕುಲಾಲನ ಅಧೀನವಾಗಿರುವುದಿಲ್ಲ ಎಂಬುದು ಸ್ಪಷ್ಟವಾಗಿದೆ. ಆದ್ದರಿಂದಲೇ ಈ ವಿಷಯದಲ್ಲಿ ಸ್ವಾತಂತ್ರ್ಯ ಎಂಬ ಅಂಶವನ್ನು ಉಪಪಾದನೆ ಮಾಡಿರುವುದಿಲ್ಲ. 'ಅತಃ' ಎಂಬ ಪದಕ್ಕೆ 'ಯುಕ್ತಿಸಿದ್ಧವಾಗಿರುವುದರಿಂದ' ಎಂದರ್ಥ.

ವಿವರಣೆ – ಟೀಕೆಯಲ್ಲಿ 'ಯುಕ್ತಿಸಿದ್ಧತ್ವಾತ್' ಎಂದಷ್ಟೇ ಹೇಳಿದ್ದಾರೆ. ಯಾವುದು ಯುಕ್ತಿಯಿಂದ ಸಿದ್ಧವಾಗುತ್ತದೆ ಎಂಬುದು ಸ್ಪಷ್ಟವಾಗುವುದಿಲ್ಲ. ಆದ್ದರಿಂದ 'ಸ್ವತಂತ್ರಸಾಧನ-ಸಾಪೇಕ್ಷತ್ವಸ್ಯ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಆಗ ಜಗತ್ತಿನ ಸೃಷ್ಟಿಗೆ ಸ್ವತಂತ್ರವಾದ ಸಾಧನೆಗಳ ಅಪೇಕ್ಷೆಯು ಇರುತ್ತದೆ ಎಂಬುದು ಯುಕ್ತಿಯಿಂದ ಸಿದ್ಧವಾಯಿತು ಎಂಬರ್ಥವನ್ನು ಹೇಳಿದಂತಾಗುತ್ತದೆ.

ಒಂದು ವೇಳೆ ಸ್ವತಂತ್ರವಾದ ಸಾಧನಗಳನ್ನು ಅಪೇಕ್ಷೆ ಪಡದೇ ಸೃಷ್ಟಿ ಮಾಡುವುದಾದರೆ ಈ ಯುಕ್ತಿವಿರೋಧವನ್ನು ಎದುರಿಸಬೇಕಾಗುತ್ತದೆ.

ಭಾಷ್ಯದಲ್ಲಿ 'ಸ್ವತಂತ್ರಬಹುಸಾಧನಾಸೃಷ್ಟಿಃ ಲೋಕೇ ದೃಷ್ಟಾ' ಎಂದು ಹೇಳಿದ್ದಾರೆ. ಇದನ್ನೇ ಟೀಕೆಯಲ್ಲಿ 'ಘಟಸೃಷ್ಟೌ' ಎಂಬ ವಾಕ್ಯದಿಂದ ಉಪಪಾದನೆ ಮಾಡಿದ್ದಾರೆ.

ಲೋಕದಲ್ಲಿ ಕುಲಾಲಾದಿಗಳು ಘಟವನ್ನು ಸೃಷ್ಟಿ ಮಾಡುತ್ತಾರೆ. ಅದಕ್ಕಾಗಿ ಮಣ್ಣು ಮೊದಲಾದ ಪರಿಕರಗಳನ್ನು ಅಪೇಕ್ಷೆ ಪಡುತ್ತಾರೆ. ಈ ಮಣ್ಣಿನ ಇರುವಿಕೆ ಮೊದಲಾದವುಗಳಿಗೆ ಕುಲಾಲಾದಿಗಳು ನಿಯಾಮಕರಾಗಿರುವುದಿಲ್ಲ. ಹೀಗೆ ಸ್ವತಂತ್ರವಾದ ಮಣ್ಣು ಮೊದಲಾದವುಗಳನ್ನು ಅಪೇಕ್ಷೆ ಪಟ್ಟು ಘಟಾದಿಗಳನ್ನು ಸೃಷ್ಟಿಮಾಡುವುದು ಲೋಕದಲ್ಲಿ ಕಂಡಿದೆ ಎಂಬುದಾಗಿ ಭಾಷ್ಯವನ್ನು ಈಗ ವ್ಯಾಖ್ಯಾನ ಮಾಡಿದಂತಾಯಿತು. ಇಂತಹ ಮಣ್ಣು ಮೊದಲಾದ ಸ್ವತಂತ್ರವಾದ ಸಾಧನಗಳನ್ನು ಅಪೇಕ್ಷೆ ಪಡದಿದ್ದರೆ ಕುಲಾಲಾದಿಗಳಿಗೆ ಸೃಷ್ಟಿಯನ್ನು ಮಾಡಲು ಸಾಧ್ಯವೇ ಆಗುವುದಿಲ್ಲ. ಅದರಂತೆ ಪರಮಾತ್ಮನು ಜಗತ್ತನ್ನು ಸೃಷ್ಟಿ ಮಾಡಲೂ ಕೂಡ ಸ್ವತಂತ್ರವಾದ ಪರಿಕರಗಳನ್ನು ಅಪೇಕ್ಷೆ ಪಡಲೇಬೇಕು. ಇಲ್ಲದಿದ್ದರೆ ಜಗತ್ತಿನ ಸೃಷ್ಟಿಯೂ ಕೂಡ ಅಸಾಧ್ಯವಾಗುತ್ತದೆ.

ಸ್ವತಂತ್ರಸಾಧನ ಪರಮಾತ್ಮನೇ ಆಗಿದ್ದಾನೆಂದು ಸಿದ್ಧಾಂತ.

**भावदीपः** – विरोधनिरासाय भाष्यं व्याचष्टे – **यद्यपीति** ।। नैवमित्यादेरर्थो न तद्दृष्टान्तेनेत्यादि। शेषोक्त्या सूत्राक्षरार्थमाह – **स्वतन्त्रसाधनस्य तदनन्यत्वमिति** ।। भाष्यं तु पर्यवसितव्याख्यानमिति भावेनावतारयति – **किमुक्तं भवतीति** ।। न तु स्वतन्त्रमन्यदपेक्ष्येत्येवार्थः।

ಯುಕ್ತಿವಿರೋಧವನ್ನು ನಿರಾಕರಣೆ ಮಾಡಲು 'ಯದ್ಯಪಿ' ಇತ್ಯಾದಿ ಟೀಕಾವಾಕ್ಯದಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ನೈವಮ್' ಎಂಬುದರ ವ್ಯಾಖ್ಯಾನವನ್ನು 'ತದ್ ದೃಷ್ಟಾಂತೇನ' ಎಂಬುದರಿಂದ ಮಾಡಿದ್ದಾರೆ. ಶೇಷಪೂರಣ ಮಾಡಿಕೊಳ್ಳುವ ಮೂಲಕ ಸೂತ್ರಾಕ್ಷರಾರ್ಥವನ್ನು 'ಸ್ವತಂತ್ರಸಾಧನಸ್ಯ ತದನನ್ಯತ್ವಂ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯವು ಪರ್ಯವಸಿತವಾದ ಸೂತ್ರದ ವ್ಯಾಖ್ಯಾನವಾಗಿದೆ ಎಂಬ ಅಭಿಪ್ರಾಯದಿಂದ 'ಕಿಮುಕ್ತಂ ಭವತಿ' ಎಂದು ಅವತಾರಿಕೆಯನ್ನು ನೀಡಿದ್ದಾರೆ. ಸ್ವತಂತ್ರವಾದ ಮತ್ತೊಂದು ಸಾಧನವನ್ನು ಅಪೇಕ್ಷೆ ಪಡುವುದಿಲ್ಲ ಎಂದಿದರ ಅರ್ಥ.

ವಿವರಣೆ – 'ಯದ್ಯಪಿ' ಇತ್ಯಾದಿ ಟೀಕಾವಾಕ್ಯದಿಂದ ಅಧಿಕರಣದ ಸಿದ್ಧಾಂತವನ್ನು ಸಮರ್ಥನೆ ಮಾಡಲು ಹೊರಟಿದ್ದಾರೆ. 'ನೈತದ್ ದೃಷ್ಟಾಂತೇನ' ಎಂಬ ಟೀಕಾವಾಕ್ಯದಿಂದ 'ನೈವಂ ಬ್ರಹ್ಮಣಃ' ಎಂಬ ಭಾಷ್ಯದ ವಾಕ್ಯವನ್ನು ವ್ಯಾಖ್ಯಾನ ಮಾಡಿದ್ದಾರೆ. ಜಗತ್ತಿನಲ್ಲಿ ಸೃಷ್ಟಿ ಮಾಡಲು ಸ್ವತಂತ್ರಸಾಧನಗಳನ್ನು ಅಪೇಕ್ಷೆ ಪಡಲೇ ಬೇಕು. ಆದರೆ ಈ ನಿಯಮವು ಬ್ರಹ್ಮನ

ಸೃಷ್ಟಿವಿಷಯದಲ್ಲಿ ಅನ್ವಯವಾಗುವುದಿಲ್ಲ. ಆದ್ದರಿಂದ ಕುಲಾಲಾದಿಗಳ ದೃಷ್ಟಾಂತವು ಪ್ರಕೃತಕ್ಕೆ ಉಪಯೋಗವಾಗುವುದಿಲ್ಲ ಎಂಬುದು ಇದರ ಅಭಿಪ್ರಾಯ.

ಸೂತ್ರದಲ್ಲಿ 'ತದನನ್ಯತ್ವಂ' ಎಂಬುದರಿಂದ ಅಭೇದವನ್ನು ಹೇಳಬೇಕು ಎಂದು ಹೇಳಿದ್ದಾರೆ. ಯಾವುದರಿಂದ ಅಭೇದವನ್ನು ಹೇಳಬೇಕು ಎಂದು ಸ್ಪಷ್ಟವಾಗುವುದಿಲ್ಲ. ಆದ್ದರಿಂದ ಟೀಕೆಯಲ್ಲಿ 'ಸ್ವತಂತ್ರಸಾಧನಸ್ಯ ತದನನ್ಯತ್ವಂ' ಎಂಬ ವಾಕ್ಯವನ್ನು ಪ್ರಯೋಗ ಮಾಡಿದ್ದಾರೆ. ಸ್ವತಂತ್ರಸಾಧನದಿಂದ ಬ್ರಹ್ಮನಿಗೆ ಐಕ್ಯವನ್ನು ತಿಳಿಯಬೇಕು ಎಂದು ಸೂತ್ರದ ಅರ್ಥವನ್ನು ಈಗ ಸ್ಪಷ್ಟವಾಗಿ ತಿಳಿದಂತಾಯಿತು.

'ಕಿಂ ಸ್ವಿದಾಸೀತ್' ಎಂಬುದಾಗಿ ಶ್ರುತಿಯು ಅಧಿಷ್ಠಾನ ಮೊದಲಾದ ಸಾಧನಗಳ ಆಕ್ಷೇಪವನ್ನು ಮಾಡುತ್ತಿದೆ. ಈ ಆಕ್ಷೇಪಕ್ಕೆ ವಿಪರ್ಯಯಪರ್ಯವಸಾನವನ್ನು ಮಾಡಲೇಬೇಕು. ಅದನ್ನು ಭಾಷ್ಯದಲ್ಲಿ ಮಾಡಿದ್ದಾರೆಂಬುದನ್ನು ಉಪಪಾದನೆ ಮಾಡಲು 'ಕಿಮುಕ್ತಂ ಭವತಿ' ಎಂಬುದಾಗಿ ಟೀಕೆಯಲ್ಲಿ ಅವತಾರಿಕೆಯನ್ನು ನೀಡುತ್ತಿದ್ದಾರೆ. ಈ ವಿಷಯವು ಮುಂದೆ ಸ್ಪಷ್ಟವಾಗುತ್ತದೆ.

### ಶ್ರುತಿಯಲ್ಲಿ ಹೇಳಿದ ತರ್ಕಕ್ಕೆ ವಿಪರ್ಯಯಪರ್ಯವಸಾನ

**भावदीपः** –हिर्हेताविति मत्वा भाष्यशेषमवतार्य व्याचष्टे– **कुतो यत इति**।। सूत्रे आरम्भणशब्द आरभ्यते येनेति व्युत्पत्त्या साधनजातपर इति भावेनोक्तम्– **अधिष्ठानादीति**।। कथमेतावता उक्तार्थः सिद्ध इत्यत आह– **विपर्यय इति**।। नास्त्यधिष्ठानादिकं किमप्यतः स्वरूपसामर्थ्यादेव सृष्टिरिति पर्यवसानादित्यर्थः।। **अप्रमाणमेवेति**।। प्राबल्यमागमस्यैव जात्या तेषु त्रिषु स्मृतमित्युक्तेरिति भावः।।

ಭಾಷ್ಯದಲ್ಲಿರುವ 'ಹಿ' ಎಂಬ ಪದವು ಹೇತ್ವರ್ಥದಲ್ಲಿದೆ. ಈ ಅಭಿಪ್ರಾಯದಿಂದ ಉಳಿದ ಭಾಷ್ಯಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನಮಾಡಲು 'ಕುತೋ ಯತಃ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಸೂತ್ರದಲ್ಲಿ ಪ್ರಯೋಗ ಮಾಡಲ್ಪಟ್ಟ ಆರಂಭಣಶಬ್ದವು 'ಆರಭ್ಯತೇ ಯೇನ' ಎಂಬ ವ್ಯುತ್ಪತ್ತಿಯಿಂದ ಸಕಲ ಸಾಧನಗಳನ್ನು ವಿವಕ್ಷಿಸುತ್ತಿದೆ ಎಂಬ ಅಭಿಪ್ರಾಯದಿಂದ 'ಅಧಿಷ್ಠಾನಾತ್' ಇತ್ಯಾದಿವಾಕ್ಯವು ಹೊರಟಿದೆ. ಇಷ್ಟುಮಾತ್ರದಿಂದ ಹಿಂದೆ ಹೇಳಿದ ಅರ್ಥವು ಹೇಗೆ ಸಿದ್ಧವಾಯಿತು ಎಂಬ ಪ್ರಶ್ನೆಗೆ 'ವಿಪರ್ಯಯೇ ಪರ್ಯವಸಾನಾತ್' ಎಂದು ಟೀಕೆಯಲ್ಲಿ ಉತ್ತರವನ್ನು ನೀಡಿದ್ದಾರೆ. ಅಧಿಷ್ಠಾನಾದಿಗಳು ಯಾವುದೂ

ಕೂಡ ಇರುವುದಿಲ್ಲ. ಆದ್ದರಿಂದ ಸ್ವರೂಪಸಾಮರ್ಥ್ಯದಿಂದಲೇ ಸೃಷ್ಟಿಯಾಯಿತು ಎಂದು ಪರ್ಯವಸಾನ ಮಾಡಬೇಕು ಎಂಬುದು ಇದರ ಅರ್ಥ. ಅಪ್ರಮಾಣಮೇವ ಎಂದು ಟೀಕೆಯಲ್ಲಿ ಹೇಳಿದ್ದಾರೆ. ಏಕೆಂದರೆ 'ಪ್ರಾಬಲ್ಯಮ್ ಆಗಮಸ್ಯೇವ ಜಾತ್ಯಾ ತೇಷು ತ್ರಿಷು ಸ್ಮೃತಮ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಆಗಮಕ್ಕೆ ಪ್ರಾಮಾಣ್ಯವನ್ನು ವಿವಕ್ಷಿಸಬೇಕು ಎಂಬುದು ಇದರ ಅಭಿಪ್ರಾಯ.

ವಿವರಣೆ – ಭಾಷ್ಯದಲ್ಲಿ 'ಇತಿ ಹಿ ಆಕ್ಷೇಪಃ' ಎಂದು ಹೇಳಿದ್ದಾರೆ. ಇಲ್ಲಿರುವ 'ಹಿ' ಎಂಬ ಪದವು ಹೇತ್ವರ್ಥದಲ್ಲಿದೆ. ಯಾವ ಕಾರಣದಿಂದ ಆಕ್ಷೇಪ ಮಾಡಲಾಗಿದೆಯೋ ಆ ಕಾರಣದಿಂದ ಪರಮಾತ್ಮನೇ ಸ್ವತಂತ್ರಸಾಧನ ಆಗಿದ್ದಾನೆ ಎಂದು ಹೇಳಬೇಕು ಎಂಬುದು ಇದರ ಅಭಿಪ್ರಾಯ. ಹೀಗೆ ಭಾಷ್ಯದಲ್ಲಿರುವ ಹಿಶಬ್ದಕ್ಕೆ ವ್ಯಾಖ್ಯಾನ ಮಾಡುವುದರ ಜೊತೆ 'ಕಿಂಸ್ವಿದಾಸೀತ್' ಇತ್ಯಾದಿ ಉಳಿದ ಭಾಷ್ಯದ ಮಾತಿಗೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ಕುತೋ ಯತಃ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ.

'ಆರಭ್ಯತೇ ಅನೇನ ಇತಿ ಆರಂಭಣಂ' ಎಂಬ ವ್ಯುತ್ಪತ್ತಿಯನ್ನು ಸ್ವೀಕರಿಸಿ ಸೂತ್ರದಲ್ಲಿರುವ ಆರಂಭಣ ಶಬ್ದವು ಸಕಲ ಸಾಧನಗಳನ್ನು ಹೇಳುತ್ತಿದೆ. ಆದ್ದರಿಂದ ಟೀಕೆಯಲ್ಲಿ 'ಅಧಿಷ್ಠಾನಾದಿಸಾಧನಾದ್ಯಾಕ್ಷೇಪಃ' ಎಂದು ಹೇಳಿದ್ದಾರೆ. ಅಧಿಷ್ಠಾನ ಮೊದಲಾದ ಸಾಧನಗಳ ಆಕ್ಷೇಪವನ್ನು ಶ್ರುತಿಯು ಮಾಡುತ್ತಿದೆ ಎಂಬುದು ಟೀಕೆಯ ಅಭಿಪ್ರಾಯ. ಸೃಷ್ಟಿಯ ಮೊದಲು ಸ್ವತಂತ್ರವಾದ ಅಧಿಷ್ಠಾನ ಮೊದಲಾದ ಸಾಧನಸಮೂಹವು ಯಾವುದಿತ್ತು ? ಎಂದು ಆಕ್ಷೇಪ ಮಾಡಿದ ಮಾತ್ರಕ್ಕೆ ಹೇಗೆ ಉದ್ದೇಶಸಿದ್ಧಿಯು ಆಗುತ್ತದೆ ಎಂಬ ಪ್ರಶ್ನೆಯು ಬಂದರೆ ವಿಪರ್ಯಯ ಪರ್ಯವಸಾನ ಮಾಡಬೇಕೆಂದು ಟೀಕೆಯಲ್ಲಿ ಹೇಳಿದ್ದಾರೆ. ಸ್ವತಂತ್ರವಾದ ಅಧಿಷ್ಠಾನಾದಿಗಳು ಇಲ್ಲದ ಕಾರಣ ಸೃಷ್ಟಿಯ ಮೊದಲು ಈಶ್ವರನೊಬ್ಬನೇ ಇದ್ದನೆಂದು ಹೇಳಬೇಕು. ಹೀಗೆ ವಿಪರ್ಯಯಪರ್ಯವಸಾನವನ್ನು ಮಾಡಿದಾಗ ಈಶ್ವರನು ಸ್ವತಂತ್ರನೂ ಸೃಷ್ಟಿಕರ್ತನೂ ಆಗಿದ್ದಾನೆಂದು ತಿಳಿಯುತ್ತದೆ. ಬೇರೆ ಸ್ವತಂತ್ರವಾದ ಸಾಧನವನ್ನು ಅಪೇಕ್ಷೆ ಪಡದೆ ಸೃಷ್ಟಿಮಾಡುತ್ತಾನೆ ಎಂದು ಸಿದ್ಧವಾಗುತ್ತದೆ.

ಅನುಮಾನದಿಂದ ಸ್ವತಂತ್ರಸಾಧನವನ್ನು ಅಪೇಕ್ಷೆ ಪಡುತ್ತಾನೆಂದು ಸಿದ್ಧವಾಗಿದೆ. ಹೀಗಿರುವಾಗ ಆಗಮದಿಂದ ಬೇರೆ ಸ್ವತಂತ್ರಸಾಧನವನ್ನು ಅಪೇಕ್ಷೆ ಪಡುವುದಿಲ್ಲ ಎಂಬುದು ಹೇಗೆ ನಿರ್ಣಯವಾಗುತ್ತದೆ ಎಂದು ಪ್ರಶ್ನಿಸಬಾರದು. ಏಕೆಂದರೆ, ಪ್ರತ್ಯಕ್ಷ ಅನುಮಾನ ಆಗಮಗಳಲ್ಲಿ ಆಗಮವೇ ಪ್ರಬಲವಾಗಿರುವುದರಿಂದ ಅಂತಹ ಆಗಮದಿಂದ ಅನುಮಾನಕ್ಕೆ ಅಪ್ರಾಮಾಣ್ಯವನ್ನು ಹೇಳಬೇಕು. ಹಾಗಾಗಿ ಪೂರ್ವಪಕ್ಷಕಾರರು ಮಾಡಿದ ಅನುಮಾನವು

ಅಪ್ರಮಾಣವೆಂದು ಸ್ಪಷ್ಟವಾಗುತ್ತದೆ. ಪ್ರಬಲವಾದ ಆಗಮವನ್ನು ಅನುಮಾನವು ಬಾಧಿಸಲು ಸಾಧ್ಯವಿಲ್ಲ.

### ಋಗ್ವೇದದಲ್ಲಿರುವ ವಿಷಯವಾಕ್ಯ

**भावदीपः – बह्वित्युक्तमिति।।** बहुसाधनेति भाष्ये साधनस्य बहुत्वं ज्ञानेच्छाद्यन्यद्दण्डादिस्थानीयसाधनबहुत्वं विवक्षितमिति भावः। सृष्टौ साधनाक्षेपपरत्वप्रतीत्यर्थं यतो भूमिं जनयन्विश्वकर्मा वि द्यामौर्णोन्महिना विश्वचक्षा इत्युत्तरार्धं वदन् किंस्विदित्यस्यार्थमाह– **विश्वकर्मा हरिरिति।।** वि इत्यस्य विशेषेण बभूवेति और्णोदित्यस्यावृणोदित्यर्थः।

ಟೀಕೆಯಲ್ಲಿ 'ಬಹು ಇತ್ಯುಕ್ತಮ್' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – 'ಬಹುಸಾಧನ' ಇತ್ಯಾದಿ ಭಾಷ್ಯದಲ್ಲಿ ಸಾಧನಗಳಲ್ಲಿ ಬಹುತ್ವವನ್ನು ಹೇಳಿದ್ದಾರೆ. ಜ್ಞಾನ ಇಚ್ಛಾದಿಗಳನ್ನು ಬಿಟ್ಟು ದಂಡಾದಿ ಸ್ಥಾನದಲ್ಲಿರುವ ಅನೇಕ ಸಾಧನಗಳನ್ನು ವಿವಕ್ಷಿಸಬೇಕು ಎಂದು. ಸೃಷ್ಟಿಯಲ್ಲಿ ಸಾಧನವನ್ನು ಆಕ್ಷೇಪ ಮಾಡುತ್ತದೆ ಎಂಬ ಪ್ರತೀತಿ ಬರುವುದಕ್ಕಾಗಿ ವೇದಮಂತ್ರದ ಮುಂದಿನ ಭಾಗವನ್ನು ಟೀಕೆಯಲ್ಲಿ ಉಲ್ಲೇಖ ಮಾಡಿದ್ದಾರೆ. ಯಾವ ಕಾರಣದಿಂದ ಭೂಮಿಯನ್ನು ಸೃಷ್ಟಿಮಾಡುತ್ತಿರುವ ಜಗತ್ಕರ್ತೃವಾದ ಶ್ರೀಹರಿಯು ವಿಶೇಷವಾಗಿ ಅಂತರಿಕ್ಷಕ್ಕೆ ಜನಕನಾಗಿ ಇದ್ದನೋ ಎಂಬುದಾಗಿ ಹೇಳುವ 'ಯತೋ ಭೂಮಿಂ ಜನಯನ್ ವಿಶ್ವಕರ್ಮಾ' ಎಂಬ ಉತ್ತರಾರ್ಧವನ್ನು ಉಲ್ಲೇಖ ಮಾಡುವ ಮೂಲಕ 'ಕಿಂ ಸ್ವಿತ್' ಇತ್ಯಾದಿ ಶ್ರುತಿಯ ಅರ್ಥವನ್ನು 'ವಿಶ್ವಕರ್ಮಾ ಹರಿಃ' ಎಂದು ಹೇಳಿದ್ದಾರೆ. ಈ ಶ್ರುತಿಯಲ್ಲಿರುವ 'ವಿ' ಎಂಬ ಉಪಸರ್ಗಕ್ಕೆ ವಿಶೇಷವಾಗಿ ಇದ್ದನು ಎಂದರ್ಥ. 'ಔರ್ಣೋತ್' ಎಂಬುದಕ್ಕೆ ಆವರಿಸಿರುವನು ಎಂದರ್ಥ. ವಿಪರ್ಯಯಪರ್ಯವಸಾನವನ್ನು 'ನ ಕಿಂಚಿತ್' ಎಂಬುದಾಗಿ ಮಾಡಿದ್ದಾರೆ.

ವಿವರಣೆ – ಭಾಷ್ಯದಲ್ಲಿ 'ಸ್ವತಂತ್ರಬಹುಸಾಧನಾ' ಎಂದು ಹೇಳಿದ್ದಾರೆ. ಈಶ್ವರಸೃಷ್ಟಿಗೆ ಸ್ವತಂತ್ರಸಾಧನಸಾಪೇಕ್ಷತ್ವವನ್ನಷ್ಟೇ ಸಾಧನೆ ಮಾಡಿದರೆ ಜ್ಞಾನೇಚ್ಛಾದಿಸಾಪೇಕ್ಷವನ್ನು ಒಪ್ಪಿರುವುದರಿಂದ ಸಿದ್ಧಸಾಧನತಾದೋಷ ಬರುತ್ತದೆಂದು ಪ್ರಾರಂಭದಲ್ಲಿ ಹೇಳಲಾಗಿದೆ. ಆದಕ್ಕಾಗಿ ಬಹುಸಾಧನವೆಂದು ವಿವಕ್ಷಿಸಬೇಕು. ಸಿದ್ಧಾಂತದಲ್ಲಿ ಜ್ಞಾನೇಚ್ಛಾದಿಗಳಿಂದ ಅತಿರಿಕ್ತವಾಗಿ ಈಶ್ವರನಿಗಿಂತ ಬೇರೆಯಾದ ಬಹುಸಾಧನಸಾಪೇಕ್ಷತ್ವವು ಅಪೇಕ್ಷಿತ-ವಲ್ಲವಾದ್ದರಿಂದ ಸಿದ್ಧಸಾಧನತಾದೋಷವು ಬರುವುದಿಲ್ಲ. ಆದ್ದರಿಂದ ಜ್ಞಾನೇಚ್ಛಾದಿಗಳನ್ನು

ಬಿಟ್ಟು ದಂಡ, ಚಕ್ರಾದಿ ಸ್ಥಾನದಲ್ಲಿರುವ ಬೇರೆ ಸಾಧನಗಳನ್ನೇ ಇಲ್ಲಿ ಬಹುಶಬ್ದದಿಂದ ವಿವಕ್ಷಿಸಬೇಕು.

ಸೂತ್ರದಲ್ಲಿ ಉಲ್ಲೇಖ ಮಾಡಿದ 'ಕಿಂಸ್ವಿದಾಸೀತ್' ಎಂಬ ಪೂರ್ಣಪಾಠ ಹೀಗಿದೆ –

ಕಿಂ ಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ ಸ್ವಿತ್ ಕಥಾಸೀತ್ ।
ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿ ದ್ಯಾಮೌರ್ಣೋನ್ಮಹಿನಾ ವಿಶ್ವಚಕ್ಷಾಃ ॥
ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್ ।
ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈರ್ದ್ಯಾವಾಭೂಮೀ ಜನಯನ್ ದೇವ ಏಕಃ ॥

(ಋ.೧೦.೮೧.೨)

ಈ ಶ್ರುತ್ಯರ್ಥ ಹೀಗಿದೆ - ಜಗತ್ಕರ್ತೃವಾದ ಶ್ರೀಹರಿಯು ಯಾವ ಅಧಿಷ್ಠಾನಗಳಿಂದ ಭೂಮಿ ಮತ್ತು ಅಂತರಿಕ್ಷಗಳಿಗೆ ಜನಕನಾಗಿ ಸರ್ವೋತ್ತಮನಾಗಿ (ವಿಶೇಷನಾಗಿ) ಇದ್ದನೋ ವಿಶ್ವತಶ್ಚಕ್ಷುವಾದ ಯಾವ ಮಹಿಮೆಯಿಂದ ಯಾವ ಅಧಿಷ್ಠಾನವನ್ನು ಆವರಿಸಿದ್ದನೋ ಅಂತಹ ಅಧಿಷ್ಠಾನವು ಮತ್ತು ಸಾಧನವು ಯಾವುದಿತ್ತು. ಯಾವ ರೂಪದಿಂದ ಆ ಸಾಧನವಿತ್ತು? (ಯಾವುದೂ ಇರಲಿಲ್ಲ. ಪರಮಾತ್ಮನೊಬ್ಬನೇ ಇದ್ದನು) ಇಂತಹ ವಿಶ್ವತಶ್ಚಕ್ಷುವಾದ ವಿಶ್ವತೋ ಮುಖನಾದ ವಿಶ್ವತೋಬಾಹುವಾದ ವಿಶ್ವತಃ ಪಾದಗಳುಳ್ಳ ಪರಮಾತ್ಮನು ಆಕಾಶ ಭೂಮಿ ಮೊದಲಾದವುಗಳನ್ನೆಲ್ಲಾ ತಾನೊಬ್ಬನೇ ಸೃಷ್ಟಿಯನ್ನು ಮಾಡಿದನು.

ಹೀಗೆ ಋಗ್ವೇದದ ಹತ್ತನೇ ಮಂಡಲದಲ್ಲಿರುವ 'ಕಿಂ ಸ್ವಿದಾಸೀತ್' ಎಂಬ ವಿಷಯವಾಕ್ಯದ ಆಧಾರದಿಂದ ಸ್ವತಂತ್ರಸಾಧನಗಳನ್ನು ಈಶ್ವರನು ಅಪೇಕ್ಷಿಸಲಿಲ್ಲ ಎಂಬುದು ಸಿದ್ಧವಾಗುತ್ತದೆ.

ಸ್ವತಂತ್ರವಾಗಿ ಯಾವುದೂ ಇರಲಿಲ್ಲ ಎಂದರ್ಥ.

**भावदीपः** –विपर्यये पर्यवसानमाह– **न किञ्चिदिति ।।** अत्र साधनस्वरूपमात्रनिषेधप्रतीतावपि धर्मान्तरेण वाक्यशेषादिति न्यायेन साधकसत्त्वावेदकवक्ष्यमाणानेकवचनबलात्स्वातन्त्र्येण न किञ्चिदित्यर्थो लभ्यत इति भावः – **किंस्विदिति ।।** तैत्तिरीये किंस्विद्धिमस्य भेषजमित्यस्याग्निर्हिमस्य भेषजमिति यथा परिहारस्तथेत्यर्थः ।

ಶ್ರುತಿಯಲ್ಲಿ ಹೇಳಿದ ತರ್ಕಕ್ಕೆ ವಿಪರ್ಯಯಪರ್ಯವಸಾನವನ್ನು 'ನ ಕಿಂಚಿತ್' ಎಂಬುದಾಗಿ ಟೀಕೆಯಲ್ಲಿ ತೋರಿಸಿದ್ದಾರೆ. 'ನ ಕಿಂಚಿತ್' ಇತ್ಯಾದಿ ಟೀಕಾವಾಕ್ಯದಲ್ಲಿ ಪ್ರಲಯಕಾಲದಲ್ಲಿ ಸಾಧನದ ಸ್ವರೂಪವನ್ನೇ ನಿಷೇಧಮಾಡಿರುವರೆಂದು ಕಾಣಸುತ್ತದೆ. ಆದರೆ 'ಧರ್ಮಾಂತರೇಣ ವಾಕ್ಯಶೇಷಾತ್' ಎಂಬ ನ್ಯಾಯದಂತೆ ಮತ್ತು ಪ್ರಳಯಕಾಲದಲ್ಲೂ ಅನೇಕ ಸಾಧನಗಳಿದ್ದವು ಎಂದು ಮುಂದೆ ಹೇಳುವ ವಚನದ ಆಧಾರದಂತೆ ಸ್ವಾತಂತ್ರ್ಯೇಣ ಯಾವುದೇ ಪದಾರ್ಥವೂ ಇರಲಿಲ್ಲ ಎಂಬುದನ್ನು ವಿವಕ್ಷಿಸಬೇಕು. 'ಕಿಂ ಸ್ವಿತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ತೈತ್ತಿರೀಯದಲ್ಲಿ 'ಕಿಂ ಸ್ವಿತ್ ಹಿಮಸ್ಯ ಭೇಷಜಮ್' ಎಂಬುದಾಗಿ ಶೀತಕ್ಕೆ ಯಾವುದು ಔಷಧಿ ಎಂದು ಪ್ರಶ್ನಿಸಿಕೊಂಡು 'ಅಗ್ನಿರ್ಹಿಮಸ್ಯ ಭೇಷಜಮ್' ಅಗ್ನಿಯು ಅಗ್ನಿಯು ಶೀತಕ್ಕೆ ಔಷಧಿಯಾಗಿದೆ ಎಂದು ಪರಿಹಾರವನ್ನು ಹೇಳಿದ್ದಾರೆ. ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು.

ವಿವರಣೆ – ಋಗ್ವೇದದ ಶ್ರುತಿಗೆ ಟೀಕೆಯಲ್ಲಿ ಪ್ರಳಯಕಾಲದಲ್ಲಿ ಬೇರೆ ಯಾವ ಅಧಿಷ್ಠಾನವಿತ್ತು. ಬೇರೆ ಸಾಧನವಾದರೂ ಯಾವುದಿತ್ತು? ಅದು ಯಾವ ರೂಪದಲ್ಲಿತ್ತು? ಎಂಬುದಾಗಿ ಆಕ್ಷೇಪವನ್ನು ಮಾಡಿ 'ನ ಕಿಂಚಿತ್' ಯಾವುದೂ ಕೂಡ ಇರಲಿಲ್ಲ. ಹೇಗೂ ಕೂಡ ಅದು ಇರಲಿಲ್ಲ ಎಂದು ವಿಪರ್ಯಯಪರ್ಯವಸಾನ ಮಾಡಿದ್ದಾರೆ. ಆದರೆ ಪ್ರಲಯಕಾಲದಲ್ಲೂ ಕೂಡ ಕಾಲ ಆಕಾಶಾದಿಗಳು ಇದ್ದವು ಎಂದು ಅನೇಕ ಶ್ರುತಿಗಳೇ ಹೇಳುತ್ತಿವೆ. ಹೀಗಿರುವಾಗ ಯಾವುದೂ ಇರಲಿಲ್ಲ ಎಂದು ಹೇಳಿದ್ದು ಹೇಗೆ ಸರಿ?

ಈ ಪ್ರಶ್ನೆ ಅಯುಕ್ತ. ಏಕೆಂದರೆ ಸ್ವತಂತ್ರವಾಗಿ ಯಾವುದೂ ಇರಲಿಲ್ಲ ಎಂಬುದು ಟೀಕೆಯ ಅರ್ಥವೇ ಹೊರತು ಸ್ವರೂಪತಃ ಯಾವುದೂ ಇರಲಿಲ್ಲ ಎಂಬುದು ಅಭಿಪ್ರಾಯವಲ್ಲ. ಆದ್ದರಿಂದ 'ನ ಕಿಂಚಿದಪಿ' ಎಂಬ ಟೀಕೆಯಲ್ಲಿ ಸ್ವತಂತ್ರವಾಗಿ ಎಂಬುದನ್ನು ವಿವಕ್ಷಿಸಿ ಅರ್ಥಮಾಡಿಕೊಳ್ಳಬೇಕು.

ಪೂರ್ವಪಕ್ಷಿಯ ಅನುಮಾನಕ್ಕೆ ಶ್ರುತಿವಿರೋಧವಷ್ಟೇ ಅಲ್ಲ ಯುಕ್ತಿವಿರೋಧವೂ ಇದೆ.

**भावदीपः – युक्तिविरुद्धं चेति ।।** यद्यपि श्रुतेर्युक्तीनां च स्वरूपसामर्थ्यादेव सृष्टिरिति भाष्योक्तसाध्येनैवान्वयो भाति। तथा सर्वकर्तृविलक्षण-सर्वशक्तित्वमेवाशेषयुक्तिश्रुत्यनुसारीति न्यायविवरणोक्तेश्च। अत एव प्राक् कुतो यत इत्यादिना भाष्यशेषस्तथैव व्याख्यातः। तथा च सामर्थ्यादेव सृष्टिरित्येतद्युक्तिभिरपि

साधयतीति वक्तव्यम्। तथापि तस्य स्फुटत्वात्तावता प्रागुक्तानुमानस्य दूषणाप्राप्तेः। युक्तिमात्राच्छ्रुतियुक्ता हि युक्तिर्बलवत्तीति न्यायविवरणानुरोधेन युक्तिविरुद्धं चेति भावोर्थोक्तिः। अत एव इति भावेनेत्युक्तिः पूर्वत्र श्रुतिविरोधादप्रमाणमेवेति भाव इत्युक्तिः। हेतुत्रयमिति। स्वतन्त्रसाधनान्तरनिरपेक्षत्वरूपसाध्य इति भावः॥ १५ ॥

ಟೀಕೆಯಲ್ಲಿ 'ಯುಕ್ತಿವಿರುದ್ಧಂ ಚ' ಎಂದು ಹೇಳಿದ್ದಾರೆ.

ಪ್ರಶ್ನೆ – ವಾಸ್ತವಿಕವಾಗಿ ಶ್ರುತಿ ಹಾಗೂ ಯುಕ್ತಿಗಳಿಗೆ 'ಸ್ವರೂಪಸಾಮರ್ಥ್ಯಾದೇವ ಸೃಷ್ಟಿಃ' ಎಂಬ ಭಾಷ್ಯದಲ್ಲಿ ಹೇಳಿದ ಸಾಧ್ಯದ ಜೊತೆ ಅನ್ವಯವು ತಿಳಿಯುತ್ತದೆ. ಏಕೆಂದರೆ 'ಸರ್ವಕರ್ತೃವಿಲಕ್ಷಣ-ಸರ್ವಶಕ್ತಿತ್ವಮೇವ ಅಶೇಷಯುಕ್ತಿಶ್ರುತ್ಯನುಸಾರಿ' ಎಂಬುದಾಗಿ ನ್ಯಾಯವಿವರಣದಲ್ಲೂ ಹಾಗೆಯೇ ಹೇಳಿದ್ದಾರೆ. ಆದ್ದರಿಂದಲೇ ಹಿಂದೆ 'ಕುತೋ ಯತಃ' ಇತ್ಯಾದಿ ಟೀಕಾವಾಕ್ಯಗಳಿಂದ ಭಾಷ್ಯಶೇಷಕ್ಕೆ ಸ್ವರೂಪಸಾಮರ್ಥ್ಯದಿಂದಲೇ ಬ್ರಹ್ಮನು ಸೃಷ್ಟಿಯನ್ನು ಮಾಡುತ್ತಾನೆ ಎನ್ನಲು ಶ್ರುತಿ ಹಾಗೂ ಯುಕ್ತಿಗಳನ್ನು ಆಧಾರವಾಗಿ ನೀಡಿದ್ದಾರೆ. ಆದ್ದರಿಂದ ಪ್ರಕೃತ ಟೀಕೆಯಲ್ಲಿ ತನ್ನ ಸಾಮರ್ಥ್ಯದಿಂದಲೇ ಸೃಷ್ಟಿ ಮಾಡುತ್ತಾನೆ ಎಂಬ ವಿಷಯದಲ್ಲಿ ಯುಕ್ತಿಗಳನ್ನೂ ಕೂಡ ಸಾಧನೆ ಮಾಡುತ್ತಿದ್ದರೆ ಎಂದು ಹೇಳಬೇಕಿತ್ತು. ಹೀಗೇಕೆ ಹೇಳಲಿಲ್ಲ?

ಉತ್ತರ – ಹೌದು. ಆದರೆ, ವಿಷಯವು ಸ್ಪಷ್ಟವಾಗಿರುವುದರಿಂದಲೇ ಹೇಳಿಲ್ಲ. ಮತ್ತು ಪರಮಾತ್ಮನ ಸಾಮರ್ಥ್ಯದಿಂದಲೇ ಜಗತ್ತಿನ ಸೃಷ್ಟಿಯಾಗುತ್ತದೆ ಎಂಬುದನ್ನು ಶ್ರುತಿ ಹಾಗೂ ಯುಕ್ತಿಗಳಿಂದ ಸಾಧನೆ ಮಾಡಿದ ಮಾತ್ರದಿಂದಲೇ ಪೂರ್ವಪಕ್ಷಿಯು ಹೇಳಿದ ಅನುಮಾನಕ್ಕೆ ದೋಷವು ಹೇಳಿದಂತಾಗುವುದಿಲ್ಲ. 'ಶ್ರುತಿಮಾತ್ರಾತ್ ಶ್ರುತಿಯುಕ್ತಾ ಹಿ ಯುಕ್ತಿಃ ಬಲವತೀ'- ಕೇವಲ ಯುಕ್ತಿಗಿಂತ ಶ್ರುತಿಸಹಿತವಾದ ಯುಕ್ತಿಯು ಬಲಿಷ್ಠವಾಗಿದೆ ಎಂಬ ನ್ಯಾಯವಿವರಣಕ್ಕೆ ಅನುಸಾರವಾಗಿ ಪೂರ್ವಪಕ್ಷಿಯ ಅನುಮಾನವು ಯುಕ್ತಿವಿರುದ್ಧವಾಗಿದೆ ಎಂಬುದನ್ನು ಪ್ರಕೃತ ತೋರಿಸಿದ್ದಾರೆ. ಆದ್ದರಿಂದ ಪ್ರಕೃತ ಟೀಕೆಯಲ್ಲಿ 'ಇತಿ ಭಾವೇನ' ಎಂಬ ಪದವನ್ನು ಪ್ರಯೋಗ ಮಾಡುವ ಮೂಲಕ ಹಿಂದೆ ಶ್ರುತಿವಿರೋಧದಿಂದ ಪೂರ್ವಪಕ್ಷಿಯ ಅನುಮಾನಕ್ಕೆ ಅಪ್ರಾಮಾಣ್ಯವನ್ನು ಹೇಳಲಾಗಿತ್ತು. ಈಗ ಯುಕ್ತಿವಿರೋಧ ಇರುವುದರಿಂದಲೂ ಕೂಡ ಅಪ್ರಮಾಣವಾಗುತ್ತದೆ ಎಂಬುದು ಇದರ ಧ್ವನಿತಾರ್ಥ.

'ಹೇತುತ್ರಯಂ' ಎಂದು 'ಸ್ವತಂತ್ರಸಾಧನಾಂತರನಿರಪೇಕ್ಷತ್ವ' ಎಂಬ ಸಾಧ್ಯಕ್ಕೆ ಈ ಮೂರು ಹೇತುಗಳು ಎಂದು ತಿಳಿಯಬೇಕು.

**ವಿವರಣೆ** – 'ಈಶ್ವರಸೃಷ್ಟಿಃ ಸ್ವತಂತ್ರಬಹುಸಾಧನಾಂತರನಿರಪೇಕ್ಷಾ ಪರತಂತ್ರತ್ವಾಭಾವಾತ್ - ಸ್ವೇಚ್ಛಾನುಸಾರಪ್ರವೃತ್ತಿತ್ವಾತ್ ಸಾಧನಸತ್ತಾಪ್ರದತ್ವಾತ್, ವ್ಯತಿರೇಕೇಣ ಕುಲಾಲವತ್' ಹೀಗೆ ಮೂರು ಅನುಮಾನಗಳನ್ನು ವಿವಕ್ಷಿಸಬೇಕು. ಇಂತಹ ಯುಕ್ತಿಯಿಂದಲೂ ಕೂಡ ಪೂರ್ವಪಕ್ಷಿಯ ಅನುಮಾನವು ವಿರುದ್ಧವಾಗಿದೆ.

## ಭಾವದೀಪದ ವೈಶಿಷ್ಟ್ಯ

* ಬಹುಯುಕ್ತಿಗಳ ವಿರೋಧಪರಿಹಾರವೇ ಈ ಅಧಿಕರಣದ ಮುಖ್ಯ ಉದ್ದೇಶ.
* 'ವಿಪ್ರತಿಪನ್ನಾ ಸೃಷ್ಟಿಃ ಕರ್ತೃವ್ಯತಿರಿಕ್ತಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್' ಎಂಬ ಪೂರ್ವಪಕ್ಷ ಅನುಮಾನದಲ್ಲಿ ಸಾಧ್ಯವನ್ನು ಉತ್ತಮರೀತಿಯಲ್ಲಿ ವಿಚಾರ ಮಾಡಿದ್ದಾರೆ. 'ಸ್ವತಂತ್ರಬಹುಸಾಧನಸಾಪೇಕ್ಷಾ' ಎಂದೇಕೆ ಸಾಧ್ಯನಿರ್ದೇಶಮಾಡಿಲ್ಲ ಎಂಬ ಪ್ರಶ್ನೆಗೆ ಸಿದ್ಧಸಾಧನದ ಪರಿಹಾರದ ಉದ್ದೇಶವಿದೆ ಎಂದು ಹೇಳುವ ಮೂಲಕ ಕರ್ಮನಿರ್ಣಯದಲ್ಲಿ ಹೇಳಲ್ಪಟ್ಟ ಕರ್ತೃತ್ವವನ್ನು ಅನುಸಂಧಾನ ಮಾಡುವ ಮೂಲಕ ಸಿದ್ಧಸಾಧನತಾ ದೋಷವನ್ನು ಪರಿಹರಿಸಿದ್ದಾರೆ.
* ಈ ಅಧಿಕರಣಕ್ಕೆ ವಿಯದಧಿಕರಣದಿಂದ ಪುನರುಕ್ತಿಯನ್ನು ಆಕ್ಷೇಪಿಸಿ ಪರಿಹರಿಸಲಾಗಿದೆ.
* 'ಬಹುಸಾಧನಸಾಪೇಕ್ಷಾ' ಎಂಬ ಭಾಷ್ಯದ ಪದದಲ್ಲಿರುವ 'ಬಹು'ಶಬ್ದಕ್ಕೆ ಜ್ಞಾನೇಚ್ಛಾದಿಗಳನ್ನು ಬಿಟ್ಟು ದಂಡಚಕ್ರಾದಿಸ್ಥಾನದಲ್ಲಿರುವ ಸಾಧನ-ಬಹುತ್ವವನ್ನು ವಿವಕ್ಷಿಸಬೇಕು.
* ಋಗ್ವೇದದ ಹತ್ತನೆಯ ಮಂಡದಲ್ಲಿ ಬರುವ 'ಕಿಂ ಸ್ವಿದಾಸೀತ್' ಎಂಬ ಶ್ರುತಿಯ ಪೂರ್ಣಪಾಠದ ಉಲ್ಲೇಖ.

* ಪರಮಾತ್ಮನು ಮಾಡುವ ಸೃಷ್ಟಿಯು ತನ್ನ ಸ್ವರೂಪಸಾಮರ್ಥ್ಯದಿಂದಲೇ ಆಗುತ್ತದೆ ಎನ್ನಲು ಶ್ರುತಿ ಹಾಗೂ ಯುಕ್ತಿಗಳ ಆಧಾರವನ್ನು ತಿಳಿದರೆ ಸಾಲದು. ಪೂರ್ವಪಕ್ಷಿಯ ಆಕ್ಷೇಪಕ್ಕೆ ಶ್ರುತಿವಿರೋಧ ಹಾಗೂ ಯುಕ್ತಿವಿರೋಧಗಳನ್ನು ಅವಶ್ಯವಾಗಿ ತಿಳಿಯಬೇಕು.

## ಬ್ರಹ್ಮಸೂತ್ರ

### 'ಭಾವೇ ಚೋಪಲಬ್ಧೇಃ' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – भावे चोपलब्धेः ॥**

ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೇ ಸ್ವತಂತ್ರಕಾರಣವು ಪ್ರಳಯಕಾಲದಲ್ಲಿ ಇರುವುದಿಲ್ಲ. ಏನಾದರೂ ಇದ್ದಿದ್ದಲ್ಲಿ ಶ್ರುತ್ಯಾದಿಪ್ರಮಾಣಗಳಿಂದ ತಿಳಿದುಬರುತ್ತಿತ್ತು.

ಅರ್ಥ -- ಯಾವ ಕಾರಣದಿಂದ ಈಶ್ವರನಿಗಿಂತ ಭಿನ್ನವಾದ ಮತ್ತೊಂದು ಸ್ವತಂತ್ರಸಾಧನವು ಭಾವೇ = ಪ್ರಳಯಕಾಲದಲ್ಲಿ ಇದ್ದಿದ್ದರೆ ಉಪಲಬ್ಧೇಃ = ಶ್ರುತ್ಯಾದಿ ಪ್ರಮಾಣಗಳಿಂದ ತಿಳಿಯಬೇಕಿತ್ತು. ಈ ಕಾರಣದಿಂದಲೂ ಪ್ರಳಯಕಾಲದಲ್ಲಿ ಮತ್ತೊಂದು ಸ್ವತಂತ್ರಕಾರಣವಿರುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

### ಸ್ವತಂತ್ರಸಾಧನೆಯ ನಿರಾಕರಣೆ

**ब्रह्मसूत्रभाष्यम् – ॥ भावे चोपलब्धेः ॥२॥**

**स्वतन्त्रसाधनभावे प्रमाणैरुपलभ्येत ।**

ಅನುವಾದ - ಸ್ವತಂತ್ರವಾದ ಸಾಧನೆಗಳು ಇದ್ದಿದ್ದರೆ ಪ್ರಮಾಣಗಳಿಂದ ತಿಳಿಯಬೇಕಿತ್ತು.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಸ್ವತಂತ್ರಸಾಧನೆಯನ್ನು ನಿರಾಕರಣೆ ಮಾಡುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಸ್ವತಂತ್ರಸಾಧನಭಾವೇ = ಸ್ವತಂತ್ರವಾದ ಸಾಧನಗಳು ಇರುವುದಾದಲ್ಲಿ, ಪ್ರಮಾಣೈಃ = ಪ್ರತ್ಯಕ್ಷಾದಿ ಪ್ರಮಾಣಗಳಿಂದ ಉಪಲಭ್ಯೇತ = ತೋರಬೇಕಾಗಿತ್ತು.

ವೇದಪ್ರತಿಪಾದ್ಯವಾದ ವಸ್ತುವೇ ಇರದು

**ब्रह्मसूत्रभाष्यम् –**

**'अनुक्तं पञ्चभिर्वेदैर्न वस्त्वस्ति कुतश्चन ।**
**अतो वेदत्वमेतेषां यतस्ते सर्ववेदकाः ।' इति स्कान्दे ।।२।।**

ಅನುವಾದ - ಐದು ವೇದಗಳಿಂದ ಪ್ರತಿಪಾದ್ಯವಾಗದ ವಸ್ತುವೇ ಜಗತ್ತಿನಲ್ಲಿ ಇರುವುದಿಲ್ಲ. ಪ್ರತಿಯೊಂದು ವಿಷಯವನ್ನು ತಿಳಿಸುವುದರಿಂದಲೇ ವೇದ ಎಂಬ ನಾಮವನ್ನು ಪಡೆದಿದೆ. ಹೀಗೆ ಸ್ಕಾಂದಪುರಾಣವು ಪ್ರತಿಪಾದನೆ ಮಾಡುತ್ತಿದೆ.

ಪ್ರತಿಪದಾರ್ಥ -- ಪ್ರಮಾಣಗಳಿಂದ ತೋರದಿದ್ದರೂ ಏಕಿರಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಪಂಚಭಿಃ = ಮಹಾಭಾರತದ ಜೊತೆ ಸೇರಿದ ಐದು, ವೇದೈಃ = ವೇದಗಳಿಂದ, ಅನುಕ್ತಮ್ = ಹೇಳದೇ ಇರುವ, ವಸ್ತು = ಪದಾರ್ಥವು, ಕಿಂಚ = ಯಾವುದು, ನಾಸ್ತಿ = ಇರುವುದಿಲ್ಲ. ಯತಃ = ಯಾವ ಕಾರಣದಿಂದ, ತೇ = ಆ ವೇದಗಳು, ಸರ್ವವೇದಕಾಃ = ಎಲ್ಲವನ್ನು ತಿಳಿಸುತ್ತವೆಯೋ, ಅತಃ = ಆದ್ದರಿಂದ, ತೇಷಾಂ = ಅವುಗಳಿಗೆ, ವೇದತ್ವಂ = ವೇದ ಎಂಬ ಹೆಸರು ಸಾರ್ಥಕವಾಗಿದೆ. ಇತಿ = ಹೀಗೆ, ಸ್ಕಾಂದೇ = ಸ್ಕಾಂದ ಪುರಾಣದಲ್ಲಿ ಹೇಳಲಾಗಿದೆ.

ಸತ್ತರ್ಕದೀಪಾವಳಿ

ಸ್ವತಂತ್ರನಾದವನಿಗೆ ಮತ್ತೊಂದರ ಅಪೇಕ್ಷೆಯಿಲ್ಲ.

**सत्तर्कदीपावळिः – परतन्त्रत्वाभावात् स्वतन्त्रत्वात् साधनसाधनत्वस्य तदधीनत्वान्न विष्णुः साधनापेक्षीत्यर्थः श्रुत्यन्तरैरपि अनुपलम्भान्न विष्णोरप्यपेक्षणीयं साधनमस्तीत्याह – भावे चेत्यादिना ।।**

ಪರಮಾತ್ಮನು ಸರ್ವತಂತ್ರಸ್ವತಂತ್ರನಾಗಿದ್ದಾನೆ. ಪರತಂತ್ರನಾಗಿರುವುದಿಲ್ಲ. ಇವನು ಸೃಷ್ಟಿಯನ್ನು ಮಾಡಲು ಯಾವ ಸಾಧನೆಗಳನ್ನು ಅಪೇಕ್ಷಿಸುತ್ತಾನೋ, ಅವೆಲ್ಲವೂ ಇವನ

ಅಧೀನವೇ ಆಗಿವೆ. ಆದ್ದರಿಂದ ವಿಶ್ವದ ಸೃಷ್ಟಿಯನ್ನು ಮಾಡಲು ಯಾವುದೇ ಸಾಧನೆಗಳ ಅಪೇಕ್ಷೆ ಇರುವುದಿಲ್ಲ ಎಂಬುದಾಗಿ ಶ್ರುತ್ಯಾದಿಗಳು ಹೇಳುತ್ತಿವೆ. ಇತರ ಶ್ರುತಿಗಳಿಂದಲೂ ಕೂಡ ಅಂಥ ಸ್ವತಂತ್ರಸಾಧನೆಗಳು ಕಾಣಸುತ್ತಿಲ್ಲ. ಈ ವಿಷಯವನ್ನು 'ಭಾವೇ ಚ' ಇತ್ಯಾದಿ ಸೂತ್ರವು ಪ್ರತಿಪಾದನೆ ಮಾಡುತ್ತಿವೆ.

### ತತ್ವಪ್ರಕಾಶಿಕಾ

### ಸ್ವತಂತ್ರಸಾಧನೆ ನಿರಾಕರಣೆಗೆ ಯುಕ್ತ್ಯಂತರ

**तत्वप्रकाशिका – युक्त्यन्तरेण स्वतन्त्रसाधनं प्रतिक्षिपत्सूत्रमुपन्यस्य व्याचष्टे – भावे चेति ।।**

ಮತ್ತೊಂದು ಯುಕ್ತಿಯಿಂದ ಸ್ವತಂತ್ರಸಾಧನೆಯನ್ನು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ 'ಭಾವೇ ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಯುಕ್ತಿಯ ನಿರೂಪಣೆ

**तत्वप्रकाशिका – यदि भगवत्सृष्टौ तदतिरिक्तं स्वतन्त्रसाधनमस्ति तर्हि वेदादिप्रमाणैरुपलभ्येत न चोपलभ्यते । अतो नास्तीत्यर्थः ।**

ಒಂದುವೇಳೆ ಭಗವಂತನ ಸೃಷ್ಟಿಯಲ್ಲಿ ತನಗಿಂತ ಬೇರೆಯಾದ ಮತ್ತೊಂದು ಸ್ವತಂತ್ರಸಾಧನವು ಇರುವುದಾದಲ್ಲಿ ವೇದಾದಿಪ್ರಮಾಣಗಳಿಂದ ಅದು ಉಪಲಬ್ಧವಾಗಬೇಕಿತ್ತು. ಆದರೆ ಯಾವುದೇ ಪ್ರಮಾಣಗಳಿಂದಲೂ ಉಪಲಬ್ಧವಾಗುತ್ತಿಲ್ಲ. ಆದ್ದರಿಂದ ಅಂಥ ಸ್ವತಂತ್ರಸಾಧನವು ಇಲ್ಲವೆಂದೇ ತಿಳಿಯಬೇಕು.

### ಯುಕ್ತಿಯಲ್ಲಿ ದೋಷವಿಲ್ಲ

**तत्वप्रकाशिका – प्रमाणानुपलब्धमपि किं न स्यादित्यत आह – अनुक्तमिति ।। भगवद्गुणादिकं मामन्यतस्तदुक्तमेवेत्यदोषः ।। १६ ।।**

ಪ್ರಮಾಣದಿಂದ ಉಪಲಬ್ಧವಾಗುವುದಿಲ್ಲವೆಂದ ಮಾತ್ರಕ್ಕೆ ಏಕೆ ಇರಬಾರದು ? ಎಂಬ ಪ್ರಶ್ನೆಗೆ 'ಅನುಕ್ತಮ್' ಇತ್ಯಾದಿಯಾಗಿ ಉತ್ತರಿಸಿದ್ದಾರೆ. ಭಗವದ್‌ಗುಣಾದಿಗಳು ಇವೆ ಎಂದರೆ ಎಲ್ಲವೂ ವೇದಪ್ರತಿಪಾದ್ಯವಾಗಿವೆ ಎಂದರ್ಥ. ಸಂತ್ಯಶ್ರುತಾಃ ಎಂಬುದಾಗಿ ವೇದ ಅನುಕ್ತವಾದ ಭಗವದ್‌ಗುಣಗಳು ಇವೆ ಎಂಬುದಕ್ಕೆ ಸಾಮಾನ್ಯವಾಗಿ ವೇದಪ್ರತಿಪಾದ್ಯವಾಗಿವೆ ಎಂಬರ್ಥವನ್ನೇ ತಿಳಿಯಬೇಕು. ಆದ್ದರಿಂದ ವೇದಪ್ರಮಾಣದಿಂದ ಸಿದ್ಧವಾದದ್ದು ಮಾತ್ರ ಅಸ್ತಿತ್ವವನ್ನು ಹೊಂದಲು ಸಾಧ್ಯ.

## ಭಾವದೀಪ

### ಟೀಕೆಯ ಕಠಿಣಪದಾರ್ಥಗಳು

**भावदीपः** –॥ भावे चोपलब्धेः॥ १६ ॥ सूत्रे चशब्दः प्रागुक्तहेतूनां विपक्षे बाधकरूपयुक्तिसमुच्चय इति भावेनाह– **युक्त्यन्तरेणेति**॥ तर्के बाधवारणायापादकं विशिनष्टि– **तदतिरिक्तमिति**॥ **अनुक्तमितीति**॥ इतिहासपुराणयोः पञ्चमवेदत्वप्रसिद्धेः स्मृतौ पञ्चभिरित्युक्तमिति भावः। सन्त्यश्रुता इति वक्ष्यमाणश्रुतिविरोध इत्यत आह– **भगवद्गुणादिकं चेति**॥ १६ ॥

ಸೂತ್ರದಲ್ಲಿರುವ 'ಚ'ಶಬ್ದವು ಹಿಂದೆ ಹೇಳಿದ ಹೇತುಗಳಿಗೆ ವಿಪಕ್ಷದಲ್ಲಿ ಬಾಧಕತರ್ಕವನ್ನು ಸಮುಚ್ಚಯ ಮಾಡುತ್ತಿದೆ. ಇದನ್ನು 'ಯುಕ್ತ್ಯಂತರೇಣ' ಎನ್ನುವ ಟೀಕಾವಾಕ್ಯದಿಂದ ಉಪಪಾದನೆ ಮಾಡುತ್ತಿದ್ದಾರೆ. ತರ್ಕದಲ್ಲಿ ಬಾಧವನ್ನು ಪರಿಹಾರ ಮಾಡಲು ಆಪಾದಕದಲ್ಲಿ ವಿಶೇಷಣವನ್ನು 'ತದತಿರಿಕ್ತಂ' ಎಂದು ಹೇಳಿರುತ್ತಾರೆ.

'ಅನುಕ್ತಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇತಿಹಾಸ ಹಾಗೂ ಪುರಾಣಗಳು ಪಂಚಮವೇದವಾಗಿವೆ ಎಂಬುದು ಪ್ರಸಿದ್ಧವಾಗಿದೆ. ಆದ್ದರಿಂದ ಸ್ಮೃತಿಯಲ್ಲಿ ಐದು ವೇದಗಳಿಂದ ಎಂದು ಹೇಳಿದ್ದು ಸಮಂಜಸವಾಗಿದೆ. 'ಸಂತ್ಯಶ್ರುತಾಃ' ಎಂಬ ಮುಂದೆ ಉಲ್ಲೇಖ ಮಾಡುವ ಶ್ರುತಿಯ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಭಗವದ್ಗುಣಾದಿಕಂ ಚ' ಎಂಬುದರಿಂದ ಉತ್ತರಿಸಿದ್ದಾರೆ.

ವಿವರಣೆ – ಹಿಂದಿನ ಸೂತ್ರದಲ್ಲಿ ಈಶ್ವರನು ಸ್ವತಂತ್ರಸಾಧನಗಳನ್ನು ಅಪೇಕ್ಷೆ ಪಡುವುದಿಲ್ಲ ಎಂಬ ವಿಷಯದಲ್ಲಿ 'ಪರತಂತ್ರಾಭಾವಾತ್, ಸ್ವೇಚ್ಛಾನುಸಾರಿಪ್ರವೃತ್ತಿತ್ವಾತ್,

ಸಾಧನಸತ್ತಾಪ್ರದತ್ವಾತ್' ಇತ್ಯಾದಿ ಅನೇಕ ಹೇತುಗಳನ್ನು ಹೇಳಲಾಯಿತು. ಈ ಹೇತುಗಳಿಗೆ ವಿಪಕ್ಷವನ್ನು ಪೂರ್ವಪಕ್ಷಿಯು ಆಕ್ಷೇಪ ಮಾಡುವನು. ಈಶ್ವರನು ಸ್ವತಂತ್ರನಾಗಲಿ ಆದರೂ ಕೂಡ ಮತ್ತೊಂದು ಸ್ವತಂತ್ರಸಾಧನವನ್ನು ಅಪೇಕ್ಷೆ ಪಟ್ಟೇ ಸೃಷ್ಟಿಯನ್ನು ಮಾಡುತ್ತಾನೆ ಎಂದು ಹೇಳೋಣ. ಹೀಗೆ ವಿಪಕ್ಷವನ್ನು ಆಪಾದನೆ ಮಾಡಿದರೆ ಅದಕ್ಕೆ ಬಾಧಕತರ್ಕವನ್ನು ಹೇಳಲು ಈ ಸೂತ್ರ ಹೊರಟಿದೆ. ಒಂದು ವೇಳೆ ತನ್ನಿಂದ ಭಿನ್ನವಾದ ಸ್ವತಂತ್ರಪದಾರ್ಥವನ್ನು ಈಶ್ವರನು ಅಪೇಕ್ಷೆ ಪಡುವುದಾಗಿದ್ದಲ್ಲಿ ಆ ಸ್ವತಂತ್ರಸಾಧನವು ಇರಬೇಕಾಗಿತ್ತು. ಇದ್ದಿದ್ದರೆ ಉಪಲಬ್ಧವಾಗಬೇಕಾಗಿತ್ತು. ಆದರೆ ಉಪಲಬ್ಧವಾಗದ ಕಾರಣ ಈಶ್ವರನಿಗಿಂತ ಅತಿರಿಕ್ತವಾದ ಬೇರೆ ಯಾವುದೇ ಸ್ವತಂತ್ರಸಾಧನಗಳು ಇಲ್ಲವೆಂದು ನಿರ್ಣಯವಾಗುತ್ತದೆ. ಸ್ಪಷ್ಟವಾಗಿ ಹೀಗೆ ತಿಳಿಯಬೇಕು – 'ಸ್ವೇಚ್ಛಾನುಸಾರಿಪ್ರವೃತ್ತ್ಯಾದಿಸದ್ಭಾವೇಪಿ ಸ್ವತಂತ್ರಸಾಧನಮೇವ ಅಪೇಕ್ಷತೇ' ಎಂದು ಆಪಾದನೆ ಮಾಡಿದರೆ ಬಾಧಕತರ್ಕವನ್ನು ಹೀಗೆ ಹೇಳಿದ್ದಾರೆ. 'ಯದಿ ಸ್ವಭಿನ್ನಸ್ವತಂತ್ರಸಾಧನಂ ಅಪೇಕ್ಷೇತ ತರ್ಹಿ ಉಪಲಭ್ಯೇತ ನ ಚ ಉಪಲಭ್ಯತೇ ತಸ್ಮಾತ್ ಸ್ವಭಿನ್ನಸ್ವತಂತ್ರಸಾಧನಂ ನಾಪೇಕ್ಷತೇ' ಎಂದು.

ಬಾಧಕತರ್ಕದಲ್ಲಿ 'ಯದಿ ಸ್ವತಂತ್ರಸಾಧನಂ ಸ್ಯಾತ್ ತರ್ಹಿ ವೇದಾದಿಪ್ರಮಾಣೈಃ ಉಪಲಭ್ಯೇತ' ಎಂದಷ್ಟೇ ಹೇಳಿದರೆ ಜ್ಞಾನೇಚ್ಛಾದಿಸ್ವತಂತ್ರಸಾಧನಗಳು ಇರುವುದರಿಂದ ತರ್ಕಕ್ಕೆ ಬಾಧದೋಷವು ಪ್ರಾಪ್ತವಾಗುತ್ತಿತ್ತು. ಅದಕ್ಕಾಗಿ 'ತದತಿರಿಕ್ತಂ' ಎಂಬ ವಿಶೇಷಣವನ್ನು ಟೀಕೆಯಲ್ಲಿ ಹೇಳಿದ್ದಾರೆ. ಜ್ಞಾನೇಚ್ಛಾದಿಗಳು ಸ್ವಾತಿರಿಕ್ತವಾಗದ ಕಾರಣ ಬಾಧದೋಷಕ್ಕೆ ಅವಕಾಶವಿಲ್ಲ.

ಸ್ಮೃತಿವಾಕ್ಯದಲ್ಲಿ ಐದು ವೇದಗಳಿಂದ ಹೇಳಲ್ಪಡದ ವಸ್ತುವೇ ಇಲ್ಲವೆಂದು ಹೇಳಿದ್ದಾರೆ. ಆದರೆ ವೇದಗಳಿರುವುದೇ ನಾಲ್ಕು. ಐದು ಎಂದು ಹೇಗೆ ಹೇಳಿದರು?

ಇತಿಹಾಸ ಪುರಾಣಗಳು ಐದನೇ ವೇದವೆಂದಾಗಿ ಪ್ರಸಿದ್ಧವಾಗಿವೆ. ಆದ್ದರಿಂದ ಸ್ಕಾಂದಪುರಾಣದಲ್ಲಿ ಪಂಚಭಿರ್ವೇದೈಃ ಎಂದು ಹೇಳಿದ್ದು ಸಮಂಜಸವಾಗಿದೆ.

ಮುಂದೆ 'ಸಂತ್ಯಶ್ರುತಾಃ' ಎಂಬ ಶ್ರುತಿಯನ್ನು ಉಲ್ಲೇಖ ಮಾಡುವ ಮೂಲಕ ವೇದಗಳಲ್ಲೂ ಹೇಳದ ಅನಂತ ಗುಣಗಳು ಭಗವಂತನಲ್ಲಿ ಇವೆ ಎಂದು ತಿಳಿಯುತ್ತದೆ. ಹೀಗಿರುವಾಗ ವೇದದಲ್ಲಿ ಹೇಳಲ್ಪಡದ ವಸ್ತುವೇ ಇಲ್ಲವೆಂದು ಹೇಳಿದ್ದು ಹೇಗೆ ಸರಿ? ಈ ಪ್ರಶ್ನೆಗೆ ಉತ್ತರ ನೀಡುವುದಕ್ಕಾಗಿ 'ಭಗವದ್ಗುಣಾದಿಕಂ' ಎಂಬ ಟೀಕಾವಾಕ್ಯವು ಹೊರಟಿದೆ.

## ಭಾವದೀಪದ ವೈಶಿಷ್ಟ್ಯ

* ವಿಪಕ್ಷದಲ್ಲಿ ಬಾಧಕತರ್ಕಯುಕ್ತಿಯ ಸಮುಚ್ಚಯಕ್ಕೋಸ್ಕರ ಸೂತ್ರದಲ್ಲಿ ಚಶಬ್ದವಿದೆ ಎಂಬುದಾಗಿ ನೇರವಾಗಿ ಸೂತ್ರದಲ್ಲಿನ ಚಶಬ್ದಕ್ಕೆ ವ್ಯಾಖ್ಯಾನ ಮಾಡಲಾಗಿದೆ.

* ಇತಿಹಾಸ ಪುರಾಣಗಳೂ ಕೂಡ ಪಂಚಮವೇದವೆನಿಸಿವೆ. ಇದನ್ನು ವಿವಕ್ಷಿಸಬೇಕೆಂದು ಹೇಳುವ ಮೂಲಕ ಭಾಷ್ಯದಲ್ಲಿರುವ 'ಪಂಚಭಿಃ' ಎಂಬ ಮಾತಿಗೆ ವ್ಯಾಖ್ಯಾನ ಮಾಡುವ ಮೂಲಕ ನೇರವಾಗಿ ಭಾಷ್ಯಕ್ಕೂ ಕೂಡ ವ್ಯಾಖ್ಯಾನ ಮಾಡಲಾಗಿದೆ.

* ಬಾಧಕತರ್ಕದಲ್ಲಿ ಬಾಧದೋಷದ ಪರಿಹಾರಕ್ಕಾಗಿ 'ತದತಿರಿಕ್ತಂ' ಎಂಬ ವಿಶೇಷಣವು ಸಾರ್ಥಕವಾಗಿದೆ ಎಂದು ಟೀಕೆಗೂ ಸುಂದರವಾಗಿ ವ್ಯಾಖ್ಯಾನ ಮಾಡಲಾಗಿದೆ.

### ಬ್ರಹ್ಮಸೂತ್ರ

'ಸತ್ವಾಚ್ಚಾವರಸ್ಯ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – सत्वाच्चावरस्य ।।**

'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯು ನೀರಿನಿಂದ ಪ್ರಪಂಚದ ಹುಟ್ಟುವಿಕೆಯನ್ನು ಹೇಳುತ್ತಿದೆ. ಇದರಿಂದ ಬ್ರಹ್ಮಾತಿರಿಕ್ತವಾದ ಸಾಧನವು ಸಿದ್ಧವಾಯಿತಲ್ಲವೇ ? ಎಂದು ಆಕ್ಷೇಪ ಮಾಡಬಾರದು. ನೀರು ಮೊದಲಾದವೆಲ್ಲವೂ ಪರಮಾತ್ಮನ ಅಧೀನವಾದ ಸಾಧನಗಳಾದ್ದರಿಂದ ಜಗತ್ಕಾರಣವಾಗಲಾರವು.

ಅರ್ಥ -- ಚ ಶಬ್ದವು ಅವಧಾರಣಾರ್ಥದಲ್ಲಿದೆ. ಅವರಸ್ಯ = ಅಸ್ವತಂತ್ರ ಸಾಧನವಾದ ಸತ್ವಾತ್ ಚ = ಅದ್ಭ್ಯಃ ಸಂಭೂತಃ ಎಂಬ ಶ್ರುತಿಯು ನೀರಿನಿಂದ ಪ್ರಪಂಚ ಹುಟ್ಟಿದೆ ಎಂದು ಹೇಳುತ್ತದೆ. ಇಷ್ಟರಿಂದಲೇ ಬ್ರಹ್ಮಾತಿರಿಕ್ತವಾದ ಸ್ವತಂತ್ರಸಾಧನವಿದೆ ಎಂದು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿವಿರೋಧಕ್ಕೆ ಅವಕಾಶವಿಲ್ಲ.

ಬ್ರಹ್ಮಸೂತ್ರಭಾಷ್ಯ

ಭಗವದಧೀನವಾದ ಸಾಧನೆಗಳಿವೆ

**ब्रह्मसूत्रभाष्यम् – 'अद्भ्यः सम्भूतः पृथिव्यै रसाच्च' (तै.आ. ३.१३.) इत्यादिना साधनान्तरप्रतीतेः कथमनुपलब्धिरित्यत आह –**

**।। सत्वाच्चावरस्य ।।३।।**

**अवरस्य तदधीनस्य साधनस्य सत्त्वात् ।**

ಅನುವಾದ - ನೀರಿನಿಂದ ಭೂಮಿಯು ಹುಟ್ಟಿತು ಎಂಬುದು ಪ್ರಸಿದ್ಧವಾಗಿದೆ. 'ಅದ್‌ಭ್ಯಃ ಸಂಭೂತೋ ಹಿರಣ್ಯಗರ್ಭಃ' ಇವೇ ಮೊದಲಾದ ಶ್ರುತಿಗಳಿಂದ ಜಗತ್ತಿನ ಸೃಷ್ಟಿಗೆ ಸಾಧನೆಗಳು ತೋರುತ್ತಿರುವುದರಿಂದ ಶ್ರುತಿಯಲ್ಲಿ ಬೇರೆ ಸಾಧನೆಗಳನ್ನೇ ಹೇಳಿರುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಸತ್ವಾಚ್ಚಾವರಸ್ಯ' ಎಂಬ ಸೂತ್ರ ಉತ್ತರಿಸುತ್ತಿದೆ. ಭಗವದಧೀನವಾದ ಸಾಧನೆಗಳು ಇರುವುದರಿಂದ ಶ್ರುತಿಯ ವಿರೋಧವಿಲ್ಲ.

ಪ್ರತಿಪದಾರ್ಥ -- 'ಅದ್‌ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿ 'ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಯುಗೇಯುಗೇ' ಇವೆ ಮೊದಲಾದ ಸ್ಮೃತಿವಾಕ್ಯಗಳಲ್ಲಿಯೂ ಸಾಧನೆಗಳ ಇರುವಿಕೆಯು ಪ್ರತೀತವಾಗುತ್ತದೆ. ಆದ್ದರಿಂದ ಯಾವುದೇ ಸಾಧನೆಗಳು ಇರುವುದಿಲ್ಲವೆಂದು ಹೇಗೆ ಹೇಳುತ್ತೀರಿ? ಎಂದು ಆಶಂಕಿಸಿ ಅದಕ್ಕೆ ಉತ್ತರವನ್ನು ನೀಡಲು ಸೂತ್ರಕ್ಕೆ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ -- ಅದ್‌ಭ್ಯಃ = ನೀರಿನಿಂದ, ಪೃಥಿವೀ = ಭೂಮಿಯು, ಸಂಭೂತಃ = ಹುಟ್ಟಿತು. ವೈ = ಇದು ಪ್ರಸಿದ್ಧವಾಗಿದೆ. ರಸಾಚ್ಚ = ರಸದಿಂದಲೂ ಕೂಡ ಭೂಮಿಯು ಹುಟ್ಟಿತು. ಇತ್ಯಾದಿನಾ = ಇವೇ ಮೊದಲಾದ ಶ್ರುತಿಗಳಿಂದ, ಸಾಧನಾಂತರಪ್ರತೀತೇಃ = ಬೇರೆ ಸಾಧನೆಗಳಿರುವುದು ಪ್ರತೀತವಾಗುತ್ತಿದೆ. ಹೀಗಿರುವಾಗ, ಕಥಂ = ಹೇಗೆ, ಅನುಪಲಬ್ಧಿಃ = ಬೇರೆ ಸಾಧನಗಳೇ ಇಲ್ಲವೆಂದು ಹೇಳುತ್ತೀರಿ? ಇತ್ಯತಃ = ಈ ಪೂರ್ವಪಕ್ಷಕ್ಕೆ, ಆಹ = ಉತ್ತರಿಸುತ್ತಿದ್ದಾರೆ.

ಅವರಸ್ಯ = ಸೂತ್ರದಲ್ಲಿರುವ ಅವರ ಎಂಬ ಪದಕ್ಕೆ, ತದಧೀನಸ್ಯ = ಭಗವದಧೀನವಾದ ಸಾಧನಸ್ಯ = ಪಂಚಭೂತಗಳು, ಸತ್ತ್ವಾತ್ = ಇರುವುದರಿಂದ ಎಂದರ್ಥ.

### ಪ್ರಳಯಕಾಲದಲ್ಲಿ ಅನೇಕ ಪರಿಕರಗಳಿವೆ

**ब्रह्मसूत्रभाष्यम् — 'काल आसीत्पुरुष आसीत्परम आसीत् तद् यदासीत्तदावृतमासीत् तदधीनमासीदथ ह्येक एव परम आसीद् यस्यैतदासीन्न ह्येतदासीत्' इति हि काषायणश्रुतिः ।।३।।**

ಅನುವಾದ - ಪ್ರಳಯಕಾಲದಲ್ಲಿ ಕಾಲಪುರುಷ ಮೊದಲಾದವುಗಳು ಇದ್ದವು. ಇವೆಲ್ಲವೂ ಪರಮಾತ್ಮನಿಂದ ಆವೃತವಾಗಿದ್ದವು. ಅಂದರೆ ಅವನ ಅಧೀನವಾಗಿದ್ದವು. ಆದ್ದರಿಂದ ಪರಮಾತ್ಮನೊಬ್ಬನೇ ಪ್ರಳಯಕಾಲದಲ್ಲಿ ಇರುತ್ತಾನೆ. ಯಾರ ದೆಸೆಯಿಂದ ಇವೆಲ್ಲವೂ ಹುಟ್ಟಿವೆಯೋ ಅವನೇ ಪರಮಾತ್ಮನು ಇದು ಯಾವುದೂ ಕೂಡ ಮೊದಲು ಇರಲಿಲ್ಲ. ಹೀಗೆ ಕಾಷಾಯಣ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

ಪ್ರತಿಪದಾರ್ಥ -- ಈ ಶ್ರುತಿಯಲ್ಲಿ ಸಾಧನೆಗಳು ಇದ್ದವು ಎಂದಷ್ಟೆ ತಿಳಿಯುತ್ತಿದೆ. ಭಗವದಧೀನವಾಗಿವೆ ಎಂದು ತಿಳಿಯುತ್ತಿಲ್ಲ. ಹೀಗಿರುವಾಗ ಲೋಕರೂಢಿಗೆ ಅನುಸಾರಿಯಾಗಿ ಅದು ಸ್ವತಂತ್ರವೆಂದು ಏಕೆ ಹೇಳಬಾರದು ? ಎಂಬ ಪ್ರಶ್ನೆಗೆ ಚ ಶಬ್ದದಿಂದ ಸೂಚಿತವಾದ ಶ್ರುತಿಯನ್ನು 'ಕಾಲಃ' ಎಂಬುದಾಗಿ ಉದಾಹರಿಸುತ್ತಿದ್ದಾರೆ. ಕಾಲಃ = ಕಾಲವು, ಆಸೀತ್ = ಇತ್ತು, ಪುರುಷಃ = ಪುರುಷನು, ಆಸೀತ್ = ಇದ್ದನು. ಪರಮಃ = ಪರಮಾತ್ಮನೂ ಕೂಡ, ಆಸೀತ್ = ಇದ್ದನು. ಯದಾಸೀತ್ = ಯಾವ ಕಾರಣದಿಂದ ಇವುಗಳೆಲ್ಲವೂ ಇದ್ದವೊ, ತತ್ = ಆ ಕಾರಣದಿಂದ, ಆವೃತಮಾಸೀತ್ = ಶ್ರೀಹರಿಯನ್ನೇ ಆಶ್ರಯಿಸಿದ್ದವು. ಆದ್ದರಿಂದ ತದಧೀನಮಾಸೀತ್ = ಅವನ ಅಧೀನಗಳಾಗಿಯೇ ಇದ್ದವು, ಅತಃ = ಆದ್ದರಿಂದ, ಪರಮ ಆಸೀತ್ = ಪರಮಾತ್ಮನೊಬ್ಬನೇ ಮುಖ್ಯವಾಗಿದ್ದನು. ಯಸ್ಯೈತದಾಸೀತ್ = ಇವೆಲ್ಲವೂ ಅವನ ಅಧೀನವೇ ಆಗಿದ್ದವು, ನ ಹಿ ಏತದಾಸೀತ್ = ಯಾವುದೂ ಕೂಡ ಸ್ವತಂತ್ರವಾಗಿ

ಇರಲಿಲ್ಲ. ಇತಿ = ಹೀಗೆ, ಕಾಷಾಯಣಶ್ರುತಿಃ = ಕಾಷಾಯಣ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

ಸತ್ತರ್ಕದೀಪಾವಳಿ

ಪ್ರಳಯಕಾಲದಲ್ಲಿ ಪರತಂತ್ರಸಾಧನಗಳಿವೆ ಎನ್ನಲು ಪ್ರಮಾಣ

**सत्तर्कदीपावळिः –यद्यपि साधनैर्विनापि जगत्स्रष्टुं शक्नोति परमेश्वरः । तथापि तेषां साधनत्वं सम्पाद्य लीलया तैः सृजति इत्येतत् प्रदिपादयन् आह – अद्भ्य इत्यादिना ।। पृथिव्यै पृथिव्या इत्यर्थः । अबादिभिर्हिरण्यगर्भविग्रहो ब्रह्माण्डरूपः सम्भूत इत्यर्थः । महाप्रलयेऽपि परतन्त्रसाधनसद्भावे श्रुतिमुदाहरति – काल आसीदिति ।। यस्य परमेश्वरस्य तत् कालादिकमधीनमासीत् । तत् परतन्त्रत्वेन असमर्थत्वात् । न ह्येतदासीत् इत्युच्यत इत्यर्थः ।**

ವಾಸ್ತವಿಕವಾಗಿ ಪರಮಾತ್ಮನು ಯಾವುದೇ ಸಾಧನಗಳನ್ನು ಅಪೇಕ್ಷೆ ಪಡದೇ ಜಗತ್ತನ್ನು ಸೃಷ್ಟಿ ಮಾಡಲು ಸಮರ್ಥನಾಗಿದ್ದಾನೆ. ಆದರೂ ಕೂಡ ಆ ಸಾಧನಗಳನ್ನು ಹೊಂದಿ, ಕೇವಲ ಲೀಲೆಯಿಂದ ಈ ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಈ ವಿಷಯವನ್ನು ಪ್ರತಿಪಾದನೆ ಮಾಡಲು 'ಅದ್ಭ್ಯಃ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. 'ಅದ್ಭ್ಯಃ' ಎಂಬ ಶ್ರುತಿಯಲ್ಲಿರುವ 'ಪೃಥಿವ್ಯೈ' ಎಂಬ ಪದಕ್ಕೆ 'ಪೃಥಿವಿಯಿಂದ' ಎಂಬುದಾಗಿ ತೃತೀಯಾರ್ಥವನ್ನು ವಿವಕ್ಷಿಸಬೇಕು. ನೀರು ಮೊದಲಾದವುಗಳಿಂದ ಚತುರ್ಮುಖನಿಗೆ ಬ್ರಹ್ಮಾಂಡವೆಂಬ ಶರೀರವು ಸೃಷ್ಟಿಯಾಯಿತು. ಮಹಾಪ್ರಳಯದಲ್ಲೂ ಕೂಡ ಅಸ್ವತಂತ್ರವಾದ ಸಾಧನೆಗಳು ಇರುತ್ತವೆನ್ನಲು ಶ್ರುತಿಯನ್ನು 'ಕಾಲ ಆಸೀತ್' ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ. ಯಾವ ಕಾಲ ಮೊದಲಾದವುಗಳು ಪ್ರಳಯಕಾಲದಲ್ಲಿ ಇದ್ದವೋ, ಅವೆಲ್ಲವೂ ಪರಮಾತ್ಮನ ಅಧೀನವಾಗಿ ಇದ್ದವು ಎಂಬುದಾಗಿ ಕಾಷಾಯಣಶ್ರುತಿಯು ಹೇಳುತ್ತಿದೆ. ಈ ಶ್ರುತಿಯಲ್ಲಿ 'ನಹಿ ಏತದಾಸೀತ್' ಎಂದು ಹೇಳಿರುವುದು ಸ್ವತಂತ್ರವಾಗಿ ಇರಲಿಲ್ಲ ಎಂದಭಿಪ್ರಾಯದಿಂದ. ಪರತಂತ್ರವಾಗಿ ಕಾಲಾದಿಗಳು ಇದ್ದವು ಎಂದು ತಿಳಿಯಬೇಕು.

## ತತ್ವಪ್ರದೀಪ

### ಪ್ರಳಯಕಾಲದಲ್ಲಿ ಇದ್ದ ಪದಾರ್ಥಗಳು ಯಾವುವು ?

**तत्वप्रदीपः – आपीयन्त इत्यापः कर्माणि । पृथुत्वात् पृथिवी प्रकृतिः । रसो भक्तिः । सत्त्वावराच ।। तदधीनस्य साधनस्य सत्त्वादेव 'अद्भ्यः' इत्यादिवचनं न तु स्वतन्त्रस्य । तदधीनस्य सत्त्वे प्रमाणमाह – काल आसीदित्यादि ।। अस्य जगतोऽग्रे कालः पुरुषः परमश्चैवासीत् । यत्तत् कालादिकमासीत् तदावृतमासीत् । अथवा स एकः परम एवाऽसीत् । यदधीनमेतदासीत् । न स्वतन्त्रम् । न ह्येतदासीत् इति वक्तुं शक्यते, परतन्त्रादेव । अथवा 'अथ' इति विशेषद्योतकः । एको भगवानेव परमः प्रधान आसीत् न ह्यन्यत् परममासीत्, किन्तु तदधीनमेव ।**

'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿರುವ ಆಪಶಬ್ದಕ್ಕೆ 'ಆಪೀಯಂತೇ ಇತ್ಯಾಪಃ' ಎಂಬ ನಿಷ್ಪತ್ತಿಯಿಂದ ಕರ್ಮಗಳು ಎಂದರ್ಥ. 'ಆಪೀಯಂತೇ' = ಅನುಭವಿಸಲ್ಪಡುತ್ತದೆ. ಆದ್ದರಿಂದ ಕರ್ಮಗಳಿಗೆ 'ಆಪ' ಎಂದು ಹೆಸರು. 'ಪೃಥಿವೀ' ಎಂದರೆ ಪ್ರಕೃತಿ ಎಂದರ್ಥ. ಏಕೆಂದರೆ ಪ್ರಕೃತಿಯು ಎಲ್ಲೆಡೆ ವ್ಯಾಪ್ತವಾಗಿರುತ್ತದೆ. ರಸಶಬ್ದಕ್ಕೆ ಭಕ್ತಿ ಎಂದರ್ಥ. ಪರಮಾತ್ಮನ ಅಧೀನವಾಗಿ ಪ್ರಳಯಕಾಲದಲ್ಲಿ ಸಾಧನೆಗಳು ಇದ್ದವು ಎಂಬುದನ್ನು ತಿಳಿಸುವುದಕ್ಕಾಗಿಯೇ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯನ್ನು ಉಲ್ಲೇಖ ಮಾಡಿದ್ದಾರೆ. ಹೊರತು ಸ್ವತಂತ್ರಸಾಧನೆಗಳ ವಿಷಯದಲ್ಲಿ ಈ ಶ್ರುತಿಯನ್ನು ಉಲ್ಲೇಖ ಮಾಡಿರುವುದಿಲ್ಲ. ಪರಮಾತ್ಮನ ಅಧೀನವಾಗಿ ಪದಾರ್ಥಗಳು ಪ್ರಳಯಕಾಲದಲ್ಲಿ ಇದ್ದವು ಎಂಬ ವಿಷಯದಲ್ಲಿ 'ಕಾಲ ಆಸೀತ್' ಇತ್ಯಾದಿ ಶ್ರುತಿಯಿಂದ ಆಧಾರವನ್ನು ನೀಡುತ್ತಿದ್ದಾರೆ.

'ಕಾಲ ಆಸೀತ್' ಎಂಬ ಶ್ರುತಿಯ ಅರ್ಥ ಹೀಗಿದೆ - ಈ ಜಗತ್ತಿನ ಸೃಷ್ಟಿಯ ಮೊದಲು ಕಾಲ ಹಾಗೂ ಪರಮಪುರುಷನು ಇದ್ದನು. ಯಾವ ಕಾಲಾದಿಗಳಿದ್ದವೋ, ಅದು ಆವೃತವಾಗಿತ್ತು.

ಅಥವಾ ಆ ಪರಮಪುರುಷನೊಬ್ಬನೇ ಇದ್ದನು. ಅವನ ಅಧೀನವಾಗಿ ಈ ಕಾಲಾದಿಗಳು ಇದ್ದವು. ಸ್ವತಂತ್ರವಾಗಿ ಇರಲಿಲ್ಲ. 'ನ ಹ್ಯೇತದಾಸೀತ್' ಎಂದು ಹೇಳಿರುವುದು ಪರತಂತ್ರ-ವಾಗಿರುವುದರಿಂದ. ಅಥವಾ ಶ್ರುತಿಯಲ್ಲಿರುವ 'ಅಥ' ಎಂಬುದು ವೈಶಿಷ್ಟ್ಯವನ್ನು ತಿಳಿಸುತ್ತಿದೆ. ಒಬ್ಬನೇ ಪರಮಪುರುಷನು ಪ್ರಧಾನವಾಗಿ ಇದ್ದನು. ಉಳಿದ ಪದಾರ್ಥಗಳು ಪ್ರಧಾನವಾಗಿ ಇರಲಿಲ್ಲ. ಪರಮಪುರುಷನ ಅಧೀನವಾಗಿ ಇದ್ದವು ಎಂಬುದು ಈ ಶ್ರುತಿಯ ಅರ್ಥ.

### ತತ್ವಪ್ರಕಾಶಿಕಾ

#### ಸ್ವತಂತ್ರಸಾಧನವಿದೆಯೆನ್ನಲು ಶ್ರುತಿಯ ಆಧಾರ

**तत्वप्रकाशिका – ननु 'अद्भ्यः सम्भूतः' इति श्रुतौ 'प्रकृतिं स्वामवष्टभ्य विसृजामि' इति स्मृतौ च भगवदितरस्वतन्त्रसाधनप्रतीतेर्न तदनुपलब्धिरित्याशङ्क्य तत्परिहारत्वेन सूत्रमवतार्य व्याचष्टे – अद्भ्य इति।।**

ಅದ್ಭ್ಯಃ ಎಂಬ ಶ್ರುತಿಯಲ್ಲಿ ಮತ್ತು 'ಪ್ರಕೃತಿಸ್ವಾಮವಷ್ಟಭ್ಯ ವಿಸೃಜಾಮಿ' ಎಂಬ ಗೀತಾ ಸ್ಮೃತಿಯಲ್ಲಿಯೂ ಭಗವಂತನಿಗಿಂತ ಭಿನ್ನವಾದ ಸ್ವತಂತ್ರಸಾಧನವು ಪ್ರತೀತವಾಗುತ್ತದೆ. ಆದ್ದರಿಂದ ಸ್ವತಂತ್ರಸಾಧನವು ಪ್ರಮಾಣಪ್ರಮಿತವಲ್ಲವೆಂದು ಹೇಳುವುದು ಹೇಗೆ ? ಎಂದು ಆಶಂಕಿಸಿ ಅದಕ್ಕೆ ಪರಿಹಾರವನ್ನು ಹೇಳುವ ಸೂತ್ರಕ್ಕೆ ಅವತಾರಿಕೆಯನ್ನು ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅದ್ಭ್ಯಃ' ಇತ್ಯಾದಿಯಾಗಿ.

#### 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯು ಸ್ವತಂತ್ರಸಾಧನವನ್ನು ಹೇಳುತ್ತಿಲ್ಲ

**तत्वप्रकाशिका – नात्र स्वतन्त्रसाधनमुच्यते किं तु भगवदधीनमेव । तदधीनसाधनस्य सत्त्वाभ्युपगमान्नोक्तविरोध इति भावः ।**

'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿ ಸ್ವತಂತ್ರಸಾಧನವನ್ನು ಹೇಳುತ್ತಿಲ್ಲ. ಹೊರತಾಗಿ ಭಗವದಧೀನವಾದ ಸಾಧನವನ್ನೇ ಹೇಳಲಾಗಿದೆ. ಭಗದಧೀನವಾದ ಸಾಧನವನ್ನು ಒಪ್ಪಿರುವ ಕಾರಣ ಹಿಂದಿನ ಸೂತ್ರದಿಂದ ವಿರೋಧವು ಬರುವುದಿಲ್ಲ.

ಹಿರಣ್ಯಗರ್ಭನ ಸೃಷ್ಟಿ ಹೇಗಾಯಿತು ?

**तत्वप्रकाशिका – तत्पुरुषाख्यो हिरण्यगर्भो विश्वकर्मणो हरेः सकाशादबाद्युपलक्षितभूतैः रसोपलक्षिततन्मात्राभिश्चोत्पन्नः ।**

ಪುರುಷ ಎಂಬ ಹೆಸರಿನ ಹಿರಣ್ಯಗರ್ಭನು ಸಮಸ್ತ ಜಗತ್ತಿಗೆ ಕರ್ತೃವಾದ ಶ್ರೀಹರಿಯ ದೆಸೆಯಿಂದ ನೀರು ಮೊದಲಾದವುಗಳಿಂದ ಉಪಲಕ್ಷಿತವಾದ ಸಕಲಭೂತಗಳು ರಸಗಳು ಆದರಿಂದ ಉಪಲಕ್ಷಿತವಾದ ಪಂಚತನ್ಮಾತ್ರಗಳು ಇವುಗಳಿಂದ ಸಹಿತನಾಗಿ ಹುಟ್ಟಿದನು.

ಪುರುಷನಾಮಕನಾದ ಶ್ರೀಹರಿ

**तत्वप्रकाशिका – सर्वस्मादधिकत्वेन समवर्तत । तस्य तत्पुरुषस्याग्रत एव जातं विश्वं ब्रह्माण्डाख्यं रूपं त्वष्टा भगवान् धारयन् वर्तत इत्यर्थः ।**

ಆ ಹಿರಣ್ಯಗರ್ಭನು ಎಲ್ಲ ಪದಾರ್ಥಗಳಿಗಿಂತ ಉತ್ತಮನಾಗಿ ಉತ್ಪನ್ನನಾದನು ಪುರುಷನಾಮಕನಾಗಿ ಚತುರ್ಮುಖನಿಗಿಂತಲೂ ಮೊದಲೇ ಹುಟ್ಟಿದ ಬ್ರಹ್ಮಾಂಡರೂಪವನ್ನು ಧರಿಸಿ ಬ್ರಹ್ಮಾಂಡವನ್ನು ಧರಿಸಿದ್ದಾನೆ ಎಂದರ್ಥ.

ಶ್ರುತಿಯು ಭಗವದಧೀನತ್ವವನ್ನು ಹೇಳುತ್ತಿದೆಯೇ?

**तत्वप्रकाशिका – ननु साधनमात्रमत्र प्रतीयते न तु तदधीनमिति तच्च लोकानुसारात् स्वतन्त्रमेव किं न स्यादित्यत आह – काल इति ॥**

ಈ ಶ್ರುತಿಯಲ್ಲಿ ಕೇವಲ ಸಾಧನವು ಪ್ರತೀತವಾಗುತ್ತಿದೆ. ಅದಕ್ಕೆ ಭಗವದಧೀನತ್ವವು ತಿಳಿಯುತ್ತಿಲ್ಲ. ಆದ್ದರಿಂದ ಘಟಕ್ಕೆ ದಂಡ ಮೊದಲಾದವುಗಳು ಸ್ವತಂತ್ರಸಾಧನಗಳಂತೆ ಶ್ರೀಹರಿಯ ಸೃಷ್ಟಿಗೆ ಸ್ವತಂತ್ರ ಸಾಧನಗಳು ಏಕೆ ಇರಬಾರದು ? ಎಂಬ ಪ್ರಶ್ನೆಗೆ 'ಕಾಲ ಆಸೀತ್' ಎಂಬುದರಿಂದ ಉತ್ತರಿಸುತ್ತಿದ್ದಾರೆ.

ಪ್ರಳಯಕಾಲದಲ್ಲಿರುವ ಪದಾರ್ಥ ಭಗವದಧೀನ

**तत्वप्रकाशिका – यस्मात्तदा यदासीत्तद्भगवदधीनमासीत् तस्मादेक एव**

**परम आसीदित्युच्यते । कीदृशोऽसौ यस्य सकाशादेतदासीत् । कुतः ? न ह्येतत्पूर्वमासीदित्यर्थः ।**

ಯಾವ ಕಾರಣದಿಂದ ಪ್ರಳಯದಲ್ಲಿ ಯಾವ ಪದಾರ್ಥವು ಇರುತ್ತದೋ ಅದು ಭಗವದಧೀನವಾಗಿದೆ. ಆದ್ದರಿಂದ 'ಏಕ ಏವ ಪರಮ ಆಸೀತ್' ಪ್ರಳಯಕಾಲದಲ್ಲಿ ಒಂದೇ ಒಂದು ಶ್ರೇಷ್ಠವಾದ ವಸ್ತು ಇತ್ತು ಎಂದು ಶ್ರುತಿಯು ಹೇಳುತ್ತಿದೆ. ಅಂಥ ಹುಟ್ಟಿದ ವಸ್ತುವು ಎಂಥ ಸ್ವರೂಪವನ್ನು ಪಡೆದಿದೆ? ಯಾರ ದೆಸೆಯಿಂದ ಇದು ಅಸ್ತಿತ್ವವನ್ನು ಪಡೆದಿದೆ ? ಎಂಬ ಪ್ರಶ್ನೆಗೆ ಮೊದಲು ಇಲ್ಲದೆ ಅನಂತರ ಹುಟ್ಟಿರುವುದರಿಂದ ಭಗವದಧೀನವಾಗಿದೆ ಎಂದರ್ಥ.

ಸಾಧನೆಗಳ ಉಪಯೋಗ ಒಂದು ಲೀಲೆ

**तत्वप्रकाशिका – साधनाद्याक्षेपतत्सद्भावोक्त्यन्यथानुपपत्तिश्चास्य समाधानम् ॥**

ಪರಮಾತ್ಮನು ಯಾವುದೇ ಸಾಧನಗಳನ್ನು ಅಪೇಕ್ಷೆ ಪಡದೆ ಸೃಷ್ಟಿಯನ್ನು ಮಾಡಲು ಸಮರ್ಥನಾಗಿದ್ದಾನೆ. ಆದರೂ ಕೂಡ ಆ ಸಾಧನಗಳಿಗೆ ಸಾಧನತ್ವವನ್ನು ಕೊಟ್ಟು ಅವುಗಳಿಗೂ ಅಸ್ತಿತ್ವವನ್ನು ನೀಡಲು ಸಾಧನಗಳನ್ನು ಉಪಯೋಗಿಸಿಕೊಳ್ಳುತ್ತಾನೆ. ಇದೊಂದು ಅವನ ಲೀಲೆ.

ಸಾಧನಗಳು ಏಕೆ ಬೇಕು? ಎಂಬ ಆಕ್ಷೇಪವನ್ನು ಶ್ರುತಿಯು ಒಂದು ಕಡೆ ಮಾಡುತ್ತಿದೆ. ಮತ್ತೊಂದು ಕಡೆ ಸಾಧನೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿಯನ್ನು ಮಾಡುತ್ತಾನೆ ಎಂದು ಹೇಳುತ್ತಿದೆ. ಈ ಎರಡನ್ನು ಹೊಂದಿಸಬೇಕೆಂದರೆ ಸಾಧನೆಗಳು ಭಗವದಧೀನವಾಗಿವೆ ಎಂದೇ ಸಿದ್ಧವಾಗುತ್ತದೆ. 'ಭಗವದಧೀನತ್ವಂ ಅನ್ಯಥಾ ಸಾಧನಾದ್ಯಾಕ್ಷೇಪಾ ತತ್‌ಸದ್ಭಾವೋಪಪತ್ತಿಶ್ಚ ನೋಪಪದ್ಯತೇ' ಎಂಬ ಅನ್ಯಥಾನುಪಪತ್ತಿ ಪ್ರಮಾಣದಿಂದ ಭಗವಂತನು ತನ್ನ ಅಧೀನವಾದ ಸಾಧನೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿಯಲ್ಲಿ ತೊಡಗುತ್ತಾನೆಂಬ ಸಮಾಧಾನವನ್ನು ತಿಳಿಯಬೇಕು.

## ಭಾವದೀಪ

ಪಾರತಂತ್ರ್ಯ ಹೇಳದೇ ಇರುವುದರಿಂದ ಸ್ವಾತಂತ್ರ್ಯ ತಿಳಿಯುತ್ತದೆ.

**भावदीपः** –॥ सत्वाच्चावरस्य ॥१७॥ पूर्वाक्षेपरूपताद्योतनाय शेषोक्त्याऽर्थं वदन्नेव भाष्यमवतारयति– **नन्वद्भ्य इति** ।। आदिपदोपात्तमाह– **प्रकृतिमिति** ।। गीतास्मृतौ नवम इत्यर्थः ॥ **स्वतन्त्रेति** ।। पारतन्त्र्यानुक्त्यैव लोक इव स्वातन्त्र्यसिद्धेरिति भावः ।

ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯದ ಮೇಲೆ ಆಕ್ಷೇಪವನ್ನು ಸ್ಪಷ್ಟಪಡಿಸುವುದಕ್ಕಾಗಿ ಶೇಷಪೂರಣ ಮಾಡಿಕೊಳ್ಳುವ ಮೂಲಕ ಭಾಷ್ಯಕ್ಕೆ ಅರ್ಥವನ್ನು ಹೇಳುತ್ತಾ 'ನನ್ವದ್ಭ್ಯಃ' ಇತ್ಯಾದಿಯಾಗಿ ಅವತಾರಿಕೆಯನ್ನು ನೀಡುತ್ತಿದ್ದಾರೆ. ಆದಿಪದದಿಂದ ಸ್ವೀಕರಿಸಬೇಕಾದದ್ದನ್ನು 'ಪ್ರಕೃತಿಮ್' ಎಂದು ಉಲ್ಲೇಖ ಮಾಡಿದ್ದಾರೆ. ಭಗವದ್ಗೀತೆಯ ಒಂಭತ್ತನೆಯ ಅಧ್ಯಾಯದಲ್ಲಿ ಈ ಪ್ರಮಾಣಶ್ಲೋಕವಿದೆ. ಪಾರತಂತ್ರ್ಯವನ್ನು ಹೇಳದೇ ಇದ್ದರಿಂದಲೇ ಲೋಕದಲ್ಲಿ ಸ್ವಾತಂತ್ರ್ಯವು ಸಿದ್ಧವಾಗುತ್ತದೆ ಎಂದಭಿಪ್ರಾಯ.

ವಿವರಣೆ – ಪ್ರಳಯಕಾಲದಲ್ಲಿ ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೇ ಸ್ವತಂತ್ರಪದಾರ್ಥವಿರಲಿಲ್ಲ ಎಂದು ಹಿಂದಿನ ಸೂತ್ರದಲ್ಲಿ ಸಾಧಿಸಲಾಯಿತು. ಇದರ ಮೇಲೆ ಬರುವ ಆಕ್ಷೇಪಕ್ಕೆ ಉತ್ತರವನ್ನು ನೀಡಲು 'ಸತ್ವಾಚ್ಚಾವರಸ್ಯ' ಎಂಬ ಮುಂದಿನ ಸೂತ್ರ ಹೊರಟಿದೆ. ಈ ವಿಷಯವನ್ನು 'ಅದ್ಭ್ಯಃ ಸಂಭೂತಃ' ಇತ್ಯಾದಿ ಭಾಷ್ಯದ ವಾಕ್ಯದಲ್ಲಿ ತಿಳಿಸಿದ್ದಾರೆ. ಭಾಷ್ಯದ ಮಾತಿನಿಂದ ಸ್ಪಷ್ಟವಾಗಿ ತಿಳಿಯದೇ ಇರುವ ವಿಷಯವನ್ನು ಟೀಕೆಯಲ್ಲಿ 'ನನು ಅದ್ಭ್ಯಃ' ಇತ್ಯಾದಿ ವಾಕ್ಯಗಳಿಂದ ತಿಳಿಸಿರುತ್ತಾರೆ. ಮತ್ತು ಭಾಷ್ಯದಲ್ಲಿ ಹೇಳಿದ ಆದಿಪದ ಮೊದಲಾದವುಗಳಿಗೆ ವ್ಯಾಖ್ಯಾನ ಮಾಡುವ ಮೂಲಕ ಭಗವದಿತರ ಇತ್ಯಾದಿ ಪದಗಳನ್ನು ಶೇಷಪೂರಣ ಮಾಡಿಕೊಳ್ಳುವುದರ ಮೂಲಕ ಭಾಷ್ಯವನ್ನು ಹೇಗೆ ಅರ್ಥಮಾಡಿಕೊಳ್ಳಬೇಕೆಂಬುದನ್ನೂ ಕೂಡ ಟೀಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

ಪ್ರಶ್ನೆ - 'ಅದ್ಭ್ಯಃ ಸಂಭೂತಃ ಪೃಥಿವೀ ರಸಾಚ್ಚ, ಅಥವಾ ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ' ಎಂಬ ಸ್ಮೃತಿವಾಕ್ಯವನ್ನು ನೀರು ಮತ್ತು ಪ್ರಕೃತಿ ಮೊದಲಾದವುಗಳು

ಸ್ವತಂತ್ರವಾಗಿದ್ದವು ಎಂದು ಕಾಣಿಸುತ್ತಿಲ್ಲ. ಹೀಗಿರುವಾಗ ಪ್ರಳಯಕಾಲದಲ್ಲಿ ಭಗವದತಿರಿಕ್ತವಾದ ಅನೇಕಪದಾರ್ಥಗಳು ಸ್ವತಂತ್ರವಾಗಿದ್ದವು ಎಂಬ ವಿಷಯದಲ್ಲಿ ಇದನ್ನು ಆಧಾರವನ್ನಾಗಿ ಹೇಗೆ ಹೇಳುವಿರಿ?

ಉತ್ತರ – ಸ್ವತಂತ್ರವಾಗಿದ್ದವು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಲೋಕದಲ್ಲಿ ಇವನು ಪರತಂತ್ರನಾಗಿದ್ದಾನೆ ಎಂದು ಹೇಳದಿದ್ದರೆ ಸ್ವತಂತ್ರನಾಗಿದ್ದಾನೆ ಎಂದು ಎಲ್ಲರೂ ಹೇಗೆ ತಿಳಿಯುತ್ತಾರೋ ಅದರಂತೆ ಈ ಶ್ರುತಿ ಸ್ಮೃತಿಗಳಲ್ಲೂ ಕೂಡ ಪರತಂತ್ರವಾಗಿ ಪ್ರಕೃತ್ಯಾದಿಗಳಿವೆ ಎಂದು ಹೇಳದೇ ಇದ್ದುದರಿಂದ ಅರ್ಥಾತ್ ಸ್ವತಂತ್ರವಾಗಿದ್ದವು ಎಂದು ತಿಳಿಯುತ್ತದೆ. ಹೀಗೆ ಅರ್ಥಾತ್ ಸಿದ್ಧವಾಗುವ ಪ್ರಮೇಯದ ಆಧಾರದಿಂದ ಆಕ್ಷೇಪ ಮಾಡುತ್ತಿದ್ದಾರೆಂದು ತಿಳಿಯಬೇಕು.

### 'ಅದ್ಭ್ಯಃ ಸಂಭೂತಃ' ಎಂಬ ಪೂರ್ಣಶ್ರುತಿಯ ವ್ಯಾಖ್ಯಾನ.

**भावदीपः** – सूत्रभाष्ययोरुक्तसत्त्वादिति हेतोरर्थः।। **सत्त्वाभ्युपगमादिति ।।** ईश्वरसृष्टिपरत्वद्योतनाय अद्भ्यः संभूतः पृथिव्यै रसाच्च। विश्वकर्मणः समवर्तताधि। तस्य त्वष्टा विदधद्रूपमेति। तत्पुरुषस्य विश्वमाजानमग्र इति श्रुत्यर्थमाह– **तत्पुरुषाख्य इति ।।** अद्भ्यः पृथिव्या इति पञ्चमीचतुर्थ्यौ तृतीयार्थ इति भावेनोक्तम्– **अबाद्युपलक्षितभूतैरिति ।।**

ಸೂತ್ರ ಹಾಗೂ ಭಾಷ್ಯದಲ್ಲಿ 'ಸತ್ವಾತ್' ಎಂಬ ಪದದ ವ್ಯಾಖ್ಯಾನವನ್ನು ಟೀಕೆಯಲ್ಲಿ 'ಸತ್ವಾಭ್ಯುಪಗಮಾತ್' ಎಂದು ಮಾಡಿದ್ದಾರೆ. ಶ್ರುತಿವಾಕ್ಯವು ಈಶ್ವರನು ಮಾಡುವ ಸೃಷ್ಟಿಯನ್ನು ವಿವರಣೆ ಮಾಡುತ್ತಿದೆ ಎಂಬುದನ್ನು ಸ್ಪಷ್ಟಪಡಿಸುವುದಕ್ಕಾಗಿ ತತ್ಪುರುಷಾಖ್ಯಃ ಇತ್ಯಾದಿ ಶ್ರುತಿಯನ್ನು ಉಲ್ಲೇಖ ಮಾಡುತ್ತಿದ್ದಾರೆ. "ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ। ವಿಶ್ವಕರ್ಮಣಃ ಸಮವರ್ತತಾಧಿ। ತಸ್ಯ ತ್ವಷ್ಟಾ ವಿದಧದ್ರೂಪಮೇತಿ । ತತ್ಪುರುಷಸ್ಯ ವಿಶ್ವಮಾಜಾನಮಗ್ರೇ' ಎಂಬುದು ಈ ಶ್ರುತಿಯ ಪೂರ್ಣಪಾಠ. 'ಅದ್ಭ್ಯಃ ಪೃಥಿವ್ಯಾಃ' ಎಂಬಲ್ಲಿರುವ ಪಂಚಮೀ ವಿಭಕ್ತಿ ಹಾಗೂ ಚತುರ್ಥೀ ವಿಭಕ್ತಿಗಳು ತೃತೀಯಾ ಅರ್ಥದಲ್ಲಿವೆ. ಈ ಅಭಿಪ್ರಾಯದಿಂದ ಅಬಾದ್ಯುಪಲಕ್ಷಿತಭೂತೈಃ ಎಂದು ಟೀಕೆಯಲ್ಲಿ ಹೇಳಿದ್ದಾರೆ.

ವಿವರಣೆ – ಈ ಸೂತ್ರದಲ್ಲಿ ಉಲ್ಲೇಖ ಮಾಡಿದ ಶ್ರುತಿ ಹೀಗಿದೆ 'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ । ವಿಶ್ವಕರ್ಮಣಃ ಸಮವರ್ತತಾಧಿ । ತಸ್ಯ ತ್ವಷ್ಟಾ ವಿದಧದ್ರೂಪಮೇತಿ ।

ತತ್ಪುರುಷಸ್ಯ ವಿಶ್ವಮಾಜಾನಮಗ್ರೇ' ಎಂದು. ಶ್ರುತ್ಯರ್ಥವನ್ನು ಹೀಗೆ ತಿಳಿಯಬೇಕು ಯಃ = ಯಾವ ತತ್ಪುರುಷಾಖ್ಯಃ = ತತ್ಪುರುಷ ಎಂಬ ಹೆಸರುಳ್ಳ, ಹಿರಣ್ಯಗರ್ಭಃ = ಚತುರ್ಮುಖಬ್ರಹ್ಮನು, ವಿಶ್ವಕರ್ಮಣಃ = ಸಮಸ್ತ ಜಗತ್ತನ್ನು ಸೃಷ್ಟಿಮಾಡುವ ಶ್ರೀಹರಿಯಿಂದ, ಅದ್ಭ್ಯಃ = ನೀರಿನಿಂದ, ಪೃಥಿವ್ಯೈ = ಭೂಮಿಯಿಂದ ತದುಪಲಕ್ಷಿತವಾದ ಪಂಚಭೂತಗಳಿಂದ, ರಸಾತ್ = ರಸದಿಂದ ತದುಪಲಕ್ಷಿತವಾದ ಪಂಚತನ್ಮಾತ್ರಾಗಳಿಂದ, ಸಂಭೂತಃ = ಹುಟ್ಟಿದನು. ಅಧಿ = ಹುಟ್ಟಿದ ಪದಾರ್ಥಗಳಲ್ಲೇ ಶ್ರೇಷ್ಠನಾಗಿರುವನು. ತಸ್ಯ = ಆ ಹಿರಣ್ಯಗರ್ಭನ ಸೃಷ್ಟಿಯು, ಅಗ್ರೇ = ಪ್ರಾರಂಭದಲ್ಲಿ ಆಯಿತು. ಜಾನಂ = ಹುಟ್ಟಿದ, ವಿಶ್ವಂ = ಬ್ರಹ್ಮಾಂಡವೆಂಬ, ರೂಪಂ = ಚತುರ್ಮುಖನ ದೇಹವನ್ನು, ತ್ವಷ್ಟಾ = ಪ್ರಕಾಶಸ್ವರೂಪನಾದ ಭಗವಂತನು, ವಿದಧತ್ = ಧಾರಣೆ ಮಾಡಿ, ಏತಿ = ನೆಲೆಸಿದ್ದಾನೆ.

### 'ಆಜಾನಮಗ್ರೇ' ಇತ್ಯಾದಿ ಶ್ರುತ್ಯರ್ಥ

**भावदीपः** – संभूतपदार्थ उत्पन्न इति। आजानमग्र इत्यस्याग्र एव जातमिति। विदधदित्यस्यार्थो धारयन्निति एतीत्यस्य वर्तत इति। यत्तदोरावृत्त्याऽर्थमाह – **यस्मात्तदा यदासीत्तदिति ।। भगवदिति ।।** तदावृतमिति तच्छब्दः प्रकृतपरमपदोक्तस्य परामर्शक इति भावः। यद्वा यस्मात्तस्मादिति तात्पर्योक्तिः। भगवदिति योग्यतयान्वयः।

"ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿರುವ ಸಂಭೂತಪದದ ಅರ್ಥವನ್ನು ಟೀಕೆಯಲ್ಲಿ ಉತ್ಪನ್ನಃ ಎಂಬುದಾಗಿ ಹೇಳಿರುತ್ತಾರೆ. 'ಆಜಾನಮಗ್ರೇ' ಎಂಬ ಶ್ರುತಿಯಲ್ಲಿರುವ ಪದಕ್ಕೆ ಅಗ್ರ ಏವ ಜಾತಮ್ = ಮೊದಲೇ ಇದ್ದನು ಎಂಬುದಾಗಿ ಅರ್ಥವನ್ನು ಹೇಳಿದ್ದಾರೆ. ವಿದಧತ್ ಎಂಬ ಪದಕ್ಕೆ ಧಾರಯನ್ = ಧರಿಸಿದವನಾಗಿ ಎಂಬರ್ಥವನ್ನು, ಏತಿ ಎಂಬ ಪದಕ್ಕೆ ವರ್ತತೇ = ಇರುತ್ತಾನೆ ಎಂಬರ್ಥವನ್ನು ಕೂಡ ಹೇಳಿದ್ದಾರೆ.

ಶ್ರುತಿಯಲ್ಲಿ 'ಯತ್' ಮತ್ತು 'ತತ್' ಪದಗಳನ್ನು ಆವೃತ್ತಿಮಾಡಿಕೊಂಡು ಅರ್ಥವನ್ನು 'ಯಸ್ಮಾತ್ ತದಾ ಯದಾಸೀತ್' ಇತ್ಯಾದಿಯಾಗಿ ಹೇಳಿರುತ್ತಾರೆ. 'ಭಗವತ್' ಎಂದು ಟೀಕೆಯಲ್ಲಿದೆ. 'ತದಾವೃತಮ್' ಎಂಬುದಾಗಿ ತತ್‌ಶಬ್ದವು ಶ್ರುತಿಯಲ್ಲಿ ಪ್ರಕೃತವಾದ ಪರಮ ಎಂಬ ಪದದಿಂದ ಪ್ರತಿಪಾದ್ಯನಾದ ಭಗವಂತನನ್ನು ಪರಾಮರ್ಶೆ ಮಾಡುತ್ತಿದೆ. ಅಥವಾ 'ಯತ್' ಮತ್ತು 'ತತ್'ಪದಗಳನ್ನು ಆವೃತ್ತಿ ಮಾಡಿಕೊಂಡು ಅರ್ಥವನ್ನು ಹೇಳಿರುವುದಲ್ಲ. ಯಸ್ಮಾತ್ ತಸ್ಮಾತ್ ಎಂಬುದು ತಾತ್ಪರ್ಯಾರ್ಥವಾಗಿದೆ

ಎಂದು ತಿಳಿಯಬಹುದು. 'ಭಗವತ್' ಎಂಬುದು ಯೋಗ್ಯತಯಾ ಅನ್ವಯವನ್ನು ಹೊಂದುತ್ತದೆ ಎಂದೂ ಕೂಡ ವ್ಯಾಖ್ಯಾನವನ್ನು ತಿಳಿಯಬಹುದು.

**ವಿವರಣೆ** – ಇಲ್ಲಿಯ ತನಕ 'ಅದ್ಭ್ಯಃ ಸಂಭೂತಃ' ಇತ್ಯಾದಿ ಶ್ರುತ್ಯರ್ಥವನ್ನು ವಿಚಾರ ಮಾಡಿದ್ದಾಯಿತು. ಪ್ರಕೃತ 'ಯಸ್ಮಾತ್' ಇತ್ಯಾದಿ ಟೀಕೆಯಿಂದ 'ಕಾಲಃ ಆಸೀತ್' ಇತ್ಯಾದಿ ಕಾಷಾಯಣಶ್ರುತಿಯ ಬಗ್ಗೆ ವಿಚಾರ ಮಾಡುತ್ತಿದ್ದಾರೆ. ಟೀಕೆಯಲ್ಲಿ 'ಯಸ್ಮಾತ್ ತದಾ ಯದಾಸೀತ್' ಎಂಬ ಶ್ರುತಿಯಲ್ಲಿ ಯತ್ ತತ್‌ಪದಗಳನ್ನು ಆವೃತ್ತಿಮಾಡಿಕೊಂಡು ವ್ಯಾಖ್ಯಾನ ಮಾಡಲಾಗಿದೆ ಎಂದು ತಿಳಿಯಬಹುದು. ಅಥವಾ ಶ್ರುತಿಯ ತಾತ್ಪರ್ಯಾರ್ಥ ಎಂದು ಕೂಡ ತಿಳಿಯಬಹುದು. ಅದರಂತೆ 'ಭಗವತ್' ಎಂಬ ಪದವು ತತ್‌ಪದದ ಅರ್ಥವಾಗಿದೆ ಎಂದು ತಿಳಿಯಬಹುದು. ಅಥವಾ ಯೋಗ್ಯತಯಾ ಅನ್ವಯ ಹೊಂದಿದೆಯೆಂದು ಕೂಡ ತಿಳಿಯಬಹುದು. ಹೀಗೆ ಎರಡು ರೀತಿಯಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ.

ಶ್ರುತಿಯಲ್ಲಿ ಮಾಡಿದ ಆಕ್ಷೇಪಕ್ಕೆ ಉತ್ತರ.

**भावदीपः** – नन्वेतावता ननु साधनमात्रमिति कृतचोद्यस्य किमुत्तरमित्यत आह– **साधनादीति**।। यथोत्तरसूत्रे 'तम आसीत्' इत्युक्तिबलात् 'नासदासीत्' इत्यस्य पारतन्त्र्यादियुक्तसाधनसत्त्वपरत्वं कल्प्यते। तथा अद्भ्य इत्यादेरपि किं स्विदिति वाक्यबलात् परतन्त्रसाधनसत्त्वपरत्वम् ।

ಪ್ರಲಯಕಾಲದಲ್ಲಿ ಸಾಧನೆಗಳನ್ನು ಆಕ್ಷೇಪ ಮಾಡಲಾಗಿತ್ತು. ಇದಕ್ಕೇನು ಉತ್ತರ ? ಎಂಬ ಪ್ರಶ್ನೆಗೆ 'ಸಾಧನಾದಿ' ಇತ್ಯಾದಿ ಟೀಕೆಯಿಂದ ಉತ್ತರಿಸಿದ್ದಾರೆ. ಹೇಗೆ ಮುಂದಿನ ಸೂತ್ರದಲ್ಲಿ 'ತಮ ಆಸೀತ್' ಎಂಬ ಶ್ರುತಿಯ ಬಲದಿಂದ 'ನಾಸದಾಸೀತ್' ಎಂಬ ಶ್ರುತಿಗೆ ಅಸ್ವತಂತ್ರವಾಗಿ ತಮಸ್ಸು ಇತ್ತು ಎಂಬುದಾಗಿ ಹೇಗೆ ವ್ಯಾಖ್ಯಾನ ಮಾಡಲಾಗುತ್ತದೋ ಅದರಂತೆ ಪ್ರಕೃತ 'ಅದ್ಭ್ಯಃ ಸಂಭೂತಃ' ಇತ್ಯಾದಿಯಾಗಿ ಶ್ರುತಿಗಳಿಗೂ ಕೂಡ 'ಕಿಂ ಸ್ವಿತ್' ಇತ್ಯಾದಿ ವಾಕ್ಯಬಲದಿಂದ ಪರತಂತ್ರವಾಗಿ ಇದ್ದವು ಎಂದೇ ವ್ಯಾಖ್ಯಾನ ಮಾಡಬೇಕು.

ವಿವರಣೆ - ಪ್ರಲಯಕಾಲದಲ್ಲಿ ಸಾಧನಾಧಿಷ್ಠಾನ ಮೊದಲಾದವುಗಳನ್ನು ಆಕ್ಷೇಪ ಮಾಡಿರುವುದರಿಂದ ಅವು ಯಾವುದೂ ಕೂಡ ಇರಲಿಲ್ಲವೆಂದು ತಿಳಿಯುತ್ತದಲ್ಲವೇ? ಈ ಪ್ರಶ್ನೆಗೆ ಪ್ರಕೃತ ಉತ್ತರಿಸುತ್ತಿದ್ದಾರೆ. ಸಾಧನ, ಅನುಷ್ಠಾನ ಮೊದಲಾದವುಗಳು ಇದ್ದರೂ ಕೂಡ ಸ್ವತಂತ್ರವಾಗಿ ಇರಲಿಲ್ಲ. ಆದ್ದರಿಂದ ಪ್ರಲಯಕಾಲದಲ್ಲಿ ಅವುಗಳ ಸ್ವರೂಪವಿದ್ದರೂ ಕೂಡ

ಅವುಗಳಿಗೆ ಸ್ವಾತಂತ್ರ್ಯವಿಲ್ಲವೆಂದೇ ಪರ್ಯವಸಾನ ಮಾಡಬೇಕು. ಪರಮಾತ್ಮನು ಅಧಿಷ್ಠಾನ, ಸಾಧನ ಮೊದಲಾದವುಗಳನ್ನು ಅಪೇಕ್ಷೆ ಪಡದೆ ಜಗತ್ತಿನ ಸೃಷ್ಟಿಯನ್ನು ಮಾಡಲು ಸಮರ್ಥನಾಗಿದ್ದಾನೆ. ಆದರೆ ಆ ಸಾಧನಗಳಿಗೆ ಸಾಧನತ್ವವನ್ನು ಸಂಪಾದನೆ ಮಾಡಿಕೊಡಲು ಲೀಲೆಗೋಸ್ಕರ ಅವುಗಳನ್ನು ಅಪೇಕ್ಷೆ ಪಟ್ಟೇ ಸೃಷ್ಟಿಯನ್ನು ಮಾಡುತ್ತಾನೆ. ಆದ್ದರಿಂದ ಪ್ರಳಯಕಾಲದಲ್ಲಿ ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೂ ಇರಲಿಲ್ಲ ಎಂದರೆ ಸ್ವತಂತ್ರವಾಗಿ ಇರಲಿಲ್ಲ ಎಂದೇ ತಿಳಿಯಬೇಕು.

**'ಕಿಂ ಸ್ವಿತ್' ಇತ್ಯಾದಿ ಶ್ರುತಿಯೂ ಕೂಡ ಸ್ವಾತಂತ್ರ್ಯವನ್ನೇ ಆಕ್ಷೇಪ ಮಾಡುತ್ತಿದೆ**

**भावदीपः** – किं स्विदित्यस्य तु स्वातन्त्र्याक्षेपपरत्वं च कल्पनीयम्। अन्यथा वाक्यद्वयायोगात्। व्यावहारिकादिपरत्वकल्पनं तु अप्रामाण्यापत्त्यादिना न युक्तमिति भावः। एतेन किं स्विदित्यस्य स्वरूपाक्षेपपरत्वेन प्रतीतस्य स्वातन्त्र्याक्षेपपरत्वमुपपादितं ध्येयम्॥ १७ ॥

'ಕಿಂ ಸ್ವಿತ್' ಎಂಬ ಶ್ರುತಿಯೂ ಕೂಡ ಸ್ವಾತಂತ್ರ್ಯವನ್ನೇ ಆಕ್ಷೇಪ ಮಾಡುತ್ತಿದೆ ಎಂದು ತಿಳಿಯಬೇಕು. ಇಲ್ಲದಿದ್ದರೆ ಶ್ರುತಿಯ ಪರಸ್ಪರವಾಕ್ಯಗಳಲ್ಲಿ ದ್ವೈರೂಪ್ಯವನ್ನು ಒಪ್ಪಿದಂತಾಗುತ್ತದೆ. ವ್ಯಾವಹಾರಿಕವಾಗಿ ಇದ್ದವು ಇತ್ಯಾದಿಯಾಗಿ ಕಲ್ಪನೆ ಮಾಡಬಾರದು. ಹಾಗೆ ಕಲ್ಪನೆ ಮಾಡಿದರೆ ಶ್ರುತಿಗೆ ಅಪ್ರಾಮಾಣ್ಯದೋಷವು ಪ್ರಾಪ್ತವಾಗುತ್ತದೆ. ಹೀಗೆ ಹೇಳಿದ್ದರಿಂದ 'ಕಿಂ ಸ್ವಿತ್' ಎಂಬ ಶ್ರುತಿಯು ವಸ್ತುಸ್ವರೂಪವನ್ನು ಆಕ್ಷೇಪ ಮಾಡುತ್ತದೆ ಎಂದು ಆಪಾತತಃ ಪ್ರತೀತವಾಗುತ್ತದೆ. ಆದರೆ ಸ್ವಾತಂತ್ರ್ಯಾಕ್ಷೇಪಪರವಾಗಿಯೇ ಅರ್ಥವನ್ನು ತಿಳಿಯಬೇಕು ಎಂಬುದಾಗಿ ವ್ಯಾಖ್ಯಾನವನ್ನು ಮಾಡಿದಂತಾಯಿತು.

ವಿವರಣೆ – ಹೇಗೆ ಕಾಷಾಯಣಶ್ರುತಿಯನ್ನು ಸ್ವಾತಂತ್ರ್ಯಾಕ್ಷೇಪಪರವಾಗಿ ವ್ಯಾಖ್ಯಾನವನ್ನು ಮಾಡಲಾಯಿತೋ ಅದರಂತೆ ಈ ಅಧಿಕರಣದ ಮುಖ್ಯವಿಷಯವಾಕ್ಯವೆನಿಸಿದ 'ಕಿಂ ಸ್ವಿತ್' ಎಂಬ ಶ್ರುತಿಯನ್ನೂಕೂಡ ಸ್ವಾತಂತ್ರ್ಯಾಕ್ಷೇಪಪರವಾಗಿಯೇ ವ್ಯಾಖ್ಯಾನ ಮಾಡಬೇಕು. ಇಲ್ಲದಿದ್ದರೆ ಒಂದು ಶ್ರುತಿಯು ಸ್ವಾತಂತ್ರ್ಯವನ್ನು ಆಕ್ಷೇಪ ಮಾಡುತ್ತಿದೆ. ಇನ್ನೊಂದು ಶ್ರುತಿಯು ಸ್ವರೂಪವನ್ನು ಆಕ್ಷೇಪ ಮಾಡುತ್ತಿದೆ ಎಂದು ಹೇಳಿದಂತಾಗುವುದರಿಂದ ಶ್ರುತಿಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾಗುತ್ತದೆ.

ಅದ್ವೈತಿಗಳು ಶ್ರುತಿಯಲ್ಲಿ ಮಾಡಿದ ಆಕ್ಷೇಪವನ್ನು ನೋಡಿ ಪಾರಮಾರ್ಥಿಕವಾಗಿ ಅಧಿಷ್ಠಾನಾದಿ ವಸ್ತುಗಳು ಇರಲು ಸಾಧ್ಯವೇನು? ಸಾಧ್ಯವಿಲ್ಲದ ಕಾರಣ ಅಧಿಷ್ಠಾನಾದಿಗಳನ್ನು ವ್ಯಾವಹಾರಿಕವಾಗಿ ಹೇಳಬೇಕು ಇತ್ಯಾದಿಯಾಗಿ ವ್ಯಾಖ್ಯಾನ ಮಾಡಲು ಪ್ರಯತ್ನ ಪಡಬಹುದು. ಆದರೆ ಹಾಗೇನಾದರೂ ವ್ಯಾವಹಾರಿಕಪರತ್ವವನ್ನು ಅಂಗೀಕರಿಸಿದರೆ ಶ್ರುತಿಯನ್ನೇ ಅತತ್ವಾವೇದಕವಾದ್ದರಿಂದ ಅಪ್ರಾಮಾಣವೆಂದು ಹೇಳಿದಂತಾಗುತ್ತದೆ. ಆದ್ದರಿಂದ 'ಕಿಂ ಸ್ವಿತ್' ಎಂಬ ಶ್ರುತಿಯೂ ಕೂಡ ಸಾಧನ, ಅಧಿಷ್ಠಾನ ಮೊದಲಾದವುಗಳು ಪ್ರಳಯಕಾಲದಲ್ಲಿ ಸ್ವತಂತ್ರವಾಗಿ ಇರಲಿಲ್ಲ ಎಂದೇ ಹೇಳುತ್ತದೆ ಎಂದು ಸಿದ್ಧವಾಯಿತು.

## ಬ್ರಹ್ಮಸೂತ್ರ

### 'ಅಸದ್ವ್ಯಪದೇಶಾತ್' ಇತ್ಯಾದಿ ಸೂತ್ರದ ವ್ಯಾಖ್ಯಾನ

**ब्रह्मसूत्रम् – असद्व्यपदेशान्नेति चेन्न धर्मान्तरेण वाक्यशेषात् ॥**

ಪ್ರಳಯಕಾಲದಲ್ಲಿ ಯಾವುದೇ ಪದಾರ್ಥಗಳೂ ಕೂಡ ಇರಲು ಸಾಧ್ಯವಿಲ್ಲ. ಏಕೆಂದರೆ 'ನಾಸದಾಸೀತ್' ಎಂಬ ಶ್ರುತಿಯು ಏನೂ ಇರಲಿಲ್ಲವೆಂದು ತಿಳಿಸುತ್ತಿದೆ. ಹೀಗಿರುವಾಗ ಅಸ್ವತಂತ್ರಸಾಧನಗಳು ಇದ್ದವು ಎಂದು ಹೇಗೆ ಹೇಳುತ್ತೀರಿ. ಇದು ತಪ್ಪು. ಏಕೆಂದರೆ 'ನಾಸದಾಸೀತ್' ಎಂಬ ಶ್ರುತಿಯ ಅಭಿಪ್ರಾಯ ಸ್ವತಂತ್ರ ಸಾಧನಗಳು ಇರಲಿಲ್ಲ ಎಂದಷ್ಟೇ ಹೊರತು ಅಸ್ವತಂತ್ರ ಸಾಧನಗಳು ಇರಲಿಲ್ಲ ಎಂದಲ್ಲ. ಏಕೆಂದರೆ ಇದೇ ಶ್ರುತಿಯ ಮುಂದಿನ ವಾಕ್ಯದಲ್ಲಿ, ತಮ ಆಸೀತ್ = ಪ್ರಕೃತಿಯು ಪ್ರಳಯಕಾಲದಲ್ಲಿ ಇತ್ತು ಎಂದು ಹೇಳಲಾಗಿದೆ.

ಅರ್ಥ -- ಅಸದ್ವ್ಯಪದೇಶಾತ್= 'ನಾಸದಾಸೀತ್' ಎಂಬ ಶ್ರುತಿಯು ಪ್ರಳಯಕಾಲದಲ್ಲಿ ಯಾವುದೇ ಪದಾರ್ಥಗಳು ಇರಲಿಲ್ಲ ಎಂದು ಹೇಳುತ್ತಿರುವುದರಿಂದ ನೀರು ಮೊದಲಾದ ಪದಾರ್ಥಗಳಿದ್ದವು ಎಂದು ಹೇಳುವುದು ಅಯುಕ್ತವಲ್ಲವೇ ? ಇತಿ ಚೇನ್ನ = ಇದು ತಪ್ಪು. ಏಕೆಂದರೆ ಆ ನಿಷೇಧವು ಧರ್ಮಾಂತರೇಣ = ಅಸ್ವಾತಂತ್ಯ ಮೊದಲಾದ ಧರ್ಮದ ವಿಶೇಷದಿಂದ ಯುಕ್ತವಾಗುತ್ತದೆ. ಅಂದರೆ ಸ್ವತಂತ್ರವಾಗಿ ಪ್ರಳಯಕಾಲದಲ್ಲಿ ಇರುವುದಿಲ್ಲ ಎಂಬರ್ಥದಲ್ಲಿ ಪರ್ಯವಸಾನಗೊಳ್ಳುತ್ತದೆ. ಏಕೆಂದರೆ ಇದೇ ಶ್ರುತಿಯ ವಾಕ್ಯಶೇಷಾತ್ = 'ತಮ ಆಸೀತ್' ಎಂಬ ಮುಂದಿನ ಭಾಗದಲ್ಲಿ ಪ್ರಕೃತಿ ಮೊದಲಾದವುಗಳ ಅಸ್ತಿತ್ವವನ್ನು ಒಪ್ಪಲಾಗಿದೆ.

## ಬ್ರಹ್ಮಸೂತ್ರಭಾಷ್ಯ

'ನಾಸದಾಸೀತ್' ಎಂಬ ಶ್ರುತ್ಯರ್ಥವೇನು ?

**ब्रह्मसूत्रभाष्यम् –।। असव्यपदेशान्नेति चेन्न धर्मान्तरेण वाक्यशेषात् ।।४।।**

**'नासदासीत्'' (ऋ. १०.१२९.१) इति सर्वस्यासत्त्वव्यपदेशान्नेति चेत् ।**

ಅನುವಾದ - 'ನಾಸದಾಸೀತ್' 'ನೋಸದಾಸೀತ್' ಇವೇ ಮೊದಲಾದ ಶ್ರುತಿಗಳು ಪ್ರಳಯಕಾಲದಲ್ಲಿ ಯಾವುದೂ ಕೂಡ ಇರಲಿಲ್ಲವೆಂದು ಹೇಳುತ್ತಿವೆ. ಹೀಗಿರುವಾಗ ಪರಮಾತ್ಮನ ಅಧೀನವಾದ ಸಾಧನೆಗಳು ಇದ್ದವೆಂದು ಹೇಗೆ ಹೇಳುತ್ತೀರಿ? ಹೀಗೆ ಆಕ್ಷೇಪ ಮಾಡಬಾರದು.

ಪ್ರತಿಪದಾರ್ಥ -- ಹಿಂದೆ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನ ಹೇಳುವ ಸೂತ್ರವನ್ನು ಉಪನ್ಯಾಸ ಮಾಡಿ ಆಕ್ಷೇಪ-ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ನಾಸದಾಸೀತ್ ನೋಸದಾಸೀತ್' ಇವೇ ಮೊದಲಾದ ಶ್ರುತಿಗಳಿಂದ ಪ್ರಳಯಕಾಲದಲ್ಲಿ, ಸರ್ವಸ್ಯಾಸತ್ವವ್ಯಪದೇಶಾತ್ = ಯಾವುದೂ ಕೂಡ ಇಲ್ಲವೆಂದು ಹೇಳಿದ್ದರಿಂದ, ನ = ಪರಮಾತ್ಮನ ಅಧೀನವಾದ ಸಾಮಗ್ರಿಗಳು ಇದ್ದವು ಎಂಬುದು ತಪ್ಪು. ಇತಿ ಚೇತ್ = ಹೀಗೆ ಆಕ್ಷೇಪ ಮಾಡಬಾರದು.

ಸ್ಥೂಲರೂಪದಿಂದ ವಸ್ತುಗಳು ಇರಲಿಲ್ಲ ಎಂದರ್ಥ

**ब्रह्मसूत्रभाष्यम् – न, अव्यक्तत्वपारतन्त्र्यादिधर्मान्तरेण हि तदुच्यते ।**

ಅನುವಾದ - ಅವ್ಯಕ್ತತ್ವ ಪರತಂತ್ರ ಮೊದಲಾದ ಬೇರೆ ಧರ್ಮಗಳಿಂದ ಆ ವಸ್ತುಗಳು ಪ್ರಳಯಕಾಲದಲ್ಲಿ ಇದ್ದವೆಂದು ತಿಳಿಯಬೇಕು.

ಪ್ರತಿಪದಾರ್ಥ -- ಸೂತ್ರದ ಪರಿಹಾರ ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಅವ್ಯಕ್ತತ್ವ ಸೂಕ್ಷ್ಮರೂಪದಲ್ಲಿರುವುದು ಪಾರತಂತ್ರ್ಯ, ಆದಿ = ಇವೇ ಮೊದಲಾದ, ಧರ್ಮಾಂತರೇಣ = ಬೇರೆ ಧರ್ಮಗಳ ಮೂಲಕವಾಗಿ, ತದುಚ್ಯತೇ = ಯಾವುದೂ ಇರಲಿಲ್ಲವೆಂದು ಹೇಳಲಾಗಿದೆ.

'ತಮ ಆಸೀತ್' ಎಂಬ ವಾಕ್ಯಶೇಷದಿಂದ ಶ್ರುತ್ಯರ್ಥ ನಿರ್ಣಯ

**ब्रह्मसूत्रभाष्यम् – 'तम आसीत्' (ऋ. १०.१२९.३) इत्यादिवाक्यशेषात् ।**

ಅನುವಾದ - ಹೀಗೆ ವ್ಯಾಖ್ಯಾನ ಮಾಡಬೇಕೆಂದರೆ ' ನಾಸದಾಸೀತ್' ಎಂಬ ಶ್ರುತಿಯ ಮುಂದಿನ ಭಾಗವು 'ತಮ ಆಸೀತ್' ಎಂಬುದಾಗಿ ಪ್ರಕೃತಿಗೆ ಅಸ್ತಿತ್ವವನ್ನು ಪ್ರತಿಪಾದನೆ ಮಾಡುತ್ತಿದೆ.

> ಪ್ರತಿಪದಾರ್ಥ -- ಬೇರೆ ಧರ್ಮದಿಂದ ಅಸತ್ವವನ್ನು ಹೇಳುವ ಅನಿವಾರ್ಯತೆ ಏನಿದೆ? ಸ್ವರೂಪತಃ ಅಸತ್ ಆದ್ದರಿಂದಲೇ ಅಸತ್ವವನ್ನು ಹೇಳಿರಬಹುದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ತಮ ಆಸೀತ್ ಇತಿ = ತಮಸ್ಸು ಇತ್ತು ಎಂಬ, ವಾಕ್ಯಶೇಷಾತ್ = ವಾಕ್ಯಶೇಷದ ಬಲದಿಂದ ಧರ್ಮಾಂತರದಿಂದಲೇ ಅಸತ್ವವನ್ನು ಹೇಳಬೇಕು.

ಪರರ ಅಪವ್ಯಾಖ್ಯಾನದ ನಿರಾಕರಣೆ

**ब्रह्मसूत्रभाष्यम् – न चान्यत्र प्रमाणमस्ति ।**

ಅನುವಾದ - ಇದಕ್ಕೆ ವಿರುದ್ಧವಾಗಿ ಅದ್ವೈತಿಗಳು ಚೇತನಾಚೇತನಾತ್ಮಕವಾದ ಪ್ರಪಂಚವು ಬ್ರಹ್ಮನಿಂದ ಅಭಿನ್ನವಾಗಿದೆ ಎಂದು ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಈ ಅರ್ಥದಲ್ಲಿ ಯಾವುದೇ ಆಧಾರವಿರುವುದಿಲ್ಲ.

> ಪ್ರತಿಪದಾರ್ಥ -- ಪರರ ಅಪವ್ಯಾಖ್ಯಾನವನ್ನು ನಿರಾಕರಣೆ ಮಾಡುತ್ತಿದ್ದಾರೆ. ಅನ್ಯತ್ರ = ಚೇತನಾಚೇತನಾತ್ಮಕವಾದ ಪ್ರಪಂಚವು ಬ್ರಹ್ಮನಿಗಿಂತ ಅಭಿನ್ನವಾಗಿದೆ ಎಂಬ ವಿಷಯದಲ್ಲಿ, ಪ್ರಮಾಣಂ = ಯಾವುದೇ ಬಗೆಯ ಆಧಾರವು, ನಚ ಅಸ್ತಿ = ಇರುವುದೇ ಇಲ್ಲ.

'ಅಜ್ಯೋ ಹ್ಯೇಕಃ' ಇತ್ಯಾದಿ ಶ್ರುತ್ಯರ್ಥ

**ब्रह्मसूत्रभाष्यम् – 'अजो ह्येको जुषमाणोऽनुशेते जहात्येनां भुक्तभोगामजोऽन्यः ।'**
**(महाना. १०.५.)**

ಅನುವಾದ - ಒಬ್ಬನೇ ಜೀವನು ಜಡಪ್ರಕೃತಿಯನ್ನು ಅನುಭವಿಸುತ್ತಾ ಸಂಸಾರದಲ್ಲಿ ಮುಳುಗಿದ್ದಾನೆ. ಮತ್ತೊಬ್ಬನು ಜಡಪ್ರಕೃತಿಯನ್ನು ಅನುಭವಿಸಿ ಬಿಟ್ಟಿದ್ದಾನೆ.

ಪ್ರತಿಪದಾರ್ಥ -- ಹಿಂದೆ ಹೇಳಿದ್ದನ್ನು ಉಪಪಾದನೆ ಮಾಡಲು ನಿರವಕಾಶ ಪ್ರಮಾಣವನ್ನು ಹೇಳುತ್ತಿದ್ದಾರೆ. ಏಕ ಅಜಃ = ಒಬ್ಬ ಜೀವನು, ಜುಷಮಾಣಃ = ಜಡಪ್ರಕೃತಿಯನ್ನು ಅನುಭವಿಸುತ್ತಾ, ಅನುಶೇತೇ = ಸಂಸಾರದಲ್ಲಿ ಮುಳುಗಿದ್ದಾನೆ. ಅನ್ಯಃ ಅಜಃ = ಜನನ ಮರಣ ರಹಿತನಾದ ಮತ್ತೊಬ್ಬ ಜೀವನು, ಭುಕ್ತಭೋಗಾಂ = ಜಡಪ್ರಕೃತಿಯನ್ನು ಅನುಭವಿಸಿ, ಜಹಾತಿ = ಬಿಟ್ಟಿರುತ್ತಾನೆ. ಹೀಗೆ ಈ ಶ್ರುತಿಯು ಸಂಸಾರಿಜೀವರಿಗೂ ಮುಕ್ತಜೀವರಿಗೂ ಭೇದವನ್ನು ಹೇಳುತ್ತಿದೆ.

## 'ಅನಾದ್ಯನಂತಂ' ಎಂಬ ಶ್ರುತ್ಯರ್ಥ

**ब्रह्मसूत्रभाष्यम् –**

**'अनाद्यनन्तं जगदेतदीदृक् प्रवर्तते नात्र विचार्यमस्ति ।**
**न चान्यथा क्वापि च कस्य चेदमभूत् पुरा नापि तथा भविष्यत् ॥'**

ಅನುವಾದ - ಈ ಜಗತ್ತು ಅನಾದಿಕಾಲದಿಂದ ಅನಂತಕಾಲದ ತನಕ ಒಂದೇ ರೀತಿಯಾಗಿರುತ್ತದೆ. ಇದರಲ್ಲಿ ವಿವಾದವಿಲ್ಲ. ಹಿಂದೆಯಾಗಲಿ ಮುಂದೆಯಾಗಲಿ ಯಾರೋಬ್ಬರಿಗೂ ಬೇರೆ ರೀತಿಯಾಗಿ ಕಂಡಿರುವುದಿಲ್ಲ.

ಪ್ರತಿಪದಾರ್ಥ -- ಅದ್ವೈತಿಗಳು ಹೇಳಿದ ಬ್ರಹ್ಮೈಕ್ಯಕ್ಕೆ ವಿರೋಧವನ್ನು ಹೇಳಿ ಅಚೇತನಪ್ರಪಂಚಕ್ಕೆ ಬಾಧ್ಯತ್ವರೂಪವಾದ ವಿರೋಧ-ಪ್ರಮಾಣವನ್ನು ಹೇಳುತ್ತಿದ್ದಾರೆ. ಅನಾದ್ಯನಂತಂ = ಆದಿ ಅಂತ್ಯಗಳಿಲ್ಲದ, ಈದೃಕ್ = ಇಂಥ, ಇದಂ = ಈ, ಜಗತ್ = ಜಗತ್ತು, ಕ್ವಾಪಿ ಕಸ್ಯ ಚ = ಎಂದಿಗೂ ಯಾರಿಗೂ, ಅನ್ಯಥಾ = ಮಿಥ್ಯಾಭೂತವಾಗಿ, ನಚ = ತೋರುವುದಿಲ್ಲ. ಪುರಾ = ಹಿಂದೆ, ನ ಚಾಭೂತ್ = ಹಾಗೆ ತೋರಿರುವುದಿಲ್ಲ. ನಾಪಿಭವಿಷ್ಯತ್ = ಭವಿಷ್ಯತ್ಕಾಲದಲ್ಲಿಯೂ

ಮಿಥ್ಯಾಭೂತವಾಗಿ ತೋರುವುದಿಲ್ಲ. ಅತ್ರ = ಈ ವಿಷಯದಲ್ಲಿ, ವಿಚಾರ್ಯಂ = ಚರ್ಚೆಯು, ನಾಸ್ತಿ = ಇರುವುದಿಲ್ಲ.

'ಅಸತ್ಯಮಪ್ರತಿಷ್ಠಂ ತೇ' ಎಂಬ ಗೀತೆಗೆ ಅರ್ಥ

**ब्रह्मसूत्रभाष्यम् – असत्यमप्रतिष्ठं ते जगदाहुरनीश्वरम् । (गी.१६.८.)**

ಅನುವಾದ - ಕೃಷ್ಣಪರಮಾತ್ಮನು ಗೀತೆಯಲ್ಲಿ ಅಸುರರು ಜಗತ್ತನ್ನು ಮಿಥ್ಯಾಭೂತವೆಂದು ತಿಳಿಯುತ್ತಾರೆಂದು ಹೇಳಿರುತ್ತಾನೆ.

ಪ್ರತಿಪದಾರ್ಥ -- ವಿಶ್ವಮಿಥ್ಯಾತ್ವದ ಮತವು ಅಸುರರಮತವಾದ್ದರಿಂದ ಅಯುಕ್ತವಾಗಿದೆ ಎನ್ನಲು ಗೀತಾಸ್ಮೃತಿಯನ್ನು ಪ್ರಮಾಣವಾಗಿ ನೀಡುತ್ತಿದ್ದಾರೆ. ಜಗತ್ = ಜಗತ್ತನ್ನು, ಅಸತ್ಯಂ = ಮಿಥ್ಯಾಭೂತವೆಂದು, ಅಪ್ರತಿಷ್ಠಂ = ಬಾಧ್ಯವೆಂದು, ಅನೀಶ್ವರಮ್ = ಈಶ್ವರನನ್ನು ಒಪ್ಪದವರು, ಆಹುಃ = ಹೇಳುತ್ತಾರೆ.

'ಅಸತ್ಯಮಾಹುಃ' ಇತ್ಯಾದಿ ಶ್ರುತಿಗೆ ಅರ್ಥ

**ब्रह्मसूत्रभाष्यम् –**

**'असत्यमाहुर्जगदेतदज्ञाः शक्तिं हरेर्ये न विदुः परां हि ।
यस्सत्यरूपं जगदेतदीदृक् सृष्ट्वा त्वभूत् सत्यकर्मा महात्मा ।'**

ಅನುವಾದ - ಕೆಲವರು ಈ ಜಗತ್ತನ್ನು ಮಿಥ್ಯಾಭೂತವೆಂದು ತಿಳಿಯುತ್ತಾರೆ. ಇವರು ಶ್ರೀಹರಿಯ ಮಹಿಮೆಯನ್ನು ತಿಳಿಯದ ಅಜ್ಞಾನಿಗಳು. ಪರಮಾತ್ಮನ ಅಸದೃಶವಾದ ಸೃಷ್ಟ್ಯಾದಿಸಾಮರ್ಥ್ಯವನ್ನು ಇವರು ಎಂದೂ ಕೂಡ ತಿಳಿಯಲಾರರು. ಸತ್ಯವಾದ ಈ ಜಗತ್ತನ್ನು ಸೃಷ್ಟಿಮಾಡಿ ಸತ್ಯಕರ್ಮನು ಮಹಾತ್ಮನು ಎನಿಸಿಕೊಂಡಿದ್ದಾನೆ.

ಪ್ರತಿಪದಾರ್ಥ -- ವಿಶ್ವಮಿಥ್ಯಾತ್ವವನ್ನು ಅಸುರರು ಪ್ರತಿಪಾದನೆ ಮಾಡುತ್ತಾರೆಂದು ಹೇಳಿದ್ದು ಯುಕ್ತವಾಗಿದೆ. ಏಕೆಂದರೆ ವಿಷ್ಣುವಿನ ಮಹಿಮೆಗೆ ಅದು ವಿರುದ್ಧವಾಗಿದೆಯೆಂದು ಉಪಪಾದನೆ ಮಾಡುತ್ತಿದ್ದಾರೆ. ಅಜ್ಞಾಃ = ಅಜ್ಞಾನಿಗಳು, ಏತದ್ ಜಗತ್ = ಸತ್ಯವಾದ

ಈ ಜಗತ್ತನ್ನು, ಅಸತ್ಯಂ = ಮಿಥ್ಯಾಭೂತವೆಂದು, ಆಹುಃ = ಹೇಳುತ್ತಾರೆ. ಯೇ = ಯಾವ ಮೂರ್ಖರು, ಹರೇಃ = ಶ್ರೀಹರಿಯ, ಪರಾಂ = ಉತ್ತಮವಾದ, ಶಕ್ತಿಂ = ಸಾಮರ್ಥ್ಯವನ್ನು, ನ ವಿದುಃ = ತಿಳಿಯುವುದಿಲ್ಲ. ಯಃ = ಯಾವ ಪರಮಾತ್ಮನು, ಸತ್ಯರೂಪಂ = ಸತ್ಯವಾದ, ಈದೃಗ್ = ಇಂಥ, ಜಗತ್ = ಜಗತ್ತನ್ನು, ಸೃಷ್ಟ್ವಾ = ಸೃಷ್ಟಿಮಾಡಿ, ಸತ್ಯಕರ್ಮಾ = ಸತ್ಯವಾದ ಕರ್ಮವುಳ್ಳವನೆಂದು, ಮಹಾತ್ಮಾ = ಮಹಾತ್ಮನೆಂದು, ಅಭೂತ್ = ಆಗಿರುತ್ತಾನೆ.

'ಅಥ ಹೈನಮಾಹುಃ' ಎಂಬ ಶ್ರುತಿಗೆ ಅರ್ಥ

**ब्रह्मसूत्रभाष्यम् –'अथ हैनमाहुः सत्यकर्मेति सत्यं ह्येवेदं विश्वमसौ सृजते ।' अथ हैनमाहुर्नित्यकर्मेति नित्यं ह्येवासौ कुरुते'**

ಅನುವಾದ - ಪರಮಾತ್ಮನು ಸತ್ಯವಾದ ಜಗತ್ತನ್ನು ಸೃಷ್ಟಿ ಮಾಡಿರುವುದರಿಂದ ಸತ್ಯಕರ್ಮ ಎನಿಸಿಕೊಂಡಿದ್ದಾನೆ. ನಿತ್ಯವಾಗಿಯೂ ಸೃಷ್ಟ್ಯಾದಿವ್ಯಾಪಾರದಲ್ಲಿ ತೊಡಗಿರುವುದರಿಂದ ನಿತ್ಯಕರ್ಮ ಎನಿಸಿಕೊಂಡಿದ್ದಾನೆ.

ಪ್ರತಿಪದಾರ್ಥ -- ಅಥ = ಆದ್ದರಿಂದಲೇ, ಏನಂ = ಈ ವಿಷ್ಣುವನ್ನು, ಸತ್ಯಕರ್ಮೇತಿ = ಸತ್ಯವಾದ ಕ್ರಿಯೆವುಳ್ಳವನನ್ನಾಗಿ, ಆಹುಃ = ಹೇಳುತ್ತಾರೆ. ಅಸೌ = ಈ ಶ್ರೀಹರಿಯು, ಸತ್ಯಂ = ಪರಮ ಸತ್ಯವಾದ, ಇದಂ ವಿಶ್ವಂ = ಈ ಬ್ರಹ್ಮಾಂಡವನ್ನು, ಸೃಜತೇ = ಸೃಷ್ಟಿ ಮಾಡುತ್ತಾನೆ. ಮತ್ತೊಂದು ಶ್ರುತಿಯಲ್ಲಿ ಹೀಗೆ ಹೇಳಲಾಗಿದೆ - ಅಸೌ ಹಿ = ಈ ಪರಮಾತ್ಮನು, ನಿತ್ಯಮೇವ = ನಿರಂತರವಾಗಿ, ಕರ್ಮ ಕುರುತೇ = ಸೃಷ್ಟ್ಯಾದಿಕ್ರಿಯೆಗಳಲ್ಲಿ ತೊಡಗುತ್ತಾನೆ. ಅಥ = ಆದ್ದರಿಂದ, ಏನಂ = ಇವನನ್ನು, ನಿತ್ಯಕರ್ಮಾ = ನಿತ್ಯವಾದ ಕರ್ಮವುಳ್ಳವನು, ಇತಿ = ಎಂದು, ಆಹುಃ = ಜ್ಞಾನಿ ಜನರು ಹೇಳುತ್ತಾರೆ.

'ಯಚ್ಚಿಕೇತ' ಇತ್ಯಾದಿ ಶ್ರುತಿಗೆ ಅರ್ಥ

**ब्रह्मसूत्रभाष्यम् – 'यच्चिकेत सत्यमित्तन्न मोघम्' (ऋ.१०.५५.६) इत्यादि श्रुतिस्मृतिभ्यः।**

ಅನುವಾದ - ಭಗವಂತನು ಯಾವುದನ್ನು ಸೃಷ್ಟಿ ಮಾಡುತ್ತಾನೊ ಅವೆಲ್ಲವೂ ಸತ್ಯವೇ ಆಗಿದೆ. ಮಿಥ್ಯಾಭೂತವಲ್ಲ. ಇವೇ ಮೊದಲಾದ ಶ್ರುತಿ-ಸ್ಮೃತಿಗಳಿಂದ ಅಚೇತನವಾದ ಜಗತ್ತು ಸತ್ಯಭೂತವಾಗಿದೆ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಬ್ರಹ್ಮಭಿನ್ನವಾದದ್ದು ಮಿಥ್ಯಾಭೂತವಾಗಿದೆ ಎಂದು ಹೇಳಬಾರದು.

ಪ್ರತಿಪದಾರ್ಥ -- ಮತ್ತೊಂದು ಪ್ರಮಾಣದಿಂದ ವಿಶ್ವಸತ್ವವನ್ನು ದೃಢವಾಗಿ ಸಾಧಿಸುತ್ತಿದ್ದಾರೆ. ಯಚ್ಚಿಕೀತ = ಶ್ರೀಹರಿಯು ಯಾವುದನ್ನು ಸೃಷ್ಟಿ ಮಾಡಲು ಇಚ್ಛಿಸುತ್ತಾನೊ ಅವೆಲ್ಲವೂ ಸತ್ಯವೇ ಆಗಿವೆ. ತನ್ನ ಮೋಘಮ್ = ಅದು ಎಂದೂ ವ್ಯರ್ಥವಾಗುವುದಿಲ್ಲ. ಇತ್ಯಾದಿ ಶ್ರುತಿಸ್ಮೃತಿಭ್ಯಃ = ಇವೇ ಮೊದಲಾದ ಶ್ರುತಿಸ್ಮೃತಿಗಳ ಆಧಾರದಿಂದ ಪರಮಾತ್ಮನು ಸೃಷ್ಟಿಮಾಡಿದ ಜಗತ್ತು ಸತ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ಯುಕ್ತಿಯು ಎಲ್ಲಿ ಪ್ರಮಾಣ ?

**ब्रह्मसूत्रभाष्यम् –**

**'परस्परविरोधे तु वाक्यायां यत्र युक्तता ।**
**तथैवार्थः परिज्ञेयो नावाक्या युक्तिरिष्यते ।।' इति बृहत्संहितायाम् ।।**

ಅನುವಾದ - ಎರಡು ವಾಕ್ಯಗಳಿಗೆ ಪರಸ್ಪರ ವಿರೋಧ ಬಂದರೆ ಯುಕ್ತಿಯ ಸಹಾಯದಿಂದ ಒಂದು ವಾಕ್ಯದ ಅರ್ಥವನ್ನು ನಿರ್ಧಾರ ಮಾಡಬೇಕು. ವಾಕ್ಯದ ಸಹಾಯವಿಲ್ಲದ ಕೇವಲ ಯುಕ್ತಿಯು ಪ್ರಮಾಣವೇ ಆಗುವುದಿಲ್ಲ. ಹೀಗೆ ಬೃಹತ್‌ಸಂಹಿತೆಯು ಹೇಳುತ್ತಿದೆ.

ಪ್ರತಿಪದಾರ್ಥ -- 'ಜೀವೋ ಬ್ರಹ್ಮಣೋ ನ ಭಿದ್ಯತೇ ಚೇತನತ್ವಾತ್, ಬ್ರಹ್ಮವತ್, ಪ್ರಪಂಚೋ ವಾ ಬಾಧ್ಯೋ ದೃಶ್ಯತ್ವಾಚ್ಛುಕ್ತಿರಜತವತ್' ಇವೇ ಮೊದಲಾದ ಅನುಮಾನಪ್ರಮಾಣಗಳಿಂದ ಜೀವಬ್ರಹ್ಮೈಕ್ಯವು ಪ್ರಪಂಚಕ್ಕೆ ಮಿಥ್ಯಾತ್ವವು ಸಿದ್ಧವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ವಾಕ್ಯಾನಾಂ = ಎರಡು ವೇದವಾಕ್ಯಗಳಲ್ಲಿ, ಪರಸ್ಪರ ವಿರೋಧೇ ತು = ಪರಸ್ಪರ ವಿರೋಧ ಬಂದರೆ, ಯತ್ರ = ಯಾವ ವಾಕ್ಯವಿಷಯದಲ್ಲಿ, ಯುಕ್ತತಾ = ಯುಕ್ತಿಯುಕ್ತತೆಯು, ತಥೈವ =

ಹಾಗೆಯೇ ಯುಕ್ತಿಗೆ ಅನುಗುಣವಾದ, ಅರ್ಥಃ = ಅರ್ಥವು, ಪರಿಜ್ಞೇಯಃ = ತಿಳಿಯಲ್ಪಡಬೇಕು. ಅವಾಕ್ಯಾ = ವಾಕ್ಯಕ್ಕೆ ಅನುಗುಣವಾಗದ, ಯುಕ್ತಿಃ = ಯುಕ್ತಿಯು, ನ ಇಷ್ಯತೇ = ಯೋಗ್ಯವೆನಿಸುವುದಿಲ್ಲ. ಇತಿ = ಹೀಗೆ, ಬೃಹತ್ಸಂಹಿತಾಯಾಮ್ = ಬೃಹತ್ಸಂಹಿತೆಯಲ್ಲಿ ಹೇಳಲಾಗಿದೆ.

ಆಗಮಗಳ ವಿರೋಧ ಪರಿಹಾರಕ್ಕಾಗಿ ಯುಕ್ತಿಯು ಬೇಕು

**ब्रह्मसूत्रभाष्यम् –**

**'विरुद्धवत् प्रतीयन्ते आगमा यत्र वै मिथः ।**
**तत्र दृष्टानुसारेण तेषामर्थोऽन्ववेक्ष्यते ।।' इति च ।**

ಅನುವಾದ - ಎರಡು ವೇದವಾಕ್ಯಗಳಲ್ಲಿ ವಿರುದ್ಧವಾದ ಅರ್ಥವು ಕಂಡರೆ ಪ್ರತ್ಯಕ್ಷಕ್ಕೆ ಅನುಗುಣವಾಗಿಯೇ ಅರ್ಥವನ್ನು ತಿಳಿಯಬೇಕು.

ಪ್ರತಿಪದಾರ್ಥ -- ಹಿಂದೆ ಉದಾಹರಿಸಿದ ಶ್ರುತ್ಯಾದಿಗಳು ಸತ್ಯತ್ವ ವಿಷಯದಲ್ಲಿ ಹೇಗೆ ಪ್ರಮಾಣವಾಗಿದೆಯೊ ಅದೇರೀತಿಯಾಗಿ ಪ್ರಪಂಚವು ಮಿಥ್ಯಾರೂಪವಾಗಿದೆ ಎನ್ನಲು 'ವಾಚಾರಂಭಣಂ' ಎಂಬ ಶ್ರುತಿಯು ಪ್ರಮಾಣವಾಗಲಿ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ- ಆಗಮಾಃ = ವೇದಗಳು, ಯತ್ರ = ಯಾವ ವಿಷಯದಲ್ಲಿ, ಮಿಥಃ = ಪರಸ್ಪರವಾಗಿ, ವಿರುದ್ಧವತ್ = ವಿರೋಧವುಳ್ಳವುಗಳಂತೆ, ಪ್ರತೀಯಂತೇ = ಕಾಣಿಸುತ್ತವೋ, ತತ್ರ = ಆ ವಿಷಯದಲ್ಲಿ, ದೃಷ್ಟಾನುಸಾರೇಣ = ಪ್ರತ್ಯಕ್ಷಕ್ಕೆ ಅನುಸಾರಿಯಾಗಿ, ತೇಷಾಂ = ಆ ವಾಕ್ಯಗಳಿಗೆ, ಅರ್ಥಃ = ಅರ್ಥವು, ಅನ್ವವೇಕ್ಷ್ಯತೇ = ಅಂಗೀಕರಿಸಬೇಕು.

ಕೇವಲ ಯುಕ್ತಿಗಳು ಅಪ್ರಮಾಣಗಳು

**ब्रह्मसूत्रभाष्यम् –**

**'ईशोऽनीशो जगन्मिथ्या न पूज्यो गुरुरित्यपि ।**
**इत्यादिवद्विरुद्धानि वचनान्यथ युक्तयः ।**
**प्रमाणैर्बहुभिर्ज्ञेया आभासा इति वैदिकैः ।।**

ಅನುವಾದ - ಪರಮಾತ್ಮನು ಸ್ವಾಮಿಯಲ್ಲ. ಜಗತ್ತು ಮಿಥ್ಯಾಭೂತವಾಗಿದೆ ಗುರುಗಳು ಪೂಜ್ಯರಲ್ಲ ಇವೇ ಮೊದಲಾದ ವಿರುದ್ಧವಾದ ಮಾತುಗಳು ಮತ್ತು ಯುಕ್ತಿಗಳು ಅನೇಕ ಪ್ರಮಾಣಗಳಿಂದ ವಿರುದ್ಧವಾಗಿವೆ. ಆದ್ದರಿಂದಲೇ ಅಪ್ರಮಾಣವಾಗಿವೆ. ಪರಸ್ಪರ ವಿರುದ್ಧವಾದ ಇಂಥ ಮಾತುಗಳು ಕಂಡು ಬಂದರೆ ಒಂದಕ್ಕೆ ಮಾತ್ರ ಪ್ರಾಮಾಣ್ಯವನ್ನು ಒಪ್ಪಬೇಕು.

ಪ್ರತಿಪದಾರ್ಥ -- ಈಶಃ = ಪರಮಾತ್ಮನು, ಅನೀಶಃ = ಸ್ವಾಮಿಯಲ್ಲ. ಜಗತ್ = ವಿಶ್ವವು, ಮಿಥ್ಯಾ = ಮಿಥ್ಯಾಭೂತವಾಗಿದೆ, ಗುರುರಿತ್ಯಪಿ = ಗುರುವೂ ಕೂಡ, ನ ಪೂಜ್ಯಃ = ಪೂಜ್ಯನಲ್ಲ. ಇತ್ಯಾದಿವತ್ = ಇವೇ ಮೊದಲಾದ ಮಾತಿನಂತೆ, ವಿರುದ್ಧಾನಿ = ಲೋಕವಿರುದ್ಧಗಳಾದ, ವಚನಾನಿ = ಪ್ರಮಾಣಗಳು, ಅಥ = ಮತ್ತು, ಯುಕ್ತಯಃ = ಯುಕ್ತಿಗಳು, ಬಹುಭಿಃ = ಅನೇಕ ವಿಧವಾದ, ಪ್ರಮಾಣೈಃ = ಪ್ರಮಾಣಗಳಿಂದ, ಆಭಾಸಾಃ ಇತಿ = ಪ್ರಮಾಣಾಭಾಸಗಳೆಂದು, ವೈದಿಕೈಃ = ವೇದಪ್ರಾಮಾಣ್ಯವನ್ನು ಒಪ್ಪುವರು, ಜ್ಞೇಯಾಃ = ತಿಳಿದುಕೊಳ್ಳಬೇಕು.

ಯುಕ್ತಿಗೆ ಅನುಸಾರಿಯಾಗಿ ಎಲ್ಲಿ ಅರ್ಥ ಮಾಡಬೇಕು?

**ब्रह्मसूत्रभाष्यम् –**

**वेदवेदानुसारेषु विरोधेऽन्यार्थकल्पना ।**
**अन्येषां तु विरुद्धानां विप्रलम्भोऽथवा भ्रमः ।।' इति च भागवततन्त्रे ।**

ಅನುವಾದ - ವೇದ ಹಾಗೂ ವೇದಾನುಸಾರಿಯಾದ ಪುರಾಣಗಳಲ್ಲಿ ಪರಸ್ಪರವಾಗಿ ವಿರೋಧ ಬಂದರೆ ಯುಕ್ತಿಗೆ ಅನುಸಾರಿಯಾದ ಅರ್ಥವನ್ನು ಸ್ವೀಕರಿಸಿ ಉಳಿದ ವಾಕ್ಯದ ಅರ್ಥವನ್ನು ಅದಕ್ಕೆ ಅನುಗುಣವಾಗಿ ಹೊಂದಿಸಬೇಕು. ವಿರುದ್ಧವಾದ ವಾಕ್ಯಗಳು ಮೋಸಕ್ಕಾಗಿ ಅಥವಾ ಭ್ರಾಂತಿಮೂಲಕವಾಗಿ ಪ್ರಯೋಗಿಸಿರುತ್ತಾರೆ. ಹೀಗೆ ಭಾಗವತತಂತ್ರವು ಹೇಳುತ್ತದೆ

ಪ್ರತಿಪದಾರ್ಥ -- ವೇದವೇದಾನುಸಾರೇಷು = ವೇದ ಹಾಗೂ ವೇದಾನುಸಾರಿಯಾದ ಗ್ರಂಥಗಳಲ್ಲಿ ಪರಸ್ಪರ ವಿರೋಧವು ಕಂಡು ಬಂದರೆ, ಅನ್ಯಾರ್ಥಕಲ್ಪನಾ = ವಿರೋಧವಿಲ್ಲದ ಅರ್ಥವನ್ನು ಕಲ್ಪನೆ ಮಾಡುವುದು ಯುಕ್ತವಾಗುತ್ತದೆ. ವಿರುದ್ಧಾನಾಮ್ = ಪರಸ್ಪರ ವಿರುದ್ಧವಾದ ಅರ್ಥಗಳುಳ್ಳ, ಅನ್ಯೇಷಾಂ = ವೇದವಿರುದ್ಧ-

ವಾದವುಗಳಲ್ಲಿ, ವಿಪ್ರಲಂಭಃ = ವಂಚಕತನವು ಅಥವಾ, ಭ್ರಮಃ = ಅಜ್ಞಾನಮೂಲಕತ್ವವು ಇರುತ್ತದೆ. ಇತಿ ಚ = ಹೀಗೆ, ಭಾಗವತತಂತ್ರೇ = ಭಾಗವತತಂತ್ರದಲ್ಲಿ ಹೇಳಲಾಗಿದೆ.

### ಪ್ರಮಾಣಗಳಲ್ಲಿ ತಾರತಮ್ಯ

**ब्रह्मसूत्रभाष्यम् –**

**'शास्त्रार्थयुक्तोऽनुभवः प्रमाणं तूत्तमं मतम् ।**
**मध्यमं त्वागमो ज्ञेयः प्रत्यक्षमधमं स्मृतम् ।।**
**प्रत्यक्षयोरागमयोर्विरोधे निश्चयाय तु ।**
**अनुमाद्या न स्वतन्त्राः प्रमाणपदवीं ययुः ।।'**

**इति पुरुषोत्तमतन्त्रे ।।९।।**

ಅನುವಾದ - ಶಾಸ್ತ್ರಾರ್ಥದಿಂದ ಕೂಡಿರುವ ಅನುಭವವು ಉತ್ತಮಪ್ರಮಾಣ ಎನಿಸುತ್ತದೆ. ಅನುಪ್ರಮಾಣವಾದ ಆಗಮವು ಮಧ್ಯಮ ಪ್ರಮಾಣವಾಗಿದೆ. ಪ್ರತ್ಯಕ್ಷವು ಅಧಮಪ್ರಮಾಣವಾಗಿದೆ. ಎರಡು ಪ್ರತ್ಯಕ್ಷಗಳಲ್ಲಿ ಅಥವಾ ಎರಡು ವಾಕ್ಯಗಳಲ್ಲಿ ಪರಸ್ಪರವಿರೋಧ ಬಂದರೆ ಅದರ ನಿರ್ಣಯಕ್ಕಾಗಿ ಅನುಮಾನವನ್ನು ಅನುಸರಿಸಬೇಕು. ಅನುಮಾನವು ಸ್ವತಂತ್ರವಾಗಿ ಎಂದೂ ಪ್ರಮಾಣವಾಗುವುದಿಲ್ಲ. ಹೀಗೆ ಪುರುಷೋತ್ತಮತಂತ್ರದಲ್ಲಿ ಹೇಳಲಾಗಿದೆ.

ಪ್ರತಿಪದಾರ್ಥ -- ಶಾಸ್ತ್ರಾರ್ಥಯುಕ್ತಾನುಭವಃ = ಶಾಸ್ತ್ರದ ಆಧಾರದಲ್ಲಿರುವ ಅನುಭವವು, ಉತ್ತಮಂ ಪ್ರಮಾಣಂ = ಉತ್ತಮ ಪ್ರಮಾಣವಿದ್ದು, ಮತಂ = ತಿಳಿಯಬೇಕು, ಆಗಮಃ = ಆಗಮವು, ಮಧ್ಯಮಂ = ಮಧ್ಯಮಪ್ರಮಾಣವೆಂದು, ಜ್ಞೇಯಃ = ತಿಳಿಯಬೇಕು. ಪ್ರತ್ಯಕ್ಷಂ = ಪ್ರತ್ಯಕ್ಷವು, ಅಧಮಂ = ಅಧಮ ಪ್ರಮಾಣವೆಂದು, ಸ್ಮೃತಂ = ಹೇಳಲ್ಪಟ್ಟಿದೆ.

ಪ್ರತ್ಯಕ್ಷಯೋಃ = ಎರಡು ಪ್ರತ್ಯಕ್ಷಗಳಿಗೆ, ಆಗಮಯೋಃ = ಎರಡು ಆಗಮ ವಾಕ್ಯಗಳಿಗೆ, ವಿರೋಧೇಃ = ವಿರೋಧವು ಬಂದರೆ, ನಿಶ್ಚಯಾಯ ತು = ಅವುಗಳ ನಿಶ್ಚಯಕ್ಕೋಸ್ಕರ, ಅನುಮಾದ್ಯಾ = ಅನುಮಾನವು

ಸಹಾಯ ಮಾಡುತ್ತದೆ. ಈ ಅನುಮಾನಗಳು, ಸ್ವತಂತ್ರಾಃ = ಸ್ವತಂತ್ರವಾಗಿ, ಪ್ರಮಾಣಪದವೀಂ = ಪ್ರಾಮಾಣ್ಯವನ್ನು, ನ ಯಯುಃ = ಎಂದಿಗೂ ಹೊಂದುವುದಿಲ್ಲ. ಇತಿ ಚ = ಹೀಗೆ, ಪುರುಷೋತ್ತಮತಂತ್ರೇ = ಪುರುಷೋತ್ತಮತಂತ್ರದಲ್ಲಿ ಹೇಳಲಾಗಿದೆ.

### ಸತ್ತರ್ಕದೀಪಾವಳಿ

### ಪ್ರಕೃತ್ಯಾದಿಗಳನ್ನು ಅಪೇಕ್ಷಿಸಿಯೇ ಸೃಷ್ಟಿ ಮಾಡುತ್ತಾನೆ

**सत्तर्कदीपावलिः – न च 'नासदासीन्नो सदासीत् तदानीम्' इति श्रुत्या कालादिकस्याप्यभावः प्रलयकालीनः प्रतिपाद्यत इति वाच्यम् । सच्छब्दस्य पृथिव्यादित्रयविषयत्वेन असच्छब्दस्य वाय्वन्तरिक्षविषयत्वेन सावकाशत्वात्। पृथिव्यादीनामपि सूक्ष्मरूपस्य प्रलयेऽभावो न वक्तुं शक्यते। 'तम असीत् तमसा गूळ्हमग्रेऽप्रकेतं सलिलं सर्वमा इदम्' इति वाक्यशेषविरोधापत्तेः । तमोगूळ्हत्वेन परतन्त्रत्वेन सतो अशक्तत्वेन नासीदिति वक्तुं शक्यत्वात् । न च प्रकृत्यादिकं विना जगत्सृष्टिः, इत्यत्र किञ्चित् प्रमाणमस्तीत्याह – न चेति ।।**

'ನಾಸದಾಸೀನ್ನೋಸದಾಸೀತ್ ತದಾನೀಮ್' ಎಂಬ ಶ್ರುತಿಯಿಂದ ಪ್ರಳಯಕಾಲದಲ್ಲಿ ಕಾಲಾದಿಗಳೂ ಕೂಡ ಇರುವುದಿಲ್ಲ ಎಂದು ಶ್ರುತಿಯು ಹೇಳುತ್ತಿದೆ ಅಲ್ಲವೇ ? ಹೀಗೆ ಪ್ರಶ್ನಿಸಬಾರದು. ಈ ಶ್ರುತಿಯಲ್ಲಿರುವ 'ಸತ್' ಎಂಬ ಶಬ್ದವು ಪೃಥಿವ್ಯಾದಿತ್ರಯಗಳನ್ನು ಹೇಳುತ್ತಿದೆ. ಅಸತ್ ಶಬ್ದವು ವಾಯು ಮತ್ತು ಅಂತರಿಕ್ಷವನ್ನು ಹೇಳುತ್ತಿವೆ. ಹೀಗೆ ಶ್ರುತಿಯು ಸಾವಕಾಶವಾಗಿರುವುದರಿಂದ ಏನನ್ನೂ ಕೂಡ ಇಲ್ಲವೆಂದು ಇದಕ್ಕೆ ವ್ಯಾಖ್ಯಾನ ಮಾಡಬಾರದು. ಪೃಥಿವ್ಯಾದಿಗಳೂ ಕೂಡ ಸೂಕ್ಷ್ಮರೂಪದಿಂದ ಪ್ರಳಯಕಾಲದಲ್ಲಿ ಇದ್ದೇ ಇರುತ್ತವೆ. ಸೂಕ್ಷ್ಮರೂಪದಿಂದ ಇರುವುದಿಲ್ಲವೆಂದು ಹೇಳಬಾರದು. ಏಕೆಂದರೆ 'ತಮ ಆಸೀತ್ ತಮಸಾ

ಗೂಳ್ಹಮಗ್ರೇऽಪ್ರಕೇತಂ ಸಲಿಲಂ ಸರ್ವಮಾ ಇದಮ್' ಪ್ರಳಯಕಾಲದಲ್ಲಿ ನೀರು ಇತ್ತು. ಸೃಷ್ಟಿಯ ಪೂರ್ವದಲ್ಲಿ ಅಪರಿಮಿತವಾದ ನೀರಿತ್ತು. ಇವೆಲ್ಲವೂ ಮುಚ್ಚಲ್ಪಟ್ಟಿತ್ತು ಎಂಬುದಾಗಿ ವಾಕ್ಯಶೇಷವು ಹೇಳುತ್ತಿದೆ. ನೀರಿನಿಂದ ಮುಚ್ಚಲ್ಪಟ್ಟಿದ್ದರಿಂದ ಮತ್ತು ಪರತಂತ್ರವಾಗಿರುವುದರಿಂದ ಸತ್‌ಪದಾರ್ಥವು ಸೃಷ್ಟಿಯನ್ನು ಸ್ವತಂತ್ರವಾಗಿ ಮಾಡಲು ಅಶಕ್ತವಾಗಿದೆ. ಅದಕ್ಕೋಸ್ಕರ ಶ್ರುತಿಯು 'ನಾಸೀತ್' ಎಂದು ಹೇಳುತ್ತಿದೆ ಹೊರತು, ಸರ್ವಥಾ ಪದಾರ್ಥವನ್ನೇ ಇಲ್ಲವೆಂದು ಹೇಳುತ್ತಿಲ್ಲ.

ಪ್ರಕೃತ್ಯಾದಿಗಳ ಅಪೇಕ್ಷೆಯಿಲ್ಲದೇ ಜಗತ್‌ಸೃಷ್ಟಿಯನ್ನು ಪರಮಾತ್ಮನು ಮಾಡುತ್ತಾನೆನ್ನಲು ಯಾವುದೇ ಪ್ರಮಾಣವಿಲ್ಲ ಎಂಬುದಾಗಿ 'ನಚ' ಇತ್ಯಾದಿ ಗ್ರಂಥದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

## 'ಅಜಾಮೇಕಾಂ' ಇತ್ಯಾದಿ ಶ್ರುತ್ಯರ್ಥ

**सत्तर्कदीपावळिः – प्रलयेऽपि प्रकृतिपुरुषसद्भावे प्रमाणमाह – अजो ह्येक इति ।। 'अजामेकां लोहितशुक्लकृष्णाम्' इत्यादिनोक्तां न जायत इत्यजां प्रकृतिमेको न जायत इत्यजो जीवो जुषमाणोऽनुशेते । प्रलये जहात्येनां भुक्तभोगामजोऽन्यो मुच्यमान इत्यर्थः । एतदेव प्रमाणान्तरैः द्रढयति – अनाद्यनन्तमित्यादिना ।।**

ಪ್ರಳಯಕಾಲದಲ್ಲೂ ಕೂಡ ಪ್ರಕೃತಿ ಹಾಗೂ ಪುರುಷರು ಇರುತ್ತಾರೆನ್ನಲು ಪ್ರಮಾಣವನ್ನು 'ಅಜೋ ಹ್ಯೇಕಃ' ಎಂಬುದಾಗಿ ಉಲ್ಲೇಖ ಮಾಡುತ್ತಿದ್ದಾರೆ. 'ಅಜಾಮೇಕಾಂ ಲೋಹಿತಶುಕ್ಲ-ಕೃಷ್ಣಾಮ್' ಎಂಬ ಶ್ರುತಿಗೆ ಹೀಗೆ ಅರ್ಥ - 'ನ ಜಾಯತೇ' ಎಂಬ ನಿಷ್ಪತ್ತಿಯಿಂದ ಪ್ರಕೃತಿ ಎಂಬರ್ಥವನ್ನು ವಿವಕ್ಷಿಸಬೇಕು. 'ಏಕೋ ನ ಜಾಯತೇ' ಸಂಸಾರಿಯಾದ ಒಬ್ಬ ಜೀವನು ಅನುಭವಿಸುತ್ತಾ ಅನುಸರಿಸುತ್ತಾನೆ. ಮತ್ತೊಬ್ಬ ಅನಾದಿಯಾದ ಮುಕ್ತಜೀವನು ತನ್ನ ಸುಖ-ದುಃಖಗಳ ಅನುಭವಕ್ಕೆ ಕಾರಣವಾಗಿರುವ ಈ ಪ್ರಕೃತಿಯನ್ನು ಬಿಡುತ್ತಾನೆ ಎಂಬುದು ಈ ಶ್ರುತಿಯ ಅರ್ಥ. ಇದನ್ನೇ ಮತ್ತೊಂದು ಪ್ರಮಾಣದಿಂದ 'ಅನಾದ್ಯನಂತಮ್' ಇತ್ಯಾದಿಯಾಗಿ ದೃಢಪಡಿಸುತ್ತಿದ್ದಾರೆ.

ವಿಶ್ವಮಿಥ್ಯಾತ್ವಮತವು ಅಸುರರ ಮತ

**सत्तर्कदीपावलिः** – व्रीह्यादिवत् प्रवाहरूपेण वर्तमानत्वात् 'ईदृग्' इत्युक्तं जगत् रज्जुसर्पवत् कापि बाधितं नाभूत् पुरा न च भविष्यति उत्तरत्रेत्यर्थः । 'प्रवृत्तिं च निवृत्तिं च जना न विदुरासुराः । असत्यमप्रतिष्ठम्' इत्यादिना विश्वमिथ्यात्वमतम् आसुरमिति दर्शयति । 'असत्यम्' इति विश्वमिथ्यात्वमतस्यासुरत्वं युक्तं विष्णुमाहात्म्यविरुद्धत्वात् इत्येतदुच्यते – असत्यमाहुरिति।।

ವ್ರೀಹ್ಯಾದಿಗಳು ಹೇಗೆ ಪ್ರವಾಹತಃ ನಿತ್ಯವಾಗಿದೆಯೋ, ಅದರಂತೆ ಈ ಜಗತ್ತು ಅನಾದಿ ಅನಂತಕಾಲದ ತನಕ ಇದೇ ರೀತಿಯಾಗಿ ಇರುತ್ತದೆ. ಆದರೆ ಕೆಲವು ವಿಪರೀತಜ್ಞಾನಿಗಳು ಈ ಜಗತ್ತು ರಜ್ಜುಸರ್ಪದಂತೆ ಬಾಧಿತ ಎನ್ನುತ್ತಾರೆ. ಹಿಂದೆ ಈ ಜಗತ್ತು ಇರಲಿಲ್ಲ. ಮುಂದೂ ಕೂಡ ಈ ಜಗತ್ತು ಇರುವುದಿಲ್ಲ. ವರ್ತಮಾನಕಾಲದಷ್ಟೇ ಗೋಚರವಾಗುತ್ತದೆ ಎನ್ನುತ್ತಾರೆ. ಇವರ ಈ ವಿಚಾರವು ಅಸಾಧುವಾಗಿದೆ. ಏಕೆಂದರೆ 'ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ' 'ಅಸತ್ಯಮಪ್ರತಿಷ್ಠಂತೇ ಜಗದಾಹುಃ ಅನೀಶ್ವರಮ್' ಎಂಬದಾಗಿ ಭಗವದ್ಗೀತೆಯಲ್ಲಿ ಹೇಳಿದಂತೆ ವಿಶ್ವಮಿಥ್ಯಾತ್ವಮತವು ಅಸುರರ ಮತವಾಗಿದೆ. 'ಅಸತ್ಯಮ್' ಎಂಬ ಪ್ರಮಾಣಶ್ಲೋಕವನ್ನು ಉದಾಹರಿಸುವ ಮೂಲಕ ಈ ವಿಶ್ವಮಿಥ್ಯಾತ್ವಮತವು ಅಸುರರ ಮತವಾಗಿರುವುದೇ ಯುಕ್ತವಾಗುತ್ತದೆ. ಏಕೆಂದರೆ ವಿಷ್ಣುವಿನ ಮತಕ್ಕೆ ಇದು ವಿರುದ್ಧವಾಗಿದೆ. ಈ ವಿಷಯವನ್ನು 'ಅಸತ್ಯಮಾಹುಃ' ಎಂಬುದಾಗಿ ಭಾಷ್ಯದಲ್ಲಿ ಹೇಳಿದ್ದಾರೆ.

ವಿಶ್ವಸತ್ಯತ್ವದ ಸಮರ್ಥನೆ

**सत्तर्कदीपावलिः** – पुनरपि विश्वसत्यत्वं श्रुत्या द्रढीकरोति – यच्चिकेतेति ।। 'कित करणे' इत्यस्माद्धातो, यद्विश्वमिन्द्रादिनामा हरिश्चिकेत चकारेति व्याख्येयम् । तत्र मोघं तत्र मिथ्या इत्यर्थः । 'नेह नानास्ति किञ्चन' इत्येतद्वाक्यविरोधम् उक्तवाक्यानाम् आशङ्क्य परिहरति – परस्परविरोध इत्यादिना ।।

ವಿಶ್ವಸತ್ಯತ್ವ ವಿಚಾರವು ಮತ್ತೊಂದು ಕಾರಣದಿಂದ ದೃಢಪಡಿಸಲು 'ಯಚ್ಚಿಕೇತ' ಎಂಬ ಶ್ರುತಿಯನ್ನು ಉಲ್ಲೇಖ ಮಾಡುತ್ತಿದ್ದಾರೆ. 'ಕಿತ ಕರಣೇ' ಎಂಬ ಧಾತುವಿನಿಂದ 'ಚಿಕೇತ' ಎಂಬ ಶಬ್ದವು ನಿಷ್ಪನ್ನವಾಗಿದೆ. ಇದಕ್ಕೆ ಚಕಾರ = ಮಾಡಿದನು ಎಂದರ್ಥ. ಯಾವ ಪರಮಾತ್ಮನು ಈ ಸತ್ಯಭೂತವಾದ ಜಗತ್ತನ್ನು ಇಂದ್ರ ಮೊದಲಾದವರ ಹೆಸರುಗಳನ್ನು ಸೃಷ್ಟಿ ಮಾಡಿದನು ಎಂಬುದಾಗಿ ಈ ಶ್ರುತಿಗೆ ವ್ಯಾಖ್ಯಾನ ಮಾಡಬೇಕು. ಇಂಥ ಸೃಷ್ಟಿ ಮಾಡಿದ ಪದಾರ್ಥವು 'ನ ಮೋಘಂ' ಸುಳ್ಳಾಗಿರುವುದಿಲ್ಲ.

'ನೇಹ ನಾನಾಸ್ತಿ ಕಿಂಚನ' ಎಂಬ ವಾಕ್ಯದಿಂದ ವಿಶ್ವಮಿಥ್ಯಾತ್ವವು ತಿಳಿಯುತ್ತಿದೆ. ಆದ್ದರಿಂದ 'ಯಚ್ಚಿಕೇತ' ಎಂಬ ಶ್ರುತಿಗೆ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯಿಂದ ವಿರೋಧ ಬರುತ್ತದಲ್ಲವೇ? ಎಂಬುದಾಗಿ ಆಶಂಕಿಸಿ ಪರಿಹಾರವನ್ನು ನೀಡಲು 'ಪರಸ್ಪರವಿರೋಧೇ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

### 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತ್ಯರ್ಥ

**सत्तर्कदीपावलिः – यथा 'इह भूतले घटो नास्ति' इत्यनेनापि जीवादिभेदो निषिद्ध्यते । प्रत्यक्षादिप्रमाणविरोधात् 'इह' इति पदवैयर्थ्याच्च 'नाना नास्ति' इत्येतावता पूर्णत्वात् । नच सर्वभेदो निषेद्धुं शक्यते । कुत्रापि सर्वभेदानिषेधाद्भेदस्य निषेद्धुमशक्यत्वात् तस्यापि निषेधे तन्निषेधाद् भेदः तन्निषेधाद् भेदः इत्यनवस्था स्यात् । सर्वभेदतन्निषेधयोर्भेदाभावे सर्वभेदनिषेध इति वक्तुमशक्यत्वाच्च । अतो यदेवेह तदमुत्रेति प्रस्तुते परमात्मनि 'नेह नानास्ति' इति नानात्वं निषिद्ध्यते । तत्तल्लोकभेदेन नानेक परमेश्वरः किं त्वेक एव - इत्यर्थः ।**

ಯಾವರೀತಿಯಾಗಿ 'ಇಹ ಭೂತಲೇ ಘಟೋ ನಾಸ್ತಿ' 'ಈ ಭೂತಲದಲ್ಲಿ ಘಟವು ಇರುವುದಿಲ್ಲ' ಎಂಬ ವಾಕ್ಯದಿಂದ ಜೀವಾದಿಭೇದವನ್ನು ನಿಷೇಧ ಮಾಡಿದಂತೆ ಆಗುವುದಿಲ್ಲವೋ, ಅದರಂತೆ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯಿಂದಲೂ ಕೂಡ ಜೀವಾದಿಭೇದವನ್ನು ನಿಷೇಧ ಮಾಡಿದಂತೆ ಆಗುವುದಿಲ್ಲ. ಮತ್ತು ಪ್ರತ್ಯಕ್ಷಾದಿ ಪ್ರಮಾಣವಿರೋಧ ಬರುವುದರಿಂದ

'ಇಹ' ಎಂಬ ಪದವು ಇಲ್ಲಿ ವ್ಯರ್ಥವಾಗುತ್ತದೆ. 'ನಾನಾ ನಾಸ್ತಿ' ಎಂದಷ್ಟೇ ಹೇಳಿದರೂ ಅದ್ವೈತಿಗಳ ಉದ್ದೇಶವು ಸಿದ್ಧವಾಗುತ್ತದೆ. ಸಕಲ ಭೇದವನ್ನು ನಿಷೇಧ ಮಾಡಲು ಸಾಧ್ಯವೇ ಇಲ್ಲ. ಎಲ್ಲಿಯೂ ಕೂಡ ಸಕಲಭೇದವನ್ನು ನಿಷೇಧ ಮಾಡಿದ್ದಕ್ಕೆ ದೃಷ್ಟಾಂತವಿಲ್ಲ. ಹಾಗೇನಾದರೂ ಭೇದವನ್ನು ನಿಷೇಧ ಮಾಡಿದರೆ ತನ್ನನ್ನೂ ಕೂಡ ನಿಷೇಧ ಮಾಡಬೇಕಾಗುತ್ತದೆ. ಆಗ ತನ್ನ ನಿಷೇಧದಿಂದ ಸಕಲ ಭೇದವು ಸಿದ್ಧವಾಗುತ್ತದೆ. ತನ್ನ ನಿಷೇಧದಿಂದ ಭೇದವು ಸಿದ್ಧವಾಗುತ್ತದೆ. ಪುನಃ ಅದರ ನಿಷೇಧದಿಂದ ಭೇದವು ಸಿದ್ಧವಾಗುತ್ತದೆ. ಹೀಗೆ ಅನವಸ್ಥಾದೋಷವು ಬರುತ್ತದೆ. ಇನ್ನು ಸರ್ವಭೇದಕ್ಕೂ ತನ್ನ ನಿಷೇಧಗಳಿಗೂ ಭೇದವಿಲ್ಲವೆಂದು ಹೇಳಿದರೆ ಆಗ ಸರ್ವಭೇದನಿಷೇಧವನ್ನು ಮಾಡುತ್ತೇವೆ ಎಂದು ಹೇಳಿದ್ದೇ ಕೂಡುವುದಿಲ್ಲ. ಇಲ್ಲಿಯಂತೆ ಪರಮಾತ್ಮನ ವಿಷಯದಲ್ಲೂ ಕೂಡ ಭೇದವು ಪ್ರಾಪ್ತವಾದರೆ ಅದನ್ನು ಈ ಶ್ರುತಿಯು ನಿಷೇಧ ಮಾಡುತ್ತಿದೆ ಎಂದು ಹೇಳಬೇಕು. ಲೋಕಭೇದದಿಂದ ಪರಮಾತ್ಮನಲ್ಲಿ ಭೇದವು ಬರುವುದಿಲ್ಲ. ಮತ್ತು ಲೋಕದಲ್ಲಿರುವ ಭೇದದಂತೆ ಪರಮಾತ್ಮನಲ್ಲಿಯೂ ಕೂಡ ಯಾವುದೇ ಭೇದವಿಲ್ಲ ಎಂಬುದು ಈ ಶ್ರುತಿಯ ಅರ್ಥ.

### 'ನಾವಾಕ್ಯಾ ಯುಕ್ತಿರಿಷ್ಯತೇ' ಎಂಬುದರ ವಿವರಣೆ

**सत्तर्कदीपावळिः – यथा 'मे माता वन्ध्या' इतिवद् 'ईशोनीशः' इत्येतद् व्याहतम्, एवं 'जगन्मिथ्या' इत्येतदपि व्याहतमेव । जगन्मिथ्येतद् वाक्यार्थयोर्जगदन्तर्भूतत्वेन मिथ्यात्वापातात् । मिथ्यात्वमिथ्यात्वे जगत्सत्यत्वापातादित्यर्थः । 'नावाक्या युक्तिरिष्यते' इति यदुक्तं तत्प्रपञ्चयति – प्रत्यक्षयोरिति ॥**

ಹೇಗೆ 'ಮೇ ಮಾತಾ ವಂಧ್ಯಾ' ಎಂಬ ವಾಕ್ಯವು ಸ್ವವ್ಯಾಹತವಾಗಿದೆಯೋ, ಅದರಂತೆ 'ಈಶೋಽನೀಶಃ' ಎಂಬ ವಾಕ್ಯವೂ ಕೂಡ ಸ್ವವ್ಯಾಹತವಾಗಿದೆ. 'ಜಗನ್ಮಿಥ್ಯಾ' ಎಂಬ ವಾಕ್ಯವೂ ಕೂಡ ಸ್ವವ್ಯಾಹತವಾಗಿದೆ. ಏಕೆಂದರೆ 'ಜಗನ್ಮಿಥ್ಯಾ' ಎಂಬ ವಾಕ್ಯದ ಅರ್ಥವೂ ಕೂಡ ಜಗತ್ತಿನಲ್ಲಿ ಅಂತರ್ಭೂತವಾಗಿದೆ. ಆದ್ದರಿಂದ ಇದಕ್ಕೂ ಮಿಥ್ಯಾತ್ವವು ಪ್ರಾಪ್ತವಾಗುತ್ತದೆ. ಮಿಥ್ಯಾಭೂತವಾದದ್ದು ಮಿಥ್ಯಾ ಎಂದು ಹೇಳಿದರೆ, ಜಗತ್ತು ಸತ್ಯವೆಂದು ಹೇಳಿದಂತಾಯಿತು.

'ನಾವಾಕ್ಯಾಯುಕ್ತಿರಿಷ್ಯತೇ' ಎಂದು ಹೇಳಿದ್ದನ್ನೇ ವಿವರಣೆ ಮಾಡಲು 'ಪ್ರತ್ಯಕ್ಷಯೋಃ' ಎಂಬ ಭಾಷ್ಯವಾಕ್ಯವು ಹೊರಟಿದೆ.

### ತತ್ವಪ್ರದೀಪ

### 'ನಾಸದಾಸೀತ್' ಎಂಬ ಶ್ರುತಿಗೆ ಸರ್ವಾಸತ್ವವು ಉದ್ದಿಷ್ಟವಲ್ಲ

**तत्वप्रदीपः – असद्व्यपदेशात् नेति चेन्न धर्मान्तरेण वाक्यशेषात् । 'नासदासीत्' इत्यादि सर्वासत्त्वव्यपदेशान्न किञ्चित्साधनमस्तीति चेन्न । अव्यक्तत्वपारतन्त्र्या वृतत्त्वादि धर्मान्तरविवक्षया तदसत्वमुच्यते । न सर्वाभावविवक्षया । वाक्यशेषे तमः सलिलाद्यभिधानात् । 'तस्माद्धन्यत्र परः किञ्चनास' इति वाक्यशेषे च सुखचेष्टकादन्यस्य परत्वमात्रेण निषेधात् ।**

'ನಾಸದಾಸೀತ್' ಇತ್ಯಾದಿ ಶ್ರುತಿಯಲ್ಲಿ ಪ್ರಳಯ ಕಾಲದಲ್ಲಿ ಯಾವುದೇ ಪದಾರ್ಥವು ಇರುವುದಿಲ್ಲವೆಂದು ಹೇಳಲಾಗಿದೆ. ಆದ್ದರಿಂದ ಸೃಷ್ಟಿ ಮಾಡಲು ಯಾವುದೇ ಸಾಧನ ಪರಿಕರಗಳು ಪ್ರಳಯಕಾಲದಲ್ಲಿ ಇರಲಿಲ್ಲ. ಹೀಗೆ ಆಕ್ಷೇಪ ಮಾಡಬಾರದು. ಶ್ರುತಿಯ ಅಭಿಪ್ರಾಯವೇನೆಂದರೆ- ಆ ಸಾಮಗ್ರಿಗಳು ಸೂಕ್ಷ್ಮರೂಪದಲ್ಲಿರುವುದರಿಂದ, ಪರತಂತ್ರವಾಗಿರುವುದರಿಂದ ಪರಮಾತ್ಮನಿಂದ ಆವರಿಸಲ್ಪಟ್ಟಿರುವುದರಿಂದ ಯಾವುದೂ ಇರಲಿಲ್ಲ ಎನ್ನಲಾಗಿದೆ. ಮತ್ತು ಯಾವುದೇ ಪದಾರ್ಥವೇ ಇರುವುದಿಲ್ಲ ಎಂಬ ಅಭಿಪ್ರಾಯ ಶ್ರುತಿಗೆ ಸರ್ವಥಾ ಇರುವುದಿಲ್ಲ. ಏಕೆಂದರೆ ಈ ಶ್ರುತಿಯ ವಾಕ್ಯಶೇಷದಲ್ಲಿ 'ತಮಾऽಸೀತ್' ಇತ್ಯಾದಿಯಾಗಿ ನೀರು ಮೊದಲಾದವುಗಳಿಗೆ ಅಸ್ತಿತ್ವವನ್ನು ಹೇಳಲಾಗಿದೆ. ಮತ್ತು 'ತಸ್ಮಾದ್ಧನ್ಯತ್ರ ಪರಃ ಕಿಂಚನಾಸ' ಎಂಬ ವಾಕ್ಯಶೇಷದಲ್ಲಿ ಸುಖರೂಪಿಯಾದ ಚೇಷ್ಟಕರೂಪನಾದ ಪರಮಾತ್ಮನಿಗಿಂತ ಉತ್ತಮವಾದ ಮತ್ತೊಂದು ವಸ್ತು ಇರುವುದಿಲ್ಲ ಎಂದಷ್ಟೇ ನಿಷೇಧ ಮಾಡಲಾಗಿದೆ.

### ಮಾಯಾವಾದಿಗಳ ಸೂತ್ರಾರ್ಥ ನಿರಾಕರಣೆ

**तत्वप्रदीपः – केचिदेतानि सूत्राणि अन्यथा योजयन्ति । तद्यथा – भोक्त्रापत्तेरविभागश्चेत्स्याल्लोकवत् । यदि भोक्ता भोग्यभावमापद्येत**

**भोग्यं वा भोक्तृभावं, तर्हि प्रत्यक्षादिसिद्धस्य तयोर्विभागस्याभावः प्रसज्येत । तयोश्च इतरेतरभावापत्तिः परमकारणाद् ब्रह्मणोऽन्यत्वात् प्रसज्येतेति चेत्, स्याल्लोकवत् । यथा समुद्राद् उदकात्मनोऽनन्यत्वेऽपि तद्विकाराणां फेनतरङ्गबुद्बुदादीनां मिथो विभागः मिथः संश्लेषादिव्यापारश्च उपपद्यते । न च समुद्रात्मनोऽनन्यत्वेऽपि फेनतरङ्गादीनाम् इतरेतरभावापत्तिः । न च तावता समुद्रादन्यत्वमपि एवमिहापि स्यात् ।**

ಮಾಯಾವಾದಿಗಳು ಈ ಎಲ್ಲಾ ಸೂತ್ರಗಳಿಗೆ ಅನ್ಯಥಾ ವ್ಯಾಖ್ಯಾನ ಮಾಡುತ್ತಾರೆ. ಅದು ಹೀಗೆ - ಮೊದಲು 'ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್' ಎಂಬ ಸೂತ್ರಕ್ಕೆ ಅದ್ವೈತಪರತ್ವವನ್ನು ಹೀಗೆ ಸಮರ್ಥಿಸುವರು - ಒಂದು ವೇಳೆ ಭೋಕ್ತೃತ್ವವು ಭೋಗ್ಯಭಾವವನ್ನು ಹೊಂದಿದರೆ, ಭೋಗ್ಯವು ಭೋಕ್ತೃಭಾವವನ್ನು ಹೊಂದಿದರೆ ಪ್ರತ್ಯಕ್ಷಸಿದ್ಧವಾದ ಇವೆರಡರ ಭೇದವೇ ಇಲ್ಲದಂತಾಗುತ್ತದೆ. ಮತ್ತು ಇವೆರಡಕ್ಕೂ ಪರಸ್ಪರ ತಾದಾತ್ಮ್ಯವು ಪ್ರಾಪ್ತವಾಗ-ಬೇಕಾಗುತ್ತದೆ. ಏಕೆಂದರೆ ಭೋಕ್ತೃ ಹಾಗೂ ಭೋಗ್ಯಗಳು ಪರಮಕಾರಣನಾದ ಬ್ರಹ್ಮನಿಂದ ಅನನ್ಯವಾಗಿವೆ.

ಈ ಪೂರ್ವಪಕ್ಷವು ತಪ್ಪು. ಸೂತ್ರದಲ್ಲಿರುವ 'ಸ್ಯಾತ್ ಲೋಕವತ್' ಎಂಬುದು ಇದಕ್ಕೆ ಉತ್ತರಿಸುತ್ತಿದೆ. ಹೇಗೆ ಸಮುದ್ರದ ನೀರು ಸಮುದ್ರ ಸ್ವರೂಪವಾಗಿದೆ. ಆದರೆ ಈ ಸಮುದ್ರದ ನೊರೆ, ಅಲೆ, ತರಂಗಗಳು ಆ ಸಮುದ್ರದ ವಿಕಾರ ಎನಿಸಿ ಪರಸ್ಪರ ಭೇದವನ್ನು ತಳೆದಿವೆ. ನೀರನ್ನು ನೊರೆ ಎನ್ನುವುದಿಲ್ಲ. ನೊರೆಯನ್ನು ಅಲೆ ಎನ್ನುವುದಿಲ್ಲ. ಆದ್ದರಿಂದ ಪರಸ್ಪರ ಭೇದ, ಪರಸ್ಪರ ಸಂಶ್ಲೇಷಾದಿ ವ್ಯಾಪಾರಗಳು ಅವುಗಳಿಗೆ ಯುಕ್ತವಾಗುತ್ತವೆ. ಮತ್ತು ಈ ಫೇನತರಂಗಾದಿಗಳು ಸಮುದ್ರಕ್ಕಿಂತ ಅಭಿನ್ನವಾಗಿದ್ದರೂ ಪರಸ್ಪರ ಇವುಗಳಲ್ಲಿ ಅಭೇದ ಇರುವುದಿಲ್ಲ. ಮತ್ತು ಸಮುದ್ರದಿಂದಲೂ ಭೇದವೂ ಕೂಡ ಇರುವುದಿಲ್ಲ. ಅದರಂತೆ ಭೋಗ್ಯ ಹಾಗೂ ಭೋಕ್ತೃಗಳಲ್ಲಿ ಪರಸ್ಪರ ಅಭೇದ ಪ್ರಾಪ್ತವಾಗುವುದಿಲ್ಲ. ಆದರೂ ಬ್ರಹ್ಮನಿಂದ ಅಭೇದವು ಯುಕ್ತವಾಗುತ್ತದೆ.

ವಿವರಣೆ - ಜಗತ್ತಿನಲ್ಲಿ ಕೆಲವು ಭೋಗ್ಯಪದಾರ್ಥಗಳಿವೆ, ಕೆಲವು ಭೋಕ್ತೃ ಪದಾರ್ಥಗಳಿವೆ. ಭೋಗ್ಯಪದಾರ್ಥಗಳು ಜಡ ಎನಿಸುತ್ತವೆ. ಭೋಕ್ತೃಪದಾರ್ಥಗಳು ಚೇತನ ಎನಿಸುತ್ತವೆ. ಹೀಗೆ ಇವೆರಡರಲ್ಲಿ ಪರಸ್ಪರ ವೈಲಕ್ಷಣ್ಯವಿದೆ. ಆದರೆ ಇವೆರಡೂ ಕೂಡ ಒಬ್ಬನೇ ಬ್ರಹ್ಮನ ಕಾರ್ಯಗಳಾಗಿವೆ. ಒಬ್ಬನೇ ಬ್ರಹ್ಮನು ಇವುಗಳಿಗೆ ಉಪಾದಾನನಾಗಿದ್ದಾನೆ. ಒಂದೇ ಮಣ್ಣಿನಿಂದ ಹುಟ್ಟಿದ ಎರಡು ಮೃದ್‌ವಿಕಾರಗಳು ಅತ್ಯಂತ ವಿಲಕ್ಷಣವಾಗಲು ಸಾಧ್ಯವಿಲ್ಲ. ಅದರಂತೆ ಒಬ್ಬನೇ ಬ್ರಹ್ಮನಿಂದ ಹುಟ್ಟಿದ ಭೋಗ್ಯ ಹಾಗೂ ಭೋಕ್ತೃಗಳಲ್ಲಿ ಅತ್ಯಂತ ವೈಲಕ್ಷಣ್ಯಬರಲು ಸಾಧ್ಯವಿಲ್ಲ. ಭೋಗ್ಯಪದಾರ್ಥಗಳು ಜಡವಾಗಿರಲು, ಭೋಕ್ತೃ-ಪದಾರ್ಥಗಳು ಚೇತನರಾಗಿರಲು ಸಾಧ್ಯವಿಲ್ಲ. ಆದ್ದರಿಂದ ಭೋಕ್ತೃವು ಭೋಗ್ಯವಾಗಬೇಕು. ಭೋಗ್ಯವು ಭೋಕ್ತೃಗಳಾಗಬೇಕು. ಇಷ್ಟು ಪೂರ್ವಪಕ್ಷ.

ಇದಕ್ಕೆ 'ಸ್ಯಾಲ್ಲೋಕವತ್' ಎಂಬುದಾಗಿ ಸೂತ್ರವು ಉತ್ತರಿಸುತ್ತಿದೆ. ಸಮುದ್ರದ ವಿಕಾರವಾದ ಫೇನತರಂಗಾದಿಗಳಲ್ಲಿ ಪರಸ್ಪರ ವೈಲಕ್ಷಣ್ಯವಿದೆ. ಆದರೂ ಒಂದೇ ಸಮುದ್ರದ ವಿಕಾರವಾಗಿವೆ. ಈ ಫೇನತರಂಗಾದಿಗಳಲ್ಲಿ ಪರಸ್ಪರ ವೈಲಕ್ಷಣ್ಯವಿರುವುದು, ಸಂಶ್ಲೇಷಾದಿ ವ್ಯಾಪಾರವಿರುವುದೂ ಕೂಡ ಲೋಕಸಿದ್ಧವಾಗಿದೆ. ಅದರಂತೆ ಒಂದೇ ಬ್ರಹ್ಮನ ವಿಕಾರವಾದ ಈ ಪ್ರಪಂಚದಲ್ಲೂ ಭೋಕ್ತೃ-ಭೋಗ್ಯಭಾವವು ಯುಕ್ತವಾಗುತ್ತದೆ.

'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬ ಸೂತ್ರಕ್ಕೆ ಮಾಯಾವಾದಿಗಳ ವ್ಯಾಖ್ಯಾನ

**तत्वप्रदीपः – तदनन्यत्वमारम्भणशब्दादिभ्यः ।। अभ्युपगम्य चेमं व्यावहारिकं भोक्तृभोग्यलक्षणं विभागं स्याल्लोकवदिति परिहारोऽभिहितः । न त्वयं विभागः परमार्थतोऽस्ति । यतः कारणाद् ब्रह्मणोऽनन्यत्वं व्यतिरेकेणाभावः कार्यस्यावगम्यते । कुतः? आरम्भणशब्दादिभ्यः । आरम्भणशब्दस्तावत् – एकविज्ञानेन सर्वविज्ञानं प्रतिज्ञाय दृष्टान्तापेक्षायामुच्यते 'यथा सोम्यैकेन मृत्पिण्डेन सर्वं मृण्मयं विज्ञातं स्यात्, वाचारम्भणं विकारः' इत्यादि ।**

ಹಿಂದಿನ ಸೂತ್ರದಲ್ಲಿ ಭೋಕ್ತೃ, ಭೋಗ್ಯ ವಿಭಾಗವಿದೆ ಎಂದು ಒಪ್ಪಿರುವುದು ಅಂಗೀಕಾರವಾದ. ವ್ಯಾವಹಾರಿಕವಾಗಿ ಭೋಕ್ತೃ, ಭೋಗ್ಯಗಳಿಗೆ ವಿಭಾಗವನ್ನು ಲೋಕದ

ದೃಷ್ಟಾಂತದಿಂದ ಅಂಗೀಕರಿಸಿ ಪರಿಹಾರ ಹೇಳಲಾಯಿತು. ವಿಚಾರ ಮಾಡಿದರೆ ಭೋಕ್ತೃ, ಭೋಗ್ಯಗಳಲ್ಲಿ ಪಾರಮಾರ್ಥಿಕವಾದ ಭೇದವೇ ಇರುವುದಿಲ್ಲ. ಏಕೆಂದರೆ ಕಾರಣನಾದ ಬ್ರಹ್ಮನ ದೆಸೆಯಿಂದ ಅವೆರಡೂ ಒಂದೇ ಆಗಿದೆ. ಭೋಕ್ತೃ ಮತ್ತು ಭೋಗ್ಯಗಳು ಬೇರೆ ಬೇರೆಯಾಗಿ ಇರುವುದೇ ಇಲ್ಲ. ಏಕೆಂದರೆ ಆರಂಭಣಶಬ್ದಾದಿಭ್ಯಃ = ಆರಂಭಣಶಬ್ದದಿಂದ ಕೂಡಿರುವ ಶ್ರುತಿಯು ಹಾಗೇ ಹೇಳುತ್ತಿದೆ. ಏಕವಿಜ್ಞಾನದಿಂದ ಸಕಲವೂ ಕೂಡ ತಿಳಿದಂತಾಗುತ್ತದೆ ಎಂದು ಶ್ರುತಿಯು ಪ್ರತಿಜ್ಞೆ ಮಾಡಿ, ದೃಷ್ಟಾಂತದ ಅಪೇಕ್ಷೆಯು ಪ್ರಾಪ್ತವಾದಾಗ 'ಯಥಾ ಸೋಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್, ವಾಚಾರಂಭಣಂ ವಿಕಾರೋ ನಾಮಧೇಯಂ' ಇತ್ಯಾದಿಯಾಗಿ ಹೇಳುತ್ತಿದೆ. ಹೀಗೆ ಶ್ರುತಿಯಿಂದ ಭೋಕ್ತೃ ಭೋಗ್ಯಗಳಿಗೆ ಪರಸ್ಪರ ಐಕ್ಯವೇ ತಿಳಿಯುತ್ತದೆ.

### ಮಿಥ್ಯಾತ್ವ ಪ್ರತಿಪಾದಕ ಶ್ರುತ್ಯರ್ಥ

**तत्वप्रदीपः – एकेन मृत्पिण्डेन परमार्थतो मृदात्मना विज्ञातेन सर्वं मृण्मयं घटादि विज्ञातं स्यात् । यतो वाचाऽऽरम्भणं विकारः नामधेयमात्रम् अनृतं मृत्तिकेत्येव सत्यम् । एवं दृष्टान्तोक्तेर्दार्ष्टान्तिकोऽपि ब्रह्मणि कार्यस्य व्यतिरेकेणाभावः । आदिशब्दात् 'स आत्मा तत्त्वमसि' इत्याद्यात्मैकत्व-प्रतिपादकमपि वाक्यजातमुदाहर्तव्यम् । अन्यथा एकविज्ञानेन सर्वविज्ञान-प्रतिज्ञानुपपत्तेः ।**

ಶ್ರುತ್ಯರ್ಥ ಹೀಗಿದೆ - ಒಂದು ಮಣ್ಣಿನ ಮುದ್ದೆಯನ್ನು ಪಾರಮಾರ್ಥಿಕವಾಗಿ ತಿಳಿದಾಗ ಅದರ ಕಾರ್ಯವೆನಿಸಿದ ಘಟಶರಾವಾದಿ ಸಕಲ ಮೃಣ್ಮಯಗಳು ತಿಳಿದಂತಾಗುತ್ತವೆ. ಏಕೆಂದರೆ 'ವಾಚಾರಂಭಣೋ ವಿಕಾರೋ ನಾಮಧೇಯಂ' ಎಂಬುದಾಗಿ ಶ್ರುತಿಯು ಮಣ್ಣನ್ನು ಮಾತ್ರ ಸತ್ಯವೆನ್ನುತ್ತಿದೆ. ತದಾರಂಭವಾದದ್ದಕ್ಕೆ ಮಿಥ್ಯಾತ್ವವನ್ನು ಹೇಳುತ್ತಿದೆ. ಹೀಗೆ ದೃಷ್ಟಾಂತವನ್ನು ಹೇಳಿರುವುದರಿಂದ ದಾರ್ಷ್ಟಾಂತಿಕವನ್ನೂ ಕೂಡ ಹೀಗೆ ತಿಳಿಯಬೇಕು. ಬ್ರಹ್ಮನಿಂದ ಸಮಸ್ತ ಜಗತ್ತು ಹುಟ್ಟಿದೆ. ಹುಟ್ಟಿದ ಜಗತ್ತು ಬ್ರಹ್ಮನಿಗಿಂತ ಭಿನ್ನವಾಗಿ ಇರುವುದಿಲ್ಲ. ಸೂತ್ರದಲ್ಲಿರುವ ಆದಿಶಬ್ದದಿಂದ 'ಸ ಆತ್ಮಾ ತತ್ತ್ವಮಸಿ' ಎಂಬ ಆತ್ಮೈಕ್ಯಪ್ರತಿಪಾದಕವಾದ ವಾಕ್ಯಸಮೂಹಗಳನ್ನು ವಿವಕ್ಷಿಸಬೇಕು. ಇಲ್ಲದಿದ್ದರೆ ಏಕವಿಜ್ಞಾನದಿಂದ ಸರ್ವವಿಜ್ಞಾನಪ್ರಸಿದ್ಧಿಯೇ ಅನುಪಪನ್ನವಾಗುತ್ತದೆ.

### ಐಕ್ಯವಿಷಯದಲ್ಲಿ ದೃಷ್ಟಾಂತ

**तत्वप्रदीपः – तस्माद् यथा घटशरावाद्याकाशानां महाकाशाद् अनन्यत्वम्, यथा वा शुक्तिरजतादीनां शुक्त्यादिभ्योऽनन्यत्वं, दृष्टनष्टस्वरूपत्वात्, स्वरूपेणानुपाख्यत्वात्, एवमस्य भोक्तृभोग्यादिप्रपञ्चस्य ब्रह्मव्यतिरेकेणाभाव इत्यर्थः ।**

ಆದ್ದರಿಂದ ಹೇಗೆ ಘಟಾಕಾಶ, ಶರಾವಾಕಾಶಗಳಿಗೆ ಮಹಾಕಾಶದಿಂದ ಅಭೇದವಿರುತ್ತದೋ, ಅಥವಾ ಶುಕ್ತಿರಜತಾದಿಗಳು ಶುಕ್ತ್ಯಾದಿಗಳಿಗಿಂತ ಅಭಿನ್ನವಾಗಿರುತ್ತವೋ, ಏಕೆಂದರೆ ಘಟಾದ್ಯಾಕಾಶಗಳು ದೃಷ್ಟಸ್ವರೂಪವಾಗಿವೆ, ಶುಕ್ತಿರಜತಾದಿಗಳು ನಷ್ಟಸ್ವರೂಪಗಳಾಗಿವೆ. ಸ್ವರೂಪತಃ ಇವುಗಳು ಅಸ್ತಿತ್ವವನ್ನೇ ಪಡೆದಿರುವುದಿಲ್ಲ. ಅದರಂತೆ ಭೋಕ್ತೃಭೋಗ್ಯಾದಿ ಪ್ರಪಂಚವೂ ಕೂಡ ಬ್ರಹ್ಮನಿಗಿಂತ ಅತಿರಿಕ್ತವಾಗಿ ಇರುವುದೇ ಇಲ್ಲ.

### ಅದ್ವೈತಿಗಳ ಮೇಲೆ ಪ್ರಶ್ನೆ

**तत्वप्रदीपः – ननु एकस्यैव ब्रह्मणो नानाभोक्तृभोग्यात्मकत्वमप्यस्तु, यथा समुद्रात्मनैकत्वं फेनतरङ्गाद्यात्मना नानात्वम् । तदुक्तं च 'स्याल्लोकवत्' इति त्वयैव । यथा वा मृदात्मना एकत्वं घटाद्यात्मना नानात्वम्, एवं च मृदादिदृष्टान्ता अनुरूपाः स्युः ।**

ಒಬ್ಬನೇ ಬ್ರಹ್ಮನು ನಾನಾವಿಧವಾದ ಭೋಕ್ತೃ, ಭೋಗ್ಯಾತ್ಮಕನಾದ ಪ್ರಪಂಚರೂಪನಾಗಲಿ. ಹೇಗೆ ಫೇನತರಂಗಾದಿಗಳು ಸಮುದ್ರಸ್ವರೂಪವೇ ಆಗಿದ್ದರೂ ನಾನಾಭಾವವನ್ನು ಹೊಂದಿವೆಯೋ, ಅದರಂತೆ ಭೋಕ್ತೃಭೋಗ್ಯಪ್ರಪಂಚವೂ ಕೂಡ ಬ್ರಹ್ಮನಿಂದ ಅಭಿನ್ನವಾಗಿದ್ದರೂ ನಾನಾಭಾವವನ್ನು ಹೊಂದುತ್ತದೆ. ಇದನ್ನೇ ಅದ್ವೈತಿಗಳಾದ ನೀವು 'ಸ್ಯಾಲ್ಲೋಕವತ್' ಎಂಬುದಾಗಿ ಹೇಳಿರುವಿರಿ. ಅಥವಾ ಮಣ್ಣಿನಿಂದ ಘಟಾದಿಗಳಿಗೆ ಐಕ್ಯವಿದ್ದರೂ ಘಟಶರಾವಾದಿಗಳ ರೂಪದಿಂದ ನಾನಾಭಾವವಿರುತ್ತದೆ. ಹೀಗೆ ಮೃದಾದಿದೃಷ್ಟಾಂತವೂ ಕೂಡ ಅನುರೂಪವಾಗುತ್ತದೆ.

## ಮಿಥ್ಯಾಭೂತ ಶಾಸ್ತ್ರದಿಂದ ಸತ್ಯಜ್ಞಾನವು ಲಭ್ಯ

**तत्वप्रदीपः – मैवम् । तत्र प्रकृतिमात्रस्य सत्यत्वावधारणात् । वाचारम्भणशब्देन विकारस्य अनृतत्वाभिधानात् । दार्ष्टान्तिकेऽपि तत्सत्यमिति ब्रह्मण एव सत्यत्ववचनात् । तत्त्वमसीति शारीरस्य ब्रह्मभावोपदेशाच्च । 'यत्र त्वस्य सर्वमात्मैवाभूत् केन कं पश्येत्' 'मृत्योः स मृत्युमाप्नोति य इह नानेव पश्यति' इति भेददृष्ट्यपवादश्च श्रूयते । न चैतावता लौकिकवैदिकभेदव्यवहारलोपः । स्वाप्नस्येव प्राक् प्रबोधादुपपत्तेः । न चानृतेन मोक्षशास्त्रेण प्रतिपादितस्य आत्मैकत्वस्य सत्यत्वानुपपत्तिः । शङ्काविषादिनिमित्तस्य सत्यस्यैव मरणस्योपलब्धेः । तस्मात् मिथ्याभूतेनापि शास्त्रेण सत्यब्रह्मावगतिरुपपद्यते ।**

ಇದು ತಪ್ಪು. ಶ್ರುತಿಯಲ್ಲಿ ಪ್ರಕೃತಿಗೆ ಮಾತ್ರ ಸತ್ಯತ್ವವನ್ನು ನಿರ್ಣಯಿಸಲಾಗಿದೆ. ವಾಚಾರಂಭಣಶಬ್ದದಿಂದ ವಿಕಾರಕ್ಕೆ ಮಿಥ್ಯಾತ್ವವನ್ನು ಹೇಳಲಾಗಿದೆ. ದಾರ್ಷ್ಟಾಂತಿಕದಲ್ಲೂ ಕೂಡ 'ತತ್‌ಸತ್ಯಮ್' ಎಂಬುದಾಗಿ ಬ್ರಹ್ಮನಿಗಷ್ಟೇ ಸತ್ಯತ್ವವನ್ನು ಹೇಳಲಾಗಿದೆ. 'ತತ್ತ್ವಮಸಿ' ಎಂಬ ಶ್ರುತಿಯು ಶಾರೀರನಾದ ಜೀವನಿಗೆ ಬ್ರಹ್ಮಭಾವವನ್ನು ಉಪದೇಶ ಮಾಡಿದೆ. 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್' ಎಂಬ ಶ್ರುತಿಯು ಹಾಗೂ 'ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ' ಎಂಬ ಶ್ರುತಿಯು ಭೇದಜ್ಞಾನಕ್ಕೆ ಅಪವಾದವೂ ಕೂಡ ಶ್ರುತವಾಗಿದೆ. ಹೀಗೆ ಹೇಳಿದ ಮಾತ್ರದಿಂದ ಲೌಕಿಕ-ವೈದಿಕಭೇದವ್ಯವಹಾರವೇ ಲೋಪವಾಗುತ್ತದೆನ್ನಬಾರದು. ಸ್ವಾಪ್ನಪದಾರ್ಥದಂತೆ ನಿರ್ಗುಣಜ್ಞಾನ ಬರುವ ಮೊದಲು ಈ ಎಲ್ಲ ಭೇದವ್ಯವಹಾರವು ಯುಕ್ತವಾಗುತ್ತದೆ. ಇನ್ನು ಮಿಥ್ಯಾಭೂತವಾದ ಮೋಕ್ಷಶಾಸ್ತ್ರದಿಂದ ಪ್ರತಿಪಾದಿತವಾದ ಆತ್ಮೈಕ್ಯಕ್ಕೆ ಸತ್ಯತ್ವವು ಅನುಪಪನ್ನವಾಗುತ್ತದಲ್ಲವೇ ? ಎಂದೂ ಕೂಡ ಪ್ರಶ್ನಿಸಬಾರದು. ಹಾವು ಕಚ್ಚಿದಾಗ ವಿಷದ ಶಂಕೆಯಿದ್ದರೂ ಕೂಡ ಸತ್ಯಭೂತವಾದ ಮರಣವು ಪ್ರಾಪ್ತವಾಗುವುದು ಅನುಭವಸಿದ್ಧವಾಗಿದೆ. ಆದ್ದರಿಂದ ಮಿಥ್ಯಾಭೂತವಾದ ಶಾಸ್ತ್ರದಿಂದ ಸತ್ಯಬ್ರಹ್ಮನನ್ನು ತಿಳಿಯುವುದು ತಪ್ಪಾಗುವುದಿಲ್ಲ.

ಅದ್ವೈತಿಗಳ ಪ್ರಕಾರ ಬ್ರಹ್ಮನಲ್ಲಿ ಸಾರ್ವಜ್ಞ್ಯಾದಿಗಳು

**तत्वप्रदीपः – तस्मात् परमार्थतोऽद्वितीयं ब्रह्म । तस्य आत्मभूते इव अविद्याकल्पिते नामरूपे तत्त्वान्यत्वाभ्याम् अनिर्वचनीये संसारबीजभूते । ताभ्यामन्यः सर्वज्ञ ईश्वरः । एवम् अविद्याकल्पितनामरूपोपाध्यनुरोधीश्वरो भवति । तदेवम् अविद्याकृतमेव ईश्वरस्येश्वरत्वं सर्वज्ञत्वं सर्वशक्तित्वं च । न परमार्थतः । सूत्रकारोऽपि व्यवहारावस्थाभिप्रायेण 'स्याल्लोकवत्' इति महासमुद्रस्थानीयतां ब्रह्मणः परिणामप्रक्रियां चाश्रयति सगुणेषूपासनेषु उपयोक्ष्यत इति ।**

ಆದ್ದರಿಂದ ಅದ್ವಿತೀಯ ಬ್ರಹ್ಮನು ಪಾರಮಾರ್ಥಿಕನಾಗಿದ್ದಾನೆ. ಇಂಥ ಅದ್ವಿತೀಯನಾದ ಬ್ರಹ್ಮನಿಂದಲೇ ನಾಮರೂಪಗಳು ಅವಿದ್ಯಾಕಲ್ಪಿತವಾಗಿವೆ. ಇವುಗಳು ತತ್ತ್ವ ಹಾಗೂ ಅನ್ಯತ್ವಗಳಿಂದ ಅನಿರ್ವಚನೀಯವೆನಿಸಿವೆ. ಸಂಸಾರಕ್ಕೆ ಕಾರಣಭೂತವಾಗಿವೆ. ಇವೆರಡರಲ್ಲಿ ಒಂದು ಸರ್ವಜ್ಞನಾದ ಈಶ್ವರ ಎನಿಸುತ್ತದೆ. ಅವಿದ್ಯಾಕಲ್ಪಿತವಾದ ನಾಮರೂಪ ಎಂಬ ಉಪಾಧಿಯಿಂದಾಗಿ ಈಶ್ವರನು ಜನ್ಮ ತಾಳುತ್ತಾನೆ. ಹೀಗೆ ಅವಿದ್ಯಕನಾದ ಈಶ್ವರನಲ್ಲಿ ಈಶ್ವರತ್ವ, ಸರ್ವಜ್ಞತ್ವ, ಸರ್ವಶಕ್ತಿತ್ವಾದಿಗಳು ಪ್ರಾಪ್ತವಾಗುತ್ತವೆ. ಆದ್ದರಿಂದ ಈ ಸರ್ವಜ್ಞತ್ವಾದಿಗಳು ಪಾರಮಾರ್ಥಿಕವಾಗಿ ಇರಲು ಸಾಧ್ಯವಿಲ್ಲ. ಸೂತ್ರಕಾರರೂ ಕೂಡ ಇದನ್ನೇ ಹೇಳಿದ್ದಾರೆ. ವ್ಯವಹಾರಸಮಯದಲ್ಲಿ ಮಾತ್ರ ಈಶ್ವರನು ಸರ್ವಜ್ಞ, ಸರ್ವಶಕ್ತ ಇತ್ಯಾದಿಯಾಗಿ ಕರೆಸಿಕೊಳ್ಳುತ್ತಾನೆ ಎಂಬ ಅಭಿಪ್ರಾಯದಿಂದ 'ಸ್ಯಾಲ್ಲೋಕವತ್' ಎಂದಿದ್ದಾರೆ. ಮಹಾಸಮುದ್ರಸ್ಥಾನದಲ್ಲಿರುವ ಬ್ರಹ್ಮನೇ ಪರಿಣಾಮವನ್ನು ಹೊಂದಿದಾಗ ಸಗುಣನಾಗುತ್ತಾನೆ. ಇಂಥ ಸಗುಣಬ್ರಹ್ಮನನ್ನು ಮೋಕ್ಷಾಧಿಕಾರಿಗಳು ತಮ್ಮ ಉಪಾಸನೆಯಲ್ಲಿ ಉಪಯೋಗಿಸಿಕೊಳ್ಳುತ್ತಾರೆ.

ಭಾವೇ ಚೋಪಲಬ್ಧೇಃ ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ

**तत्वप्रदीपः – भावे चोपलब्धेः ।। भावः एव कारणस्य कार्यमुपलभ्यते । नाभावे, सत्यां हि मृदि घट उपलभ्यते । नच नियमेन**

**अन्यभावेऽन्यस्योपलब्धिर्दृष्टा । यदि धूमादौ दृष्टा तथाऽपि न कश्चिद्दोषः । तद्भावानुरक्तां हि बुद्धिं कार्यकारणयोरनन्यत्वे हेतुं वयं वदामः । लोकेऽपि तन्तुव्यतिरेकेण पटो नोपलभ्यते । तन्तव एव अतानवितानवन्तः प्रदृश्यन्ते । 'भावाच्चोपलब्धेः' इति वा सूत्रम् । प्रत्यक्षोपलब्धिभावाच्च तयोरनन्यत्वमित्यर्थः। तन्तुसंस्थाने हि पटे तन्तुव्यतिरेकेण पटो नाम कार्यं नोपलभ्यते । एवं तत्तत् कारणद्वारेण परब्रह्मण्यद्वितीये पर्यवसितिः ।**

ಕಾರಣವು ಇದ್ದರೆ ಮಾತ್ರ ಕಾರ್ಯವು ಉಪಲಬ್ಧವಾಗುತ್ತದೆ. ಕಾರಣವೇ ಇಲ್ಲದಿದ್ದರೆ ಕಾರ್ಯವು ಉಪಲಬ್ಧವಾಗುವುದಿಲ್ಲ. ಉದಾಹರಣೆ - ಮಣ್ಣು ಎಂಬ ಕಾರಣವಿದ್ದರೆ ಮಾತ್ರ ಘಟ ಎಂಬ ಕಾರ್ಯವು ಉಪಲಬ್ಧವಾಗುತ್ತದೆ. ಇದನ್ನು ಹೊರತಾಗಿ, ಬೇರೆ ಯಾವುದೋ ಇದ್ದರೆ ಮತ್ತೊಂದು ಉಪಲಬ್ಧವಾಗುವುದು ಕಂಡಿಲ್ಲ. ಧೂಮವು ಕಂಡಾಗ ವಹ್ನಿಯ ಜ್ಞಾನ ಬರುತ್ತದಲ್ಲವೇ? ಎಂದು ಕೇಳಬಹುದು. ಆದರೂ ಕೂಡ ಪ್ರಕೃತಕ್ಕೆ ದೋಷವಿಲ್ಲ. ಏಕೆಂದರೆ ಕಾರ್ಯಭಾವದಲ್ಲಿ ಅನುವೃತ್ತವಾದ ಬುದ್ಧಿಯು ಕಾರ್ಯಕಾರಣಗಳ ಅನನ್ಯತ್ವ ವಿಷಯದಲ್ಲಿ ಹೇತುವನ್ನು ನಾವು ಹೇಳುತ್ತಿದ್ದೇವೆ. ಲೋಕದಲ್ಲೂ ಕೂಡ ತಂತುವಿಗಿಂತ ಅತಿರಿಕ್ತವಾಗಿ ಪಟವು ಉಪಲಬ್ಧವಾಗುತ್ತಿಲ್ಲ. ತಂತುಗಳೇ ಆತಾನವಿತಾನವುಳ್ಳವುಗಳಾದಾಗ ಪಟಭಾವದಿಂದ ಕಾಣಿಸುತ್ತವೆ.

ಅಥವಾ 'ಭಾವಾಚ್ಚೋಪಲಬ್ಧೇಃ' ಎಂಬುದು ಸೂತ್ರದ ಪಾಠ. ಇದಕ್ಕೆ ಹೀಗರ್ಥ - ಪ್ರತ್ಯಕ್ಷೋಪಲಬ್ಧಿಯು ಇರುವುದರಿಂದ ಕಾರ್ಯಕಾರಣಗಳಿಗೆ ಅನನ್ಯತ್ವವಿದೆ. ತಂತುಗಳಲ್ಲಿ ಆಕಾರವಿಶೇಷವುಂಟಾದಾಗ ಪಟವು ಉಪಲಬ್ಧವಾಗುತ್ತದೆ. ತಂತುಗಳಿಗಿಂತ ಅತಿರಿಕ್ತವಾದ ಪಟ ಎಂಬ ಕಾರ್ಯವು ಉಪಲಬ್ಧವಾಗುವುದಿಲ್ಲ. ಹೀಗೆ ಆಯಾ ಕಾರಣಗಳ ಮೂಲಕ ಪರಬ್ರಹ್ಮನು ಒಬ್ಬನೇ ಆಗಿದ್ದಾನೆಂದು ಪರ್ಯವಸಾನವಾಗುತ್ತದೆ.

ವಿವರಣೆ - ಮಣ್ಣು ಇದ್ದರೆ ಮಾತ್ರ ಘಟವು ಉಪಲಬ್ಧವಾಗುತ್ತದೆ. ಅದರಂತೆ ತಂತುಗಳಿದ್ದರೆ ಮಾತ್ರ ಪಟವು ಉಪಲಬ್ಧವಾಗುತ್ತದೆ. ಮಣ್ಣು ಇದ್ದರೆ ಪಟವು ಉಪಲಬ್ಧವಾಗುವುದಿಲ್ಲ. ತಂತುಗಳಿದ್ದರೆ ಘಟವು ಉಪಲಬ್ಧವಾಗುವುದಿಲ್ಲ. ಹೀಗೆ ಒಂದರಿಂದ ಮತ್ತೊಂದರ ಉಪಲಬ್ಧಿಯು ನಿಯಮಸಿದ್ಧವಾಗಿದೆ. ಎಲ್ಲಿ ಈ

ನಿಯಮವಿದೆಯೋ, ಆ ಎರಡು ಪದಾರ್ಥಗಳಿಗೆ ಭೇದವು ಇರುವುದಿಲ್ಲ ಎಂಬುದು ಅದ್ವೈತಿಗಳ ಅಭಿಪ್ರಾಯ.

ಧೂಮ ಜ್ಞಾನದಿಂದ ನಿಯಮೇನ ವಹ್ನಿಜ್ಞಾನವು ಉಂಟಾಗುತ್ತಿದೆ. ಇವೆರಡಕ್ಕೆ ಭೇದರಾಹಿತ್ಯವು ಇರುವುದಿಲ್ಲವಲ್ಲ? ಎಂದು ಪ್ರಶ್ನಿಸಿದರೆ ಅದ್ವೈತಿಗಳು 'ತದ್ಭಾವಾನುರಕ್ತಾಂ ಹಿ ಬುದ್ಧಿಂ ಕಾರ್ಯಕಾರಣಯೋಃ ಅನನ್ಯತ್ವೇ ಹೇತುಂ ವಯಂ ವದಾಮಃ' ಎಂಬುದಾಗಿ ಉತ್ತರಿಸುತ್ತಿದ್ದಾರೆ. ಕಾರ್ಯಭಾವದಲ್ಲಿ ಅನುರಕ್ತವಾದ ಬುದ್ಧಿಯೇ ಕಾರ್ಯಕಾರಣಗಳ ಅನನ್ಯತ್ವಕ್ಕೆ ಹೇತುವಾಗುತ್ತದೆಂಬುದು ಇದರ ಅಭಿಪ್ರಾಯ.

ಅದ್ವೈತಿಗಳು 'ಭಾವಾಚ್ಚೋಪಲಬ್ಧೇಃ' ಎಂಬುದು ಸೂತ್ರದ ಮತ್ತೊಂದು ಪಾಠವೆಂದು ಅಂಗೀಕರಿಸಿ ವ್ಯಾಖ್ಯಾನ ಮಾಡಿದ್ದಾರೆ. ಸೂತ್ರದ ಪಾಠವನ್ನೇ ನಿರ್ಣಯಿಸಲಾಗದ ಇವರಿಗೆ ಭಾಷ್ಯ ಬರೆಯಲು ಅಧಿಕಾರವಿರುವುದಿಲ್ಲ.

### 'ಸತ್ವಾಚ್ಚಾವರಸ್ಯ' ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ

**तत्वप्रदीपः – सत्वाचावरस्य ।। अपि च प्रागुत्पत्तेः कारणात्मनैव कारणे सत्त्वमवरकालीनस्य कार्यस्यावगम्यते । 'सदेव सोम्येदमग्र आसीत्' इत्यादौ इदंशब्दगृहीतस्य कार्यस्य कारणेन सामानाधिकरण्यात् । अतोऽप्यनन्यत्वमेव ।**

ಉತ್ಪತ್ತಿಯ ಮೊದಲು ಕಾರಣ ಸ್ವರೂಪದಲ್ಲಿರುವ ಕಾರಣದ ಸತ್ವವು ಅನಂತರದ ಕಾಲದಲ್ಲಿ ಕಾರ್ಯಕ್ಕೆ ಬರುತ್ತದೆ. ಏಕೆಂದರೆ 'ಸದೇವ ಸೌಮ್ಯ ಇದಮಗ್ರ ಆಸೀತ್' ಎಂಬ ಶ್ರುತಿಯಲ್ಲಿ ಇದಂ ಶಬ್ದದಿಂದ ಸ್ವೀಕರಿಸಲ್ಪಟ್ಟ ಕಾರ್ಯಕ್ಕೆ ಕಾರಣದಿಂದ ಸತ್ ಎಂಬ ಶಬ್ದದಿಂದ ಪ್ರತಿಪಾದ್ಯವಾದ ಕಾರಣದ ಜೊತೆ ಸಾಮಾನಾಧಿಕರಣ್ಯವನ್ನು ಹೇಳಲಾಗಿದೆ. ಆದ್ದರಿಂದ ಕಾರ್ಯ ಹಾಗೂ ಕಾರಣಗಳಿಗೆ ಅಭೇದವನ್ನೇ ಒಪ್ಪಬೇಕು.

ವಿವರಣೆ - 'ಅದ್ಭ್ಯಃ ಸಂಭೂತಃ ಪೃಥಿವೀರಸಾಚ್ಚ ವಿಶ್ವಕರ್ಮಣಃ ಸಮವರ್ತತಾಧಿ' ಎಂಬ ಶ್ರುತಿಯು ಪರಮಾತ್ಮನಿಂದ ಮಾತ್ರವಲ್ಲದೇ ಬೇರೆ ಪದಾರ್ಥಗಳಿಂದಲೂ ಕೂಡ ಈ ಜಗತ್ತಿನ ಸೃಷ್ಟಿಯು ಆಗುತ್ತದೆ ಎಂದು ಹೇಳುತ್ತಿದೆ. ಈ ಶ್ರುತಿಗೆ ಅನೇಕಾರ್ಥಗಳಿಂದ ಈ ವಿಷಯವನ್ನು ನಿರ್ಣಯಿಸಬಹುದು. 'ಅಪಯಂತೀತಿ ಆಪಃ' ಎಂಬ ನಿಷ್ಪತ್ತಿಯಿಂದ

ನಿತ್ಯಸಂಸಾರಕ್ಕೆ ಕಾರಣವಾದ ರಜೋಗುಣವು 'ಅಪ್' ಎಂದು ಕರೆಸಿಕೊಳ್ಳುತ್ತದೆ. ಇಂಥ 'ಅದ್ಭ್ಯಃ' ಎಂಬ ಪದಕ್ಕೆ ರಜೋಗುಣಗಳಿಂದ ಎಂದರ್ಥ. ಈ ಮೂರುಗುಣಗಳಲ್ಲಿ ಅಧಿಕವಾಗಿರುವಂಥ ತಮೋಗುಣವು ಪೃಥುವಾಗಿರುವುದರಿಂದ ಪೃಥಿವೀ ಎಂದು ಕರೆಸಿಕೊಳ್ಳುತ್ತದೆ. ಇಂಥ ತಮೋಗುಣದಿಂದ ಜಗತ್ತು ಹುಟ್ಟಿತು. ಮತ್ತು ರಸಾಚ್ಚ ಎಂದರೆ ಮೂರು ಗುಣಗಳಲ್ಲಿ ಶ್ರೇಷ್ಠವಾದದ್ದು ಸತ್ವಗುಣ. ಇದರಿಂದಲೂ ಕೂಡ ಈ ಜಗತ್ತು ಹುಟ್ಟಿತು. ಹೀಗೆ ವಿಶ್ವಕರ್ಮನಿಂದ ರಜೋಗುಣ, ತಮೋಗುಣ, ಸತ್ವಗುಣಗಳಿಂದ ಈ ಜಗತ್ತು ಹುಟ್ಟಿದೆ ಎಂಬುದಾಗಿ ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ. ಬೆಂಕಿಯು ಸತ್ವಗುಣದಿಂದ ಹುಟ್ಟಿದೆ. ನೀರು ರಜೋಗುಣದಿಂದ ಹುಟ್ಟಿದೆ. ಪೃಥಿವಿಯು ತಮೋಗುಣದಿಂದ ಹುಟ್ಟಿದೆ. ಮತ್ತು ಈ ಮಣ್ಣು, ನೀರು, ಬೆಂಕಿಗಳಿಂದಲೇ ಈ ಜಗತ್ತು ಹುಟ್ಟಿದೆ ಎಂಬುದಾಗಿಯೂ ಕೂಡ ಈ ಶ್ರುತಿ ಹೇಳುತ್ತಿದೆ.

ಈ ಶ್ರುತಿಗೆ ಮತ್ತೊಂದು ಅರ್ಥ - ವಿಶ್ವಕರ್ಮನಿಂದ ಮೊದಲು ಜನ್ಮವನ್ನು ತಾಳಿದವನು ಚತುರ್ಮುಖ. ಇಂಥ ಚತುರ್ಮುಖನು ಎಲ್ಲರಿಗಿಂತ ಶ್ರೇಷ್ಠನಾಗಿರುವ ಕಾರಣ 'ಸಮವರ್ತತ ಅಧಿ' ಶ್ರೇಷ್ಠನಾಗಿ ಹುಟ್ಟಿದನು ಎಂಬುದಾಗಿ ಶ್ರುತಿ ಹೇಳುತ್ತಿದೆ. ಇಂಥ ಚತುರ್ಮುಖನು ಹೇಗೆ ಹುಟ್ಟಿದನು ? ಎಂದರೆ 'ಅದ್ಭ್ಯಃ' ತಾನು ಮಾಡಿದ ಪ್ರಾಚೀನವಾದ ಅನೇಕ ಸತ್ಕರ್ಮಗಳಿಂದ ಹುಟ್ಟಿದನು. ಇಂಥ ಚತುರ್ಮುಖನಿಗೆ ಮೂಲದ್ರವ್ಯ ಯಾವುದು ಎಂದರೆ ? 'ಪೃಥಿವ್ಯೆ' ಎಂಬುದಾಗಿ ಶ್ರುತಿ ಹೇಳುತ್ತಿದೆ. ಮೂಲಪ್ರಕೃತಿಯಿಂದ ತಾನು ಮಾಡಿದ ಕರ್ಮದ ಫಲವಾಗಿ ಜನ್ಮವನ್ನು ತಾಳಿದನು. ಈ ಸೃಷ್ಟಿಗೆ ಮತ್ತೊಂದು ಕಾರಣವೇನೆಂದರೆ ತಾನು ಭಗವಂತನ ವಿಷಯದಲ್ಲಿ ಮಾಡಿದ ಅತ್ಯಧಿಕವಾದ ಭಕ್ತಿಯೇ ಆಗಿದೆ. ಇದನ್ನು 'ರಸಾಚ್ಚ' ಎಂಬುದಾಗಿ ಶ್ರುತಿ ಹೇಳುತ್ತಿದೆ. ಹೀಗೆ ಈ ಶ್ರುತಿಗೆ ಒಟ್ಟು ಮೂರು ಅರ್ಥ - ೧ . ಸತ್ವಗುಣಸ್ತಮೋಗುಣಗಳಿಂದ, ೨. ಬೆಂಕಿ, ನೀರು, ಪೃಥಿವಿಗಳಿಂದ, ೩. ಕರ್ಮ, ಮೂಲಪ್ರಕೃತಿ, ಭಕ್ತಿ ಇವುಗಳಿಂದ ಶ್ರೇಷ್ಠನಾದ ಚತುರ್ಮುಖಬ್ರಹ್ಮನು ಹುಟ್ಟಿದನು ಎಂಬುದಾಗಿ ಈ ಶ್ರುತಿ ಹೇಳುತ್ತಿದೆ. ಹೀಗೆ ಈ ಶ್ರುತಿಯು ಬೇರೆ ಸಾಧನಗಳಿಂದಲೂ ಕೂಡ ಜಗತ್ತಿನ ಸೃಷ್ಟಿಯನ್ನು ಹೇಳುತ್ತಿರುವಾಗ, ಪರಮಾತ್ಮನೊಬ್ಬನೆ ಜಗತ್ತಿಗೆ ಕಾರಣ ಎಂದು ಹೇಗೆ ಹೇಳುವಿರಿ ?

ಈ ಪ್ರಶ್ನೆಗೆ 'ಸತ್ವಾಚ್ಚಾವರಸ್ಯ' ಎಂಬ ಸೂತ್ರವು ಉತ್ತರಿಸುತ್ತಿದೆ. ಪರಮಾತ್ಮ ಸೃಷ್ಟಿಯಲ್ಲಿ ಬೇರೆ ಸಾಧನಗಳೇ ಇರುವುದಿಲ್ಲವೆಂಬುದು ಸಿದ್ಧಾಂತಿಗಳ ಅಭಿಪ್ರಾಯವಲ್ಲ. ಸ್ವತಂತ್ರವಾದ ಬೇರೆ ಸಾಧನಗಳನ್ನು ಅಪೇಕ್ಷಿಸುವುದಿಲ್ಲ ಎಂದಷ್ಟೇ ಅರ್ಥ. ಕರ್ಮ, ಮೂಲಪ್ರಕೃತಿ, ಭಕ್ತಿ

ಇವುಗಳೆಲ್ಲವೂ ಕೂಡ ಪರಮಾತ್ಮನ ಅಧೀನವೇ ಆಗಿವೆ. ತನ್ನ ಅಧೀನವಾದ ಇಂಥ ಸಾಧನಪರಿಕರಗಳಿಂದ ಜಗತ್ತನ್ನು ಪರಮಾತ್ಮನು ಸೃಷ್ಟಿ ಮಾಡುತ್ತಾನೆಂಬುದು ಶ್ರುತಿಯ ಅಭಿಪ್ರಾಯ. ಇದು ಸಿದ್ಧಾಂತಕ್ಕೆ ಅವಿರುದ್ಧವಾಗಿದೆ.

ಈ ವಿಷಯದಲ್ಲಿ ಏನು ಆಧಾರ ? ಎಂಬ ಪ್ರಶ್ನೆಗೆ ಕಾಷಾಯಣಶ್ರುತಿಯನ್ನು ಭಾಷ್ಯದಲ್ಲಿ ಉಲ್ಲೇಖ ಮಾಡಲಾಗಿದೆ. ಕಾಲ ಇತ್ತು. ಜೀವ ಇದ್ದನು, ಪರಮಾತ್ಮನಿದ್ದನು. ಇವೆಲ್ಲವೂ ಅವ್ಯಕ್ತವಾಗಿದ್ದವು. ಆದರೆ ಪರಮಾತ್ಮನೊಬ್ಬನೇ ಸ್ವತಂತ್ರವಾಗಿದ್ದನು. ಅವನ ಅಧೀನವಾಗಿ ಕಾಲಾದಿಗಳು ಇದ್ದವು.

## 'ಅಸದ್-ವ್ಯಪದೇಶಾತ್ ನೇತಿ ಚೇನ್ನ' ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ

**तत्वप्रदीपः – असद्व्यपदेशात् नेति चेन्न इत्यादि सूत्रम् । 'असदेवेदमग्र आसीत्' इत्यादौ प्रागुत्पत्तेः कार्यस्यासत्त्वव्यपदेशात् न सत्त्वमिति चेन्न । न ह्ययम् अत्यन्तासत्त्वाभिप्रायेण व्यपदेशः । व्याकृतनामरूपत्वाद्धर्मात् धर्मान्तरेण अव्याकृतनामरूपत्वेन अयमसद्व्यपदेशः । 'तत्सदासीत्' इत्यादि वाक्यशेषात् । तदेव ह्यत्र सदिति विशिनष्टि । अत एवमुक्तन्यायेन मूलकारणमेवान्त्यात् कार्यात् तेन तेन कार्याकारेण नटवत् सर्वव्यवहारास्पदत्वं प्रतिपद्यते । तस्मात् परमार्थतोऽद्वितीयं ब्रह्म, अनिर्वचनीयमन्यत् इत्यधिकरणार्थ इति ।**

'ಅಸದೇವೇದಮಗ್ರ ಆಸೀತ್' ಇತ್ಯಾದಿ ಶ್ರುತಿಯಲ್ಲಿ ಉತ್ಪತ್ತಿಯ ಮೊದಲು ಕಾರ್ಯಕ್ಕೆ ಅಸತ್ವವನ್ನು ಹೇಳಲಾಗಿದೆ. ಆದ್ದರಿಂದ ಸತ್ವವನ್ನು ಒಪ್ಪಲು ಸಾಧ್ಯವಿಲ್ಲ. ಈ ಅಸತ್ವವನ್ನು ಅತ್ಯಂತ 'ಅಸತ್' ಎಂಬ ಅಭಿಪ್ರಾಯದಿಂದ ಶ್ರುತಿಯು ವ್ಯಪದೇಶ ಮಾಡಿರುವುದಿಲ್ಲ. ಸೃಷ್ಟಿಯಾದ ಮೇಲೆ ಯಾವ ಆಕಾರವನ್ನು ನಾಮವನ್ನು ಕಾರ್ಯವು ಹೊಂದಿರುತ್ತದೋ, ಸೃಷ್ಟಿಯ ಮೊದಲು ಅಂಥ ಆಕಾರವನ್ನಾಗಲೀ, ನಾಮವನ್ನಾಗಲೀ ಹೊಂದಿರುವುದಿಲ್ಲ. ಹೀಗೆ ಧರ್ಮಾಂತರದಿಂದ ಅವ್ಯಾಕೃತವಾದ್ದರಿಂದ ಹಾಗೂ ನಾಮರೂಪಗಳನ್ನು ಹೊಂದಿರುವುದರಿಂದ ಶ್ರುತಿಯಲ್ಲಿ ಅಸದ್ವ್ಯಪದೇಶವನ್ನು ಮಾಡಲಾಗಿದೆ. 'ತತ್ಸದಾಸೀತ್' ಎಂಬ ವಾಕ್ಯಶೇಷದ ಬಲದಿಂದ ಹೀಗೆ ಅತ್ಯಂತ ಅಸತ್ವವನ್ನು ಶ್ರುತ್ಯರ್ಥವನ್ನಾಗಿ ವಿವಕ್ಷಿಸಬಾರದೆಂಬುದು ಸ್ಪಷ್ಟವಾಗುತ್ತದೆ. ಅದನ್ನೇ

ಪ್ರಕೃತ ಸತ್ ಎಂಬುದಾಗಿ ಶ್ರುತಿಯಲ್ಲಿ ವಿಶೇಷಣವನ್ನಾಗಿ ನೀಡಲಾಗಿದೆ. ಆದ್ದರಿಂದಲೇ ಹಿಂದೆ ಹೇಳಿದ ನ್ಯಾಯದಂತೆ ಮೂಲಕಾರಣವು ಅನಂತರಕಾಲೀನವಾದ ಕಾರ್ಯಸ್ವರೂಪವನ್ನು ತಾಳುತ್ತದೆ. ನಟನು ಹೇಗೆ ಅನೇಕ ಆಕಾರಗಳನ್ನು ಹೊಂದಿ, ಅಭಿನಯವನ್ನು ಮಾಡುತ್ತಾನೋ, ಅದರಂತೆ ಮೂಲಕಾರಣವೇ ಅನೇಕ ಬಗೆಯ ಕಾರ್ಯದ ಆಕಾರವನ್ನು ಹೊಂದಿ, ಸರ್ವವ್ಯವಹಾರಕ್ಕೆ ವಿಷಯವಾಗುತ್ತದೆ.

ಆದ್ದರಿಂದ ಅದ್ವಿತೀಯನಾದ ಬ್ರಹ್ಮನೊಬ್ಬನೇ ಪಾರಮಾರ್ಥಿಕನಾಗಿದ್ದಾನೆ. ಉಳಿದೆಲ್ಲಾ ಕಾರ್ಯಗಳು ಅನಿರ್ವಚನೀಯವಾಗಿವೆ ಎಂಬುದು ಈ ಅಧಿಕರಣದ ಪ್ರಮೇಯ.

ಅದ್ವೈತಿಗಳ ಅದ್ವೈತವು ಸುಳ್ಳಾಯಿತು

**तत्वप्रदीपः – अत आह – न चान्यत्र प्रमाणमस्तीति ।। न तावत् अनिर्वाच्यत्वे सूत्रं वेदवाक्यम् अन्यद्वा प्रमाणमस्ति । अनिर्वचनीयत्वसाधकस्य अतत्वावेदकत्वेनाशास्त्रीयत्वात् । अतत्वावेदकत्वेऽपि तात्विकावस्थापेक्षया आभासत्वं न व्यवहारावस्थायामपि इति चेत् एवं तर्हि व्यावहारिकमेव जगतो मिथ्यात्वमभ्युपेतं न तात्विकं स्यात् । ततश्च आत्माद्वैतस्य व्यावहारिकत्वप्रसङ्गः । प्रपञ्चसत्यत्वस्य तात्विकत्वप्रसङ्गः ।**

ಅದ್ವೈತಿಗಳ ಈ ಎಲ್ಲ ಸೂತ್ರವ್ಯಾಖ್ಯಾನಗಳು ಅಯುಕ್ತವಾಗಿವೆ ಎಂಬುದನ್ನು ಭಾಷ್ಯದಲ್ಲಿ 'ನ ಚಾನ್ಯತ್ರ ಪ್ರಮಾಣಮಸ್ತಿ' ಎಂಬ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. ಅನಿರ್ವಾಚ್ಯತ್ವ ವಿಷಯದಲ್ಲಿ ಸೂತ್ರ, ವೇದವಾಕ್ಯ ಅಥವಾ ಬೇರೆ ಪ್ರಮಾಣವನ್ನು ಹೇಳಬೇಕು. ಈ ಮೂರರಲ್ಲಿ ಯಾವುದಾದರೊಂದು ಪ್ರಮಾಣವಿದ್ದರೆ ಅನಿರ್ವಾಚ್ಯತ್ವವನ್ನು ಒಪ್ಪಬಹುದು. ಮತ್ತು ಅನಿರ್ವಾಚ್ಯತ್ವವನ್ನು ಸಾಧನೆ ಮಾಡುವಾಗ ಯಾವ ವೇದವಾಕ್ಯವಿದೆಯೋ, ಅದನ್ನು ಅತತ್ವಾವೇದಕವೆಂದು ನೀವೇ ಅಂಗೀಕಾರ ಮಾಡುತ್ತೀರಿ. ಹಾಗಾಗಿ ಅನಿರ್ವಾಚ್ಯತ್ವವು ಅಶಾಸ್ತ್ರೀಯವಾಯಿತು.

ಅದ್ವೈತಿಗಳು - ಅನಿರ್ವಾಚ್ಯತ್ವ ಪ್ರತಿಪಾದಕವಾದ ಪ್ರಮಾಣವು ಅತತ್ವಾವೇದಕವೇ ಆಗಿದೆ. ಆದರೂ ಕೂಡ ದೋಷವಿಲ್ಲ. ಏಕೆಂದರೆ ಯಾವ ತಾತ್ವಿಕಾವಸ್ಥೆ ಇದೆಯೋ, ಅದನ್ನು

ಅಪೇಕ್ಷಿಸಿದಾಗ ಅನಿರ್ವಾಚ್ಯತ್ವ ಹಾಗೂ ತತ್‌ಪ್ರತಿಪಾದಕವಾದ ಪ್ರಮಾಣಗಳು ಆಭಾಸವೆನಿಸುತ್ತವೆ. ಆದರೆ ವ್ಯವಹಾರಾವಸ್ಥೆಯನ್ನು ವಿವಕ್ಷಿಸಿದಾಗ ಆಭಾಸ ಎಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಅನಿರ್ವಾಚ್ಯತ್ವವು ಸಿದ್ಧವಾಗುತ್ತದೆ.

ತತ್ವವಾದಿಗಳು - ಇದು ಅಯುಕ್ತವಾಗಿದೆ. ಹೀಗೆ ಒಪ್ಪುವುದಾದರೆ ಜಗನ್ಮಿಥ್ಯಾತ್ವವು ವ್ಯಾವಹಾರಿಕವೇ ಆಯಿತು. ತಾತ್ವಿಕವಾಗಲಿಲ್ಲ. ಆದ್ದರಿಂದ ಆತ್ಮಾದ್ವೈತಕ್ಕೂ ಕೂಡ ವ್ಯಾವಹಾರಿಕತ್ವ-ಪ್ರಸಂಗವೇ ಬಂದೊದಗಿತು. ಅಷ್ಟೇ ಅಲ್ಲದೇ ಪ್ರಪಂಚಸತ್ಯತ್ವವು ತಾತ್ವಿಕವಾಯಿತು.

ಅನಿರ್ವಾಚ್ಯತ್ವ ವಿಷಯದಲ್ಲಿ ತತ್ವಾವೇದಕ ಪ್ರಮಾಣವನ್ನೂ ಕೂಡ ಹೇಳಲಾಗದು

**तत्वप्रदीपः – अपि च व्यवहारनिर्वाहकं ह्यतत्वावेदकमिष्यते । व्यवहारस्तु तत्वग्राहकेणैव सत्यत्वविषयेणैव निरुह्यते । किमनेन मानाभासेनान्यथात्वविषयेणा प्रयोजकेन? अथोच्येत – अनिर्वचनीयत्वमानं तत्वावेदकमेव; तत्वतोऽनिर्वाच्यं जगदिति ब्रूम इति । तर्हि मुक्तावपि अनिर्वाच्यप्रपञ्चो न निवर्तेत, तत्वावेदकप्रमाणसिद्धत्वात् ब्रह्मवत् । तस्मात् न अनिर्वाच्ये तत्वावेदकमतत्वावेदकं च प्रमाणमस्ति ।**

ಮತ್ತು ಯಾವುದು ವ್ಯವಹಾರ ನಿರ್ವಾಹಕವೋ, ಅದು ಅತತ್ವಾವೇದಕ ಎಂಬುದಾಗಿ ಅದ್ವೈತಿಗಳು ಅಂಗೀಕಾರ ಮಾಡುತ್ತಾರೆ. ವ್ಯವಹಾರವು ತತ್ವಗ್ರಾಹಕವಾದ ಸತ್ಯತ್ವವನ್ನು ವಿಷಯೀಕರಿಸುವ ಪ್ರಮಾಣದಿಂದಲೇ ಸಿದ್ಧವಾಗುತ್ತದೆ. ಹೀಗಿರುವಾಗ ಅನ್ಯಥಾತ್ವವನ್ನು ವಿಷಯೀಕರಿಸುವ ಅಪ್ರಯೋಜಕವಾದ ಮಾನಾಭಾಸದಿಂದ ಏನು ಪ್ರಯೋಜನ ?

ಅದ್ವೈತಿಗಳು - ಅನಿರ್ವಚನೀಯತ್ವವನ್ನು ಸಾಧನೆ ಮಾಡುವ ಪ್ರಮಾಣವು ತತ್ವಾವೇದಕವೇ ಆಗಿದೆ. ಆದ್ದರಿಂದ ಜಗತ್ತಿನಲ್ಲಿ ತಾತ್ವಿಕವಾದ ಅನಿರ್ವಾಚ್ಯತ್ವವನ್ನು ಹೇಳುತ್ತೇವೆ.

ತತ್ವವಾದಿಗಳು - ಹಾಗಾದರೆ ಮುಕ್ತಿಯಲ್ಲೂ ಕೂಡ ಅನಿರ್ವಾಚ್ಯಪ್ರಪಂಚವು ನಿವೃತ್ತಿ ಆಗದೇ ಇರಬೇಕಾದೀತು. ಏಕೆಂದರೆ ಯಾವುದು ತತ್ವಾವೇದಕಪ್ರಮಾಣದಿಂದ ಸಿದ್ಧವಾಗಿದೆಯೋ, ಅದು ಮುಕ್ತಿಯಲ್ಲಿ ನಿವೃತ್ತಿಯಾಗುವುದಿಲ್ಲ. ಬ್ರಹ್ಮನು ತತ್ವಾವೇದಕ-

ಪ್ರಮಾಣದಿಂದ ಸಿದ್ಧವಾಗಿರುವ ಕಾರಣ ಮುಕ್ತಿಯಲ್ಲಿ ಹೇಗೆ ನಿವೃತ್ತನಾಗಿಲ್ಲವೋ, ಅದರಂತೆ ಜಗತ್ತೂ ಕೂಡ ಮುಕ್ತಿಯಲ್ಲಿ ನಿವೃತ್ತಿ ಆಗದೇ ಇರಬೇಕಾದೀತು. ಆದ್ದರಿಂದ ಅನಿರ್ವಾಚ್ಯತ್ವ-ವಿಷಯದಲ್ಲಿ ತತ್ತ್ವಾವೇದಕಪ್ರಮಾಣವಾಗಲೀ, ಅತತ್ತ್ವಾವೇದಕಪ್ರಮಾಣವಾಗಲೀ ಇರುವುದಿಲ್ಲ.

### ಅನನ್ಯತ್ವವು ಸಿದ್ಧವಾಗದು

**तत्वप्रदीपः – तदनन्यस्य च कथमनिर्वाच्यत्वम्? अन्यराहित्यमात्रम् अत्रानन्यत्वं न त्वैक्यमिति चेन्न, भेदरहितस्य तेनाभेदो बलाद्भवेदेव, ब्रह्मस्वरूपत्वात् । न च मृद्घटादिवदत्र प्रकृतिविकारभावः, येन अनन्यत्वशङ्कावकाशः । न च निर्दिष्टदृष्टान्तस्तदनुबन्धीत्यादिकम् अवादिष्म । यच्च अन्यदन्यदुपन्यस्तम्; तदपि तत्र तत्र दत्तोत्तरमेव इत्युपेक्ष्यते । चिद्भावानुरक्ता च बुद्धिरचित्सु परिमार्गणीया, या तदनन्यत्वसाधनीशोधिता। 'भावाच्चोपलब्धेः' इति वा सूत्रमिति सूत्रविकल्पनाऽपि तत्सम्प्रदायापरिज्ञान-विजृम्भिता इति न प्रबुद्धपरिषदि प्रौढिमावहति ।**

ಅದ್ವೈತಿಗಳು - ಬ್ರಹ್ಮನಿಂದ ಅನನ್ಯವಾದದ್ದಕ್ಕೆ ಅನಿರ್ವಾಚ್ಯತ್ವವನ್ನು ಹೇಗೆ ಹೇಳುತ್ತೀರಿ ? ಅನನ್ಯತ್ವವೆಂದರೆ ಅನ್ಯರಾಹಿತ್ಯವೆಂದಷ್ಟೇ ಅರ್ಥ. ಐಕ್ಯವೆಂದು ಅರ್ಥವಲ್ಲ.

ತತ್ತ್ವವಾದಿಗಳು - ಭೇದವಿಲ್ಲವೆಂದರೆ ಅಭೇದವು ಅನಿವಾರ್ಯವಾಗಿ ಬಂದೇ ಬರುತ್ತದೆ. ಬ್ರಹ್ಮಸ್ವರೂಪವಾಗಿರುವುದರಿಂದ.

ಮೃದ್‌ಘಟಾದಿಗಳಂತೆ ಬ್ರಹ್ಮನಿಗೂ, ಜಗತ್ತಿಗೂ ಪ್ರಕೃತಿವಿಕಾರಭಾವವು ಇರುವುದಿಲ್ಲ. ಹಾಗಿದ್ದಲ್ಲಿ ಅನನ್ಯತ್ವವನ್ನು ಆಶಂಕಿಸಬಹುದಿತ್ತು. ಮತ್ತು ಮೃದ್‌ಘಟವೆಂಬ ದೃಷ್ಟಾಂತವು ಬ್ರಹ್ಮಾನನ್ಯತ್ವಕ್ಕೆ ಅನುಗುಣವಾಗಿರುವುದಿಲ್ಲವೆಂದು ಈಗಷ್ಟೇ ಹಿಂದೆ ಪ್ರತಿಪಾದನೆ ಮಾಡಿದ್ದೇವೆ. ಇನ್ನು ಅದ್ವೈತಿಗಳು ತಮ್ಮ ಭಾಷ್ಯದಲ್ಲಿ ಈ ಅಧಿಕರಣಕ್ಕೆ ಸಂಬಂಧಪಟ್ಟಂತೆ ಏನೇನು ವಿಷಯಗಳನ್ನು ಹೇಳಿದ್ದಾರೋ, ಅವುಗಳಿವ ನಾವು ಈಗಾಗಲೇ ಉತ್ತರವನ್ನು ನೀಡಿದಂತಾಗಿದೆ.

ಯಾರು ಮೋಕ್ಷವನ್ನು ಬಯಸುತ್ತಾನೋ, ಅಂಥವನು ಚಿದಾತ್ಮಕನಾದ ಬ್ರಹ್ಮನಲ್ಲಿ ಅನುರಕ್ತನಾಗಬೇಕು. ಆದರೆ ಪ್ರಪಂಚದಿಂದ ನೀವು ಬ್ರಹ್ಮನಿಗೆ ಐಕ್ಯವನ್ನು ಹೇಳುವುದಾದರೆ

ಚಿದ್ಭಾವದಲ್ಲಿ ಅನುರಕ್ತವಾದ ಬುದ್ಧಿಯನ್ನು ಅಚಿತ್‌ಪದಾರ್ಥದಲ್ಲಿ ವಿಮರ್ಶೆ ನಡೆಸಬೇಕಾಗುತ್ತದೆ. ಏಕೆಂದರೆ ನೀವು ಬುದ್ಧಿಯ ತದನನ್ಯತ್ವ ಸಾಧನೆಯಲ್ಲಿ ಶೋಧನೆಯಾಗಬೇಕೆಂದು ಹೇಳುವಿರಿ.

'ಭಾವಚ್ಚೋಪಲಬ್ಧೇಃ' ಎಂಬುದು ಸೂತ್ರದ ಮತ್ತೊಂದು ಪಾಠವೆಂದು ಅದ್ವೈತಿಗಳು ಏನು ಹೇಳಿದ್ದಾರೋ, ಇದೂ ಕೂಡ ತಪ್ಪು. ಸೂತ್ರಪಾಠಕ್ರಮದ ಸಂಪ್ರದಾಯ ಅಪರಿಜ್ಞಾನದಿಂದ ವಿಜೃಂಭಿತವಾಗಿದೆ ಇದು. ಆದ್ದರಿಂದ ವಿದ್ವಾಂಸರ ಸಭೆಯಲ್ಲಿ ಇಂಥ ಅಜ್ಞಾನದ ವಿಜೃಂಭಣೆಗೆ ಮಾನ್ಯತೆಯು ದೊರಕುವುದಿಲ್ಲ.

### ಸದಸತ್ ಶಬ್ದಗಳ ವ್ಯಾಖ್ಯಾನ

**तत्वप्रदीपः – कथञ्च प्रागुत्पत्तेः कारणात्मना सतः कार्यस्य तत्त्वान्यत्वाभ्यां सदसत्त्वाभ्यां चानिवर्चनीयत्वम् । न च 'नासदासीन्नो सदासीत्' इति तत्र प्रमाणमस्ति । 'तदानीम्' इति विशेषणात् सृष्टेरूर्ध्वमुभयोरपि सद्भावावगमात् । नचात्र सदसती भावाभावौ, पृथिव्यादिभूतत्रयं सद्व्यक्तत्वादपरं द्वयमसदव्यक्तत्वात् उच्यते । 'यदन्यद्वायोश्चान्तरिक्षाच्चैतत्सत्' इति च श्रुतिः । अन्यथा रजआदेः सदन्तर्भावात् पृथङ्निषेधायोगात् ।**

ಉತ್ಪತ್ತಿಯ ಮೊದಲು ಕಾರ್ಯವು ಕಾರಣರೂಪದಲ್ಲಿ ಸತ್ತಾಗಿತ್ತು. ಕಾರ್ಯರೂಪದಲ್ಲಿ ಅಸತ್ತಾಗಿತ್ತು. ಹೀಗೆ ಕಾರ್ಯಪದಾರ್ಥಕ್ಕೆ ಸದಸತ್ವದಿಂದ ಅನಿರ್ವಾಚ್ಯತ್ವವನ್ನು ಸಮರ್ಥನೆ ಮಾಡುವುದು ಹೇಗೆ ಸಮಂಜಸವಾಗುತ್ತದೆ? ಏಕೆಂದರೆ ಈ ವಿಷಯದಲ್ಲಿ 'ನಾಸದಾಸೀತ್ ನೋಸದಾಸೀತ್' ಎಂಬ ಶ್ರುತಿಯು ಪ್ರಮಾಣವಾಗುವುದಿಲ್ಲ. ಏಕೆಂದರೆ 'ತದಾನೀಮ್' ಎಂಬ ವಿಶೇಷಣದಿಂದ ಸೃಷ್ಟಿಯ ಅನಂತರವೂ ಕೂಡ ಕಾರಣ ಹಾಗೂ ಕಾರ್ಯಗಳೆರಡು ಸತ್ತೇ ಆಗಿವೆ ಎಂಬುದಾಗಿ ತಿಳಿಯುತ್ತದೆ. ಇನ್ನು ಸದಸತ್ ಶಬ್ದಗಳಿಗೆ ಭಾವ ಮತ್ತು ಅಭಾವ ಎಂಬರ್ಥವನ್ನು ಹೇಳಲಾಗದು. ಏಕೆಂದರೆ ಪೃಥಿವ್ಯಾದಿಭೂತತ್ರಯಗಳು ವ್ಯಕ್ತವಾಗಿರುವ ಕಾರಣ ಸತ್ ಎನಿಸುತ್ತವೆ. ಆಕಾಶಾದಿಗಳು ಅವ್ಯಕ್ತವಾಗಿರುವುದರಿಂದ ಅಸತ್ ಎನಿಸುತ್ತವೆ. ಇದನ್ನೇ ಶ್ರುತಿಯು 'ಯದನ್ಯದ್ವಾಯೋಶ್ಚಾಂತರಿಕ್ಷಾಚ್ಚೈತತ್ ಸತ್' ಎಂಬುದಾಗಿ ಪ್ರತಿಪಾದನೆ ಮಾಡುತ್ತಿದೆ.

ಹೀಗೊಪ್ಪದಿದ್ದರೆ ರಜೋಗುಣವು ಸತ್‌ಪದಾರ್ಥದಲ್ಲಿ ಅಂತರ್ಭಾವವನ್ನು ಹೊಂದಿರುವುದರಿಂದ 'ನೋ ರಜಃ' ಎಂಬುದಾಗಿ ಶ್ರುತಿಯು ಪ್ರತ್ಯೇಕವಾಗಿ ರಜಸ್ಸನ್ನು ನಿಷೇಧ ಮಾಡಿದ್ದು ಅಯುಕ್ತವಾದೀತು.

### ಜಗನ್ಮಿಥ್ಯಾತ್ವವು ಅಪ್ರಾಮಾಣಿಕ

**तत्वप्रदीपः – 'अव्यक्तमसदित्युक्तं व्यक्तं सदिति चोच्यते' इति च ब्राह्मे। 'अजामेकां लोहितशुक्लकृष्णां बह्वीः प्रजाः सृजमानां सरूपाः । अजो ह्येको जुषमाण' इत्यादि श्रुतिस्मृतिवचनेभ्यश्च न चेतनाभेदो जगन्मिथ्यात्वं च प्रामाणिकम् ।**

**ननु वर्णितमिह मानमैतदात्म्यमित्यादि । न च प्रतिपक्षप्रमोपन्यासमात्रबलादेतत् अपलापो युक्तः । न तत् त्वदभिमते मानम् । प्रमाणान्तरविरोधात्, स्वव्याहतेश्च । एतदेव वर्णयति – परस्परविरोध इत्यादिना ।। अन्येषां तु विरुद्धानां वचनानां विप्रलम्भः प्रयोजनम्, अथवा भ्रमः कारणं कल्प्यम् ।**

'ಅವ್ಯಕ್ತಮಸದಿತ್ಯುಕ್ತಂ ವ್ಯಕ್ತಂ ಸದಿತಿ ಚೋಚ್ಯತೇ' ಅವ್ಯಕ್ತವಾದದ್ದು ಅಸತ್ ಎನಿಸುತ್ತದೆ. ವ್ಯಕ್ತವಾದದ್ದು ಸತ್ ಎನಿಸುತ್ತದೆ ಎಂಬುದಾಗಿ ಬ್ರಾಹ್ಮಪುರಾಣದಲ್ಲಿ ಹೇಳಲಾಗಿದೆ. 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ । ಅಜೋ ಹ್ಯೇಕೋ ಜುಷಮಾಣಃ' ಎಂಬ ಶ್ರುತಿವಚನದಿಂದ ಚೇತನಭೇದವು ಮತ್ತು ಜಗನ್ಮಿಥ್ಯಾತ್ವವು ಪ್ರಾಮಾಣಿಕವಲ್ಲವೆಂದು ಸ್ಪಷ್ಟವಾಗುತ್ತದೆ.

ಅದ್ವೈತಿಗಳು - 'ಐತದಾತ್ಮ್ಯಂ' ಎಂಬ ಶ್ರುತಿಯು ಚೇತನಾಭೇದವಿಷಯದಲ್ಲಿ ಪ್ರಮಾಣವೆಂದು ನಾವು ಹೇಳಿದ್ದೇವೆ. ಇದಕ್ಕೆ ಪ್ರತಿಯಾದ ಮತ್ತೊಂದು ವಾದವನ್ನು ಉಪನ್ಯಾಸ ಮಾಡಿದ ಮಾತ್ರಕ್ಕೆ ಅದ್ವೈತವನ್ನು ಅಪಲಾಪ ಮಾಡಲು ಸಾಧ್ಯವಿಲ್ಲ.

ತತ್ವವಾದಿಗಳು - ಹೌದು, ಆದರೆ 'ಐತದಾತ್ಮ್ಯಂ' ಎಂಬ ಶ್ರುತಿಯು ನೀನು ಹೇಳುವ ಆತ್ಮಾಭೇದವಿಷಯದಲ್ಲಿ ಪ್ರಮಾಣವೇ ಆಗುವುದಿಲ್ಲ. ಏಕೆಂದರೆ ಬೇರೆ ಪ್ರಮಾಣಗಳ

ವಿರೋಧವು ನೀನು ಹೇಳಿದ ಶ್ರುತಿಗೆ ಬರುತ್ತದೆ. ಆದ್ದರಿಂದ ನಿನ್ನ ಮಾತುಗಳು ಸ್ವವ್ಯಾಹತವಾಗಿವೆ. ಇದನ್ನೇ ಭಾಷ್ಯದಲ್ಲಿ 'ಪರಸ್ಪರ ವಿರೋಧಃ' ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡಿದ್ದಾರೆ.

ಶ್ರುತಿಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾದಾಗ ಯುಕ್ತಿಯ ಬಲದಿಂದ ತದರ್ಥವನ್ನು ನಿರ್ಣಯ ಮಾಡಬೇಕು. ಆದರೆ ಬೇರೆ ಮತದವರ ಮಾತುಗಳಲ್ಲಿ ಪರಸ್ಪರ ವಿರೋಧವು ಬರಲು ಏನು ಕಾರಣ?

ಕೆಲವು ಮತದವರಿಗೆ ವಂಚನೆ ಮಾಡುವುದೇ ಪ್ರಯೋಜನವಾಗಿರುತ್ತದೆ. ಇನ್ನೂ ಕೆಲವರಲ್ಲಿ ಭ್ರಮೆಯು ಇರುವುದರಿಂದ ಹಾಗೇ ವಿರುದ್ಧವಾದ ಮಾತುಗಳನ್ನು ಹೇಳಿರುತ್ತಾರೆ. ಆದ್ದರಿಂದ ವಿಪ್ರಲಂಭ ಅಥವಾ ಭ್ರಮೆಯೇ ಕಾರಣವಾಗಿದೆ ಹೊರತು, ಬೇರೆ ಪ್ರಯೋಜನವು ಇರುವುದಿಲ್ಲ.

### ತತ್ವಪ್ರಕಾಶಿಕಾ

### ಹಿಂದಿನ ಪ್ರಮೇಯದ ಮೇಲೆ ಆಕ್ಷೇಪ

**तत्वप्रकाशिका – उक्तमाक्षिप्य समादधत् सूत्रमुपन्यस्याक्षेपांशं तावद् व्याचष्टे – असदिति ।।**

ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡಿದ ಸೂತ್ರವನ್ನು ಉಪನ್ಯಾಸ ಮಾಡಿ ಸೂತ್ರದ ಆಕ್ಷೇಪಾಂಶವನ್ನು ಮೊದಲು 'ಅಸತ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಪ್ರಳಯಕಾಲದಲ್ಲಿ ಪದಾರ್ಥವೇ ಇಲ್ಲ

**तत्वप्रकाशिका – साधनान्तरसत्त्वमभ्युपेत्य तस्यैश्वराधीनत्वं यदुदितं न तद्युक्तम् । 'नासदासीत्' इति श्रुतौ प्रलये सर्वस्यासत्त्वव्यपदेशात् । साधनान्तरस्यैवाभावे परमात्माधीनतावर्णनं तु सुतरामयुक्तमिति भावः ।**

ಬೇರೆ ಸಾಧನೆಗಳಿಗೆ ಅಸ್ತಿತ್ವವನ್ನು ಅಂಗೀಕರಿಸಿ ಅವುಗಳು ಭಗವಂತನ ಅಧೀನವಾಗಿವೆ ಎಂದು ಹಿಂದಿನ ಸೂತ್ರದಲ್ಲಿ ಪ್ರತಿಪಾದನೆ ಮಾಡಲಾಯಿತು. ಇದು ಯುಕ್ತವಲ್ಲ. ಏಕೆಂದರೆ

'ನಾಸದಾಸೀತ್' ಎಂಬ ಶ್ರುತಿಯು ಪ್ರಳಯಕಾಲದಲ್ಲಿ ಯಾವುದೇ ಪದಾರ್ಥಗಳು ಇರುವುದಿಲ್ಲವೆಂದು ಪ್ರತಿಪಾದನೆ ಮಾಡುತ್ತಿದೆ. ಬೇರೆ ಸಾಧನಗಳೇ ಇಲ್ಲದಿದ್ದಾಗ ಅವುಗಳಿಗೆ ಪರಮಾತ್ಮನ ಅಧೀನತ್ವವನ್ನು ವರ್ಣನೆ ಮಾಡುವುದು ಅತ್ಯಂತ ಅಯುಕ್ತವಾಗಿದೆ.

### 'ನಾಸದಾಸೀತ್' ಶ್ರುತ್ಯರ್ಥ

**ತत्वप्रकाशिका – तदानीं प्रलये पञ्च भूतानि नासुः । गुणत्रयं यच्च परं व्योम प्रकृतिर्मृत्युरमृतं दिवारात्र्योश्च प्रभावो नासीत् । एतदभावात्किं कुत्र कस्य सुखार्थमावृणोत् ? न किमपि ।**

ನಾಸದಾಸೀತ್ ಶ್ರುತ್ಯರ್ಥ ಹೀಗಿದೆ - ತದಾನೀಂ = ಪ್ರಳಯಕಾಲದಲ್ಲಿ ಪಂಚಭೂತಗಳು ನ = ಇರಲಿಲ್ಲ. ಗುಣತ್ರಯವೂ ಕೂಡ ಯಚ್ಚ ಪರಂ ವ್ಯೋಮ = ಪ್ರಕೃತಿಯು ಮೃತ್ಯುಃ = ಮರಣವು ಅಮೃತಂ = ಸ್ವರ್ಗಾದಿಗಳು ರಾತ್ರಿ ಹಗಲುಗಳ ಪ್ರಭಾವವು ಇರಲಿಲ್ಲ. ಇದು ಯಾವುದೂ ಕೂಡ ಇಲ್ಲದ ಕಾರಣ ಯಾರ ಸುಖಕ್ಕಾಗಿ ಯಾರಿಗಾಗಿ ಇವು ಆವರಿಸುತ್ತವೆ? ಯಾರ ಸುಖಕ್ಕಾಗಿಯೂ ಅಲ್ಲ.

### ಪ್ರಳಯಕಾಲದಲ್ಲಿ ಪರಮಾತ್ಮನೊಬ್ಬನೇ ಕ್ರಿಯಾಶೀಲ

**तत्वप्रकाशिका – यच्चेतनप्रकृतिरूपमम्भस्तदप्यासीत्किं नैवासीत् । किं तु निवातं ब्रह्मैकमेव स्वसामर्थ्येनाचेष्टत न तु तस्मादन्यत्परमासेत्यर्थः ।**

ಜಡರೂಪವಾದ ಪ್ರಕೃತಿ ಇರಲಿಲ್ಲ. ಆದರೆ ಚೇತನಪ್ರಕೃತಿರೂಪವಾದ ಜಲಾವರಣವು ಪ್ರಳಯಕಾಲದಲ್ಲಿ ಇತ್ತೋ ಅಂದರೆ ಅದೂ ಕೂಡ ಇರಲಿಲ್ಲ. ಹೊರತಾಗಿ ಪರಬ್ರಹ್ಮನು ಮಾತ್ರ ತನ್ನ ಸಾಮರ್ಥ್ಯದಿಂದ ಕ್ರಿಯಾಶೀಲನಾಗಿದ್ದ. ತನಗಿಂತ ಅತಿರಿಕ್ತವಾದ ಯಾವ ಪದಾರ್ಥವೂ ಇರಲಿಲ್ಲ ಎಂಬುದು ಶ್ರುತಿಯ ಅರ್ಥ.

### ಅಧಿಕರಣದ ಸಿದ್ಧಾಂತ

**तत्वप्रकाशिका – परिहारांशं व्याचष्टे – नेति ।।**

ಸೂತ್ರದಲ್ಲಿರುವ ಪರಿಹಾರಾಂಶಭಾಗವನ್ನು 'ನಾಸದಾಸೀತ್' ಇತ್ಯಾದಿ ಭಾಷ್ಯದಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಸರ್ವಾಸತ್ತ್ವವು ಅಭಿಪ್ರೇತವೇ ಅಲ್ಲ

**ತತ್ವಪ್ರकाशिका – भवेदेतद्यदि तस्यां श्रुतौ साधनानां स्वरूपासत्त्वाभिप्रायेणासत्त्वव्यपदेशो भवेत् । नैतदस्ति । साधनानामव्यक्तत्वपरतन्त्रत्वाधमत्वविकृतरूपविनाशादिधर्मान्तरापेक्षयाऽसत्त्वस्य व्यपदिष्टत्वात् । अव्यक्तादौ तद्व्यपदेशस्य लोके दृष्टत्वात् ।**

ಒಂದುವೇಳೆ 'ನಾಸದಾಸೀತ್' ಎಂಬ ಶ್ರುತಿಯಲ್ಲಿ ಯಾವುದೇ ಸಾಧನಗಳು ಸ್ವರೂಪತಃ ಇರುವುದೇ ಇಲ್ಲವೆಂದು ಅಸತ್ವವನ್ನು ಹೇಳಿದಲ್ಲಿ ಅವಾಗ ಅಸತ್ವವನ್ನು ಹೇಳಿದ್ದರೆ ಆಕ್ಷೇಪವು ಕೂಡುತ್ತಿತ್ತು.ಆದರೆ ಹಾಗೆ ಯಾವ ಸಾಧನಗಳಿಗೂ ಸ್ವರೂಪತಃ ಸತ್ವವನ್ನು ಶ್ರುತಿಯಲ್ಲಿ ಹೇಳಿರುವುದಿಲ್ಲ. ಸಾಧನಗಳಿಗೆ ಅವ್ಯಕ್ತತ್ವ ಪರತಂತ್ರತ್ವ, ಅಧಮತ್ವ, ವಿಕಾರ, ವಿನಾಶ ಮೊದಲಾದ ಬೇರೆ ಧರ್ಮಗಳ ದೃಷ್ಟಿಯಿಂದ ಅಸತ್ವವನ್ನು ಹೇಳಲಾಗಿದೆ. ಹೊರತು ಸ್ವರೂಪತಃ ಅಸತ್ವವನ್ನು ಹೇಳುತ್ತಿಲ್ಲ. ಲೋಕದಲ್ಲಿ ಯಾವುದು ಸ್ಪಷ್ಟವಾಗಿ ಕಾಣುವುದಿಲ್ಲವೋ ಅಥವಾ ಪರತಂತ್ರವಸ್ತುವೋ ಅದನ್ನು ಅಸತ್ತಾಗಿದೆ ಎಂದು ವ್ಯವಹಾರ ಮಾಡುವುದು ಕಂಡಿದೆ.

### ಪ್ರಕೃತ್ಯಾದಿಗಳು ಪ್ರಳಯಕಾಲದಲ್ಲೂ ಇವೆ

**ತತ್ವಪ್ರकाशिका – न च वाच्यं स्वरूपासत्त्वाभिप्रायेणासत्त्वोक्तिः किं न स्यादिति । वाक्यशेषे प्रकृत्यादिसत्त्वश्रवणादिति भावः ।**

ಸ್ವರೂಪತಃ ಸಾಧನಗಳು ಇಲ್ಲವೆಂಬ ಅಭಿಪ್ರಾಯದಿಂದಲೇ ಶ್ರುತಿಯು ಅಸತ್ವವ್ಯವಹಾರವನ್ನು ಮಾಡುತ್ತಿದೆ. ಹೀಗೇಕೆ ಹೇಳಬಾರದು ? ಎಂಬ ಪ್ರಶ್ನೆ ತಪ್ಪು. ಏಕೆಂದರೆ 'ತಸ್ಮಾದ್ ಅನ್ಯತ್' ಎಂಬ ಶ್ರುತಿಯ ವಾಕ್ಯಶೇಷದಲ್ಲಿ ಪ್ರಕೃತ್ಯಾದಿಗಳ ಇರುವಿಕೆಯು ಶ್ರುತವಾಗಿದೆ. ಆದ್ದರಿಂದ ಸ್ವರೂಪತಃ ಅಸತ್ವವನ್ನು ವಿವಕ್ಷಿಸಿದರೆ ಶ್ರುತಿಯ ವಿರೋಧ ಬರುತ್ತದೆ.

ಪ್ರಕೃತಿಯಿಂದ ಎಲ್ಲವೂ ಆವೃತವಾಗಿತ್ತು

**तत्वप्रकाशिका – यत्तमोऽपरिमितं सलिलं भूत्वाऽऽसीत्प्रकृत्याख्यं तेनेदं सर्वं गूहितमासीदित्यर्थः । अन्यथा तस्माद्धान्यन्न परः किञ्चनासेति परशब्दवैयर्थ्यम् ।**

ಯಾವ ತಮಸ್ಸು ಅಪರಿಮಿತವಾಗಿ ನೀರಿನ ರೂಪವನ್ನು ತಾಳಿತ್ತೋ ಅದೇ ಪ್ರಕೃತಿಯೆಂದು ಕರೆಸಿಕೊಳ್ಳುತ್ತದೆ. ಈ ಪ್ರಕೃತಿಯಿಂದಲೇ ಎಲ್ಲವೂ ಕೂಡ ಆವೃತವಾಗಿತ್ತು. ಹೀಗೊಪ್ಪದೆ ಸ್ವರೂಪತಃ ಅಸತ್ತಾಗಿತ್ತು ಎಂಬುದೇ ಶ್ರುತಿಯ ಅರ್ಥವೆಂದು ವಿವಕ್ಷಿಸಿದರೆ 'ತಸ್ಮಾದ್ ಅನ್ಯತ್' ಎಂಬ ವಾಕ್ಯಶೇಷದಲ್ಲಿ 'ನಪರಃ ಕಿಂಚನಾಸ' ಎಂಬಲ್ಲಿ ಪರಶಬ್ದವು ವ್ಯರ್ಥವಾಗಬೇಕಾದೀತು.

ಪರರ ಅಪವ್ಯಾಖ್ಯಾನ

**तत्वप्रकाशिका – अथ परकृतापव्याख्यां निराचष्टे – न चेति ।। अतीताधिकरणे व्यवहारमभ्युपेत्य चेतनाचेतनविभागो निरूपितः ।**

ಅದ್ವೈತಿಗಳ ಅಪವ್ಯಾಖ್ಯಾನವನ್ನು 'ನ ಚ' ಇತ್ಯಾದಿ ಭಾಷ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

ಹಿಂದಿನ ಅಧಿಕರಣದಲ್ಲಿ ವ್ಯವಹಾರವನ್ನು ಅಂಗೀಕರಿಸಿ ಚೇತನ ಹಾಗೂ ಅಚೇತನ ಎಂಬ ವಿಭಾಗವನ್ನು ನಿರೂಪಣೆ ಮಾಡಲಾಗಿತ್ತು.

ಪರರ ಪ್ರಕಾರ ಈ ಅಧಿಕರಣ

**तत्वप्रकाशिका – इदानीं तु पारमार्थिकीं दशामवचम्भ्य चेतनाचेतनस्य ब्रह्मानन्यत्वमुच्यते ।**

ಪ್ರಕೃತ ಈ ಅಧಿಕರಣದಲ್ಲಿ ಪಾರಮಾರ್ಥಿಕವಾದ ಅವಸ್ಥಿತಿಯನ್ನು ಅವಲಂಬಿಸಿ ಜಡ ಹಾಗೂ ಚೇತನಗಳಿಗೆ ಬ್ರಹ್ಮಸ್ವರೂಪವನ್ನು ನಿರೂಪಣೆ ಮಾಡಲಾಗಿದೆ.

ಬ್ರಹ್ಮಾಭೇದವಿಷಯದಲ್ಲಿ ಪ್ರಮಾಣವಿಲ್ಲ

**तत्वप्रकाशिका – 'वाचारम्भणम्' इत्यादिश्रुतेरिति व्याख्यानं न युक्तम्। प्रपञ्चस्य ब्रह्मानन्यत्वे प्रमाणाभावादिति भावः ।**

'ವಾಚಾರಂಭಣಮ್' ಎಂಬ ಶ್ರುತಿಯು ಜಡ ಚೇತನಗಳಿಗೆ ಬ್ರಹ್ಮಭೇದವನ್ನು ಹೇಳಲು ಪ್ರಮಾಣವಾಗಿದೆ. ಎಂಬುದಾಗಿ ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಇದು ಅಯುಕ್ತವಾಗಿದೆ. ಪ್ರಪಂಚವು ಬ್ರಹ್ಮನಿಗಿಂತ ಅಭಿನ್ನವಾಗಿದೆ ಎನ್ನಲು ಯಾವುದೇ ಪ್ರಮಾಣ ಇರುವುದಿಲ್ಲ.

'ಅಜೋಹಿ' ಇತ್ಯಾದಿ ಭಾಷ್ಯಕ್ಕೆ ಪೀಠಿಕೆ

**तत्वप्रकाशिका – न केवलं चेतनानामचेतनानां चानन्यत्वे प्रमाणाभावः। किं तु प्रमाणविरुद्धं चेति भावेनाह – अजो हीति ।।**

ಚೇತನ ಹಾಗೂ ಅಚೇತನಪದಾರ್ಥಗಳಿಗೆ ಐಕ್ಯವಿದೆ ಎನ್ನಲು ಪ್ರಮಾಣ ಇರುವುದಿಲ್ಲ. ಅಷ್ಟೇ ಅಲ್ಲ ಪ್ರಮಾಣವಿರುದ್ಧವೇ ಆಗಿದೆ. ಈ ಅಭಿಪ್ರಾಯದಿಂದ 'ಅಜೋಹಿ' ಇತ್ಯಾದಿ ಭಾಷ್ಯದ ಮಾತು ಹೊರಟಿದೆ.

ಜೀವನು ಪ್ರಕೃತಿಯನ್ನು ಸೇವಿಸುತ್ತಾನೆ

**तत्वप्रकाशिका – रजःसत्त्वतमागुणात्मिकां स्वसदृशमहदादिकार्याणि जनयन्तीं प्रकृतिं सेवमानः कश्चिज्जीवोऽनुवर्तते ।**

ಒಬ್ಬ ಜೀವನು ಸತ್ವ ರಜಸ್ಸು ಹಾಗೂ ತಮಸ್ಸುಗಳೆಂಬ ಮೂರು ಗುಣಗಳಿಂದ ಕೂಡಿದ ತನಗೆ ಸದೃಶವಾದ ಮಹತ್ತತ್ವ ಮೊದಲಾದ ಕಾರ್ಯಗಳನ್ನು ಉತ್ಪತ್ತಿ ಮಾಡುವ ಪ್ರಕೃತಿಯನ್ನು ಸೇವಿಸುವವನಾಗಿ ಅದನ್ನು ಅನುಸರಿಸುತ್ತಾನೆ.

ಮತ್ತೊಬ್ಬ ಜೀವನು ಬಿಡುತ್ತಾನೆ

**तत्वप्रकाशिका – कश्चिदस्यां भोगान् भुक्त्वा जहातीति मुक्तामुक्तयोः परस्परं भेदः श्रूयते ।**

ಮತ್ತೊಬ್ಬ ಜೀವನು ಈ ಪ್ರಕೃತಿಯಿಂದ ಅನೇಕ ಭೋಗಗಳನ್ನು ಅನುಭವಿಸಿ ಅದನ್ನು ತ್ಯಾಗ ಮಾಡುತ್ತಾನೆ. ಹೀಗೆ ಮುಕ್ತ ಹಾಗೂ ಅಮುಕ್ತರಲ್ಲಿ ಪರಸ್ಪರ ಭೇದವಿರುವುದು ಶ್ರುತಿಯಿಂದ ತಿಳಿಯುತ್ತದೆ.

'ಅನಾದ್ಯನಂತಂ' ಎಂಬ ಭಾಷ್ಯಕ್ಕೆ ಪೀಠಿಕೆ

**तत्वप्रकाशिका – अत्रेश्वरोऽपि मुक्त उच्यते । अचेतनप्रपञ्चस्य ब्रह्मानन्यत्वं नाम बाधितत्वं विवक्षितं परस्य, तच्च प्रमाणविरुद्धमिति भावेनाह – अनादीति ।।**

ಈ ಶ್ರುತಿಯಲ್ಲಿ ಮುಕ್ತಪದದಿಂದ ಈಶ್ವರನೂ ಕೂಡ ಪ್ರತಿಪಾದ್ಯನಾಗಿದ್ದಾನೆ. ಅಚೇತನ ಪ್ರಪಂಚಕ್ಕೆ ಬ್ರಹ್ಮನಿಂದ ಅಭೇದವಿದೆ ಎಂದರೆ ಬಾಧಿತತ್ವವು ವಿವಕ್ಷಿತವೆಂದು ಅದ್ವೈತಿಯು ಹೇಳುತ್ತಾನೆ. ಆದರೆ ಅದ್ವೈತಿಯ ಈ ಅಭಿಪ್ರಾಯವು ಪ್ರಮಾಣಕ್ಕೆ ವಿರುದ್ಧವಾಗಿದೆ. ಈ ಅಭಿಪ್ರಾಯದಿಂದ 'ಅನಾದ್ಯನಂತಂ' ಎಂಬ ಭಾಷ್ಯವು ಹೊರಟಿದೆ.

ಅದ್ವೈತಿಗಳ ಸಮರ್ಥನೆ

**तत्वप्रकाशिका – नित्यमबाध्यं जीवो न ब्रह्मणो भिद्यते चेतनत्वात् ब्रह्मवत् । प्रपञ्चो बाध्यो दृश्यत्वाच्छुक्तिरजतवदित्यादियुक्तिसद्भावात् कथं प्रमाणाभाव इत्यत आह – परस्परेति ।।**

ಶ್ರುತಿಯಲ್ಲಿ ನಿತ್ಯಶಬ್ದಕ್ಕೆ ಅಬಾಧ್ಯವೆಂದರ್ಥ. ಜೀವನು ಚೇತನನಾದ್ದರಿಂದ ಬ್ರಹ್ಮನಿಗಿಂತ ಭಿನ್ನನಲ್ಲ.ಈ ವಿಷಯದಲ್ಲಿ ಬ್ರಹ್ಮನು ದೃಷ್ಟಾಂತನಾಗಿದ್ದಾನೆ. ಅನುಮಾನಸ್ವರೂಪವನ್ನು ಹೀಗೆ ತಿಳಿಯಬೇಕು - 'ಜೀವಃ ನ ಬ್ರಹ್ಮಣೋ ಭಿದ್ಯತೇ ಚೇತನತ್ವಾತ್ ಬ್ರಹ್ಮವತ್' ಎಂದು. ಪ್ರಪಂಚವು ಕಣ್ಣಿಗೆ ಕಾಣಸುತ್ತಿರುವುದರಿಂದ ಶುಕ್ತಿರಜತಾದಿಗಳಂತೆ ಬಾಧ್ಯವಾಗಿದೆ ಎಂಬುದನ್ನು ಅನುಮಾನದಿಂದ ಹೀಗೆ ಸಾಧಿಸುತ್ತಾರೆ - 'ಪ್ರಪಂಚಃ ಬಾಧ್ಯಃ ದೃಶ್ಯತ್ವಾತ್ ಶುಕ್ತಿರಜತವತ್' ಇವೇ ಮೊದಲಾದ ಅನುಮಾನ ಪ್ರಮಾಣದಿಂದ ಪ್ರಪಂಚವು ಬಾಧ್ಯವೆಂದು ಸಿದ್ಧವಾಗುತ್ತಿರುವಾಗ ಬಾಧ್ಯತ್ವ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಹೇಗೆ ಹೇಳುತ್ತಿರಿ ? ಈ ಪ್ರಶ್ನೆಗೆ 'ಪರಸ್ಪರ ವಿರೋಧೇ ತು' ಎಂಬ ಭಾಷ್ಯದ ಮಾತಿನಿಂದ ಉತ್ತರಿಸಲಾಗಿದೆ.

ವಾಕ್ಯವಿರೋಧ ಪರಿಹಾರಕ್ಕೆ ಯುಕ್ತಿ

**तत्वप्रकाशिका – वाक्यानां विरोध एवैकवाक्यानुसारियुक्तिसिद्धार्थो ग्राह्यो न केवलयुक्तिसिद्धार्थ इत्यर्थः । सन्तु तर्हि वाचारम्भणमित्यादि-श्रुतिस्मृतयः प्रमाणमत्रेत्यत आह – विरुद्धवदिति ।।**

ವಾಕ್ಯಗಳಿಗೆ ಪರಸ್ಪರ ವಿರೋಧ ಬಂದಾಗ ಮಾತ್ರ ಒಂದು ವಾಕ್ಯಕ್ಕೆ ಅನುಸಾರಿಯಾದ ಯುಕ್ತಿಯನ್ನು ಸ್ವೀಕರಿಸಿ ಅದರ ಅರ್ಥವನ್ನು ಸ್ವೀಕಾರ ಮಾಡಬೇಕು. ವಾಕ್ಯಗಳಿಗೆ ಪರಸ್ಪರ ವಿರೋಧ ಬಂದಾಗ ಶ್ರುತಿಗೆ ಅನುಕೂಲವಾದ ಯುಕ್ತಿಸಿದ್ಧವಾದ ಅರ್ಥವನ್ನು ಸ್ವೀಕಾರ ಮಾಡಬೇಕು. ಹೊರತು ಕೇವಲ ಯುಕ್ತಿಸಿದ್ಧವಾದ ಅರ್ಥವು ಗ್ರಾಹ್ಯವಾಗಿರುವುದಿಲ್ಲ. ಹಾಗಾದರೆ ಜಗನ್ಮಿಥ್ಯಾತ್ವದ ವಿಷಯದಲ್ಲಿ ಅನುಮಾನವು ಪ್ರಮಾಣವಾಗುವುದು ಬೇಡ. 'ವಾಚಾರಂಭಣಂ' ಇವೇ ಮೊದಲಾದ ಶ್ರುತಿ-ಸ್ಮೃತಿಗಳು ಪ್ರಮಾಣವಾಗುತ್ತವೆ ಅಲ್ಲವೆ ? ಎಂಬ ಪ್ರಶ್ನೆಗೆ 'ವಿರುದ್ಧವತ್ ಪ್ರತಿಯಂತೇ' ಇತ್ಯಾದಿ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

ಆಪಾತತಃ ಪ್ರತೀತಾರ್ಥವು ತ್ಯಾಜ್ಯ

**तत्वप्रकाशिका – नैताभिः श्रुतिभिरनन्यत्वं सिध्यति उदाहृतश्रुतिविरोधात्।**

ಆಪಾತತಃ ಪ್ರತೀತವಾದ ಅರ್ಥಗಳನ್ನು ಹೇಳುವ ಶ್ರುತಿಗಳು ಅಭೇದದ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಆ ಶ್ರುತಿಗಳಿಗೆ ಹಿಂದೆ ಉದಾಹರಿಸಿದ ಪ್ರಬಲವಾದ ಶ್ರುತಿಯಿಂದ ವಿರೋಧ ಬರುತ್ತದೆ.

ಅಪ್ರಾಮಾಣ್ಯ ಯಾವಾಗ ?

**तत्वप्रकाशिका – न च तर्हि परस्परविरोधादप्रामाण्यम् ।**

ಶ್ರುತಿಗಳಿಗೆ ಪರಸ್ಪರ ವಿರೋಧ ಬಂದಾಗ ಎರಡಕ್ಕೂ ಕೂಡ ಅಪ್ರಾಮಾಣ್ಯವನ್ನೇ ಹೇಳಬೇಕಲ್ಲವೆ ?ಎಂದು ಪ್ರಶ್ನಿಸಬಾರದು.

ಶ್ರುತಿಗಳಿಗೆ ವ್ಯಾಖ್ಯಾನ ಮಾಡುವ ಕ್ರಮ

**तत्वप्रकाशिका – विरोधे प्रत्यक्षानुसारेण तद्विरुद्धानन्यत्व-श्रुत्यादेर्व्याख्येयत्वादिति भावः ।**

ಎರಡು ಶ್ರುತಿಗಳಲ್ಲಿ ಪರಸ್ಪರ ವಿರೋಧವು ಪ್ರಾಪ್ತವಾದರೆ ಪ್ರತ್ಯಕ್ಷಾನುಸಾರಿಯಾಗಿ ಭೇದಶ್ರುತಿಗೆ ವಿರುದ್ಧವಾದ ಅಭೇದ ಶ್ರುತಿಗಳಿಗೆ ವ್ಯಾಖ್ಯಾನ ಮಾಡಬೇಕು.

ಕೇವಲ ಯುಕ್ತಿಯು ಅಪ್ರಮಾಣ

**ತತ್ವಪ್ರकाशिका – एतेन श्रुतियुक्तिभ्यामनन्यत्वसिद्धिरित्यपास्तम् । प्रत्यक्षस्य ततोऽपि बलवत्त्वाद्युक्तीनामाभासत्वाच्च**

ಹೀಗೆ ಹೇಳಿದ್ದರಿಂದ ಶ್ರುತಿಯುಕ್ತಿಗಳಿಂದ ಅಭೇದವು ಸಿದ್ಧವಾಗಬಹುದಲ್ಲವೆ ? ಎಂಬ ಮತ್ತೊಂದು ಆಕ್ಷೇಪವನ್ನು ಕೂಡ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಜೀವೇಶ್ವರರಿಗೆ ಭೇದವನ್ನು ಗ್ರಹಣ ಮಾಡುವ ಸಾಕ್ಷಿಪ್ರತ್ಯಕ್ಷವು ಯುಕ್ತಿ ಹಾಗೂ ಶ್ರುತಿಗಳಿಗಿಂತ ಪ್ರಬಲವಾಗಿದೆ. ಮತ್ತು ಯುಕ್ತಿಯು ಆಭಾಸವಾಗಿದೆ.

'ವೇದವೇದಾನುಸಾರೇ ತು' ಇತ್ಯಾದಿ ಭಾಷ್ಯಕ್ಕೆ ಪೀಠಿಕೆ

**तत्वप्रकाशिका – दृष्टमिति प्रबलबहुप्रमाणदर्शनं वा । स्मर्यते च प्रपञ्चमिथ्यात्ववादिश्रुत्यादेरप्यन्यार्थवर्णनमिति भावेनाह – ईश इति ॥ आभासत्वमेव विभज्याह – वेदेति ॥**

'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದಾಗಿ ಸಕಲಕ್ಕೂ ಅಭೇದವನ್ನು ಹೇಳುವ ಶ್ರುತಿಗೆ ಸಾಕ್ಷಿವಿರೋಧವನ್ನು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ ದೃಷ್ಟಾನುಸಾರ ಶಬ್ದಕ್ಕೆ ಪ್ರಬಲವಾದ ಅನೇಕ ಪ್ರಮಾಣಗಳಿಂದ ಎಂಬರ್ಥವನ್ನು ವಿವಕ್ಷಿಸಬೇಕು. ನಮ್ಮ ಪ್ರತ್ಯಕ್ಷ ಪ್ರಮಾಣವಾಗದಿದ್ದರೂ ಒಂದೊಂದು ವಿಷಯದಲ್ಲಿ ಒಬ್ಬೊಬ್ಬರ ಪ್ರತ್ಯಕ್ಷ ಇರುವುದರಿಂದ ದೋಷವಿಲ್ಲ. ಪ್ರಪಂಚಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವ ಶ್ರುತ್ಯಾದಿಗಳಿಗೂ ಸ್ಮೃತಿಗಳಲ್ಲಿ ಬೇರೆ ಅರ್ಥವನ್ನು ವರ್ಣಿಸಲಾಗಿದೆ. ಈ ಅಭಿಪ್ರಾಯದಿಂದ 'ಈಶೋನೀಶಃ' ಎಂಬ ಪ್ರಮಾಣವನ್ನು ಭಾಷ್ಯದಲ್ಲಿ ಉದಾಹರಿಸಿದ್ದಾರೆ ಯುಕ್ತಿಗಳಲ್ಲಿರುವ ಆಭಾಸತ್ವವೇ ಬೇರೆ. ಶ್ರುತಿಗಳಲ್ಲಿರುವ ಆಭಾಸತ್ವವೇ ಬೇರೆ. ಈ ವ್ಯತ್ಯಾಸವನ್ನು 'ವೇದವೇದಾನುಸಾರೇ ತು' ಎಂಬುದರಿಂದ ತೋರಿಸುತ್ತಿದ್ದಾರೆ.

ವೇದಕ್ಕೆ ಹೇಗೆ ವ್ಯಾಖ್ಯಾನಿಸಬೇಕು ?

**तत्वप्रकाशिका – वेदादेस्तदर्थ एवाभासत्वमन्यार्थकल्पना तु कर्तव्यैव । तदितरेषां विप्रलम्भोऽथ वा भ्रमः कारणं कल्पनीयम् ।**

ವೇದಾದಿಗಳು ಆಪಾತತಃ ತೋರುವ ಅರ್ಥದಲ್ಲಿ ಅಪ್ರಾಮಾಣಿಕಗಳಾಗಿವೆ. ಅಂಥ ಸಂದರ್ಭದಲ್ಲಿ ಆ ವೇದವಾಕ್ಯಗಳಿಗೆ ಬೇರೆ ಅರ್ಥವನ್ನೇ ಕಲ್ಪನೆ ಮಾಡಬೇಕು. ವೇದ ಹಾಗೂ ವೇದಕ್ಕೆ ಅನುಸಾರಿಯಲ್ಲದ ಪ್ರಮಾಣಗಳಿಗೆ ವಿಪರೀತವಾದ ಅರ್ಥಪ್ರತಿಪಾದನೆಯು ವಿಪ್ರಲಂಭ ಅಥವಾ ಭ್ರಮೆಯ ಮೂಲವಷ್ಟೇ ಆಗಿರುತ್ತದೆ ಎಂದು ತಿಳಿಯಬೇಕು.

ಯುಕ್ತಿಗೆ ಅರ್ಥಸಾಧಕತ್ವವಿಲ್ಲ

**तत्वप्रकाशिका – ननु प्रमाणत्वाविशेषात् कुतो न युक्तेरर्थसाधकत्वमित्यत आह – शास्त्रर्थेति ।।**

ಪ್ರಮಾಣವಾಗಿರುವುದರಿಂದ ಅರ್ಥಸಾಧಕತ್ವವು ಯುಕ್ತಿಗೇಕೆ ಬರುವುದಿಲ್ಲ ? ಎಂಬ ಪ್ರಶ್ನೆಗೆ ಉತ್ತರವಾಗಿ 'ಶಾಸ್ತ್ರಾರ್ಥ' ಎಂಬ ಪ್ರಮಾಣವನ್ನು ಉಲ್ಲೇಖಿಸುತ್ತಿದ್ದಾರೆ.

'ಶಾಸ್ತ್ರಾರ್ಥಯುಕ್ತೋ ಅನುಭವಃ'

**तत्वप्रकाशिका – तदनुकूलः साक्षादर्थविषयत्वात् । यथार्थज्ञानमुत्तमं प्रमाणम् । आगमस्य तत्साधनभूतस्य सर्वविषयत्वान्मध्यमत्वम् । प्रत्यक्षस्यानुप्रमाणस्यासर्वविषयस्वावरत्वम् । अनुप्रमाणमनुमानं प्रमाणान्तर-साहाय्ययुक्तमसर्वविषयमिति सर्वावरमिति । अतोऽर्थान्तरस्याप्रामाणिकत्वात् प्रमाणविरुद्धत्वाच्चोक्त एव सूत्रार्थ इति स्थितम् ।। १८ ।।**

'ಶಾಸ್ತ್ರಾರ್ಥಯುಕ್ತೋ ಅನುಭವಃ' ಎಂಬ ಪ್ರಮಾಣಶ್ಲೋಕದಲ್ಲಿ 'ಶಾಸ್ತ್ರಾರ್ಥಯುಕ್ತ' ಎಂಬ ಪದಕ್ಕೆ ಶಾಸ್ತ್ರಾರ್ಥಕ್ಕೆ ಅನುಕೂಲವಾದ ಅರ್ಥ ಎಂದರ್ಥ. ಯಥಾರ್ಥಜ್ಞಾನವು ಉತ್ತಮಪ್ರಮಾಣ. ಆಗಮವು ಕೇವಲಪ್ರಮಾಣಕ್ಕೆ ಅನುಕೂಲವಾದ್ದರಿಂದ ಮಧ್ಯಮ

ಪ್ರಮಾಣವಾಗಿದೆ ಪ್ರತ್ಯಕ್ಷವು ಅನುಪ್ರಮಾಣವಾಗಿದೆ. ಇದು ಸರ್ವವಿಷಯಕವಲ್ಲ. ಆದ್ದರಿಂದ ಅಧಮಪ್ರಮಾಣ. ಅನುಪ್ರಮಾಣವೆನಿಸಿದ ಅನುಮಾನವು ಬೇರೆ ಪ್ರಮಾಣವನ್ನು ಅಪೇಕ್ಷಿಸುವುದರಿಂದ ಮತ್ತು ಅಸರ್ವವಿಷಯಕವಾದ್ದರಿಂದ ಎಲ್ಲ ಪ್ರಮಾಣಗಳಿಗಿಂತ ಅಧಮವಾಗಿದೆ. ಆದ್ದರಿಂದ ಈ ಸೂತ್ರಕ್ಕೆ ಮೇಲೆ ಹೇಳಿದ ಅರ್ಥಕ್ಕಿಂತ ಬೇರೆ ಅರ್ಥವು ಅಪ್ರಾಮಾಣಿಕವಾಗಿದೆ. ಮತ್ತು ಪ್ರಮಾಣವಿರುದ್ಧವೂ ಆಗಿದೆ. ನಾವು ಹೇಳಿದ ಸೂತ್ರಾರ್ಥವೇ ನಿರ್ದುಷ್ಟವಾಗಿದೆ.

### ಭಾವದೀಪ

### ಸೂತ್ರದ ಆಕ್ಷೇಪ ಭಾಗಕ್ಕೆ ಟೀಕೆಯಲ್ಲಿ ವ್ಯಾಖ್ಯಾನ

**भावदीपः** – ॥ असद्व्यपदेशा० ॥ १८ ॥ शङ्कास्थनञोऽन्वयमाह– **न तद्युक्तमिति** ।। **असत्त्वेति** ।। सूत्रे असच्छब्दो भावप्रधान इति दर्शितम्। असत्त्वतो ह्यस्य प्रकृतसङ्गतिमाह– **साधनान्तरस्यैवाभाव इति** ।। अद्भ्य इत्यादिप्राचीनवाक्यं तु सुधोक्तदिशा हिरण्यगर्भपरं न त्वीशपरमिति भावः।

ಸೂತ್ರದಲ್ಲಿ ಆಕ್ಷೇಪ ಮಾಡುವ ಅಂಶದಲ್ಲಿ ಯಾವ 'ನಞ್' ಇದೆಯೋ ಅದಕ್ಕೆ ಎಲ್ಲಿ ಅನ್ವಯ ಮಾಡಬೇಕು ಎಂಬುದನ್ನು 'ನ ತದ್‌ಯುಕ್ತಮ್' ಎಂದು ಟೀಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ. 'ಅಸತ್ವ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅಸದ್ವ್ಯಪದೇಶವು ಭಾವಪ್ರಧಾನ ನಿರ್ದಿಷ್ಟವಾಗಿದೆ ಎಂದು ತೋರಿಸಿದಂತಾಯಿತು. ಅಸತ್ವವನ್ನು ಹೇಳಿದ್ದಕ್ಕೆ ಪ್ರಕೃತ ಸಂಗತಿಯನ್ನು 'ಸಾಧನಾಂತರಸ್ಯೈವ ಅಭಾವೇ' ಎಂಬ ವಾಕ್ಯದಿಂದ ತೋರಿಸಿದ್ದಾರೆ. 'ಅದ್ಭ್ಯಃ ಸಂಭೂತಃ' ಇತ್ಯಾದಿಯಾಗಿ ಹಿಂದಿನ ವಾಕ್ಯವು ನ್ಯಾಯಸುಧೆಯಲ್ಲಿ ಹೇಳಿದಂತೆ ಹಿರಣ್ಯಗರ್ಭಪರವಾಗಿದೆ ಈಶ್ವರಪರವಾಗಿಲ್ಲ ಎಂದು ಪ್ರಕೃತ ಪೂರ್ವಪಕ್ಷದಲ್ಲಿ ವಿವಕ್ಷಿಸಲಾಗಿದೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಪ್ರಳಯಕಾಲದಲ್ಲಿರುವ ಸಾಧನಗಳೆಲ್ಲವೂ ಅಸ್ವತಂತ್ರವಾಗಿವೆ ಎಂದು ಸಮರ್ಥನೆ ಮಾಡಲಾಯಿತು. ಇದರ ಮೇಲೆ ತಟಸ್ಥನು ಆಕ್ಷೇಪ ಮಾಡುತ್ತಿದ್ದಾನೆ. ಇವನ ಈ ಆಕ್ಷೇಪವನ್ನು 'ಅಸದ್ವ್ಯಪದೇಶಾತ್ ನ' ಎಂಬ ಸೂತ್ರಭಾಗದಲ್ಲಿ ಸೂತ್ರಕಾರರು ತೋರಿಸಿರುತ್ತಾರೆ. ಅದನ್ನು ಭಾಷ್ಯದಲ್ಲಿ ವಿವರಣೆ ಮಾಡಿದಂತೆ ಟೀಕೆಯಲ್ಲಿ

ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅಸದ್ವ್ಯಪದೇಶಾತ್ ನ' ಎಂಬ ಸೂತ್ರಭಾಗಕ್ಕೆ ಹೇಗೆ ಅರ್ಥಮಾಡಬೇಕೆಂಬುದನ್ನು 'ಸಾಧನಾಂತರಸತ್ವಂ' ಎಂಬ ವಾಕ್ಯಭಾಗದಿಂದ ಉಪಪಾದನೆ ಮಾಡುತ್ತಿದ್ದಾರೆ. 'ನಾಸದಾಸೀತ್' ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮಾತಿರಿಕ್ತವಾದುದಕ್ಕೆ ಅಸತ್ವವನ್ನು ಹೇಳಿದ್ದರಿಂದ ಪ್ರಲಯಕಾಲದಲ್ಲಿ ಯಾವುದು ಕೂಡ ಇರಲೇ ಇಲ್ಲ ಎಂದರ್ಥ.

'ಅದ್ಭ್ಯಃ ಸಂಭೂತಃ' ಎಂಬ ವಾಕ್ಯವು ಈಶ್ವರನನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಬೇರೆ ವಸ್ತುವಿನ ಸತ್ವವನ್ನು ಇದು ಹೇಳುತ್ತಲೇ ಇಲ್ಲ. ಹೀಗಿರುವಾಗ ಅದರ ನಿಷೇಧಮಾಡುವುದು ಹೇಗೆ ಸರಿಹೋಗುತ್ತದೆ ಎಂದು ಪ್ರಶ್ನಿಸಬಾರದು. 'ಅದ್ಭ್ಯಃ ಸಂಭೂತಃ' ಎಂಬ ವಾಕ್ಯವು ಚತುರ್ಮುಖಬ್ರಹ್ಮಪರವಾಗಿದೆ ಎಂದು ಪೂರ್ವಪಕ್ಷಿಯು ವಿವಕ್ಷಿಸಿದ್ದಾನೆ. ಪ್ರಳಯಕಾಲದಲ್ಲಿ 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯಿಂದ ಸಿದ್ಧನಾದ ಹಿರಣ್ಯಗರ್ಭನೂ ಕೂಡ ಇರಲಿಲ್ಲ ಎಂದರ್ಥವನ್ನು ಹೇಳಿದಂತಾಗುತ್ತದೆ.

'ನಾಸದಾಸೀತ್' ಎಂಬ ಋಙ್ಮಂತ್ರದ ಶ್ರುತಿಗೆ ವ್ಯಾಖ್ಯಾನ

**भावदीपः** – यदन्यद्वायोश्चान्तरिक्षाच्चैतत्सदित्यादितत्वोद्योताद्युक्त्या सदसच्छब्दयोरर्थमाह – **पञ्चभूतानीति** ।। रजःपदमुपलक्षणं मत्वाह।। ८।। **गुणत्रयमिति** ।। किमावरीवः कुह कस्य शर्मन्नम्भः किमासीद्गहनं गभीरम्। न मृत्युरासीदमृतं न तर्हि न रात्र्या अह्न आसीत्प्रकेतः। आनीदवातं स्वधया तदेकं तस्माद्धान्यन्न परः किञ्चनास। इति मन्त्रशेषस्यान्वयाय व्युत्क्रमेणार्थमाह – **मृत्युरिति** ।।

'ಅನ್ಯದ್ವಾಯೋಶ್ಚಾಂತರಿಕ್ಷಾಚ್ಚ ಏತತ್ ಸತ್' ಎಂದು ತತ್ತ್ವೋದ್ಯೋತದಲ್ಲಿ ಹೇಳಿದಂತೆ ಸತ್ ಮತ್ತು ಅಸತ್ ಶಬ್ದಗಳ ಅರ್ಥವನ್ನು 'ಪಂಚಭೂತಾನಿ' ಇತ್ಯಾದಿಯಾಗಿ ಹೇಳಿದ್ದಾರೆ. ಶ್ರುತಿಯಲ್ಲಿರುವ 'ರಜಃ' ಎಂಬ ಪದವು ಉಪಲಕ್ಷಣಯಾ ಗುಣತ್ರಯವನ್ನು ಹೇಳುತ್ತಿದೆ. ಇದನ್ನು 'ಗುಣತ್ರಯಂ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. 'ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ ಗಹನಂ ಗಭೀರಮ್ । ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ । ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ॥' ಈ ಮಂತ್ರಶೇಷಕ್ಕೆ ಅನ್ವಯವನ್ನು ತೋರಿಸುವುದಕ್ಕಾಗಿ ವಿಪರೀತಕ್ರಮದಲ್ಲಿ ಅರ್ಥವನ್ನು ಹೇಳಲು 'ಮೃತ್ಯುಃ' ಇತ್ಯಾದಿವಾಕ್ಯವು ಹೊರಟಿದೆ.

ವಿವರಣೆ – ಈ ಸೂತ್ರದಲ್ಲಿ ಉಲ್ಲೇಖ ಮಾಡಲ್ಪಟ್ಟ ಶ್ರುತಿಯ ಪೂರ್ಣಪಾಠ ಹೀಗಿದೆ–

ನಾಸದಾಸೀನ್ನೋ ಸದಾಸೀತ್ ತದಾನೀಂ ನಾಸೀದ್ರಜೋ ನೋ ವ್ಯೋಮಾ ಪರೋ ಯತ್ ।
ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಮ್
ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ ಪ್ರಕೇತಃ ।
ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ
ತಮ ಆಸೀತ್ ತಮಸಾ ಗೂಳ್ಹಮಗ್ರೇಽಪ್ರಕೇತಂ ಸಲಿಲಂ ಸರ್ವಮಾ ಇದಮ್ ॥
(ಋ.ಮಂಡಲ೧೦. ಮಂತ್ರ ೧೨೯);

ಋಙ್ಮಂತ್ರದ ಅರ್ಥ ಹೀಗಿದೆ ತದಾನೀಂ = ಪ್ರಳಯದಲ್ಲಿ, ಅಸತ್ = ವಾಯು ಅಂತರಿಕ್ಷ ಮೊದಲಾದ ಭೂತಗಳು, ನಾಸೀತ್ = ಇರಲಿಲ್ಲ. ಸತ್ = ಪೃಥಿವಿ, ಅಪ್ಪು, ತೇಜ ರೂಪವಾದ ಭೂತಪದಾರ್ಥಗಳು, ನೋ ಆಸೀತ್ = ಇರಲಿಲ್ಲ. ಅಥವಾ ಯಾವುದೇ ಕಾರ್ಯಪದಾರ್ಥಗಳು ಸರ್ವಾತ್ಮನಾ ಇರಲಿಲ್ಲ. ಕಾರಣಗಳು ಕೂಡ ವ್ಯಾಪಾರಯುಕ್ತವಾಗಿರಲಿಲ್ಲ. ರಜಃ = ಗುಣತ್ರಯಗಳು, ನೋ ಆಸೀತ್ = ಇರಲಿಲ್ಲ. ಪರಃ = ಸರ್ವಗತವಾದ, ವ್ಯೋಮ = ಜಡಪ್ರಕೃತಿಯು, ಮೂರ್ತಸಂಬಂಧ ಇಲ್ಲದ್ದರಿಂದ ಇರಲಿಲ್ಲ. ಪರಂ ವ್ಯೋಮ = ಅವ್ಯಾಕೃತಾಕಾಶವು ಕೂಡ ಮೂರ್ತಸಂಬಂಧವನ್ನು ಹೊಂದದೇ ಇರುವ ಕಾರಣ ಇರಲಿಲ್ಲ. ಮೃತ್ಯುಃ = ಮರಣವು, ಅಥವಾ ಮರಣಸಾಧನವು, ನ ಆಸೀತ್ = ಇರಲಿಲ್ಲ; ಅಮೃತಂ = ಸ್ವರ್ಗಾದಿಗಳು, ನಾಸೀತ್ = ಇರಲಿಲ್ಲ; ಪ್ರಲಯಕಾಲದಲ್ಲಿ ಅಹ್ನಃ = ಹಗಲಿಗೆ, ರಾತ್ರ್ಯಾಶ್ಚ = ರಾತ್ರಿಗೂಕೂಡ, ಪ್ರಕೇತಃ = ಸಾಮರ್ಥ್ಯವು, ನಾಸೀತ್ = ಇರಲಿಲ್ಲ; ಇವುಗಳು ಯಾವುದೇ ಇಲ್ಲದ್ದರಿಂದ, ಕುಹ = ಎಲ್ಲಿ, ಕಸ್ಯ ಶರ್ಮನ್ = ಯಾರಿಗಾಗಿ, ಕಿಮಾವರೀವಃ = ಯಾವುದು ತಾನೇ ಇತ್ತು. ಯಾವುದೂ ಇರಲಿಲ್ಲ. ಅಥವಾ ಕಿಂ ಆವರೀವಃ = ಜಡರೂಪಾವರಣವು ಇರಲು ಹೇಗೆ ಸಾಧ್ಯ ? ಯಾವುದೂ ಇರಲಿಲ್ಲ.

ಜಡರೂಪವಾದದ್ದು ಪ್ರಲಯಕಾಲದಲ್ಲಿ ಇರಲಿಲ್ಲ; ಆದರೆ ಚೇತನವು ಇರಬಹುದಲ್ಲವೇ? ಎಂದರೆ ಗಹನಂ = ಅತ್ಯಂತಗಂಭೀರವಾದ ಚೇತನಪ್ರಕೃತಿಯು, ಅಂಭಃ = ನೀರು, ಆಸೀತ್ ಕಿಮ್? ಇತ್ತೇನು; ಇರಲಿಲ್ಲ. ಹಾಗಿದ್ದರೆ ಏನು ಇತ್ತು? ಎಂದರೆ ತತ್ = ಬ್ರಹ್ಮನೆಂಬ ಒಂದೇ ವಸ್ತುವು ಅವಾತಂ = ವಾಯುವಿನ ಪ್ರೇರಣೆಯಿಲ್ಲದೇ, ಸ್ವಧಯಾ = ತನ್ನ ಸಾಮರ್ಥ್ಯದಿಂದಲೇ ಆನೀತ್ = ಚೇಷ್ಟೆಯಲ್ಲಿ ನಿರತವಾಗಿತ್ತು. ಅನ್ಯತ್ = ಬ್ರಹ್ಮನಿಗಿಂತ

ಉತ್ತಮವಾದ ಮತ್ತೊಂದು ವಸ್ತುವು, ಕಿಂಚನ = ಯಾವುದೂ ಕೂಡ ಸ್ವಾತಂತ್ರ್ಯಾದಿ ಧರ್ಮಗಳಿಂದ ಕೂಡಿದ್ದಾಗಿ, ನ ಆಸ = ಇರಲಿಲ್ಲ.

ಇತ್ಯಾದಿಯಾಗಿ ಶ್ರುತ್ಯರ್ಥವನ್ನು ತಿಳಿಯಬೇಕು.

## ಮಂತ್ರಶೇಷವನ್ನೇಕೆ ಉಲ್ಲೇಖಿಸಿದ್ದಾರೆ?

**भावदीपः** – प्रकेतः प्रभाव इत्यर्थः। कुह कुत्र शर्मन् शर्मणि निमित्तसप्तमीति भावेनाह – **सुखार्थमिति** ।। आवरीव इत्यस्यार्थ आवृणोदिति। वृञ्वरणे यङ्लुकि रूपमिति भावः। अवातं निवातम्। वातप्रेरणां विना। तच्छब्दार्थो ब्रह्मेति। स्वधया स्वसामर्थ्येनानीदचेष्टत। अनचेष्टायाम्। तस्मात् ह अन्यदिति पदच्छेदः। सिद्धान्तोपयोगाय शेषार्थोक्तिः। यद्वा अन्यत्किञ्चिन्नासेति सर्वासत्त्वोक्तेः शङ्कोपयोगित्वेनैवेति ज्ञेयम्। अत एव भाष्ये सर्वस्येत्युक्तिः। चोद्यमनूद्य नञोऽन्वयमाह – **भवेदेतदित्यादिना** ।।

ಪ್ರಕೇತಃ = ಪ್ರಭಾವವು, ಕುಹ = ಎಲ್ಲಿ, ಕಿಂ = ಯಾರ, ಶರ್ಮನ್ = ಸುಖಕ್ಕಾಗಿ (ಶರ್ಮಣಿ ಎಂಬುದಾಗಿ ನಿಮಿತ್ತಸಪ್ತಮೀ ಯನ್ನು ವಿವಕ್ಷಿಸಬೇಕು) ಆವರೀವ = ಯಾವುದು ಇತ್ತು ಅಥವಾ ಜಡರೂಪಾವರಣವು ಹೇಗೆ ಇತ್ತು. ವೃಞ್‌ವರಣೇ ಎಂಬ ಧಾತುವಿಗೆ ಯಙ್ಲುಕ್ ಎಂಬ ಪ್ರಯೋಗದಲ್ಲಿ ಆವರೀವ ಎಂಬ ಪ್ರಯೋಗವು ನಿಷ್ಪನ್ನವಾಗಿದೆ. ಅವಾತಂ = ವಾಯುವಿನ ಪ್ರೇರಣೆಯಿಲ್ಲದೆ, ತತ್ =ಆ ಬ್ರಹ್ಮನು, ಸ್ವಧಯಾ = ತನ್ನ ಸಾಮರ್ಥ್ಯದಿಂದಲೇ, ಆನೀತ್ = ಚೇಷ್ಟೆಯುಳ್ಳವನಾಗಿದ್ದನು. 'ಅನ ಚೇಷ್ಟಾಯಾಂ' ಎಂಬ ಧಾತುವಿನಿಂದ 'ಆನೀತ್' ಎಂಬ ರೂಪವು ನಿಷ್ಪನ್ನವಾಗಿದೆ. 'ತಸ್ಮಾತ್ ಹ' ಎಂಬುದಾಗಿ ಪದವಿಭಾಗವನ್ನು ಮಾಡಬೇಕು. ಸಿದ್ಧಾಂತಕ್ಕೆ ಉಪಯುಕ್ತವಾಗುವಂತೆ ಮಂತ್ರದ ಶೇಷಭಾಗವನ್ನು ಉಲ್ಲೇಖ ಮಾಡಿದ್ದಾರೆಂದು ತಿಳಿಯಬೇಕು. ಅಥವಾ ಬೇರೆಯಾವುದೂ ಇರಲಿಲ್ಲ ಎಂಬುದಾಗಿ ಸಕಲಕ್ಕೂ ಅಸತ್ವವನ್ನು ಹೇಳಿದ್ದರಿಂದ ಪೂರ್ವಪಕ್ಷಿಗೆ ಈ ಶ್ರುತಿಯ ಭಾಗವು ಉಪಯೋಗವಾಗಿದೆ ಎಂದೂ ಕೂಡ ತಿಳಿಯಬಹುದು. ಆದ್ದರಿಂದಲೇ ಭಾಷ್ಯದಲ್ಲಿ ಸರ್ವಸ್ಯ ಎಂಬ ಪದ ಪ್ರಯೋಗವನ್ನು ಮಾಡಿದ್ದಾರೆ. ಪೂರ್ವಪಕ್ಷವನ್ನು ಅನುವಾದ ಮಾಡಿ ನಞ್‌ಗೆ ಅನ್ವಯಕ್ರಮವನ್ನು ತೋರಿಸಲು 'ಭವೇದೇತತ್' ಇತ್ಯಾದಿ ವಾಕ್ಯವು ಹೊರಟಿದೆ.

ವಿವರಣೆ - 'ಆವರೀವಃ' ಎಂಬ ಕ್ರಿಯಾಪದಕ್ಕೆ ಒಟ್ಟು ಎರಡರ್ಥ. (೧) ವೃತು ವರ್ತನೇ ಎಂಬ ಧಾತುವಿನಿಂದ ರೂಪವು ನಿಷ್ಪನ್ನವಾಗಿದೆ ಎಂದು ವಿವಕ್ಷಿಸಿದರೆ ಹಿಂದೆ ಇದ್ದಿತು ಎಂದರ್ಥ. (೨) 'ವೃಞ್ ವರಣೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ವಿವಕ್ಷಿಸಿದರೆ ಯಙ್‌ಲುಕ್ ಪ್ರಯೋಗವಾಗುತ್ತದೆ. ಆಗ ಜಡರೂಪಾವರಣವು ಹೇಗೆ ಇರಲು ಸಾಧ್ಯ ? ಯಾವುದೂ ಕೂಡ ಇರಲಿಲ್ಲ ಎಂಬರ್ಥವನ್ನು ಹೇಳಿದಂತಾಗುತ್ತದೆ.

**'ಅಸದ್ವ್ಯಪದೇಶಾತ್' ಎಂಬುದಕ್ಕೆ ಸಿದ್ಧಾಂತದಲ್ಲೂ ಅನುಷಂಗವಿದೆ.**

**भावदीपः** – सूत्रे असद्व्यपदेशादित्येतत्सिद्धान्तभागेऽप्यनुषज्यत इति भावेन तदुच्यत इत्युक्तं दर्शयन् शेषोक्त्या भाष्यं व्याचष्टे– **साधनानामिति**।। हिशब्दोक्तप्रसिद्धिं व्यनक्ति– **अव्यक्तादाविति**।। हेत्वंशं व्यनक्ति – **न चेत्यादिना**।। **सत्वश्रवणादिति**।। तथा च प्रागुक्तदिशा तत्सद्भावोक्त्यनुपपत्त्या न स्वरूपासत्वव्यपदेश इति भावः।

ಸೂತ್ರದ ಪೂರ್ವಪಕ್ಷಭಾಗದಲ್ಲಿರುವ 'ಅಸದ್ವ್ಯಪದೇಶಾತ್' ಎಂಬುದನ್ನು ಸಿದ್ಧಾಂತಭಾಗದಲ್ಲೂ ಕೂಡ ಅನುಷಂಗ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ ಟೀಕೆಯಲ್ಲಿ ಶ್ರುತಿಯ ಶೇಷಭಾಗವನ್ನು ಉಲ್ಲೇಖಮಾಡುವ ಮೂಲಕ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಸಾಧನಾನಾಮ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಭಾಷ್ಯದಲ್ಲಿರುವ 'ಹಿ'ಶಬ್ದವು ಪ್ರಸಿದ್ಧಿಯನ್ನು ಹೇಳುತ್ತಿದೆ. ಆ ಪ್ರಸಿದ್ಧಿಯನ್ನೇ ಟೀಕಾದಲ್ಲಿ 'ಅವ್ಯಕ್ತಾದೌ' ಎಂದು ತಿಳಿಸಿದ್ದಾರೆ. ಸೂತ್ರದಲ್ಲಿರುವ ಹೇತ್ವಂಶವನ್ನು ವ್ಯಾಖ್ಯಾನ ಮಾಡಲು 'ನ ಚ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಸತ್ವಶ್ರವಣಾತ್' ಎಂದು ಟೀಕೆಯಲ್ಲಿದೆ. ಹಿಂದೆ ಹೇಳಿದ ಪ್ರಕಾರ ಅವ್ಯಕ್ತತ್ವಾದಿಧರ್ಮಗಳಿಂದ ಪ್ರಕೃತಿ ಮೊದಲಾದವು ಇದ್ದವು ಎಂದು ಹೇಳಿದ್ದರಿಂದಲೇ ಸ್ವರೂಪತಃ ಪ್ರಕೃತ್ಯಾದಿಗಳು ಇರಲಿಲ್ಲ ಎಂಬುದಾಗಿ ತಿಳಿಯಬಾರದು ಎಂಬುದು ಇದರ ಅಭಿಪ್ರಾಯ.

ವಿವರಣೆ – 'ಅಸದ್ವ್ಯಪದೇಶಾತ್' ಎಂಬುದಕ್ಕೆ ಭಾವಪ್ರಧಾನನಿರ್ದೇಶಮಾಡಿ 'ಅಸದ್ ವ್ಯಪದೇಶಾತ್' ಎಂಬ ಅರ್ಥವನ್ನು ಹಿಂದೆ ಹೇಳಲಾಗಿತ್ತು. ಇದನ್ನು ಸಿದ್ಧಾಂತದಲ್ಲೂ ಕೂಡ ವಿವಕ್ಷಿಸಬೇಕು. ಆಗ ಹೀಗರ್ಥ – ಅವ್ಯಕ್ತತ್ವಾದಿಧರ್ಮಗಳಿಂದ ಪರತಂತ್ರವಸ್ತುವಿನಲ್ಲಿ ಅಸತ್ವವ್ಯವಹಾರವನ್ನು ಶ್ರುತಿಯು ಮಾಡುತ್ತಿದೆ - ಎಂದು.

ಒಟ್ಟು ಅಭಿಪ್ರಾಯ ಹೀಗಿದೆ. ಪ್ರಕೃತ್ಯಾದಿಗಳು ಪ್ರಳಯಕಾಲದಲ್ಲಿ ಸ್ವರೂಪಸತ್ವಕ್ಕಿಂತ ಅತಿರಿಕ್ತವಾಗಿ ಅವ್ಯಕ್ತತ್ವಾದಿ ಧರ್ಮಗಳಿಂದ ಇದ್ದವು. ಯಾವುದಾದರೂ ಶ್ರುತಿಯಲ್ಲಿ ಪ್ರಳಯಕಾಲದಲ್ಲಿ ಇರಲಿಲ್ಲವೆಂದು ಹೇಳಿದರೆ ಸ್ವರೂಪತಃ ಇರಲಿಲ್ಲ ಎಂದರ್ಥವಲ್ಲ. ಸ್ವತಂತ್ರವಾಗಿ ಇರಲಿಲ್ಲ ಎಂದು ತಿಳಿಯಬೇಕು. ಇದು ತಮ ಆಸೀತ್ ಎಂಬ ವಾಕ್ಯಶೇಷದ ಬಲದಿಂದ ಸಿದ್ಧವಾಗುತ್ತದೆ.

ಅನ್ಯಥಾನುಪಪತ್ತಿಯಿರುವುದರಿಂದ ಸ್ವರೂಪತಃ ಅಸತ್ತೆನ್ನಬಾರದು.

**भावदीपः** – प्रकृत्यादिसत्वोक्तिस्फोरणाय तम आसीत्तमसा गूळ्हमग्रेऽप्रकेतं सलिलं सर्वमा इदमिति शेषार्थमाह – **यत्तम इति**।। अप्रकेतमित्यस्यार्थो अपरिमितमिति। आःइत्यस्यार्थ आसीदिति। अस्तेर्लङितिपि बहुलं छन्दसीतीडभावे हल्ङ्याभ्य इति लोपे तिप्यनस्तेरिति दत्वाभावे रूपम्। उक्तं चोनार्ये चोनमिष्यत इत्यत्र ऋग्भाष्यटीकायाम्। गुळ्हं गूहितम् – **अन्यथेति**।। स्वरूपासत्त्वाभिप्राय इत्यर्थः। तथा च वाक्यशेषे परशब्दान्यथानुपपत्त्या च न स्वरूपासत्त्वमर्थ इति भावः।

ಪ್ರಳಯಕಾಲದಲ್ಲಿ ಪ್ರಕೃತ್ಯಾದಿಗಳು ಇದ್ದವು ಎಂದು ಸ್ಪಷ್ಟಪಡಿಸುವುದಕ್ಕಾಗಿ 'ತಮ ಆಸೀತ್ ತಮಸಾ ಗೂಳ್ಹಮಗ್ರೇ ಅಪ್ರಕೇತಂ ಸರ್ವಮಾ ಇದಮ್' ಎಂಬ ಉಳಿದ ಶ್ರುತ್ಯರ್ಥವನ್ನು ಯತ್ತಮಃ ಎಂಬುದರಿಂದ ಹೇಳುತ್ತಿದ್ದಾರೆ. 'ಅಪ್ರಕೇತಂ' ಎಂಬುದರ ಅರ್ಥವನ್ನು 'ಅಪರಿಮಿತ' ಎಂದಿದ್ದಾರೆ. 'ಆಃ' ಎಂದರೆ 'ಆಸೀತ್' ಎಂದರ್ಥ. ಅಸ್ ಧಾತುವಿಗೆ ಲಙ್‌ಲಕಾರದಲ್ಲಿ ತಿಪ್ ಬರುತ್ತದೆ. ಬಹುಲಂ ಛಂದಸಿ ಎಂಬಂತೆ ಇಟ್ ಬರುವುದಿಲ್ಲ. ಆಗ ಹಲ್‌ಜ್ಯಾಭ್ಯಃ ಎಂಬ ಸೂತ್ರದಿಂದ ತಿಪ್ ಲೋಪವಾಗುತ್ತದೆ. ಅನಸ್ತೇಃ ಎಂಬುದರಿಂದ ದತ್ತ್ವವು ಬಾರದಿರುವುದರಿಂದ ಆ ಎಂಬ ರೂಪವು ಆಸೀತ್ ಎಂಬರ್ಥದಲ್ಲಿ ನಿಷ್ಪನ್ನವಾಗುತ್ತದೆ. ಇದನ್ನೇ ಋಗ್ಭಾಷ್ಯಟೀಕೆಯಲ್ಲೂ ಕೂಡ ಹೇಳಿರುತ್ತಾರೆ. 'ಅನ್ಯಥಾ' ಎಂದರೆ ಸ್ವರೂಪತಃ ಅಸತ್ವವಾಗಿತ್ತು ಎಂದು ವಿವಕ್ಷಿಸಿದರೆ ಎಂದರ್ಥ. ಹೀಗೆ ವಾಕ್ಯಶೇಷದಲ್ಲಿರುವ 'ಪರ'ಶಬ್ದದ ಅನ್ಯಥಾನುಪಪತ್ತಿಯಿಂದ ಪ್ರಳಯಕಾಲದಲ್ಲಿ ಪ್ರಕೃತ್ಯಾದಿಗಳು ಸ್ವರೂಪತಃ ಇರಲಿಲ್ಲ ಎಂಬರ್ಥವನ್ನು ವಿವಕ್ಷಿಸಬಾರದು.

ವಿವರಣೆ – 'ತಮ ಆಸೀತ್ ತಮಸಾ ಗೂಳ್ಹಮಗ್ರೇ ಅಪ್ರಕೇತಂ ಸರ್ವಮಾ ಇದಮ್' ಎಂಬುದಕ್ಕೆ ಹೀಗೆ ಅರ್ಥ. ತಮಃ = ಲಕ್ಷ್ಮೀಮಯವಾದ ನೀರು, ಆಸೀತ್ = ಇತ್ತು, ಅಗ್ರೇ

= ಸೃಷ್ಟಿಯ ಮೊದಲು ಯತ್ ಅಪ್ರಕೇತಂ = ಅಪರಿಮಿತವಾದ, ಸಲಿಲಂ -= ಜಲವು ಇತ್ತೋ, ತಮಸಾ = ಅಂತಹ ಶ್ರೀರೂಪದಿಂದ, ಇದಂ ಸರ್ವಂ = ಇದೆಲ್ಲವೂ, ಗೂಢಂ = ಮುಚ್ಚಲ್ಪಟ್ಟಿದೆ.

'ತಸ್ಮಾತ್‌ಧಾನ್ಯಂ ನ ಪರಃ ಕಿಂಚನಾಸ' ಎಂಬ ಶ್ರುತಿಯು ಸ್ವತಂತ್ರವಾಗಿ ಏನೂ ಇರಲಿಲ್ಲ ಎಂದು ಹೇಳುತ್ತಿದೆ ಹೊರತು ಸ್ವರೂಪತಃ ಯಾವುದೂ ಇರಲಿಲ್ಲವೆಂದು ಹೇಳುತ್ತಿಲ್ಲ. ಹಾಗೇನಾದರೂ ಸ್ವರೂಪತಃ ಇಲ್ಲವೆಂದು ನಿಷೇಧ ಮಾಡಿದ್ದರೆ ಪರಶಬ್ದವು ವ್ಯರ್ಥವಾಗುತ್ತಿತ್ತು. 'ಸವಿಶೇಷಣೇ ಹಿ ವಿಧಿನಿಷೇಧೌ ಸತಿ ವಿಶೇಷ್ಯೇ ಬಾಧೇ ವಿಶೇಷಣಂ ಉಪಸಂಕ್ರಾಮತಃ' - ವಿಶಿಷ್ಟವಾದ ಪದಾರ್ಥದಲ್ಲಿ ಒಂದನ್ನು ವಿಧಿ ಮಾಡಿದರೆ ಅಥವಾ ನಿಷೇಧಮಾಡಿದರೆ ಆಗ ವಿಧಿ ಅಥವಾ ನಿಷೇಧವು ವಿಶೇಷ್ಯಾಂಶದಲ್ಲಿ ಬಾಧಿತವಾದಾಗ ವಿಶೇಷಣದ ವಿಧಿನಿಷೇಧಗಳಲ್ಲಿ ಪರ್ಯವಸಾನಗೊಳ್ಳುತ್ತದೆ. ಬ್ರಹ್ಮನಿಗಿಂತ ಅತಿರಿಕ್ತವಾದ ಪ್ರಕೃತ್ಯಾದಿಗಳು ಇದ್ದರೂ ಕೂಡ ಅವುಗಳಿಗೆ ಸ್ವಾತಂತ್ರ್ಯ ಮತ್ತು ಕಾರ್ಯೋನ್ಮುಖತ್ವಾದಿಗಳು ಇರಲಿಲ್ಲವೆಂದೇ ವ್ಯಾಖ್ಯಾನ ಮಾಡಬೇಕು.

ನೇರವಾಗಿಯೇ ಸ್ವಾತಂತ್ರ್ಯವನ್ನು ನಿಷೇಧ ಮಾಡುತ್ತಿದೆ.

**ಭಾವದೀಪः** – यद्वा तद्वशस्य भावो न पर इत्यनुव्याख्यानसुधयो रीत्या न परः किञ्चनासेति वाक्यशेषे साक्षादेव स्वातन्त्र्यनिषेधाद्धर्मान्तरेणैवासत्त्वव्यपदेश इति भावेनोक्तमन्यथेति। तेन भाष्यस्थादिपदार्थो विवृतो ध्येयः॥ **अथेति**॥ प्रकारणविच्छेदार्थोऽर्थान्तरपरः॥ **निरूपित इति**॥ स्याल्लोकवदित्यनेनेति भावः।

ಅಥವಾ 'ತದ್ವಶಸ್ಯ ಭಾವೋ ನ ಪರಃ' ಎಂಬ ಅನುವ್ಯಾಖ್ಯಾನದಲ್ಲಿ ಹಾಗೂ ನ್ಯಾಯಸುಧೆಯಲ್ಲಿ ತಿಳಿಸಿದಂತೆ 'ನ ಪರಃ ಕಿಂಚನ ಆಸ' ಎಂಬ ವಾಕ್ಯಶೇಷದಲ್ಲಿಯೇ ಸಾಕ್ಷಾತ್ತಾಗಿ ಸ್ವಾತಂತ್ರ್ಯವನ್ನು ನಿಷೇಧ ಮಾಡಲಾಗಿದೆ. ಆದ್ದರಿಂದ ಧರ್ಮಾಂತರದಿಂದ ಅಸದ್ವ್ಯಪದೇಶವನ್ನು ಶ್ರುತ್ಯರ್ಥವನ್ನಾಗಿ ತಿಳಿಯಬೇಕು. ಈ ಅಭಿಪ್ರಾಯದಿಂದ 'ಅನ್ಯಥಾ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಹೀಗೆ ಹೇಳಿದ್ದರಿಂದ ಭಾಷ್ಯದಲ್ಲಿರುವ 'ಪಾರತಂತ್ರ್ಯಾದಿ' ಎಂಬಲ್ಲಿರುವ 'ಆದಿ'ಶಬ್ದವನ್ನು ವಿವರಣೆ ಮಾಡಿದಂತಾಯಿತು. 'ಅಥ ಪರಕೃತಾಪವ್ಯಾಖ್ಯಾಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅಥ ಎಂಬ ಪದವು ಹಿಂದಿನ ಪ್ರಕರಣವು ಮುಕ್ತಾಯವಾಗಿದೆ. ಈಗ ಪರಮತನಿರಾಕರಣೆಯು ಪ್ರಾರಂಭವಾಗಿದೆ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

'ನಿರೂಪಿತಃ' ಎಂದು ಹೇಳಿದ್ದಾರೆ. ಸ್ಥಾಲ್ಯೋಕವತ್ ಎಂಬಲ್ಲಿ ಹೇಳಲಾಗಿದೆ ಎಂಬುದು ಇದರ ಅಭಿಪ್ರಾಯ.

ವಿವರಣೆ – ಹಿಂದೆ ಪರಶಬ್ದದ ಅನ್ಯಥಾನುಪಪತ್ತಿಯಿಂದ ಸ್ವರೂಪತಃ ಅಸತ್ವವನ್ನು ಶ್ರುತ್ಯರ್ಥವನ್ನಾಗಿ ತಿಳಿಯಬಾರದೆಂದು ವ್ಯಾಖ್ಯಾನ ಮಾಡಲಾಯಿತು. ಈಗ ನೇರವಾಗಿಯೇ ಶ್ರುತಿಯು ಸ್ವಾತಂತ್ರ್ಯವನ್ನು ನಿಷೇಧಮಾಡುತ್ತಿದೆ. ಆದ್ದರಿಂದ ಸ್ವರೂಪತಃ ಅಸತ್ವವನ್ನು ತಿಳಿಯಬಾರದೆಂದು ವ್ಯಾಖ್ಯಾನ ಮಾಡುತ್ತಿದ್ದಾರೆ. ಅನುವ್ಯಾಖ್ಯಾನದಲ್ಲಿ 'ಇತಿ ಶ್ರುತೇಃ ತದ್ವಶಸ್ಯ ಭಾವೋ ನ ಪರಃ ಇತ್ಯತಃ' - ಶ್ರುತಿಯ ಆಧಾರದಿಂದ ಪ್ರಕೃತಿ ಮೊದಲಾದವುಗಳು ಭಗವದಧೀನವೆಂದು ಅಂಗೀಕರಿಸಲಾಗಿದೆ. 'ನ ಪರಃ' ಎಂಬ ವಾಕ್ಯಶೇಷವು ಇದಕ್ಕೆ ಆಧಾರವಾಗಿದೆ ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದಕ್ಕೆ ನ್ಯಾಯಸುಧೆಯಲ್ಲಿ ವ್ಯಾಖ್ಯಾನ ಮಾಡುವಾಗ ಹೀಗೆ ಹೇಳಿದ್ದಾರೆ. 'ತಸ್ಮಾದ್ಧಾನ್ಯನ್ನಪರಃ ಕಿಂಚನ ಆಸ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಉಲ್ಲೇಖ ಮಾಡಿದ ವಾಕ್ಯಶೇಷದ ಬಲದಿಂದ ಪ್ರಳಯಕಾಲದಲ್ಲಿ ಪ್ರಕೃತ್ಯಾದಿಗಳಿಗೆ ಸ್ವಾತಂತ್ರ್ಯವಿಲ್ಲವೆಂದು ತಿಳಿಯುತ್ತದೆ. ಈ ವಿಷಯವು 'ನ ಪರಃ ಇತ್ಯತಃ' ಎಂಬ ಅನುವ್ಯಾಖ್ಯಾನದಿಂದ ತಿಳಿಯುತ್ತದೆ. ಆದ್ದರಿಂದ ಶ್ರುತ್ಯರ್ಥ ಹೀಗಿದೆ – ತಸ್ಮಾತ್ = ಬ್ರಹ್ಮನಿಂದ, ಅನ್ಯತ್ = ಭಿನ್ನವಾದ ಪ್ರಕೃತ್ಯಾದಿಗಳು, ಪರಃ = ಸ್ವಾತಂತ್ರ್ಯದಿಂದ, ನಾಸ = ಕೂಡಿರಲಿಲ್ಲ. ಎಂದು. ಆದ್ದರಿಂದ ಪ್ರಕೃತ್ಯಾದಿಗಳಿಗೆ ಇರುವಿಕೆಯನ್ನು ಒಪ್ಪಿ ಅವುಗಳಿಗೆ ಸ್ವಾತಂತ್ರ್ಯವನ್ನು ನಿಷೇಧಮಾಡಲಾಗಿದೆ. ಪ್ರಕೃತ್ಯಾದಿಗಳೇ ಇರಲಿಲ್ಲವೆಂದು ಹೇಳುತ್ತಿಲ್ಲ.

### ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಎಂಬ ಶ್ರುತ್ಯರ್ಥ

**भावदीपः** – चेतनाचेतनस्येति समाहारः ।। **प्रमाणाभावादिति** ।। स्पष्टयिष्यते चायं हेतुरनुपदमिति भावः । उतरार्धस्थक्रिययोर्विशेष्यभूतकर्माकांक्षां पूरयितुं अजामेकां लोहितशुक्लकृष्णां बह्वीं प्रजां जनयन्तीं सरूपामिति पूर्वार्धमपि व्याचष्टे– **रजस्सत्वेति** ।। तावता जीवब्रह्माभेदे किं बाधकमित्यत आह– **अत्रेश्वरोऽपीति** ।। अद्वैतिमते मुक्तेश्वरयोरभेदादजोऽन्य इति श्रुत्यैव ब्रह्मणः संसारिभ्यो भेदोऽपि सिद्ध इति भावः ।।

ಟೀಕೆಯಲ್ಲಿ 'ಚೇತನಾಚೇತನಸ್ಯ' ಎಂದು ಹೇಳಿರುವುದು ಸಮಾಹಾರ ಹೊಂದಿದ ಪದವಾಗಿದೆ. 'ಪ್ರಮಾಣಾಭಾವಾತ್' ಎಂದು ಹೇಳಿದ್ದಾರೆ. ಪ್ರಪಂಚವು ಬ್ರಹ್ಮಸ್ವರೂಪವಾಗಿದೆ ಎಂಬ ವಿಷಯದಲ್ಲಿ

ಪ್ರಮಾಣವಿಲ್ಲ ಎಂಬುದನ್ನು ಸದ್ಯದಲ್ಲಿಯೇ ಮುಂದೆ ಸ್ಪಷ್ಟಪಡಿಸುವವರಿದ್ದೇವೆ. ಉತ್ತರಾರ್ಧದಲ್ಲಿರುವ 'ಅನುಶೇತೇ' ಮತ್ತು 'ಜಹಾತಿ' ಎಂಬೆರಡು ಕ್ರಿಯಾಪದಗಳೊಡನೆ ವಿಶೇಷವಾದ ಕರ್ಮದ ಜೊತೆ ಆಕಾಂಕ್ಷೆಯನ್ನು ಪೂರ್ತಿಮಾಡುವುದಕ್ಕಾಗಿ 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತೀಂ ಸರೂಪಾಮ್' ಎಂಬ ಶ್ರುತಿಯ ಪೂರ್ವಾರ್ಧವನ್ನು ಕೂಡ ವ್ಯಾಖ್ಯಾನ ಮಾಡಲು ರಜಃ ಸತ್ವ ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಇಷ್ಟರಿಂದಲೇ ಜೀವಬ್ರಹ್ಮರ ಅಭೇದದ ವಿಷಯದಲ್ಲಿ ಏನು ಬಾಧಕ ಹೇಳಿದಂತಾಯಿತು? ಎಂಬ ಪ್ರಶ್ನೆಗೆ 'ಅತ್ರ ಈಶ್ವರೋಽಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅದ್ವೈತಮತದಲ್ಲಿ ಮುಕ್ತರಿಗೂ ಹಾಗೂ ಈಶ್ವರನಿಗೂ ಅಭೇದವಿರುವುದರಿಂದ 'ಅಜೋಽನ್ಯಃ' ಎಂಬ ಶ್ರುತಿಯಿಂದಲೇ ಬ್ರಹ್ಮನಿಗೆ ಹಾಗೂ ಸಂಸಾರಿಗಳಿಗೆ ಭೇದವು ಕೂಡ ಸಿದ್ಧವಾಗುತ್ತದೆಂದು ತಿಳಿಯಬೇಕು.

ವಿವರಣೆ – ಜಡ ಮತ್ತು ಚೇತನರಿಗೆ ಅಭೇದವನ್ನು ಹೇಳಬಾರದೆನ್ನಲು 'ಅಜೋಽಹಿ' ಎಂಬ ಶ್ರುತಿಯು ಆಧಾರವಾಗಿದೆ. ಈ ಶ್ರುತಿಯ ಪೂರ್ಣಪಾಠ ಮತ್ತು ಶ್ರುತ್ಯರ್ಥ ಹೀಗಿದೆ–

ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ
ಬಹ್ವೀಃ ಪ್ರಜಾ ಜನಯಂತೀಂ ಸರೂಪಾಮ್ ।
ಅಜೋ ಏಕೋ ಜುಷಮಾಣೋಽನು
ಶೇತೇ ಜಹಾತ್ಯೇನಾಂ ಭುಕ್ತಭೋಗಾಂ ಅಜೋಽನ್ಯಃ ॥

ಲೋಹಿಶುಕ್ಲಕೃಷ್ಣಾಂ = ಸತ್ವರಜಸ್ತಮೋಗುಣಾತ್ಮಕವಾದ ಸರೂಪಾಂ = ತನ್ನಂತೆ ತ್ರಿಗುಣಾತ್ಮಕವಾದ, ಬಹ್ವೀಃ = ಅನೇಕ ಬಗೆಯ ಪ್ರಜಾಃ = ಕಾರ್ಯಗಳನ್ನು, ಜನಯಂತೀಂ = ಸೃಷ್ಟಿ ಮಾಡುವ, ಏಕಾಂ ಅಜಾಂ = ಅನಾದಿಯಾದ ಒಂದು ಪ್ರಕೃತಿತತ್ವವನ್ನು ಏಕಃ ಅಜಃ = ಸಂಸಾರಿಯಾದ ಒಬ್ಬ ಜೀವಾತ್ಮನು, ಜುಷಮಾಣಃ = ಅನುಭವಿಸುವವನಾಗಿ, ಅನುಷೇತೇ = ಅನುಸರಿಸುತ್ತಾನೆ. ಅನ್ಯಃ = ಮತ್ತೊಬ್ಬನಾದ, ಅಜಃ = ಅನಾದಿಯಾದ ಮುಕ್ತಜೀವನು, ಭುಕ್ತಭೋಗಾಂ = ತನ್ನ ಸುಖದುಃಖಗಳ ಅನುಭವಕ್ಕೆ ಕಾರಣವಾಗಿರುವ, ಏನಾಂ = ಈ ಪ್ರಕೃತಿಯನ್ನು, ಜಹಾತಿ = ತ್ಯಜಿಸುತ್ತಾನೆ.

### ಅದ್ವೈತಮತನಿರಾಸ

**भावदीपः –** **विवक्षितमिति**॥ अनृतस्य विश्वस्य सत्यब्रह्माभेदायोगादिति भावः। नित्यं ह्येवेति वाक्यस्य प्रकृतोपयोगायार्थमाह– **नित्यमबाध्यमिति**॥ तुरेवार्थ इति भावेनाह– **विरोध एवेति**॥ **उदाहृतेति**॥ अजो ह्येक इत्यादीत्यर्थः।

उत्तरार्धव्यावर्त्यमाह **– न चेति**।। तत्रेत्यस्यार्थो विरोध इति।। **प्रत्यक्षेति**।। साक्ष्यनुभवादिरूपेत्यर्थः।

'ವಿವಕ್ಷಿತಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಮಿಥ್ಯಾಭೂತವಾದ ಜಗತ್ತಿಗೆ ಸತ್ಯಭೂತನಾದ ಬ್ರಹ್ಮನಿಂದ ಅಭೇದವು ಯುಕ್ತವಾಗುವುದಿಲ್ಲ. ಆದ್ದರಿಂದ ಬಾಧಿತತ್ವವು ವಿವಕ್ಷಿತವಾಗಿದೆ ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ನಿತ್ಯಂ ಹ್ಯೇವ' ಎಂಬ ವಾಕ್ಯಕ್ಕೆ ಪ್ರಕೃತ ಉಪಯೋಗವನ್ನು ತೋರಿಸುವುದಕ್ಕಾಗಿ 'ನಿತ್ಯಂ ಅಬಾಧ್ಯಂ' ಎಂದು ಹೇಳಿರುತ್ತಾರೆ. ತುಶಬ್ದವು ಅವಧಾರಣಾರ್ಥದಲ್ಲಿದೆ ಎಂಬ ಅಭಿಪ್ರಾಯದಿಂದ 'ವಿರೋಧ ಏವ' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ಉದಾಹೃತಶ್ರುತಿವಿರೋಧಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ಅಜೋ ಹ್ಯೇಕಃ' ಎಂಬ ಹಿಂದೆ ಉದಾಹರಿಸಿದ ಶ್ರುತಿವಿರೋಧದಿಂದ ಎಂದಿದರ ಅರ್ಥ. ಉತ್ತರಾರ್ಧದಿಂದ ವ್ಯಾವೃತ್ತವಾಗುವ ಆಕ್ಷೇಪವನ್ನು 'ನ ಚ' ಎಂಬುದರಿಂದ ತೋರಿಸುತ್ತಿದ್ದಾರೆ. 'ತತ್ರ' ಎಂಬುದರ ಅರ್ಥವನ್ನು 'ವಿರೋಧೇ' ಎಂದು ವ್ಯಾಖ್ಯಾನ ಮಾಡಿದ್ದಾರೆ. 'ಪ್ರತ್ಯಕ್ಷಾನುಸಾರೇಣ' ಎಂದರೆ ಸಾಕ್ಷ್ಯನುಭವರೂಪದಿಂದ ಎಂದರ್ಥ.

### 'ನಾವಾಕ್ಯಾ ಯುಕ್ತಿರಿಷ್ಯತೇ'

**भावदीपः** – ननु नावाक्या युक्तिरिष्यत इत्युक्त्या केवलयुक्तेः अजो ह्येक इत्यादिश्रुतिविरोधेन केवलश्रुत्या चानन्यत्वासिद्धावपि वाचारंभणमित्यादिश्रुतिसहितया प्रागुक्तयुक्त्या तत्सिद्धिरस्त्वित्यत आह– **एतेनेति**।। दृष्टानुसारेणेति वचनेनेत्यर्थः।। **श्रुतियुक्तिभ्यामिति**।। अन्योन्यसहिताभ्यामित्यर्थः। एतेनेत्युक्तं व्यनक्ति– **प्रत्यक्षस्येति**।। प्राबल्यमागमस्यैव जात्या तेषु त्रिषु स्मृतमित्यलौकिकविषयं साक्ष्यन्यप्रत्यक्षापेक्षं चेति भावः।।

ಆಕ್ಷೇಪ - 'ನಾವಾಕ್ಯಾ ಯುಕ್ತಿರಿಷ್ಯತೇ' 'ವೇದದ ಬೆಂಬಲವಿಲ್ಲದ ಯುಕ್ತಿಗಳನ್ನು ಅಪೇಕ್ಷೆ ಪಡಲಾರೆವು' ಎಂಬ ಮಾತಿನಂತೆ ಕೇವಲ ಯುಕ್ತಿಯನ್ನು ಆಶ್ರಯಿಸಿದರೆ ಅಜೋ ಹ್ಯೇಕಃ ಇತ್ಯಾದಿ ಶ್ರುತಿವಿರೋಧ ಬರುತ್ತದೆ. ಕೇವಲ ಶ್ರುತಿಯಿಂದಲೂ ಕೂಡ ಪ್ರಪಂಚಕ್ಕೂ ಬ್ರಹ್ಮನಿಗೂ ಅಭೇದವು ಸಿದ್ಧವಾಗುವುದಿಲ್ಲ. ಹಾಗಾಗಿ 'ವಾಚಾರಂಭಣಂ' ಎಂಬ ಶ್ರುತಿಯಿಂದ ಸಹಿತವಾದ ಹಿಂದೆ ಹೇಳಲ್ಪಟ್ಟ ಯುಕ್ತಿಯ ಬಲದಿಂದ ಪ್ರಪಂಚಕ್ಕೂ ಬ್ರಹ್ಮನಿಗೂ ಐಕ್ಯವನ್ನು ಸಾಧಿಸುತ್ತೇವೆ.

ಈ ಆಕ್ಷೇಪಕ್ಕೆ 'ಏತೇನ' ಇತ್ಯಾದಿ ಟೀಕಾಪಂಕ್ತಿಯಿಂದ ಉತ್ತರಿಸುತ್ತಿದ್ದಾರೆ. 'ಏತೇನ' ಎಂಬುದಕ್ಕೆ 'ತತ್ರ ದೃಷ್ಟಾನುಸಾರೇಣ' ಎಂಬ ಪ್ರಮಾಣವಚನದ ಬಲದಿಂದ ಎಂದರ್ಥ. 'ಶ್ರುತಿಯುಕ್ತಿಭ್ಯಾಂ' ಶ್ರುತಿಯಿಂದ ಸಹಿತವಾದ ಯುಕ್ತಿ, ಯುಕ್ತಿಯಿಂದ ಸಹಿತವಾದ ಶ್ರುತಿ ಎಂದರ್ಥ. ಏತೇನ ಎಂಬುದಾಗಿ ಹೇಳಿದ್ದನ್ನೇ ವಿವರಿಸಲು 'ಪ್ರತ್ಯಕ್ಷಸ್ಯ' ಎಂಬ ಟೀಕಾಪಂಕ್ತಿ ಹೊರಟಿದೆ. 'ಪ್ರಾಬಲ್ಯಮಾಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್' ಎಂಬುದು ಅಲೌಕಿಕವಿಷಯವಾಗಿದೆ. ಮತ್ತು ಸಾಕ್ಷ್ಯನ್ಯಪ್ರತ್ಯಕ್ಷಾಪೇಕ್ಷವಾಗಿದೆ ಎಂದು ತಿಳಿಯತಕ್ಕದ್ದು.

ವಿವರಣೆ - ಹಿಂದೆ ಅದ್ವೈತಿಗಳು 'ಜೀವಃ ಬ್ರಹ್ಮಣೋ ನ ಭಿದ್ಯತೇ ಚೇತನತ್ವಾತ್ ಬ್ರಹ್ಮವತ್' ಎಂಬ ಯುಕ್ತಿಯನ್ನು ಹಾಗೂ 'ಪ್ರಪಂಚಃ ಬಾಧ್ಯಃ ದೃಶ್ಯತ್ವಾತ್ ಶುಕ್ತಿರಜತವತ್' ಎಂಬ ಯುಕ್ತಿಯನ್ನು ಹೇಳಿ ಜೀವಬ್ರಹ್ಮರಿಗೆ ಅಭೇದವನ್ನು ಪ್ರಪಂಚಕ್ಕೆ ಬಾಧ್ಯತ್ವವನ್ನು ಉಪಪಾದನೆ ಮಾಡಿದ್ದರು. ಈ ಯುಕ್ತಿಗೆ 'ಯಚ್ಚಿಕೇತ' ಇತ್ಯಾದಿ ಶ್ರುತಿಗಳ ವಿರೋಧವನ್ನು ಹೇಳಲಾಯಿತು. ಇದರ ಮೇಲೆ ಪ್ರಕೃತ ಅದ್ವೈತಿಗಳು ತಮ್ಮ ಮತವನ್ನು ಪುನಃ ಸಮರ್ಥನೆ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಕೇವಲ ಯುಕ್ತಿಯನ್ನಾಗಲೀ ಕೇವಲ ಶ್ರುತಿಯನ್ನಾಗಲೀ ನಾವು ಪ್ರಮಾಣವನ್ನಾಗಿ ಹೇಳುವುದಿಲ್ಲ. ಶ್ರುತಿಸಹಿತವಾದ ಯುಕ್ತಿಯನ್ನು ಪ್ರಮಾಣವನ್ನಾಗಿ ಹೇಳುತ್ತೇವೆ. ಆದ್ದರಿಂದ ವಿಶ್ವಮಿಥ್ಯಾತ್ವವು ಸಿದ್ಧವಾಗುತ್ತದಲ್ಲವೇ!

ಅದ್ವೈತಿಗಳ ಈ ಆಕ್ಷೇಪಕ್ಕೆ ಪ್ರಕೃತ ಉತ್ತರವನ್ನು ನೀಡುತ್ತಿದ್ದಾರೆ. ಸಾಕ್ಷಿಪ್ರತ್ಯಕ್ಷಕ್ಕೆ ವಿರುದ್ಧವಾದ ವೇದವೂ ಕೂಡ ಅಪ್ರಮಾಣವೇ ಆಗುತ್ತದೆ. ಹಾಗಾಗಿ ಅದ್ವೈತಿಗಳು ಆಶ್ರಯಿಸಿದ ಯುಕ್ತಿಯು ಕೂಡ ದುರ್ಬಲವಾಗಿದೆ. ಶ್ರುತಿಯೂ ದುರ್ಬಲವಾಗಿದೆ. ಹೀಗೆ ದುರ್ಬಲವಾದ ಶ್ರುತಿಯುಕ್ತಿಗಳ ಆಧಾರದಿಂದ ಅದ್ವೈತವು ಸರ್ವಥಾ ಸಿದ್ಧವಾಗುವುದಿಲ್ಲ.

ಪ್ರಶ್ನೆ – ಟೀಕೆಯಲ್ಲಿ ಪ್ರತ್ಯಕ್ಷವು ಆಗಮಗಳಿಗಿಂತ ಪ್ರಬಲವಾಗಿದೆ ಎಂದು ಹೇಳಿದ್ದಾರೆ. ಆದರೆ ಶ್ರೀಮದಾಚಾರ್ಯರು 'ಪ್ರಾಬಲ್ಯಂ ಆಗಮಸ್ಯೈವ ಜಾತ್ಯಾ ತೇಷು ತ್ರಿಷು ಸ್ಮೃತಮ್' ಎಂಬುದಾಗಿ ಆಗಮಕ್ಕೇ ಸ್ವರೂಪತಃ ಪ್ರಾಬಲ್ಯವನ್ನು ಹೇಳಿರುತ್ತಾರೆ. ಆದ್ದರಿಂದ ಆಚಾರ್ಯರ ಮಾತಿಗೂ ಟೀಕಾರಾಯರ ಮಾತಿಗೂ ಪರಸ್ಪರವಿರೋಧಬರುತ್ತದಲ್ಲವೇ?

ಉತ್ತರ - ಈ ಪ್ರಶ್ನೆ ಅಯುಕ್ತವಾಗಿದೆ ಏಕೆಂದರೆ, 'ಪ್ರಾಬಲ್ಯಂ ಆಗಮಸ್ಯೈವ' ಎಂಬ ವಚನದಂತೆ ಅಲೌಕಿಕವಿಷಯದಲ್ಲಿ ಪ್ರತ್ಯಕ್ಷಕ್ಕಿಂತ ಆಗಮವೇ ಶ್ರೇಷ್ಠವಾಗಿದೆ. ಆದರೆ ಲೌಕಿಕವಿಷಯದಲ್ಲಿ ಪ್ರತ್ಯಕ್ಷವೇ ಪ್ರಬಲವಾಗುತ್ತದೆ. ಅಥವಾ ಸಾಕ್ಷಿಪ್ರತ್ಯಕ್ಷವನ್ನು ಬಿಟ್ಟು ಉಳಿದ ಪ್ರತ್ಯಕ್ಷಗಳು ದುರ್ಬಲವಾಗಿವೆ ಎಂಬುದಾಗಿ 'ಪ್ರಾಬಲ್ಯಂ ಆಗಮಸ್ಯೈವ' ಎಂಬ ವಚನವು

ಹೇಳುತ್ತಿದೆ. ಪ್ರಕೃತ 'ಪ್ರತ್ಯಕ್ಷಸ್ಯ ತತೋऽಪಿ ಬಲವತ್ತ್ವಾತ್' ಎಂಬ ಟೀಕಾವಾಕ್ಯವು ಸಾಕ್ಷಿಪ್ರತ್ಯಕ್ಷಕ್ಕೆ ಪ್ರಾಬಲ್ಯವನ್ನು ಹೇಳುತ್ತಿದೆ. ಹಾಗಾಗಿ ವಿರೋಧಕ್ಕೆ ಅವಕಾಶವಿಲ್ಲ.

### ಶಾಸ್ತ್ರಾನುಕೂಲವಾದ ಯಥಾರ್ಥಜ್ಞಾನವು ಅತ್ಯುತ್ತಮ

**भावदीपः – आभासत्वाच्चेति।।** तच्च तत्वनिर्णयादावन्यत्र विस्तृतमिति भावः। साक्षिप्रत्यक्षस्य सर्वस्मात् प्रबलत्वेऽपि प्रत्यक्षमात्रस्य श्रुतितो दुर्बलत्वात् पूर्वत्रारुच्या दृष्टशब्दं प्रकारान्तरेण व्याचष्टे **– दृष्टमितीति।।** तदर्थ एव विरुद्धार्थ एव। कारणमिति शेषोक्तिः। शास्त्रार्थमात्रविषय इति भ्रान्तिनिरासाय शास्त्रार्थयुक्तशब्दार्थमाह **– तदनुकूल इति।।** तेन तात्पर्यलिङ्गाद्यनुभवोऽपि सङ्गृहीतः। साक्षीति भ्रान्तिनिरासाय वा भ्रमसाधारण्यस्य वा निरासाय स्मृत्यन्यज्ञानभ्रमनिरासाय वाऽनुभवशब्दार्थमाह– **यथार्थज्ञानमिति।।** केवलप्रमाणरूपमित्यर्थः। उत्तमत्वे हेतुः। साक्षादर्थविषयत्वादिति।

'ಆಭಾಸತ್ವಾಚ್ಚ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಅಭೇದಪ್ರತಿಪಾದಕವಾದ ಯುಕ್ತಿಗಳು ಆಭಾಸವಾಗಿವೆ ಎಂಬುದನ್ನು ತತ್ತ್ವನಿರ್ಣಯಾದಿ ಗ್ರಂಥಗಳಲ್ಲಿ ವಿಸ್ತಾರವಾಗಿ ವಿವರಿಸಲಾಗಿದೆ ಎಂಬುದನ್ನು ಇಲ್ಲಿ ತಿಳಿಯಬೇಕು. ಸಾಕ್ಷಿ ಪ್ರತ್ಯಕ್ಷವು ಉಳಿದೆಲ್ಲ ಪ್ರಮಾಣಗಳಿಗಿಂತ ಪ್ರಬಲವಾಗಿದೆ. ಆದರೆ ಕೇವಲ ಪ್ರತ್ಯಕ್ಷವು ಶ್ರುತಿಗಿಂತ ದುರ್ಬಲವಾಗಿದೆ. ಹಾಗಾಗಿ ಇಲ್ಲಿಯ ತನಕ ಮಾಡಿದ ದೃಷ್ಟಶಬ್ದದ ವ್ಯಾಖ್ಯಾನದಲ್ಲಿ ಸ್ವಲ್ಪ ಅರುಚಿಯಿರುವ ಕಾರಣ ಮತ್ತೊಂದು ರೀತಿಯಲ್ಲಿ ಈ ದೃಷ್ಟಶಬ್ದಕ್ಕೆ ವ್ಯಾಖ್ಯಾನ ಮಾಡಲು 'ದೃಷ್ಟಮಿತಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ತದರ್ಥ ಏವ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ವಿರುದ್ಧವಾದ ಅರ್ಥವೇ ಎಂಬುದು ಇದರ ಅರ್ಥ. 'ಕಾರಣಂ' ಎಂಬುದನ್ನು ಇಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು.

'ತದನುಕೂಲಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಪ್ರಮಾಣವಾಕ್ಯದಲ್ಲಿ ಶಾಸ್ತ್ರಾರ್ಥಯುಕ್ತವಾದ ಅನುಭವ ಎಂದು ಹೇಳಿದ್ದಾರೆ. ಇದನ್ನು ನೋಡಿದಾಗ ಕೇವಲ ಶಾಸ್ತ್ರಾರ್ಥದಿಂದ ಯುಕ್ತವಾಗಿರಬೇಕೆಂಬ ಭ್ರಾಂತಿ ಬರುತ್ತದೆ. ಆದಕ್ಕೋಸ್ಕರ 'ಶಾಸ್ತ್ರಾರ್ಥಯುಕ್ತ'ಶಬ್ದಕ್ಕೆ 'ತದನುಕೂಲಃ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಶಾಸ್ತ್ರದಿಂದ ಯುಕ್ತವಾದ ಹಾಗೂ ಶಾಸ್ತ್ರಾರ್ಥಕ್ಕೆ ಅನುಕೂಲವಾದ ಅನುಭವದಿಂದ ಎಂಬರ್ಥವನ್ನು ಹೇಳಿದಂತಾಗುತ್ತದೆ. ಹೀಗೆ ಹೇಳಿದ್ದರಿಂದ ತಾತ್ಪರ್ಯಲಿಂಗಾದ್ಯನುಭವಗಳನ್ನು ಕೂಡ

ಸಂಗ್ರಹ ಮಾಡಿದಂತಾಯಿತು. ಅನುಭವವೆಂದರೆ ಸಾಕ್ಷಿಯನ್ನು ವಿವಕ್ಷಿಸಬೇಕು ಎಂಬ ಭ್ರಾಂತಿಯನ್ನು ನಿರಾಕರಿಸುವುದಕ್ಕೋಸ್ಕರ, ಭ್ರಮಸಾಧಾರಣವಾದ ಜ್ಞಾನವನ್ನು ನಿರಾಕರಿಸುವುದಕ್ಕೋಸ್ಕರ ಅಥವಾ ಸ್ಮೃತಿಯನ್ನು ಬಿಟ್ಟು ಉಳಿದ ಜ್ಞಾನವನ್ನು ವಿವಕ್ಷಿಸಬೇಕು ಎಂಬ ಭ್ರಾಂತಿಯ ನಿರಾಕರಿಸುವುದಕ್ಕೋಸ್ಕರ ಅನುಭವಶಬ್ದದ ಅರ್ಥವನ್ನು 'ಯಥಾರ್ಥಜ್ಞಾನಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ಯಥಾರ್ಥಜ್ಞಾನ' ಎಂದರೆ ಕೇವಲಪ್ರಮಾಣ ಎಂದರ್ಥ. ಇದು ಏಕೆ ಉತ್ತಮವಾಗಿದೆ ಎಂದರೆ ಸಾಕ್ಷಾದರ್ಥವಿಷಯಕವಾದ್ದರಿಂದ ಎಂಬುದಾಗಿ ಕಾರಣವನ್ನು ಹೇಳಿದ್ದಾರೆ.

ವಿವರಣೆ – ಬ್ರಹ್ಮಾನನ್ಯತ್ವವಿಚಾರದಲ್ಲಿ ಅದ್ವೈತಿಗಳು ಶ್ರುತಿ ಮತ್ತು ಯುಕ್ತಿಗಳನ್ನು ಆಧಾರವನ್ನಾಗಿ ನೀಡಿದರು. ಇದು ಅಯುಕ್ತವಾಗಿದೆ ಎಂಬುದನ್ನು ಪ್ರಕೃತ ಸಮರ್ಥನೆ ಮಾಡಲು ಹೊರಟಿದ್ದಾರೆ. ಸಾಕ್ಷಿಪ್ರತ್ಯಕ್ಷವು ಶ್ರುತಿಗಿಂತಲೂ ಕೂಡ ಶ್ರೇಷ್ಠವಾಗಿದೆ. ಆದ್ದರಿಂದ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಯಿಂದ ಅನನ್ಯತ್ವವು ಸಿದ್ಧವಾಗುವುದಿಲ್ಲ. ಯುಕ್ತಿಗಳು ಹೇತ್ವಾಭಾಸಗಳಿಂದ ದುಷ್ಟವಾಗಿವೆ. ಅದರಿಂದಲೂ ಕೂಡ ಅನನ್ಯತ್ವವು ಸಿದ್ಧವಾಗುವುದಿಲ್ಲ. ಇನ್ನೂ ಹೆಚ್ಚಿನ ವಿಚಾರವನ್ನು ತತ್ವನಿರ್ಣಯಾದಿಗ್ರಂಥಗಳಿಂದ ತಿಳಿದುಕೊಳ್ಳಬೇಕು.

'ತತ್ರ ದೃಷ್ಟಾನುಸಾರೇಣ' ಎಂಬ ಭಾಷ್ಯದ ಮಾತಿಗೆ ದೃಷ್ಟಶಬ್ದಕ್ಕೆ 'ಸಾಕ್ಷಿಪ್ರತ್ಯಕ್ಷ' ಎಂಬರ್ಥವನ್ನು ವಿವಕ್ಷಿಸಿ ವ್ಯಾಖ್ಯಾನ ಮಾಡಲಾಯಿತು. ಈ ವ್ಯಾಖ್ಯಾನವನ್ನು ವಿವಕ್ಷಿಸಿದರೆ ಸ್ವಲ್ಪ ಅಸ್ವಾರಸ್ಯವಿದೆ. ದೃಷ್ಟಶಬ್ದಕ್ಕೆ ಕೇವಲ ಪ್ರತ್ಯಕ್ಷ ಎಂದಷ್ಟೇ ಅರ್ಥ. ಅದು ಸಾಕ್ಷಿಪ್ರತ್ಯಕ್ಷವೂ ಆಗಬಹುದು. ಬೇರೆ ಪ್ರತ್ಯಕ್ಷವೂ ಆಗಬಹುದು. ಸಾಕ್ಷಿಪ್ರತ್ಯಕ್ಷವೇನೋ ಉಳಿದೆಲ್ಲ ಪ್ರಮಾಣಗಳಿಂದ ಪ್ರಬಲವಾಗುತ್ತದೆ. ಆದರೆ ಉಳಿದ ಪ್ರತ್ಯಕ್ಷಗಳಿಗೆ ಪ್ರಾಬಲ್ಯವಿರುವುದಿಲ್ಲ. ಆದ್ದರಿಂದ ಪ್ರತ್ಯಕ್ಷಸಾಮಾನ್ಯವಾಚಕವಾದ ದೃಷ್ಟಶಬ್ದವನ್ನು ಹೇಗೆ ಪ್ರಯೋಗಿಸಿದರು? ಈ ಆಶಂಕೆಗೆ ಉತ್ತರಿಸುವುದಕ್ಕಾಗಿ ದೃಷ್ಟ ಶಬ್ದಕ್ಕೆ ಪ್ರತ್ಯಕ್ಷ ಎಂಬ ಅರ್ಥವನ್ನೇ ಬಿಟ್ಟು ಪ್ರಬಲವಾದ ಪ್ರಮಾಣ ಮತ್ತು ಬಹುಪ್ರಮಾಣ ಎಂಬರ್ಥವನ್ನು ವಿವಕ್ಷಿಸುತ್ತಿದ್ದಾರೆ.

ಅನುಭವವು ಶಾಸ್ತ್ರಾರ್ಥಯುಕ್ತವಾಗಿರಬೇಕು. ಆಗ ಮಾತ್ರ ಉತ್ತಮಪ್ರಮಾಣವಾಗುತ್ತದೆಂಬುದನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಕೇವಲ ಶಾಸ್ತ್ರಯುಕ್ತವಾದಾಗ ಮಾತ್ರ ಉತ್ತಮ ಪ್ರಮಾಣವಾಗುವುದಲ್ಲ; ಶಾಸ್ತ್ರಕ್ಕೆ ಅನುಕೂಲವಾಗಿದ್ದಾಗಲೂ ಕೂಡ ಉತ್ತಮಪ್ರಮಾಣವಾಗುತ್ತದೆಂಬುದನ್ನು ಟೀಕೆಯಲ್ಲಿ ತಿಳಿಸಿದ್ದಾರೆ. ಹೀಗೆ ಹೇಳಿದ್ದರಿಂದ ತಾತ್ಪರ್ಯಲಿಂಗಾದಿಗಳಿಂದ ಕೂಡಿದ ಅನುಭವವು ಕೂಡ ಉತ್ತಮಪ್ರಮಾಣವೆಂಬುದನ್ನು ಸಮರ್ಥಿಸಿದಂತಾಗುತ್ತದೆ. ಇಲ್ಲದಿದ್ದರೆ ಉಪಕ್ರಮೋಪಸಂಹಾರಾದಿಗಳಿಂದ ಕೂಡಿದ ಅನುಭವವು

ಅಪ್ರಮಾಣವಾಗಬೇಕಾಗಿತ್ತು. ಮತ್ತು ಶಾಸ್ತ್ರಾರ್ಥದಿಂದ ಕೂಡಿರುವ ಕಾರಣ ಅಥವಾ ಶಾಸ್ತ್ರಕ್ಕೆ ಅನುಕೂಲವಾದ ಅರ್ಥದಿಂದ ಕೂಡಿರುವ ಕಾರಣ ಯಥಾರ್ಥಜ್ಞಾನವು ಉತ್ತಮಪ್ರಮಾಣವಾಗುತ್ತದೆಂದು ಟೀಕೆಯಲ್ಲಿ ಹೇಳಿದ್ದಾರೆ. ಈ ವಾಕ್ಯವನ್ನು ನೋಡಿದಾಗ ಮೂರು ರೀತಿಯಲ್ಲಿ ಸಂಶಯ ಬರುತ್ತದೆ. ಸಾಕ್ಷಿಯು ಮಾತ್ರ ಉತ್ತಮಪ್ರಮಾಣವಾಗಿದೆ. ಅಥವಾ ಭ್ರಮಸಾಧಾರಣವಾದ ಶಾಸ್ತ್ರಾನುಕೂಲವಾದ ಜ್ಞಾನವು ಯಥಾರ್ಥಜ್ಞಾನವಾಗುತ್ತದೆ. ಅಥವಾ ಸ್ಮೃತಿಬಿಟ್ಟು ಉಳಿದ ಜ್ಞಾನವು ಶಾಸ್ತ್ರಾನುಕೂಲವಾಗಿದ್ದರೆ ಉತ್ತಮಪ್ರಮಾಣವಾಗುತ್ತದೆ ಎಂದು. ಈ ಮೂರನ್ನೂ ನಿರಾಕರಣೆ ಮಾಡುವುದಕ್ಕಾಗಿ 'ಯಥಾರ್ಥಜ್ಞಾನಂ' ಎಂದು ಟೀಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಶಾಸ್ತ್ರಾರ್ಥಯುಕ್ತವಾದ ಅಥವಾ ಶಾಸ್ತ್ರಾರ್ಥಕ್ಕೆ ಅನುಕೂಲವಾದ ಯಾವುದೇ ಕೇವಲ ಪ್ರಮಾಣವಿರಲಿ ಅದು ಉತ್ತಮಪ್ರಮಾಣವಾಗುತ್ತದೆ ಎಂದು ವ್ಯಾಖ್ಯಾನ ಮಾಡಿದಂತಾಗುತ್ತದೆ. ಏಕೆ ಉತ್ತಮವಾಗುತ್ತದೆ? ಎನ್ನಲು 'ಸಾಕ್ಷಾದರ್ಥವಿಷಯತ್ವಾತ್' ಎಂಬುದಾಗಿ ಹೇತುವನ್ನು ಟೀಕಾಪಂಕ್ತಿಯಲ್ಲಿ ಸೂಚನೆ ಮಾಡಿದ್ದಾರೆ.

### ಅನುಪ್ರಮಾಣವೇಕೆ ಉತ್ತಮವಲ್ಲ

**भावदीपः** – यद्यप्यनुप्रमाणान्यपि साक्षादेव वस्तुविषयकाणि न तु परंपरया। यथोक्तं सुधायां न विलक्षणत्वादितिनये अनुप्रमाणमेतानि ह्यक्षयुक्तिवचांस्यत इत्येतद्व्याख्यावसरे ज्ञानविषय एव हि करणानां विषय इत्यादि।

ಪ್ರಶ್ನೆ – ವಾಸ್ತವಿಕವಾಗಿ ಚಕ್ಷುರಾದಿ ಅನುಪ್ರಮಾಣಗಳೂ ಕೂಡ ನೇರವಾಗಿಯೇ ವಸ್ತುವನ್ನು ವಿಷಯೀಕರಿಸುತ್ತವೆ ಪರಂಪರೆಯಿಂದಲ್ಲ. ನ್ಯಾಯಸುಧೆಯ ನವಿಲಕ್ಷಣತ್ವಾಧಿಕರಣದಲ್ಲಿ ಇದನ್ನು ಸ್ಪಷ್ಟಪಡಿಸಿದ್ದಾರೆ. ಅನುಪ್ರಮಾಣಮೇತಾನಿ ಹ್ಯಕ್ಷಯುಕ್ತವಚಾಂಸಿ ಯತಃ ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ 'ಜ್ಞಾನವಿಷಯ ಏವ ಹಿ ಕರಣಾನಾಂ ವಿಷಯಃ'. 'ಜ್ಞಾನಕ್ಕೆ ಯಾವುದು ವಿಷಯವೋ ಅದು ಇಂದ್ರಿಯಗಳಿಗೂ ಕೂಡ ವಿಷಯ' ಇತ್ಯಾದಿಯಾಗಿ ಹೇಳಿದ್ದಾರೆ.

ವಿವರಣೆ – ಕೇವಲ ಪ್ರಮಾಣವು ಸಾಕ್ಷಾತ್ತಾಗಿ ವಸ್ತುವನ್ನು ವಿಷಯೀಕರಿಸುವುದರಿಂದ ಉತ್ತಮವಾಗಿದೆ ಎಂದು ಇಲ್ಲಿಯ ತನಕ ಸಮರ್ಥನೆ ಮಾಡಲಾಯಿತು. ಆದರೆ ಇದು ಹೇಗೆ ಸರಿ? ಎಂಬ ಪ್ರಶ್ನೆಯನ್ನು ಪ್ರಕೃತ ಮಾಡುತ್ತಿದ್ದಾರೆ. ಯಥಾರ್ಥಜ್ಞಾನರೂಪವಾದ ಕೇವಲ ಪ್ರಮಾಣವಷ್ಟೇ ಸಾಕ್ಷಾತ್ತಾಗಿ ಅರ್ಥವನ್ನು ವಿಷಯೀಕರಿಸುವುದಲ್ಲ. ತದಂಗಭೂತವಾದ ಚಕ್ಷುರಾದಿ ಇಂದ್ರಿಯಗಳೂ ಕೂಡ ನೇರವಾಗಿ ಜ್ಞೇಯವನ್ನು ವಿಷಯೀಕರಿಸುತ್ತವೆ. ಏಕೆಂದರೆ,

ಜ್ಞಾನಕ್ಕೆ ಯಾವ ಘಟಪಟಾದಿಗಳು ವಿಷಯವಾಗಿವೆಯೋ ಅವೇ ಚಕ್ಷುರಾದಿ ಇಂದ್ರಿಯಗಳಿಗೂ ಕೂಡ ವಿಷಯವಾಗಿವೆ. ಜ್ಞಾನವು ಹೇಗೆ ನೇರವಾಗಿ ಅರ್ಥವನ್ನು ವಿಷಯೀಕರಿಸುತ್ತದೋ ಅದರಂತೆ ಚಕ್ಷುರಾದಿ ಇಂದ್ರಿಯಗಳು ಕೂಡ ವಿಷಯೀಕರಿಸುತ್ತವೆ. ಹೀಗಿರುವಾಗ ಸಾಕ್ಷಾದರ್ಥವಿಷಯಕವಾದ್ದರಿಂದ ಕೇವಲಪ್ರಮಾಣವನ್ನಷ್ಟೇ ಉತ್ತಮ-ಪ್ರಮಾಣವೆಂದು ಹೇಗೆ ಹೇಳುತ್ತೀರಿ? ಅನುಪ್ರಮಾಣವನ್ನು ಕೂಡ ಉತ್ತಮವೆಂದು ಹೇಳಬೇಕಲ್ಲವೇ?

### ಅನುಪ್ರಮಾಣವು ಜ್ಞೇಯತ್ವಕ್ಕೆ ಸಾಕ್ಷಾದುಪಾಧಿಯಲ್ಲ

**भावदीपः** – तथाप्यत्रार्थशब्दस्य ज्ञेयवाचित्वाज्ज्ञेयविषयत्वं चानुप्रमाणानां ज्ञानोपाधिकत्वेन न साक्षात्। ज्ञानस्य तु आत्मोपाधिकत्वेन न तु स्वव्यतिरिक्तोपाधिकत्वेनेति तात्पर्यकत्वं ध्येयम्। उक्तं च तत्रैव सुधायां यथार्थज्ञानजनका यथार्थयुक्तयः स्मृता इत्येतद्व्याख्यावसरे ज्ञानमेव हि विषयस्य ज्ञेयतायां साक्षादुपाधिरित्यादि।

ಉತ್ತರ – ಹೌದು. ಆದರೆ ಅರ್ಥಶಬ್ದಕ್ಕೆ ಜ್ಞೇಯ ಎಂದರ್ಥ ಹೊರತು ಕೇವಲ ವಿಷಯ ಎಂದರ್ಥವಲ್ಲ. ಜ್ಞೇಯವಿಷಯತ್ವವು ಅನುಪ್ರಮಾಣಗಳಿಗೆ ಜ್ಞಾನೋಪಾಧಿಕವಾಗಿ ಬರುತ್ತದೆ ಹೊರತು ನೇರವಾಗಿ ಬರುವುದಿಲ್ಲ. ಜ್ಞಾನಕ್ಕೆ ಆತ್ಮೋಪಾಧಿಕವಾಗಿ ಬರುವುದರಿಂದ ತನಗಿಂತ ಅತಿರಿಕ್ತವಾದ ಉಪಾಧಿಯ ಅಪೇಕ್ಷೆ ಇರುವುದಿಲ್ಲ ಎಂಬ ತಾತ್ಪರ್ಯವನ್ನು ಇಲ್ಲಿ ಗಮನಿಸಬೇಕು. ಅದೇ ನ್ಯಾಯಸುಧಾ ಗ್ರಂಥದಲ್ಲಿ 'ಯಥಾರ್ಥಜ್ಞಾನಜನಕಾಃ ಯಥಾರ್ಥಯುಕ್ತಯಃ ಸ್ಮೃತಾಃ' ಎಂಬ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಹೀಗೆ ಹೇಳಿದ್ದಾರೆ. - 'ಜ್ಞಾನಮೇವ ಹಿ ವಿಷಯಸ್ಯ ಜ್ಞೇಯತಾಯಾಂ ಸಾಕ್ಷಾದುಪಾಧಿಃ'. ವಿಷಯದಲ್ಲಿ ಜ್ಞೇಯತ್ವವನ್ನು ಸಂಪಾದನೆ ಮಾಡಲು ಜ್ಞಾನವು ಸಾಕ್ಷಾದುಪಾಧಿಯಾಗಿದೆ ಎಂದು.

ವಿವರಣೆ - ಯಾವುದೇ ಒಂದು ಪದಾರ್ಥವು ಜ್ಞೇಯ ಎಂದೆನಿಸಬೇಕಾದರೆ ಜ್ಞಾನಕ್ಕೆ ವಿಷಯವಾಗಬೇಕು. ಇಲ್ಲದಿದ್ದರೆ ಆ ವಸ್ತುವಿನಲ್ಲಿ ಜ್ಞೇಯತ್ವವೇ ಬರಲು ಸಾಧ್ಯವಿಲ್ಲ. ಇಂಥ ಜ್ಞೇಯವನ್ನು ನೇರವಾಗಿ ವಿಷಯೀಕರಿಸಲು ಜ್ಞಾನಕ್ಕೆ ಮಾತ್ರ ಸಾಧ್ಯವಾಗುತ್ತದೆ ಹೊರತು ಇಂದ್ರಿಯಗಳಿಗೆ ಸಾಧ್ಯವಿಲ್ಲ. ಇಂದ್ರಿಯಗಳು ಒಂದು ವಸ್ತುವಿನಲ್ಲಿ ಜ್ಞೇಯತ್ವವನ್ನು

ಸಂಪಾದನೆ ಮಾಡಬೇಕಾದರೆ ಜ್ಞಾನದ ಮೂಲಕವಾಗಿಯೇ ಮಾಡಬೇಕು. ನೇರವಾಗಿ ಇಂದ್ರಿಯ ಸನ್ನಿಕರ್ಷವಾಗಿದೆ ಎಂಬ ಸಂಗತಿಯಿಂದ ವಸ್ತು ಜ್ಞೇಯ ಎನಿಸಲು ಸಾಧ್ಯವಿಲ್ಲ. ಆದರೆ ಜ್ಞಾನಕ್ಕೆ ಈ ಪರಿಸ್ಥಿತಿ ಇಲ್ಲ. ಅದು ತಾನಾಗಿಯೇ ವಸ್ತುವಿನಲ್ಲಿ ಜ್ಞೇಯತ್ವವನ್ನು ಸ್ವತಂತ್ರವಾಗಿ ಸಂಪಾದನೆ ಮಾಡುತ್ತದೆ. ಆದ್ದರಿಂದ ವಿಷಯದ ಜ್ಞೇಯತ್ವಕ್ಕೆ ಜ್ಞಾನವು ಸಾಕ್ಷಾತ್ ಉಪಾಧಿಯಾಗಿದೆ, ಇಂದ್ರಿಯವು ಪರಂಪರಯಾ ಉಪಾಧಿಯಾಗಿದೆ. ಈ ಕಾರಣದಿಂದ ಟೀಕೆಯಲ್ಲಿ 'ಸಾಕ್ಷಾದರ್ಥವಿಷಯತ್ವಾತ್' ಎಂಬ ಹೇತುವನ್ನು ಪ್ರಯೋಗಿಸಿದ್ದಾರೆ. ಇಲ್ಲಿರುವ 'ಅರ್ಥ'ಶಬ್ದಕ್ಕೆ ಜ್ಞೇಯ ಎಂಬರ್ಥವನ್ನು ವಿವಕ್ಷಿಸಿದರೆ ಮೇಲಿನಪ್ರಶ್ನೆಗೆ ಅವಕಾಶವಿಲ್ಲ.

## ಪ್ರಮಾಣಪದ್ಧತಿಗೂ ಹೀಗೆಯೇ ವ್ಯಾಖ್ಯಾನ

**भावदीपः** – यत्तु प्रमाणपद्धताविदं च साक्षाज्ज्ञेयविषयीकारित्वात् केवलमित्युच्यत इत्यादिवाक्यं तदप्येवं नेयम्॥ **अनुप्रमाणस्येति ।।** यथार्थज्ञानसाधनस्येत्यर्थः। भाष्ये अनुमाद्या इत्याद्यशब्दोऽनुमाविशेषार्थापत्त्यादिपर इति भावेनाह – **अनुप्रमाणमनुमानमिति ।।** यथार्थज्ञानसाधनमनुमानमित्यर्थः॥ १८ ॥

ಪ್ರಮಾಣಪದ್ಧತಿಯಲ್ಲಿ 'ಇದಂ ಚ ಸಾಕ್ಷಾತ್ ಜ್ಞೇಯವಿಷಯಕಾರಿತ್ವಾತ್ ಕೇವಲಂ ಇತ್ಯುಚ್ಯತೇ' - ಇತ್ಯಾದಿಯಾದ ವಾಕ್ಯಗಳಿವೆ. ಆ ವಾಕ್ಯಗಳಿಗೂ ಕೂಡ ಈಗಾಗಲೇ ಮಾಡಿದ ವ್ಯಾಖ್ಯಾನಕ್ಕೆ ಅನುಸಾರಿಯಾಗಿ ಅರ್ಥವನ್ನು ತಿಳಿಯಬೇಕು. 'ಅನುಪ್ರಮಾಣಸ್ಯ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದಕ್ಕೆ ಯಥಾರ್ಥಜ್ಞಾನಸಾಧನಕ್ಕೆ ಎಂಬರ್ಥವನ್ನು ತಿಳಿಯಬೇಕು. ಭಾಷ್ಯದಲ್ಲಿ 'ಅನುಮಾದ್ಯಾಃ' ಎಂಬಲ್ಲಿರುವ 'ಆದ್ಯ'ಶಬ್ದಕ್ಕೆ ಅನುಮಾನವಿಶೇಷ ಎನಿಸಿದ ಅರ್ಥಾಪತ್ತ್ಯಾದಿಗಳು ಎಂದರ್ಥ. ಈ ಅಭಿಪ್ರಾಯದಿಂದ 'ಅನುಪ್ರಮಾಣಮ್ ಅನುಮಾನಮ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಯಥಾರ್ಥಜ್ಞಾನಕ್ಕೆ ಸಾಧನವಾದ ಅನುಮಾನ ಎಂದಿದರ ಅರ್ಥ.

## ಭಾವದೀಪದ ವೈಶಿಷ್ಟ್ಯ

* ಸೂತ್ರದಲ್ಲಿರುವ ಅಸತ್‌ಶಬ್ದವು ಭಾವಪ್ರಧಾನನಿರ್ದಿಷ್ಟವಾಗಿದೆ ಎಂದು ವ್ಯಾಖ್ಯಾನ ಮಾಡಿದ್ದಷ್ಟೇ ಅಲ್ಲದೇ ಸಿದ್ಧಾಂತದಲ್ಲೂ ಕೂಡ 'ಅಸದ್ ವ್ಯಪದೇಶಾತ್' ಎಂಬುದನ್ನು ಅನುಷಂಗ ಮಾಡಬೇಕೆಂದು ತೋರಿಸಿದ್ದಾರೆ.

* 'ಅದ್ಭ್ಯಃ ಸಂಭೂತಃ' ಎಂಬ ವಾಕ್ಯಕ್ಕೆ ಹಿರಣ್ಯಗರ್ಭಪರವಾಗಿ ವ್ಯಾಖ್ಯಾನ ಮಾಡದಿದ್ದರೆ ಪೂರ್ವಪಕ್ಷವನ್ನು ತಿಳಿಯುವುದೇ ಕಷ್ಟವಾಗಿದೆ. ಈ ಸಂದರ್ಭದಲ್ಲಿ ನ್ಯಾಯಸುಧೆಯನ್ನು ನೆನೆಪಿಸಲಾಗಿದೆ.

* 'ನಾಸದಾಸೀತ್' ಎಂಬ ಶ್ರುತಿಯಲ್ಲಿರುವ 'ಆವರೀವ' ಎಂಬುದು ಯಜ್ ಲುಕ್ ಪ್ರಯೋಗ ಎಂದು ಹೇಳಿರುವುದು ಹಾಗೂ 'ಆ' ಎಂಬುದು ಆಸೀತ್ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ ಎಂದು ಹೇಳಿರುವುದು ಅತ್ಯಪೂರ್ವವಾದ ಅರ್ಥಗಳಾಗಿವೆ.

* 'ಅಥ' ಎಂಬ ಟೀಕೆಯಲ್ಲಿರುವ ಪದಕ್ಕೆ 'ಪ್ರಕರಣವಿಚ್ಛೇದ' ಎಂಬರ್ಥವನ್ನು ಹೇಳಿರುವುದು ಅಪೂರ್ವವಾದದ್ದು.

* 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಎಂಬ ಶ್ರುತಿಗೆ ಟೀಕೆಯಲ್ಲಿ ಅರ್ಥಹೇಳಿದ್ದಕ್ಕೆ ಸಂಗತಿಯೇ ಕಾಣಿಸುವುದಿಲ್ಲ. ಈ ಸಂದರ್ಭದಲ್ಲಿ 'ಉತ್ತರಾರ್ಧದಲ್ಲಿರುವ ಕ್ರಿಯಾಪದಗಳಿಗೆ ಕರ್ಮಾಕಾಂಕ್ಷೆಯ ಪೂರಣೆಗೋಸ್ಕರ' ಎಂಬ ಉತ್ತರವನ್ನು ಹೇಳಿದ್ದಾರೆ.

* 'ತತ್ರ ದೃಷ್ಟಾನುಸಾರೇಣ' ಎಂಬ ಭಾಷ್ಯವಾಕ್ಯಕ್ಕೆ ನಾನಾ ತರಹದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಮತ್ತು 'ದೃಷ್ಟಮಿತಿ ಪ್ರಬಲಬಹುಪ್ರಮಾಣದರ್ಶನಂ ವಾ' ಎಂಬ ಟೀಕಾವಾಕ್ಯಕ್ಕೆ ಸಂಗತಿ ತೋರಿಸಲು ಹಿಂದಿನ ಪಕ್ಷದಲ್ಲಿ ಅಸ್ವಾರಸ್ಯ ತೋರಿಸಿದ್ದು ಅಪೂರ್ವವಾಗಿದೆ.

* ಯಾವುದು ಉತ್ತಮಪ್ರಮಾಣ? ಎಂಬುದರ ಸಮರ್ಥನೆ ಟೀಕೆಯಿಂದ ಸ್ಪಷ್ಟವಾಗುವುದೇ ಇಲ್ಲ. ಇಂತಹ ಸಂದರ್ಭದಲ್ಲಿ ಕೇವಲ ಸಾಕ್ಷಿಯಾಗಲೀ ಭ್ರಮಪ್ರಮಾಸಾಧಾರಣವಾದ ಜ್ಞಾನವಾಗಲೀ ಸ್ಮೃತಿ ಬಿಟ್ಟು ಉಳಿದ ಜ್ಞಾನವಾಗಲೀ ಉತ್ತಮಪ್ರಮಾಣವೆಂದು ತಿಳಿಯಬಾರದು. ಶಾಸ್ತ್ರಾನುಕೂಲವಾದ ಯಾವುದೇ ಯಥಾರ್ಥಜ್ಞಾನವಿರಲಿ ಅದು ಉತ್ತಮಪ್ರಮಾಣವಾಗುತ್ತದೆಂದು ನಿಖರವಾಗಿ ತಿಳಿಸಿದ್ದಾರೆ.

* ಅನುಪ್ರಮಾಣವು ಸಾಕ್ಷಾದರ್ಥವಿಷಯಕವಾಗಬಹುದು. ಸಾಕ್ಷಾತ್ ಜ್ಞೇಯವಿಷಯಕಾರಿ ಆಗುವುದಿಲ್ಲ ಎಂಬ ಅಪೂರ್ವಪ್ರಮೇಯ ಇಲ್ಲಿದೆ. ಇದರ ಆಧಾರದಲ್ಲಿಯೇ ಪ್ರಮಾಣಪದ್ಧತಿಯನ್ನು ಅರ್ಥಮಾಡಿಕೊಳ್ಳಬೇಕು.

## ಬ್ರಹ್ಮಸೂತ್ರ

### 'ಯುಕ್ತೇಃ ಶಬ್ದಾಂತರಾಚ್ಚ' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – युक्तेः शब्दान्तराच्च ॥**

ಪ್ರಳಯಕಾಲದಲ್ಲಿ ಪರಮಾತ್ಮನು ಪ್ರಕೃತಿ ಮೊದಲಾದ ಬೇರೆ ಪರಿಕರಗಳನ್ನು ಪಡೆದು ಸೃಷ್ಟಿಯನ್ನು ಪ್ರಾರಂಭಿಸುತ್ತಾನೆ. ಶಕ್ತನಾದ ಪರಮಾತ್ಮನಿಗೆ ಪ್ರಕೃತ್ಯಾದಿಗಳ ಅವಶ್ಯಕತೆ ಇಲ್ಲದಿದ್ದರೂ ಕೇವಲ ಲೀಲೆಗಾಗಿ ಮಾತ್ರ ಅವಲಂಬಿಸಿದ್ದಾನೆ. ಇದರಿಂದ ಅವನ ಸ್ವಾತಂತ್ರ್ಯಕ್ಕೆ ಯಾವ ಬಗೆಯಲ್ಲಿಯೂ ಚ್ಯುತಿ ಬರುವುದಿಲ್ಲ.

ಅರ್ಥ -- ಯುಕ್ತೇಃ = ಲೀಲೆಯಿಂದ ಕೈಯಲ್ಲಿ ಕೋಲು ಹಿಡಿದು ಹೋಗುವ ವ್ಯಕ್ತಿಗೆ ಕುಂಟನೆಂದು ಯಾರೂ ಹೇಳುವುದಿಲ್ಲ. ಅದರಂತೆ ಭಗವಂತನೂ ಕೂಡ ಲೀಲೆಯಿಂದ ತನ್ನದೇ ಅಧೀನವಾದ ಪ್ರಕೃತ್ಯಾದಿ ಸಾಧನಗಳನ್ನು ಅವಲಂಬಿಸಿ ಸೃಷ್ಟಿಯನ್ನು ಮಾಡುತ್ತಾನೆಂಬುದು ಯುಕ್ತವಾಗುತ್ತದೆ. ಶಬ್ದಾಂತರಾಚ್ಚ = 'ತಸ್ಮಾತ್ ಶಕ್ತ್ಯೋಪಿ' ಎಂಬ ವಿಶೇಷಶ್ರುತಿ ಪ್ರಮಾಣವಿರುವುದರಿಂದ ಈ ವಿಚಾರವು ದೃಢವಾಗುತ್ತದೆ.

ಬ್ರಹ್ಮಸೂತ್ರಭಾಷ್ಯ

ಭಗವಂತನ ಸೃಷ್ಟಿ ಇತರ ಸಾಧನ ಗಳ ಮೂಲಕ

**ब्रह्मसूत्रभाष्यम् – ।। युक्तेः शब्दान्तराच्च ।।६।।**

**'साधनानां साधनत्वं यदाऽऽत्माधीनमिष्यते ।**
**तदा साधनसम्पत्तिरैश्वर्यद्योतिका भवेत् ।।'**

**इत्यादेः साधनान्तरेण सृष्टिर्युक्ता । 'अद्भ्यः सम्भूतो हिरण्यगर्भ इत्यष्टौ' (महाना. १.१२.) इत्यादिशब्दान्तराच्च ।।६।।**

ಅನುವಾದ - ಸೃಷ್ಟಿಗೆ ಯಾವ ಸಾಧನೆಗಳಿವೆಯೋ ಅವುಗಳಲ್ಲಿರುವ ಸಾಧನತ್ವವು ಪರಮಾತ್ಮನ ಅಧೀನವಾಗಿದೆ. ತನ್ನ ಅಧೀನವೇ ಆದ ಸಲಕರಣೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿಮಾಡುವುದು ಪರಮಾತ್ಮನ ಉತ್ಕರ್ಷಕ್ಕೆ ಪೂರಕವೇ ಆಗುತ್ತದೆ. ಹೀಗೆ ಹೇಳುವ ಪ್ರಮಾಣವಾಕ್ಯಗಳಿರುವುದರಿಂದ ಪರಮಾತ್ಮನು ಬೇರೆ ಸಾಧನ ಪರಿಕರಗಳನ್ನು ಉಪಯೋಗಿಸಿಕೊಂಡೇ ಜಗತ್‌ಸೃಷ್ಟಿಯ ವ್ಯಾಪಾರದಲ್ಲಿ ನೀರು ಮೊದಲಾದವುಗಳಿಂದ ಚತುರ್ಮುಖಬ್ರಹ್ಮನು, ಎಂಟು ದಿಕ್‌ಪಾಲಕರು ಹುಟ್ಟಿದರು ಇವೇ ಮೊದಲಾದ ಆಗಮ ಪ್ರಮಾಣದಿಂದ ಇತರ ಸಾಧನೆಗಳಿಂದಲೇ ಭಗವಂತನು ಸೃಷ್ಟಿಯನ್ನು ಮಾಡುತ್ತಾನೆಂದು ಸಿದ್ಧವಾಗುತ್ತದೆ.

ಪ್ರತಿಪದಾರ್ಥ -- ಬೇರೆ ಸಾಧನೆಗಳನ್ನು ಅಂಗೀಕಾರ ಮಾಡಿ ಅವುಗಳಿಗೆ ಈಶ್ವರಾಧೀನತ್ವವನ್ನು ಒಪ್ಪುವುದಕ್ಕಿಂತ ಬೇರೆ ಸಾಧನೆಗಳೇ ಇರುವುದಿಲ್ಲ ಎಂದು ಒಪ್ಪುವುದು ಸುಲಭವಲ್ಲವೆ? ಎಂಬ ಆಕ್ಷೇಪಕ್ಕೆ ಉತ್ತರಿಸುವವರಾಗಿ ಮುಂದಿನ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಸಾಧನಾನಾಂ = ಪ್ರಕೃತ್ಯಾದಿ ಸಾಧನಗಳಿಗೆ. ಸಾಧನತ್ವಂ = ಸಾಧನೆ ಆಗುವಿಕೆಯ ಅರ್ಹತೆಯು, ಯದಾ = ಯಾವಾಗ, ಆತ್ಮಾಧೀನಂ = ಪರಮಾತ್ಮನ ಅಧೀನವೆಂದು, ಇಷ್ಯತೇ = ಒಪ್ಪಲಾಗುತ್ತದೋ, ತದಾ = ಆವಾಗ, ಸಾಧನಸಂಪತ್ತಿ: = ಪರಿಕರಗಳ ಸಂಪತ್ತಿಯು, ಐಶ್ವರ್ಯದ್ಯೋತಿಕಾ = ಭಗವಂತನ ಐಶ್ವರ್ಯಕ್ಕೆ ಜ್ಞಾಪಕವೇ, ಭವೇತ್ = ಆಗುತ್ತದೆ. ಇತ್ಯಾದೇಃ

= ಇವೇ ಮೊದಲಾದ ಆಗಮಗಳಿಂದ, ಸಾಧನಾಂತರೇಣ = ತನಗಿಂತ ಭಿನ್ನವಾದ ಸಾಧನಗಳಿಂದ ಭಗವಂತನ ಸೃಷ್ಟಿಯು ಯುಕ್ತವಾಗುತ್ತದೆ. ಅದ್ಭ್ಯಃ = ನೀರಿನ ದೆಸೆಯಿಂದ, ಹಿರಣ್ಯಗರ್ಭಃ = ಹಿರಣ್ಯಗರ್ಭನು, ಸಂಭೂತಃ = ಹುಟ್ಟಿದನು. ಅಷ್ಟೌ = ಎಂಟು ಬಗೆಯ ದಿಕ್‌ಪಾಲಕರು, ಸಂಭೂತಃ = ಹುಟ್ಟಿದರು. ಇತ್ಯಾದಿಶಬ್ದಾಂತರಾಚ್ಚ = ಇವೇ ಮೊದಲಾದ ಆಗಮಪ್ರಮಾಣ ಇರುವುದರಿಂದ ಸೃಷ್ಟಿ ವ್ಯಾಪಾರದಲ್ಲಿ ತೊಡಗುತ್ತಾನೆ ಎಂದು ಸಿದ್ಧವಾಗುತ್ತದೆ.

### ಸತ್ತರ್ಕದೀಪಾವಳಿ

### 'ಸತ್ವಾಚ್ಚಾವರಸ್ಯ' ಎಂಬ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ

**सत्तर्कदीपावळिः – 'सत्वाचावरस्य' इति यदुक्तं तत्प्रपञ्चयति – युक्तेरित्यादिना ।। साधनसत्तादेरीश्वराधीनत्वेऽपि साधनसम्पत्तेरीशितव्यतया भगवदैश्वर्यद्योतकत्वेन उपयुक्तत्वात् 'अद्भ्यः सम्भूतो हिरण्यगर्भः इत्यष्टौ' इत्यादि शब्दान्तर्गतघटादीनां कर्तृप्रयोज्यसाधनजन्यत्वदर्शनात् । प्रकृत्यादिसाधनैरीश्वरो जगत्सृजतीति युक्तमेव ।।**

'ಸತ್ವಾಚ್ಚಾವರಸ್ಯ' ಎಂಬ ಸೂತ್ರದಲ್ಲಿ ಹೇಳಿದ್ದನ್ನೇ ವಿವರಣೆ ಮಾಡುವುದಕ್ಕಾಗಿ ಈ ಸೂತ್ರ ಹೊರಟಿದೆ. ಸಾಧನ ಸಲಕರಣೆಗಳು ಈಶ್ವರನ ಅಧೀನವೇ ಆಗಿವೆ. ಇವುಗಳನ್ನು ಅಪೇಕ್ಷಿಸಿ ಈಶ್ವರನು ಸೃಷ್ಟಿಯನ್ನು ಮಾಡುತ್ತಾನೆ. ತನ್ನ ಅಧೀನವಾದ ಸಾಧನ ಸಲಕರಣೆಗಳನ್ನು ಉಪಯೋಗಿಸಿಕೊಂಡು, ಸೃಷ್ಟಿ ಮಾಡುವುದು ಅವನ ಐಶ್ವರ್ಯಕ್ಕೆ ದ್ಯೋತಕವಾಗಿದೆ. 'ಅದ್ಭ್ಯಃ ಸಂಭೂತಃ ಹಿರಣ್ಯಗರ್ಭ ಇತ್ಯಷ್ಟೌ' ಇತ್ಯಾದಿ ಶ್ರುತಿಯಲ್ಲಿ ಸೇರಿರುವ ಘಟಾದಿ ಜಗತ್ತಿನ ಸೃಷ್ಟಿಗೆ ಈಶ್ವರನು ಸಾಧನಸಲಕರಣೆಗಳನ್ನು ಮಾಧ್ಯಮವನ್ನಾಗಿಟ್ಟುಕೊಂಡು ಸೃಷ್ಟಿ ಮಾಡುತ್ತಾನೆಂದು ಹೇಳಲಾಗಿದೆ. ಆದ್ದರಿಂದ ಪ್ರಕೃತ್ಯಾದಿ ಸಾಧನಗಳಿಂದ ಈಶ್ವರನು ಜಗತ್ತನ್ನು ಸೃಷ್ಟಿ ಮಾಡುತ್ತಾನೆಂಬುದು ಯುಕ್ತವೇ ಆಗಿದೆ.

ವಿವರಣೆ - ಪರಮಾತ್ಮನು ಯಾವುದೇ ಸಾಮಗ್ರಿಗಳನ್ನು ಅಪೇಕ್ಷೆ ಪಡದೇ ಜಗತ್ತನ್ನು ಸೃಷ್ಟಿ ಮಾಡಲು ಸಮರ್ಥನಾಗಿದ್ದಾನೆ. ಆದರೂ ಆ ಪರಿಕರಗಳನ್ನು ಅಪೇಕ್ಷಿಸಿ, ಸೃಷ್ಟಿ ಮಾಡುತ್ತಾನೆಂದು ಹೇಳಿದರೆ ಅವನ ಮಹತ್ವಕ್ಕೆ ಚ್ಯುತಿ ಬರುವುದಿಲ್ಲ. ಏಕೆಂದರೆ ಅನೇಕ ಸಾಧನ ಸಲಕರಣೆಗಳಿಂದ ಸೃಷ್ಟಿ ಮಾಡುತ್ತಾನೆಂದರೆ ಅವನ ವೈಭವವು ಹೆಚ್ಚಾಗುತ್ತದೆ. ಇದೊಂದು ಅವನಿಗೆ ಲೀಲೆಯೂ ಕೂಡ ಆಗಿದೆ.

## ತತ್ವಪ್ರದೀಪ

**तत्वप्रदीपः – युक्तेः शब्दान्तराच्च ।। अष्टौ लोकपालाः ।।**

ಹಿಂದಿನ ಸೂತ್ರದಿಂದ ಸೂಚಿತವಾದ ಆಗಮಕ್ಕಿಂತ ಬೇರೆಯಾದ ಆಗಮವು ಇರುವುದರಿಂದ ಸಾಧನ ಪರಿಕರಗಳನ್ನು ಅಪೇಕ್ಷಿಸುವುದು ಈಶ್ವರನಿಗೆ ಯುಕ್ತವೇ ಆಗುತ್ತದೆ. 'ಅಷ್ಟೌ' ಎಂಬ ಪದಕ್ಕೆ ಅಷ್ಟದಿಕ್ಪಾಲಕರು ಎಂದರ್ಥ.

ವಿಶೇಷವಿಚಾರ - ಯಜುಃಸಂಹಿತೆಯಲ್ಲಿ ಬರುವ 'ಅದ್ಭ್ಯಃ ಸಂಭೂತಃ ಹಿರಣ್ಯಗರ್ಭ ಇತ್ಯಷ್ಟೌ' ಎಂಬ ಶ್ರುತಿಗೆ 'ಅದ್ಭ್ಯಃ ಸಂಭೂತಃ' ಮೊದಲಾದ ಆರು ಮಂತ್ರಗಳನ್ನು 'ಹಿರಣ್ಯಗರ್ಭಃ ಸಮವರ್ತತಾಗ್ರೇ' ಎಂಬ ಎಂಟು ಮಂತ್ರಗಳನ್ನುಮಹಾನಾರಾಯಣೋಪನಿಷತ್ತಿನಲ್ಲಿ ವಿವಕ್ಷಿಸಬೇಕು ಎಂಬುದು ಈ ಶ್ರುತಿಯ ಮೇಲ್ನೋಟದ ಅರ್ಥ. ಆದರೆ ಪ್ರಕೃತ ಹರಿಪರವಾಗಿ ಇದನ್ನು ತತ್ವಪ್ರದೀಪದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಹಿರಣ್ಯಗರ್ಭನು ತನ್ನ ಪೂರ್ವಕರ್ಮದಿಂದಲೇ ಪರಮಾತ್ಮನ ದೆಸೆಯಿಂದ ಜನ್ಮವನ್ನು ತಾಳಿದ್ದಾನೆ ಎಂಬುದು ಇದರ ಅರ್ಥ. ಪರಮಾತ್ಮನು ಹಿರಣ್ಯಗರ್ಭನನ್ನು ನೇರವಾಗಿ ಸೃಷ್ಟಿ ಮಾಡಬಹುದಿತ್ತು. ಆದರೆ ಅವನ ಪ್ರಾಚೀನ ಕರ್ಮವನ್ನು ಅಪೇಕ್ಷಿಸಿಯೇ ಅವನನ್ನು ಸೃಷ್ಟಿ ಮಾಡುತ್ತಾನೆ. ಇದರಂತೆ ಅಷ್ಟೌ ಎಂಬ ಪದದಿಂದ ಅಷ್ಟದಿಕ್ಪಾಲಕರನ್ನು ಹೇಳಿದ್ದಾರೆ. ಉಪಲಕ್ಷಣಯಾ ಸಕಲದೇವತೆಗಳನ್ನು ಇದರಿಂದ ವಿವಕ್ಷಿಸಬೇಕು. ಹಿರಣ್ಯಗರ್ಭನಷ್ಟೇ ಅಲ್ಲದೇ ಸಕಲ ದೇವತೆಗಳೂ ಕೂಡ ತಮ್ಮ ಪ್ರಾಚೀನ ಕರ್ಮದ ಅಧೀನವಾಗಿಯೇ ಪರಮಾತ್ಮನ ದೆಸೆಯಿಂದ ಸೃಷ್ಟಿಯನ್ನು ಹೊಂದಿದ್ದಾರೆ. ಹೀಗೆ ಪರಮಾತ್ಮನು ನೇರವಾಗಿ ಸಕಲ ದೇವತೆಗಳನ್ನು ಸೃಷ್ಟಿ ಮಾಡಿರುವುದಿಲ್ಲ. ತಮ್ಮ ವೈಭವಕ್ಕೋಸ್ಕರ ಪ್ರಾಚೀನಕರ್ಮವನ್ನು ಅಪೇಕ್ಷಿಸಿ ಸೃಷ್ಟಿ ಮಾಡಿದ್ದಾನೆ ಎಂಬರ್ಥವನ್ನು ಈ ಶ್ರುತಿ ಹೇಳುತ್ತಿದೆ. ಇಲ್ಲಿರುವ ಅಪ್ ಶಬ್ದವು ಪ್ರಾಚೀನಕರ್ಮಾರ್ಥದಲ್ಲಿ ಪ್ರಯುಕ್ತವಾಗಿದೆ.

ತತ್ವಪ್ರಕಾಶಿಕಾ

ಈಶ್ವರಾತಿರಿಕ್ತ ಸಾಧನ ಇದೆ

**तत्वप्रकाशिका – ननु साधनान्तरमभ्युपगम्य तस्यैश्वराधीनत्वकथनाद्वरं साधनाभावकथनमेव साधनशून्यस्य सृष्ट्यादिकर्तृत्वाभ्युपगमे महिमाधिक्यलाभादित्याशङ्कां परिहरत्सूत्रमुपन्यस्य व्याचष्टे ।। युक्तेरिति ।।**

ಈಶ್ವರನಿಗಿಂತ ಅತಿರಿಕ್ತವಾದ ಸಾಧನೆಯನ್ನು ಪ್ರಳಯಕಾಲದಲ್ಲಿ ಒಪ್ಪಬೇಕು. ಮತ್ತು ಅದಕ್ಕೆ ಭಗದಧೀನತ್ವವನ್ನು ಒಪ್ಪಬೇಕು. ಇದನ್ನೆಲ್ಲಾ ಕಲ್ಪನೆ ಮಾಡುವುದಕ್ಕಿಂತ ಈಶ್ವರನಿಗಿಂತ ಅತಿರಿಕ್ತವಾದ ಸಾಧನವೇ ಇರುವುದಿಲ್ಲವೆಂದು ಹೇಳುವುದು ಶ್ರೇಷ್ಠಸಾಧನೆಗಳನ್ನು ಉಪಯೋಗಿಸಿಕೊಳ್ಳದೆ ಸೃಷ್ಟ್ಯಾದಿವ್ಯಾಪಾರವನ್ನು ಮಾಡುತ್ತಾನೆ ಎಂದು ಒಪ್ಪುವುದರಿಂದ ಭಗವಂತನಲ್ಲಿ ಅತಿಶಯಮಹಿಮೆಯ ಲಾಭವಾಗುತ್ತದೆ. ಈ ಆಶಂಕೆಯನ್ನು ಪರಿಹಾರ ಮಾಡಲು ಮುಂದಿನಸೂತ್ರ ಹೊರಟಿದೆ. ಅದನ್ನು ಯುಕ್ತೇಃ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ಮಹಿಮಾಧಿಕ್ಯಕ್ಕೆ ಭಂಗವಿಲ್ಲ

**तत्वप्रकाशिका – न महिमाधिक्यलाभाय साधनाभावोऽभ्युपेयः । साधनान्तरेण सृष्टेरपि युक्तत्वात् महिमाविरोधित्वात् स्वाधीनसाधनैः प्रवृत्तेरप्यैश्वर्यद्योतकत्वस्य साधनानामिति वाक्यसिद्धत्वाल्लोकसिद्धत्वाच ।**

ಪರಮಾತ್ಮನಲ್ಲಿ ಮಹಿಮಾಧಿಕ್ಯ ಇರುವ ಸಾಧನವನ್ನು ಅಲ್ಲಗಳೆಯುವ ಆವಶ್ಯಕತೆಯಿಲ್ಲ. ಸೃಷ್ಟಿಯು ನಡೆಯಬೇಕೆಂದರೆ ಭಗದಧೀನವಾದ ಸಾಧನವನ್ನು ಒಪ್ಪಲೇಬೇಕು. ಇದರಿಂದ ಸೃಷ್ಟಿಯು ಯುಕ್ತವಾಗುತ್ತದೆ. ಮತ್ತು ಭಗವಂತನ ಮಹಿಮೆಗೂ ಕೂಡ ವಿರೋಧ ಇರುವುದಿಲ್ಲ. ತನ್ನ ಅಧೀನವೇ ಆದ ಸಾಧನಗಳಿಂದ ಸೃಷ್ಟಿಯ ವ್ಯಾಪಾರವನ್ನು ಮಾಡಿದರೆ ಅದು ಐಶ್ವರ್ಯಕ್ಕೆ ದ್ಯೋತಕವಾಗುತ್ತದೆ ಹೊರತು ವಿರೋಧವಾಗುವುದಿಲ್ಲ. ಈ ವಿಷಯವು 'ಸಾಧನಾನಾಮ್' ಎಂಬ ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣದಿಂದ ಸಿದ್ಧವಾಗಿದೆ. ಲೋಕದಲ್ಲಿಯೂ ಕೂಡ ತನ್ನ ಅಧೀನರಾದ ಸೇವಕಜನರಿಂದ ರಾಜನು ಕೆಲಸ ಮಾಡಿಸುವುದು ಕಂಡಿರುತ್ತದೆ.

ಸಾಧನ ಪರಿಕರಗಳಿವೆ ಎಂದೇಕೆ ಆಗ್ರಹ ?

**तत्वप्रकाशिका – तर्ह्युभयथापिमहिमोत्कर्षसिद्धौ किं साधनसत्त्व-पक्षाग्रहेणेति चेन्न ।**

ಪರಮಾತ್ಮನಿಗೆ ಸಾಧನಗಳು ಇರಲಿ ಬಿಡಲಿ ಅವನ ಮಹಿಮೆಯ ಉತ್ಕರ್ಷದ ಸಿದ್ಧಿಗೆ ಯಾವುದೇ ಅಡ್ಡಿಯಿಲ್ಲ. ಹೀಗಿರುವಾಗ ಸಾಧನೆಗಳನ್ನು ಒಪ್ಪಲೇಬೇಕೆಂಬ ಆಗ್ರಹವೇಕೆ? ಈ ಪ್ರಶ್ನೆಯು ಅಸಂಗತ.

ಪ್ರಮಾಣವಿದ್ದಾಗ ಒಪ್ಪಲೇ ಬೇಕು

**तत्वप्रकाशिका – निरपेक्षतया स्रष्टृत्वस्योभयपक्षेऽपि साम्येन महिमोत्कर्ष-लाभसाम्येऽपि साधनसत्वाभ्युपगमेनैकाकिनः सकाशात्सोपस्करस्याधिकोत्कर्ष-लाभात् 'अद्भ्यः सम्भूतः' इत्यादौ प्रतीतेश्च तत्राग्रह इति भावः ।**

ಪರಮಾತ್ಮನು ಸಾಧನೆಗಳನ್ನು ಅಪೇಕ್ಷಪಡದೆ ಸೃಷ್ಟಿ ಮಾಡಿದರೆ ಮತ್ತು ಸಾಧನೆಯನ್ನು ಅಪೇಕ್ಷಿಸಿ ಸೃಷ್ಟಿ ಮಾಡಿದರೆ ಮಹಿಮೋತ್ಕರ್ಷವು ಲಾಭವಾಗುತ್ತದೆ ಎಂಬುದು ಸಮಾನ. ಆದರೂ ಕೂಡ ಏಕಾಕಿಯಾಗಿ ಎಲ್ಲವನ್ನು ಸೃಷ್ಟಿ ಮಾಡುತ್ತಾನೆ ಎಂಬ ವಿಷಯಕ್ಕಿಂತಲೂ ಸಾಧನಸಹಿತವಾಗಿ ಸೃಷ್ಟಿ ಮಾಡುತ್ತಾನೆಂಬುದು ಇನ್ನು ಹೆಚ್ಚಿನ ಉತ್ಕರ್ಷಕ್ಕೆ ಕಾರಣವಾಗಿದೆ. 'ಅದ್ಭ್ಯಃ ಸಂಭೂತಃ' ಎಂಬ ಶ್ರುತಿಯಲ್ಲಿ ಸಾಧನೆಗಳನ್ನು ಉಪಯೋಗಿಸಿಕೊಂಡು ಸೃಷ್ಟಿ ಮಾಡುತ್ತಾನೆಂದು ಹೇಳಿರುವುದರಿಂದ ಸಾಧನೆಗಳ ಸತ್ವವಿಷಯದಲ್ಲಿ ನಾವು ಆಗ್ರಹವನ್ನು ಮಾಡುತ್ತಿದ್ದೇವೆ.

ಹಿಂದಿನ ಶ್ರುತಿಯನ್ನು ಸಂಗ್ರಹಿಸಬೇಕು

**तत्वप्रकाशिका – प्राचीनश्रुतिसंग्रहार्थं शब्दान्तरादित्युक्तम् ।। १९ ।।**

'ಸತ್ವಾಚ್ಚಾವರಸ್ಯ' ಎಂಬ ಸೂತ್ರದ ಭಾಷ್ಯದಲ್ಲಿ ಉದಾಹರಿಸಿದ 'ಅದ್ಭ್ಯಃ ಸಂಭೂತಃ ಪೃಥಿವ್ಯೈರಸಾಚ್ಚ' ಮತ್ತು 'ತಮ ಆಸೀತ್' ಇವೇ ಮೊದಲಾದ ಶ್ರುತಿಗಳ ಸಂಗ್ರಹಕ್ಕೆ 'ಶಬ್ದಾಂತರಾತ್' ಎಂದು ಸೂತ್ರದಲ್ಲಿ ಹೇಳಿರುತ್ತಾರೆ.

### ಭಾವದೀಪ

### ಸೂತ್ರದಲ್ಲಿರುವ ಹೇತುವಿಗೆ ಅನ್ವಯಕ್ರಮಚಿಂತನೆ.

**भावदीपः** –॥ युक्तेः शब्दान्तराच्च ॥ १९ ॥ युक्तेरिति सौत्रहेतोर्योग्यसाध्यान्वयायोक्तचोद्यं निराह– **न महिमेति**॥ भाष्यं सौत्रानुगुण्याय हेतुत्वेन व्याचष्टे – **साधनान्तरेणेति**॥ युक्तत्वादित्येतद्व्यनक्ति– **महिमेति**॥ कुत इत्यत इत्यादेरित्यन्तभाष्यार्थमाह– **स्वाधीनेति**॥

ಸೂತ್ರದಲ್ಲಿ 'ಯುಕ್ತೇಃ' ಎಂಬುದಾಗಿ ಹೇತುವನ್ನು ಹೇಳಿದ್ದಾರೆ. ಇದಕ್ಕೆ ಯೋಗ್ಯವಾದ ಸಾಧ್ಯದ ಜೊತೆ ಅನ್ವಯವನ್ನು ತೋರಿಸಬೇಕು. ಅದಕ್ಕಾಗಿ ಹಿಂದೆ ಮಾಡಿದ ಆಕ್ಷೇಪವನ್ನು ನಿರಾಕರಣೆ ಮಾಡಬೇಕು. ಈ ದೃಷ್ಟಿಯಿಂದ 'ನ ಮಹಿಮಾ' ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ. ಸೂತ್ರಕ್ಕೆ ಅನುಗುಣವಾಗಿ ಭಾಷ್ಯವು ಹೊರಟಿದೆ ಎಂಬುದನ್ನು ಉಪಪಾದನೆ ಮಾಡಲು ಹೇತುತ್ವೇನ ವ್ಯಾಖ್ಯಾನ ಮಾಡಲು 'ಸಾಧನಾಂತರೇಣ' ಎಂಬ ಟೀಕಾ ಹೊರಟಿದೆ. 'ಯುಕ್ತತ್ವಾತ್' ಎಂಬುದನ್ನೇ ಮಹಿಮಾ ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಇತ್ಯಾದಿ' ಎಂಬಲ್ಲಿಯತನಕ ಇರುವ ಭಾಷ್ಯವನ್ನು 'ಸ್ವಾಧೀನ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

### ಲೋಕವತ್ ಎಂಬುದರ ವ್ಯಾಖ್ಯಾನ.

**भावदीपः** – आदिपदार्थमाह– **लोकेति**॥ लोके नानाशिल्पेषु निपुणस्य स्वयमेव साधनसंपादनेन कार्यकारणदर्शनादिति भावः॥ **प्राचीनेति**॥ सत्वाच्चेत्यत्रोक्त 'अद्भ्यः संभूतः पृथिव्यै रसाच्च' इति श्रुतेः तथा 'तम आसीत्' इति श्रुतेश्च संग्रहार्थमित्यर्थः।

ಭಾಷ್ಯದಲ್ಲಿರುವ 'ಆದಿ'ಪದದ ಅರ್ಥವನ್ನು 'ಲೋಕಸಿದ್ಧತ್ವಾಚ್ಚ' ಎಂದು ಹೇಳಿದ್ದಾರೆ. ಲೋಕದಲ್ಲಿ ಅನೇಕ ಶಿಲ್ಪಿಗಳಲ್ಲಿ ಯಾರು ನಿಪುಣನಾಗಿರುತ್ತಾನೋ ಅವನು ಸ್ವತಃ ತಾನೇ ಎಲ್ಲ ಪರಿಕರಗಳ ಸಂಪಾದನೆಯನ್ನು ಮಾಡಿಕೊಳ್ಳುತ್ತಾನೆ. ತನ್ಮೂಲಕವೇ ಕೆಲಸವನ್ನು ಮಾಡುತ್ತಾನೆ. ಇದು ಲೋಕದಲ್ಲಿ ಕಂಡಿದೆ. ಟೀಕೆಯಲ್ಲಿ 'ಪ್ರಾಚೀನಶ್ರುತಿಸಂಗ್ರಹಾರ್ಥಂ' ಎಂದು ಹೇಳಿದ್ದಾರೆ. ಹಿಂದೆ ಉಲ್ಲೇಖ ಮಾಡಿದ ಶ್ರುತಿಗಳೆಂದರೆ 'ಸತ್ವಾಚ್ಚ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ 'ಅದ್ಭ್ಯಃ ಸಂಭೂತಃ, ಪೃಥಿವೀ ರಸಾಚ್ಚ' ಎಂಬ

ಶ್ರುತಿ ಹಾಗೇ 'ತಮ ಆಸೀತ್' ಎಂಬ ಶ್ರುತಿ ಇವುಗಳನ್ನು ಸಂಗ್ರಹ ಮಾಡುವುದಕ್ಕೋಸ್ಕರ ಎಂಬುದು ಇದರ ಅರ್ಥ.

### ಪುನಃ ಶ್ರುತಿಯನ್ನು ಏಕೆ ಉಲ್ಲೇಖ ಮಾಡಿದರು

**भावदीपः** – प्राचीनश्रुतिसत्वेऽप्येतदुक्तिः सुधोक्तदिशा कथञ्चित्प्राचीन-श्रुतेरन्यथानयनशङ्कायामपि नेह तथा हिरण्यगर्भसृष्टावेवाबादि साधनप्रतीतेरिति सूचनायेति भावः। (हिरण्यगर्भः अद्भ्यः संभूतः इत्यष्टौ दिक्पाला अपि अद्भ्यः संभूता इति तत्वप्रदीपे ।) ॥ १९ ॥

ಹಿಂದಿನ ಸೂತ್ರಗಳಲ್ಲಿ ಉಲ್ಲೇಖ ಮಾಡಿದ ಶ್ರುತಿಗಳಿದ್ದರೂ ಕೂಡ ಪುನಃ 'ಅದ್ಭ್ಯಃ ಸಂಭೂತಃ ಹಿರಣ್ಯಗರ್ಭ ಇತ್ಯಷ್ಟೌ' ಎಂಬ ಶ್ರುತಿಯನ್ನು ಏಕೆ ಉಲ್ಲೇಖ ಮಾಡಿದರು? ಎಂದರೆ ನ್ಯಾಯಸುಧೆಯಲ್ಲಿ ಹೇಳಿದಂತೆ ಕಥಂಚಿತ್ ಪ್ರಾಚೀನಶ್ರುತಿಗಳಿಗೆ ಅನ್ಯಥಾ ವ್ಯಾಖ್ಯಾನ ಮಾಡುವ ಸಂದರ್ಭವಿದೆ. ಆದರೆ ಪ್ರಕೃತ ಹಿರಣ್ಯಗರ್ಭ ಸೃಷ್ಟಿಯಲ್ಲಿ ಅಬಾದಿಸಾಧನಪ್ರತೀತಿಯು ಹಾಗೆ ಬರುವುದಿಲ್ಲ ಎಂಬುದನ್ನು ತಿಳಿಸುವುದಕ್ಕಾಗಿ ಈ ಶ್ರುತಿಯನ್ನುಪ್ರತ್ಯೇಕವಾಗಿ ಉಲ್ಲೇಖ ಮಾಡಿದ್ದಾರೆ.

## ಭಾವದೀಪದ ವೈಶಿಷ್ಟ್ಯ

* ಪರಮಾತ್ಮನು ಸಾಧನಗಳ ಅಪೇಕ್ಷೆ ಇಲ್ಲದಿದ್ದರೂ ಕೂಡ ಅವುಗಳನ್ನು ಅಪೇಕ್ಷಿಸುತ್ತಾನೆ. ಈ ವಿಷಯದಲ್ಲಿ 'ಲೋಕಸಿದ್ಧತ್ವಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದಕ್ಕೆ ನಾನಾಶಿಲ್ಪಿಗಳಲ್ಲಿ ನಿಪುಣನಾದವನು ಸ್ವತಃ ತಾನೇ ಸಾಧನಸಂಪತ್ತಿಗಳನ್ನು ಮಾಡಿಕೊಳ್ಳುತ್ತಾನೆ ಎಂದು ಸುಂದರವಾಗಿ ವ್ಯಾಖ್ಯಾನ ಮಾಡಲಾಗಿದೆ.
* 'ಅದ್ಭ್ಯಃ ಸಂಭೂತಃ ಹಿರಣ್ಯಗರ್ಭ ಇತ್ಯಷ್ಟೌ' ಎಂಬ ಶ್ರುತಿಯನ್ನು ಏಕೆ ಉಲ್ಲೇಖ ಮಾಡಿದರು. ಹಿಂದೆ ಉಲ್ಲೇಖ ಮಾಡಿದ ಶ್ರುತಿಗಳಿಂದಲೇ ಪ್ರಮೇಯವು ಸಿದ್ಧವಾಗುತ್ತಿತ್ತಲ್ಲವೇ ಎಂಬ ಪ್ರಶ್ನೆಗೂ ಸುಂದರವಾಗಿ ಉತ್ತರಿಸಿದ್ದಾರೆ.

## ಬ್ರಹ್ಮಸೂತ್ರ

### 'ಪಟವಚ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – पटवच्च ।।**

ಪರಮಾತ್ಮನು ಯಾವ ಪ್ರಕೃತ್ಯಾದಿಗಳನ್ನು ಪಡೆದು ಸೃಷ್ಟಿ ಮಾಡುತ್ತಾನೋ ಅಂತಹ ಸಾಮಗ್ರಿಗಳು ಪರಮಾತ್ಮನಿಗಿಂತ ಭಿನ್ನವೇ ಆಗಿರುತ್ತವೆಂದು ತಿಳಿಯಬೇಕು. ಈ ವಿಷಯದಲ್ಲಿ ಅನುಮಾನ ಪ್ರಮಾಣವಿದೆ. ಜಗತ್ತಿನ ಸೃಷ್ಟಿಯು ಕರ್ತೃವಾದ ಜೀವನಿಗಿಂತ ಭಿನ್ನವಾದ ಸಾಮಗ್ರಿಗಳಿಂದ ಉಂಟಾಗಿದೆ ಬಟ್ಟೆಯ ಸೃಷ್ಟಿಯಂತೆ.

ಅರ್ಥ -- ಪಟವಚ್ಚ = ಬಟ್ಟೆಯ ಸೃಷ್ಟಿಯಂತೆ ವಿಶ್ವದ ಸೃಷ್ಟಿಯೂ ಕೂಡ ಕರ್ತೃವಾದ ಜೀವನಿಗಿಂತ ಭಿನ್ನವಾದ ಸಾಮಗ್ರಿಗಳಿಂದ ಉಂಟಾಗಿದೆ. ಅನುಮಾನ ಸ್ವರೂಪವನ್ನು ಹೀಗೆ ತಿಳಿಯಬೇಕು - 'ವಿಮತಾ ಸೃಷ್ಟಿಃ ಕರ್ತೃಭಿನ್ನಸಾಧನಸಾಧ್ಯಾ ಸೃಷ್ಟಿತ್ವಾತ್ ಪಟಸೃಷ್ಟಿವತ್'.

## ಬ್ರಹ್ಮಸೂತ್ರಭಾಷ್ಯ

### ಹಿಂದಿನ ಪ್ರಮೇಯದಲ್ಲಿ ಯುಕ್ತಿಯ ಆಧಾರ

**ब्रह्मसूत्रभाष्यम् – ।। पटवच्च ।।७।।**

**साधनान्तरेण हि पटादिसृष्टिर्दृष्टा ।।७।।**

ಅನುವಾದ - ಲೋಕದಲ್ಲಿ ಕರ್ತೃವಿಗಿಂತ ಬೇರೆಯಾದ ಸಾಧನೆಗಳಿಂದ ಬಟ್ಟೆ ಮೊದಲಾದ ವಸ್ತುಗಳು ಹುಟ್ಟುವುದು ಕಂಡಿದೆ.

> ಪ್ರತಿಪದಾರ್ಥ -- ಕೇವಲ ಶ್ರುತಿಯಿಂದಷ್ಟೇ ಸಿದ್ಧವಾಗಿರುವುದಲ್ಲ. ಯುಕ್ತಿಯಿಂದಲೂ ಕೂಡ ಸಾಧನೆಗಳು ಸೃಷ್ಟಿಗೆ ಅನಿವಾರ್ಯವೆಂದು ಸಿದ್ಧವಾಗಿದೆ. ಇದನ್ನು ಸೂತ್ರಕಾರರೇ ಸಮರ್ಥನೆ ಮಾಡುತ್ತಿದ್ದಾರೆ. ಸಾಧನಾಂತರೇಣ = ಕರ್ತೃವಿಗಿಂತ ಅತಿರಿಕ್ತವಾದ ಬೇರೆ ಸಾಧನೆಗಳಿಂದ, ಪಟಾದಿಸೃಷ್ಟಿರ್ದೃಷ್ಟಾ = ಬಟ್ಟೆ ಮೊದಲಾದವುಗಳ ಹುಟ್ಟುವಿಕೆಯು ದೃಷ್ಟ ಕಂಡಿದೆ.

## ತತ್ವಪ್ರದೀಪ

### ವಿರೋಧವಿಲ್ಲದಿದ್ದಾಗ ಲೋಕ ದೃಷ್ಟಾಂತ ಒಪ್ಪಬಹುದು

**तत्वप्रदीपः – पटवच्च ।। यथा पटादिसृष्टिः साधनान्तरकृता तथा जगत्सृष्टिरिति युक्ता । विरोधाभावात् । स्वातन्त्र्यस्यैव निषिद्धत्वात् । 'यत्र अविरोधः तत्र दृष्टानुसारः साधुः' इति ।**

ಲೋಕದಲ್ಲಿ ಪಟಾದಿಸೃಷ್ಟಿಯು ಮತ್ತೊಂದು ಹತ್ತಿ, ನೂಲು ಮೊದಲಾದ ಮತ್ತೊಂದು ಸಾಧನೆಗಳಿಂದ ನಿರ್ಮಿತವಾಗಿದೆಯೋ, ಅದರಂತೆ ಜಗತ್ತಿನ ಸೃಷ್ಟಿಯೂ ಕೂಡ ಮತ್ತೊಂದು ಸಾಧನದಿಂದಲೇ ಆಗಿದೆ. ಹೀಗೆ ಹೇಳಿದ್ದರಿಂದ ಯಾವುದೇ ವಿರೋಧವು ಇಲ್ಲ. ಸ್ವಾತಂತ್ರ್ಯವನ್ನಷ್ಟೇ ಪಟಾದಿಸೃಷ್ಟಿಯಲ್ಲಿ ನಿಷೇಧ ಮಾಡಲಾಗಿದೆ. ಎಲ್ಲಿ ವಿರೋಧ ಇರುವುದಿಲ್ಲವೋ, ಅಲ್ಲಿ ಪ್ರತ್ಯಕ್ಷಕ್ಕೆ ಅನುಗುಣವಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡುವುದು ಸಾಧುವೇ ಆಗಿದೆ.

**ವಿವರಣೆ** - ಪ್ರತ್ಯಕ್ಷದೃಷ್ಟಾಂತವಿದ್ದಾಗ ಯಾವುದೇ ವಿರೋಧ ಇಲ್ಲ ಎಂದರೆ ಅದಕ್ಕನುಗುಣವಾಗಿ ಶ್ರುತಿಯನ್ನು ವ್ಯಾಖ್ಯಾನ ಮಾಡಬೇಕು. ಜಗತ್ತಿನಲ್ಲಿ ಬಟ್ಟೆಯು ಸೃಷ್ಟಿಯಾಗಬೇಕೆಂದರೆ ಅದರ ಹಿಂದೆ ನೂಲು, ಹತ್ತಿ ಮೊದಲಾದ ಸಲಕರಣೆಗಳನ್ನು ಕುಲಾಲನು ಅಪೇಕ್ಷಿಸುತ್ತಾನೆ. ನೂಲು, ಹತ್ತಿ ಇವುಗಳನ್ನು ಅಪೇಕ್ಷೇ ಪಡದೇ, ಪಟವನ್ನು ಕುಲಾಲನು ಸೃಷ್ಟಿ ಮಾಡಲಾರ. ಅದರಂತೆ ಪರಮಾತ್ಮನೂ ಕೂಡ ಈ ಜಗತ್ತನ್ನು ಸೃಷ್ಟಿ ಮಾಡುವುದಕ್ಕಾಗಿ ಮೂಲ ಕಾರಣವಾದ ಪ್ರಕೃತಿ, ತದ್ವಿಕಾರವಾದ ಪಂಚಭೂತಗಳು ಇವುಗಳನ್ನು ಅಪೇಕ್ಷೆ ಪಟ್ಟು, ಜಗತ್ತನ್ನು ಸೃಷ್ಟಿ ಮಾಡುತ್ತಾನೆ. ಒಂದು ಮಾತ್ರ ವ್ಯತ್ಯಾಸ. ಹತ್ತಿಯಾಗಲೀ, ನೂಲಾಗಲೀ ಕುಲಾಲನ ಅಧೀನವಾಗಿರುವುದಿಲ್ಲ. ಆದರೆ ಪರಮಾತ್ಮನು ಅಪೇಕ್ಷೆ ಪಡುವ ಪ್ರಕೃತಿ ಹಾಗೂ ತದ್ವಿಕಾರಗಳು ಪರಮಾತ್ಮನ ಅಧೀನವೇ ಆಗಿವೆ.

ತತ್ವಪ್ರಕಾಶಿಕಾ

ಪ್ರಳಯಕಾಲದಲ್ಲಿ ಸಾಧನಗಳಿವೆ

**तत्वप्रकाशिका – साधनसद्भावस्य युक्तिसिद्धत्वाच्च तत्राग्रह इत्यर्थप्रतिपादकं सूत्रमुपन्यस्य व्याचष्टे ।। पटवच्चेति ।।**

ಸಾಧನದ ಇರುವಿಕೆಯು ಪ್ರಳಯಕಾಲದಲ್ಲಿ ಯುಕ್ತಿಯಿಂದ ಸಿದ್ಧವಾಗಿದೆ. ಆದ್ದರಿಂದ ಸಾಧನವನ್ನು ಅಪೇಕ್ಷಿಸಿ ಸೃಷ್ಟಿಯನ್ನು ಮಾಡುತ್ತಾನೆಂಬ ಆಗ್ರಹವನ್ನು ಮಾಡುತ್ತೇವೆಂದು ಪ್ರತಿಪಾದನೆ ಮಾಡುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪಟವಚ್ಚ' ಇತ್ಯಾದಿಯಾಗಿ.

ಈ ವಿಷಯದಲ್ಲಿ ಯುಕ್ತಿಪ್ರಮಾಣ

**तत्वप्रकाशिका – विप्रतिपन्ना सृष्टिः कर्तृव्यतिरिक्तसाधनसाध्या सृष्टित्वात्पटसृष्टिवदित्यर्थः ।।**

ಕರ್ತೃವಿಗಿಂತ ಅತಿರಿಕ್ತವಾದ ಮತ್ತೊಂದು ಸಾಧನೆಯು ಇದೆಯೋ ಇಲ್ಲವೋ ? ಎಂಬ ವಿವಾದವಿರುವ ಸೃಷ್ಟಿಯು ಕರ್ತೃಭಿನ್ನವಾದ ಮತ್ತೊಂದು ಸಾಧನದಿಂದ ಸಾಧ್ಯವಾಗಿದೆ. ಸೃಷ್ಟಿಯಾಗಿರುವುದರಿಂದ ಪಟಸೃಷ್ಟಿಯಂತೆ. ಹೀಗೆ ನಿರ್ದುಷ್ಟವಾದ ಅನುಮಾನದಿಂದ ಕರ್ತೃವಿಗಿಂತ ಅತಿರಿಕ್ತವಾದ ಸಾಧನಾಂತರವು ಸಿದ್ಧವಾಗುತ್ತದೆ.

## ಬ್ರಹ್ಮಸೂತ್ರ

### 'ಯಥಾ ಪ್ರಾಣಾದಿಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – यथा प्राणादिः ॥**

ಪ್ರಕೃತ್ಯಾದಿ ಸಾಮಗ್ರಿಗಳು ಸ್ವತಂತ್ರ ಸಾಧನಗಳಲ್ಲ. ಯಾವ ರೀತಿಯಾಗಿ 'ಯಃ ಪ್ರಾಣೇ ತಿಷ್ಠನ್' ಎಂಬ ಶ್ರುತಿಯು ಪ್ರಾಣ, ದೇಹ ಮೊದಲಾದ ವಸ್ತುಗಳಲ್ಲಿ ಭಗವಂತನು ನೆಲೆಸಿ ವ್ಯಾಪಾರಗಳನ್ನು ಮಾಡುತ್ತಾನೆಂದು ಹೇಳುವುದರ ಮೂಲಕ ಅವುಗಳಿಗೆ ಅಸ್ವಾತಂತ್ರ್ಯವನ್ನು ತಿಳಿಸುತ್ತಿದೆಯೋ ಅದರಂತೆ 'ಪ್ರಕೃತಿಂ ಪುರುಷಂ ಚೈವ' ಇತ್ಯಾದಿ ಶ್ರುತಿಯೂ ಕೂಡ ವಿಶ್ವಕಾರಣವಾದ ಪ್ರಕೃತ್ಯಾದಿಗಳಲ್ಲಿ ಭಗವಂತನು ಪ್ರವೇಶ ಮಾಡಿದ್ದಾನೆಂದು ತಿಳಿಸುತ್ತಿದೆ. ಪ್ರಾಣಾದಿಗಳು ಅಸ್ವತಂತ್ರ ಸಾಧನವಾದಂತೆ ಈ ಪ್ರಕೃತ್ಯಾದಿಗಳೂ ಕೂಡ ಅಸ್ವತಂತ್ರಸಾಧನವೆಂದು ತಿಳಿಯಬೇಕು.

ಅರ್ಥ -- ಯಥಾ ಪ್ರಾಣಾದಿಃ = ಯಾವ ರೀತಿಯಾಗಿ 'ಪ್ರಾಣೇ ತಿಷ್ಠನ್' ಇತ್ಯಾದಿಯಾಗಿ ಈಶ್ವರನ ಪ್ರವೇಶದಿಂದ ಪ್ರಾಣಾದಿಗಳು ಸ್ವತಂತ್ರ ಸಾಧನವಲ್ಲವೆಂದು ತಿಳಿಯುತ್ತದೆ. ಇಲ್ಲದಿದ್ದರೆ ಅವುಗಳಲ್ಲಿ ಈಶ್ವರನ ಪ್ರವೇಶವೇ ವ್ಯರ್ಥವಾಗುತ್ತದೋ, ಅದರಂತೆ 'ಪ್ರಕೃತಿಂ ಪುರುಷಂ ಚೈವ' ಇತ್ಯಾದಿ ಶ್ರುತಿಗಳು ಹೇಳುತ್ತಿರುವ ಸಾಧನಗಳಲ್ಲಿಯೂ ಈಶ್ವರನ ಪ್ರವೇಶವಿರುವುದರಿಂದ ಸ್ವತಂತ್ರ ಸಾಧನಗಳಾಗುವುದಿಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಆರಂಭಣಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಕೂರ್ಮ ಪುರಾಣದ ಆಧಾರ

**ब्रह्मसूत्रभाष्यम् – ॥ यथा प्राणादिः ॥८॥**

**तच साधनजातं तेनानुप्रविष्टमेव यथा शरीरेन्द्रियादिः ।**

ಅನುವಾದ - ಪರಮಾತ್ಮನು ಸೃಷ್ಟಿಯ ವ್ಯಾಪಾರದಲ್ಲಿ ತೊಡಗಲು ಯಾವ ಸಾಧನ-ಸಮೂಹವನ್ನು ಅಪೇಕ್ಷಿಸುತ್ತಾನೊ ಅವುಗಳಲ್ಲಿ ಸ್ವತಃ ಅವನೇ ಪ್ರವೇಶವನ್ನು ಮಾಡುತ್ತಾನೆ ಶರೀರ ಇಂದ್ರಿಯಗಳಂತೆ. ಹೀಗೆ ಕೂರ್ಮಪುರಾಣವು ಹೇಳಿದೆ.

ಪ್ರತಿಪದಾರ್ಥ -- ಕರ್ತೃವಿಗಿಂತ ಅತಿರಿಕ್ತವಾದ ಸ್ವತಂತ್ರಸಾಧನವನ್ನು ಒಪ್ಪಬಹುದಲ್ಲವೆ? ಎಂದು ಆಶಂಕಿಸಿ ಪರಿಹಾರ ನೀಡುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಯಥಾ = ಹೇಗೆ, ತಚ್ಚ = ಆ, ಸಾಧನಜಾತಂ = ಪ್ರಕೃತ್ಯಾದಿ ಸಾಧನಸಮೂಹವು, ತೇನ = ಆ ಪರಮಾತ್ಮನಿಂದ, ಅನುಪ್ರವಿಷ್ಟಮೇವ = ಪ್ರವೇಶಿಸಲ್ಪಟ್ಟದ್ದೇ ಆಗಿದೆ.

### ನಾರಾಯಣನ ಜಗತ್‌ಪ್ರವೇಶ

**ब्रह्मसूत्रभाष्यम् –**

**'प्रकृतिं पुरुषं चैव प्रविश्य पुरुषोत्तमः ।**
**क्षोभयामास भगवान् सृष्ट्यर्थं जगतः प्रभुः ।।' इति कौर्मे ।।८।।**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये आरम्भणाधिकरणम् ।। ६ ।।**

ಅನುವಾದ - ಪ್ರಕೃತಿ, ಚತುರ್ಮುಖಬ್ರಹ್ಮ ಇವರ ಒಳಗೆ ಪುರುಷೋತ್ತಮನು ಪ್ರವೇಶವನ್ನು ಮಾಡಿ ಜಗತ್ತಿನ ಸೃಷ್ಟಿಗಾಗಿ ಅವುಗಳನ್ನು ಉನ್ಮುಖವಾಗಿ ಮಾಡುತ್ತಾನೆ.

ಪ್ರತಿಪದಾರ್ಥ -- ಸಾಧನಗಳು ಭಗವಂತನಿಂದ ಅನುಪ್ರವೇಶವನ್ನು ಪಡೆದಿವೆ ಎಂದು ಏಕೆ ಒಪ್ಪಬೇಕು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಪ್ರಕೃತಿಂ = ಪ್ರಕೃತಿಯನ್ನು, ಪುರುಷಂ = ಜೀವನನ್ನು, ಪ್ರವಿಶ್ಯ = ಪ್ರವೇಶಮಾಡಿ, ಪುರುಷೋತ್ತಮಃ = ಪುರುಷೋತ್ತಮನಾದ, ಭಗವಾನ್ = ನಾರಾಯಣನು, ಸೃಷ್ಟ್ಯರ್ಥಂ = ಸೃಷ್ಟಿಗೋಸ್ಕರ, ಜಗತಃ = ಜಗತ್ತನ್ನು, ಕ್ಷೋಭಯಾಮಾಸ = ಉದ್ಯುಕ್ತಗಳನ್ನಾಗಿ ಮಾಡಿದನು.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಆರಂಭಣಾಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### ಸಾಧನತ್ವಾದಿಗಳು ಪರಮಾತ್ಮನ ಅಧೀನ

**सत्तर्कदीपावलिः – 'साधनानां साधनत्वम्' इति हि उक्तम्; तत्स्पष्टयति – यथेत्यादिना ।। 'यः पृथिवीमन्तरो यमयति' इत्यादिना सवान्तर्यामित्वश्रवणाद् विष्णोर्युक्तं तदधीनत्वं प्रकृत्यादि साधनानाम् इत्यर्थः ।।**

ಸಾಧನ ಪರಿಕರಗಳಿಗೆ ಸಾಧನಾತ್ವಾದಿಗಳು ಹೇಗೆ ಪ್ರಾಪ್ತವಾಯಿತು ಎಂಬುದನ್ನೇ ಸ್ಪಷ್ಟಪಡಿಸಲು 'ಯಥಾಪ್ರಾಣಾದಿಃ' ಎಂಬ ಸೂತ್ರವು ಹೊರಟಿದೆ. 'ಯಃ ಪೃಥಿವೀಮಂತರೋ ಯಮಯತಿ' ಇತ್ಯಾದಿ ಶ್ರುತಿವಾಕ್ಯಗಳ ಆಧಾರದಿಂದ ಪರಮಾತ್ಮನು ಸರ್ವಾಂತರ್ಯಾಮಿ-ಯಾಗಿದ್ದಾನೆಂದು ಶ್ರುತವಾಗಿದೆ. ಆದ್ದರಿಂದ ಪ್ರಕೃತ್ಯಾದಿಸಾಧನಗಳಲ್ಲಿ ಪರಮಾತ್ಮನು ಅಂತರ್ಯಾಮಿಯಾಗಿರುವುದರಿಂದ ಪರಮಾತ್ಮನ ಅಧೀನವೇ ಆಗಿವೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಆರಂಭಣಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

## ತತ್ವಪ್ರದೀಪ

### ಅಧಿಕರಣದ ಸಂದೇಹ ಹಾಗೂ ಪೂರ್ವಪಕ್ಷ

**तत्वप्रदीपः – अत्र स्वतन्त्रकारणं विषयः । तत् किं ब्रह्मणोऽन्यदप्यस्ति उत नेति सन्दिह्यते । अत्राऽयं पूर्वपक्षः । अस्ति अन्यदपि कारणं बहु स्वतन्त्रं जगतः लौकिककार्येषु तथा दृष्टेः । नहि केवलकुलालमहिम्नैव करीरकरकादीनां सृष्टिः । मृद्दण्डचक्रसलिलादिसामर्थ्यसहकृतैव ।**

ಈ ಅಧಿಕರಣದಲ್ಲಿ ಸ್ವತಂತ್ರಕಾರಣವಾದದ್ದು ವಿಷಯವಾಗಿದೆ. ಈ ಸ್ವತಂತ್ರಕಾರಣವು ಬ್ರಹ್ಮನಿಗಿಂತ ಬೇರೆಯಾದದ್ದು ಇದೆಯೋ, ಇಲ್ಲವೋ ? ಎಂಬುದು ಸಂದೇಹ. ಪೂರ್ವಪಕ್ಷ ಹೀಗಿದೆ - ಬ್ರಹ್ಮನಿಗಿಂತ ಅತಿರಿಕ್ತವಾದ ಅನೇಕ ಸ್ವತಂತ್ರ ಕಾರಣಗಳಿವೆ. ಲೌಕಿಕ ಕಾರ್ಯಗಳಲ್ಲಿ ಹೀಗೆ ಅನೇಕ ಸ್ವತಂತ್ರಕಾರಣಗಳಿರುವುದೇ ಪ್ರತ್ಯಕ್ಷಸಿದ್ಧವಾಗಿದೆ. ಕೇವಲ ಕುಲಾಲನ ಮಹಿಮೆಯಿಂದ ಕರೀರ, ಕರಕ ಮೊದಲಾದ ವಸ್ತುಗಳು ಸೃಷ್ಟಿಯಾಗಲು ಸಾಧ್ಯವೇ ಇಲ್ಲ. ಮಣ್ಣು, ನೀರು, ದಂಡ, ಚಕ್ರ ಮೊದಲಾದ ಸಾಮರ್ಥ್ಯದ ಸಹಕಾರದಿಂದಷ್ಟೇ ಕುಲಾಲನು ಕರೀರ, ಕರಕ ಮೊದಲಾದವುಗಳನ್ನು ಸೃಷ್ಟಿ ಮಾಡಲು ಸಮರ್ಥನಾಗುತ್ತಾನೆ.

### ಸ್ವತಂತ್ರ ಬಹುಸಾಧನೆಗಳಿವೆಯೆನ್ನಲು ಲೋಕದೃಷ್ಟಾಂತ

**तत्वप्रदीपः – यद्यपि तेषामचेतनानां तत्र व्यापारस्तदधीनः । तथाऽपि न तेषां प्रातिस्विककार्यसाधनसामर्थ्यं कर्तृनियतं, येन पारतन्त्र्यमखिलमधिगच्छेम। अतः स्वतन्त्रबहुसाधनैव सृष्टिर्दृष्टा । तथा इयमपि सृष्टिः सृष्टित्वात् एष्टव्या, याऽत्र विमतिमध्यासिता ।**

ವಾಸ್ತವಿಕವಾಗಿ ಅಚೇತನರ ವ್ಯಾಪಾರವು ಕುಲಾಲಾದಿಗಳ ಅಧೀನವೇ ಆಗಿದೆ. ಆದರೂ ಕೂಡ ಆ ದಂಡಚಕ್ರಾದಿಗಳಲ್ಲಿರುವ ಸ್ವಾಭಾವಿಕವಾದ ಕಾರ್ಯಸಾಧನಸಾಮರ್ಥ್ಯವೇನಿದೆಯೋ ಅದು ಕುಲಾಲನ ಅಧೀನವಾಗಿರುವುದಿಲ್ಲ. ಹಾಗೇನಾದರು ಕುಲಾಲನ ಅಧೀನವಾಗಿದ್ದಲ್ಲಿ ಸಕಲವೂ ಕೂಡ ಪರತಂತ್ರ ಎಂಬುದಾಗಿ ನಾವು ತಿಳಿಯಬಹುದಿತ್ತು. ಆದ್ದರಿಂದ ಲೋಕದಲ್ಲಿ ಸ್ವತಂತ್ರವಾದ ಬಹುಸಾಧನೆಗಳ ಸೃಷ್ಟಿಯಾಗುವುದು ಕಂಡಿದೆ. ಅದರಂತೆ ಪ್ರಕೃತ ಜಗತ್ತಿನ ಸೃಷ್ಟಿಯನ್ನೂ ಕೂಡ ಪರಮಾತ್ಮನು ಸ್ವತಂತ್ರವಾದ ಬಹುಸಾಧನೆಗಳಿಂದಲೇ ಮಾಡುತ್ತಾನೆಂದು ಅಂಗೀಕಾರ ಮಾಡಬೇಕು. ಯಾವುದರ ಬಗ್ಗೆ ವಿವಾದವಿದೆಯೋ, ಅದನ್ನು ಹೀಗೆ ಬಗೆಹರಿಸಬೇಕು.

### ಸರ್ವತಂತ್ರ ಸ್ವತಂತ್ರನೆನ್ನಲು ಪ್ರಮಾಣವಿಲ್ಲ

**तत्वप्रदीपः – न च जगन्निर्मातुस्तादृक् स्वातन्त्र्ये प्रमाणमुपलभामहे । येन अस्मिन् साधने प्रतिज्ञाविरोधदोषेणोपालभ्येमहि । तादृक् स्वातन्त्र्ये**

**चान्यनिरपेक्षनिर्माणात् कर्मकालादि वैयर्थ्यप्रसङ्गः । तस्मात् 'न ब्रह्मैव स्वतन्त्रकारणम्' इति प्राप्ते प्रतिविधत्ते ।**

ಜಗತ್ತನ್ನು ನಿರ್ಮಾಣ ಮಾಡುವ ಪರಮಾತ್ಮನಲ್ಲಿ ಸಂಪೂರ್ಣ ಸ್ವಾತಂತ್ರ್ಯವಿದೆಯೆನ್ನಲು ಯಾವುದೇ ಪ್ರಮಾಣಗಳೇ ದೊರೆಯುತ್ತಿಲ್ಲ. ಹಾಗೇನಾದರೂ ಪ್ರಮಾಣಗಳು ದೊರೆತಿದ್ದಲ್ಲಿ ಅದೇ ಪ್ರಮಾಣದ ಪ್ರತಿಜ್ಞೆಗೆ ವಿರೋಧ ಬರುವುದರಿಂದ ಪ್ರಕೃತ್ಯಾದಿ ಸಾಧನಗಳು ಅಸ್ವತಂತ್ರವೆಂದು ಅಂಗೀಕಾರ ಮಾಡಬಹುದಿತ್ತು. ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನಿಗೆ ಬೇರೆ ಯಾವುದೇ ಪರಿಕರಗಳ ಅಪೇಕ್ಷೆಯಿಲ್ಲದ ಕಾರಣ ಕರ್ಮ, ಕಾಲಾದಿಗಳೆಲ್ಲವೂ ಕೂಡ ವ್ಯರ್ಥವೆಂದು ಒಪ್ಪಬಹುದಿತ್ತು. ಆದರೆ ಅಂಥ ಪ್ರಮಾಣಗಳೇ ದೊರೆಯುತ್ತಿಲ್ಲ. ಆದ್ದರಿಂದ ಬ್ರಹ್ಮನು ಸ್ವತಂತ್ರಕಾರಣನು ಆಗಲು ಸಾಧ್ಯವಿಲ್ಲ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

ಈ ಪೂರ್ವಕ್ಷವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡಿದ್ದಾರೆ.

### ಶ್ರುತಿಯ ಮುಂದೆ ಲೋಕನ್ಯಾಯವೇ ಸೋಲುತ್ತದೆ

**तत्वप्रदीपः – स्वतन्त्रकारणस्य ब्रह्मव्यतिरेकेणाभावः, ब्रह्मैव स्वतन्त्रकारणम् इत्यर्थः । 'किंस्विदासीदधिष्ठानमारम्भणं कतमत्स्वित्' इत्यारम्भण शब्दादिभ्यः, आरम्भणाक्षेपाधिष्ठानाक्षेपशब्दादिभ्यः । नह्यत्र उपादानाद्युक्तिः येन किं शब्दः प्रश्नविषयोऽभ्युपेयेत । नच लोकन्यायः श्रुतिसिद्धमर्थं चालयितुमलम् । विरोधे स्वयमाभासत्वापातात् ।**

ಶ್ರುತಿಗಳಿಂದ ಯಾವ ಸ್ವತಂತ್ರಕಾರಣನು ಶ್ರುತನಾಗಿದ್ದಾನೋ, ಅವನು ಬ್ರಹ್ಮನೇ ಆಗಿದ್ದಾನೆ. ಬ್ರಹ್ಮನಿಗಿಂತ ಅತಿರಿಕ್ತವಾದ ಸ್ವತಂತ್ರಕಾರಣವೇ ಇರುವುದಿಲ್ಲ. ಏಕೆಂದರೆ 'ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್‌ಸ್ವಿತ್' ಎಂಬ ಶ್ರುತಿಯಲ್ಲಿ ಆರಂಭಣಶಬ್ದಾದಿಗಳಿರುವುದರಿಂದ ಹಾಗೂ ಆರಂಭಣವನ್ನು ಆಕ್ಷೇಪ ಮಾಡುವ ಅಧಿಷ್ಠಾನವನ್ನು ಆಕ್ಷೇಪ ಮಾಡುವ ಶಬ್ದಾದಿಗಳಿರುವುದರಿಂದಲೂ ಪರಮಾತ್ಮನು ಸರ್ವತಂತ್ರ ಸ್ವತಂತ್ರನಾಗಿದ್ದಾನೆ. ಈ ಶ್ರುತಿಯಲ್ಲಿರುವ 'ಕಿಂ' ಶಬ್ದವು ಪ್ರಶ್ನವಿಷಯಕವೆಂದು ಅಂಗೀಕಾರ ಮಾಡಬಾರದು. ಆಕ್ಷೇಪಾರ್ಥಕವೆಂದೇ

ಅಂಗೀಕಾರ ಮಾಡಬೇಕು. ಮತ್ತು ಲೋಕನ್ಯಾಯವು ಶ್ರುತಿಸಿದ್ಧವಾದ ಅರ್ಥವನ್ನು ಅಲ್ಲಾಡಿಸಲೂ ಕೂಡ ಸಮರ್ಥವಾಗುವುದಿಲ್ಲ. ಶ್ರುತಿಗೆ ವಿರುದ್ಧವಾದ ಲೋಕನ್ಯಾಯವೇ ಸ್ವತಃ ಆಭಾಸವಾಗುತ್ತದೆ.

### ಪರಮಾತ್ಮಾತಿರಿಕ್ತವಾದದ್ದು ಅಸ್ವತಂತ್ರವೆನ್ನಲು ಪ್ರಮಾಣ

**तत्वप्रदीपः – नचान्यश्रुतिविरोधः । तासां परतन्त्रविषयत्वेन सावकाशत्वात् ।**

**'वर्जितः सर्वदोषैर्यो गुणसर्वस्वमूर्तिमान् ।**
**स्वतन्त्रो यद्वशाः सर्वे स विष्णुः परमो मतः ॥'**
**'द्रव्यं कर्म च कालश्च' इत्यादिभ्यश्च ।**

**भावे चोपलब्धेः ॥ यथैकः स्वतन्त्रो भगवान् उपलभ्यते तथाऽन्यस्वतन्त्रभावे तच्चोपलभ्येत इत्येषा दिक् । इति तदनन्यत्वाधिकरणम्॥**

ಮೇಲೆ ಹೇಳಿದ ಪ್ರಮೇಯವಿಷಯದಲ್ಲಿ ಯಾವುದೇ ಇತರ ಶ್ರುತಿಗಳ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ ಆ ಎಲ್ಲ ಶ್ರುತಿಗಳು ಪರತಂತ್ರವಾದ ಪ್ರಕೃತಿ ಪರವಾಗಿರುವುದರಿಂದ ಸಾವಕಾಶವಾಗುತ್ತವೆ.

ವರ್ಜಿತಃ ಸರ್ವದೋಷೈರ್ಯೋ ಗುಣಸರ್ವಸ್ವಮೂರ್ತಿಮಾನ್ ।
ಸ್ವತಂತ್ರೋ ಯದ್ವಶಾಃ ಸರ್ವೇ ಸ ವಿಷ್ಣುಃ ಪರಮೋ ಮತಃ ॥

ಸರ್ವದೋಷಗಳಿಂದ ರಹಿತನಾದವನು, ಸಕಲಗುಣಗಳೇ ಮೂರ್ತಿಮತ್ತಾದವನು, ಸ್ವತಂತ್ರನಾದವನು, ಸರ್ವೋತ್ತಮನಾದವನು ಎಂದರೆ ಮಹಾವಿಷ್ಣುವೇ ಆಗಿದ್ದಾನೆ. ಇವನ ಅಧೀನವಾಗಿ ಸಕಲ ಪದಾರ್ಥಗಳು ಜಗತ್ತಿನಲ್ಲಿ ಇವೆ.

'ದ್ರವ್ಯಂ ಕರ್ಮ ಚ ಕಾಲಶ್ಚ' ದ್ರವ್ಯ, ಕರ್ಮ, ಕಾಲ ಇವುಗಳೂ ಕೂಡ ಪರಮಾತ್ಮನ ಅಧೀನವಾಗಿವೆ. ಈ ಎಲ್ಲ ಶ್ರುತಿಗಳ ಆಧಾರದಿಂದ ಪರಮಾತ್ಮನಿಂದ ಅತಿರಿಕ್ತವಾದ ಪದಾರ್ಥಗಳು ಪರತಂತ್ರವಾಗಿವೆ ಎಂಬುದು ನಿರ್ಣಯವಾಗುತ್ತವೆ.

'ಭಾವೇ ಚೋಪಲಬ್ಧೇಃ' ಎಂಬ ಸೂತ್ರದ ಅಭಿಪ್ರಾಯ ಹೀಗಿದೆ - ಯಾವರೀತಿಯಾಗಿ ಭಗವಂತನೊಬ್ಬನೇ ಸ್ವತಂತ್ರನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣಗಳಿವೆಯೋ, ಅದರಂತೆ ಬೇರೆ ಪದಾರ್ಥವು ಸ್ವತಂತ್ರವಾಗಿವೆ ಎಂಬ ವಿಷಯದಲ್ಲಿ ಪ್ರಮಾಣವಿದ್ದಿದ್ದರೆ ಪೂರ್ವಪಕ್ಷಿಗಳು ಹೇಳಿದ್ದನ್ನು ಒಪ್ಪಬಹುದಿತ್ತು. ಆದರೆ ಅಂಥ ಪ್ರಮಾಣಗಳಿಲ್ಲ.

ಇಲ್ಲಿಗೆ ಈ ಅಧಿಕರಣದ ವಿಷಯ ಸಾಕು. ಇನ್ನೂ ಹೆಚ್ಚಿನ ವಿಚಾರವನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಆರಂಭಣಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಅನುಮಾನದಿಂದ ಸಾಧನಸ್ವಾತಂತ್ರ್ಯ ಸಮರ್ಥನೆ

**तत्वप्रकाशिका – तर्हि विमता सृष्टिः कर्तृव्यतिरिक्तस्वतन्त्रसाधनसापेक्षा सृष्टित्वात्पटसृष्टिवदिति । विप्रतिपन्नं वा साधनं स्वतन्त्रं साधनत्वात्तुर्यादिवदित्यपि स्यादित्याशङ्कां परिहरत्सूत्रमुपन्यस्य व्याचष्टे ।। यथेति ।।**

'ವಿವಾದವಿಷಯವಾದ ವಿಶ್ವಸೃಷ್ಟಿಯು ಕರ್ತೃವಿಗಿಂತ ಅತಿರಿಕ್ತವಾದ ಸ್ವತಂತ್ರವಾದ ಮತ್ತೊಂದು ಸಾಧನೆಯನ್ನು ಅಪೇಕ್ಷಿಸುತ್ತದೆ. ಸೃಷ್ಟಿಯಾದ್ದರಿಂದ ಪಟಸೃಷ್ಟಿಯಂತೆ' ಅಥವಾ 'ವಿಪ್ರತಿಪನ್ನಮ್ ಸಾಧನಮ್ ಸ್ವತಂತ್ರಂ ಸಾಧನತ್ವಾತ್ ತುರ್ಯಾದಿವತ್' 'ವಿಪ್ರತಿಪನ್ನವಾದ ಪ್ರಕೃತ್ಯಾದಿ ಸಾಧನವು ಸ್ವಂತತ್ರವಾಗಿದೆ. ಸಾಧನವಾದ್ದರಿಂದ ಬಟ್ಟೆಯನ್ನು ಸೃಷ್ಟಿಮಾಡುವ ಯಂತ್ರದಂತೆ' ಹೀಗೆ ಅನುಮಾನದಿಂದ ಪುನಃ ಸಾಧನವು ಸ್ವತಂತ್ರವಾಗಿದೆ ಎಂದು ಸಾಧಿಸಬಹುದಲ್ಲವೇ? ಎಂದು ಆಕ್ಷೇಪ ಮಾಡಿದರೆ ಇದನ್ನು ಪರಿಹರಿಸುವ 'ಯಥಾ ಪ್ರಾಣಾದಿಃ' ಎಂಬ ಮುಂದಿನ ಸೂತ್ರವು ಹೊರಟಿದೆ. ಅದನ್ನು 'ತಚ್ಚ' ಇತ್ಯಾದಿ ಭಾಷ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

ಅಂಗೀಕಾರ ಮಾಡಬೇಕು. ಮತ್ತು ಲೋಕನ್ಯಾಯವು ಶ್ರುತಿಸಿದ್ಧವಾದ ಅರ್ಥವನ್ನು ಅಲ್ಲಾಡಿಸಲೂ ಕೂಡ ಸಮರ್ಥವಾಗುವುದಿಲ್ಲ. ಶ್ರುತಿಗೆ ವಿರುದ್ಧವಾದ ಲೋಕನ್ಯಾಯವೇ ಸ್ವತಃ ಆಭಾಸವಾಗುತ್ತದೆ.

ಪರಮಾತ್ಮಾತಿರಿಕ್ತವಾದದ್ದು ಅಸ್ವತಂತ್ರವೆನ್ನಲು ಪ್ರಮಾಣ

**तत्वप्रदीपः – नचान्यश्रुतिविरोधः । तासां परतन्त्रविषयत्वेन सावकाशत्वात् ।**

**'वर्जितः सर्वदोषैर्यो गुणसर्वस्वमूर्तिमान् ।**
**स्वतन्त्रो यद्वशाः सर्वे स विष्णुः परमो मतः ।।'**
**'द्रव्यं कर्म च कालश्च' इत्यादिभ्यश्च ।**

**भावे चोपलब्धेः ।। यथैकः स्वतन्त्रो भगवान् उपलभ्यते तथाऽन्यस्वतन्त्रभावे तच्चोपलभ्येत इत्येषा दिक् । इति तदनन्यत्वाधिकरणम्।।**

ಮೇಲೆ ಹೇಳಿದ ಪ್ರಮೇಯವಿಷಯದಲ್ಲಿ ಯಾವುದೇ ಇತರ ಶ್ರುತಿಗಳ ವಿರೋಧಕ್ಕೆ ಅವಕಾಶವಿಲ್ಲ. ಏಕೆಂದರೆ ಆ ಎಲ್ಲ ಶ್ರುತಿಗಳು ಪರತಂತ್ರವಾದ ಪ್ರಕೃತಿ ಪರವಾಗಿರುವುದರಿಂದ ಸಾವಕಾಶವಾಗುತ್ತವೆ.

ವರ್ಜಿತಃ ಸರ್ವದೋಷೈರ್ಯೋ ಗುಣಸರ್ವಸ್ವಮೂರ್ತಿಮಾನ್ ।
ಸ್ವತಂತ್ರೋ ಯದ್ವಶಾಃ ಸರ್ವೇ ಸ ವಿಷ್ಣುಃ ಪರಮೋ ಮತಃ ।।

ಸರ್ವದೋಷಗಳಿಂದ ರಹಿತನಾದವನು, ಸಕಲಗುಣಗಳೇ ಮೂರ್ತಿಮತ್ತಾದವನು, ಸ್ವತಂತ್ರನಾದವನು, ಸರ್ವೋತ್ತಮನಾದವನು ಎಂದರೆ ಮಹಾವಿಷ್ಣುವೇ ಆಗಿದ್ದಾನೆ. ಇವನ ಅಧೀನವಾಗಿ ಸಕಲ ಪದಾರ್ಥಗಳು ಜಗತ್ತಿನಲ್ಲಿ ಇವೆ.

'ದ್ರವ್ಯಂ ಕರ್ಮ ಚ ಕಾಲಶ್ಚ' ದ್ರವ್ಯ, ಕರ್ಮ, ಕಾಲ ಇವುಗಳೂ ಕೂಡ ಪರಮಾತ್ಮನ ಅಧೀನವಾಗಿವೆ. ಈ ಎಲ್ಲ ಶ್ರುತಿಗಳ ಆಧಾರದಿಂದ ಪರಮಾತ್ಮನಿಂದ ಅತಿರಿಕ್ತವಾದ ಪದಾರ್ಥಗಳು ಪರತಂತ್ರವಾಗಿವೆ ಎಂಬುದು ನಿರ್ಣಯವಾಗುತ್ತವೆ.

'ಭಾವೇ ಚೋಪಲಬ್ಧೇಃ' ಎಂಬ ಸೂತ್ರದ ಅಭಿಪ್ರಾಯ ಹೀಗಿದೆ - ಯಾವರೀತಿಯಾಗಿ ಭಗವಂತನೊಬ್ಬನೇ ಸ್ವತಂತ್ರನಾಗಿದ್ದಾನೆ ಎಂಬ ವಿಷಯದಲ್ಲಿ ಪ್ರಮಾಣಗಳಿವೆಯೋ, ಅದರಂತೆ ಬೇರೆ ಪದಾರ್ಥವು ಸ್ವತಂತ್ರವಾಗಿವೆ ಎಂಬ ವಿಷಯದಲ್ಲಿ ಪ್ರಮಾಣವಿದ್ದಿದ್ದರೆ ಪೂರ್ವಪಕ್ಷಿಗಳು ಹೇಳಿದ್ದನ್ನು ಒಪ್ಪಬಹುದಿತ್ತು. ಆದರೆ ಅಂಥ ಪ್ರಮಾಣಗಳಿಲ್ಲ.

ಇಲ್ಲಿಗೆ ಈ ಅಧಿಕರಣದ ವಿಷಯ ಸಾಕು. ಇನ್ನೂ ಹೆಚ್ಚಿನ ವಿಚಾರವನ್ನು ಸ್ವತಃ ಶಿಷ್ಯಂದಿರೇ ಊಹಿಸಿಕೊಳ್ಳಬೇಕು.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಆರಂಭಣಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

### ತತ್ವಪ್ರಕಾಶಿಕಾ

### ಅನುಮಾನದಿಂದ ಸಾಧನಸ್ವಾತಂತ್ರ್ಯ ಸಮರ್ಥನೆ

**तत्त्वप्रकाशिका – तर्हि विमता सृष्टिः कर्तृव्यतिरिक्तस्वतन्त्रसाधनसापेक्षा सृष्टित्वात्पटसृष्टिवदिति । विप्रतिपन्नं वा साधनं स्वतन्त्रं साधनत्वात्तुर्यादिवदित्यपि स्यादित्याशङ्कां परिहरत्सूत्रमुपन्यस्य व्याचष्टे ।। यथेति ।।**

'ವಿವಾದವಿಷಯವಾದ ವಿಶ್ವಸೃಷ್ಟಿಯು ಕರ್ತೃವಿಗಿಂತ ಅತಿರಿಕ್ತವಾದ ಸ್ವತಂತ್ರವಾದ ಮತ್ತೊಂದು ಸಾಧನೆಯನ್ನು ಅಪೇಕ್ಷಿಸುತ್ತದೆ. ಸೃಷ್ಟಿಯಾದ್ದರಿಂದ ಪಟಸೃಷ್ಟಿಯಂತೆ' ಅಥವಾ 'ವಿಪ್ರತಿಪನ್ನಮ್ ಸಾಧನಮ್ ಸ್ವತಂತ್ರಂ ಸಾಧನತ್ವಾತ್ ತುರ್ಯಾದಿವತ್' 'ವಿಪ್ರತಿಪನ್ನವಾದ ಪ್ರಕೃತ್ಯಾದಿ ಸಾಧನವು ಸ್ವಂತತ್ರವಾಗಿದೆ. ಸಾಧನವಾದ್ದರಿಂದ ಬಟ್ಟೆಯನ್ನು ಸೃಷ್ಟಿಮಾಡುವ ಯಂತ್ರದಂತೆ' ಹೀಗೆ ಅನುಮಾನದಿಂದ ಪುನಃ ಸಾಧನವು ಸ್ವತಂತ್ರವಾಗಿದೆ ಎಂದು ಸಾಧಿಸಬಹುದಲ್ಲವೇ? ಎಂದು ಆಕ್ಷೇಪ ಮಾಡಿದರೆ ಇದನ್ನು ಪರಿಹರಿಸುವ 'ಯಥಾ ಪ್ರಾಣಾದಿಃ' ಎಂಬ ಮುಂದಿನ ಸೂತ್ರವು ಹೊರಟಿದೆ. ಅದನ್ನು 'ತಚ್ಚ' ಇತ್ಯಾದಿ ಭಾಷ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಪ್ರಕೃತ್ಯಾದಿಗಳು ಸ್ವತಂತ್ರಗಳಲ್ಲ

**तत्वप्रकाशिका – न तत्साधनं स्वतन्त्रं प्रेरणार्थं भगवताऽनुप्रविष्टत्वात् तथा शरीरेन्द्रियप्राणादिः ।**

ಪ್ರಕೃತಿ ಮುಂತಾದ ಸಾಧನಗಳು 'ನ ಸ್ವತಂತ್ರಮ್' ಪ್ರಕೃತಿ ಮೊದಲಾದ ಸಾಧನಗಳು ಸ್ವತಂತ್ರವಲ್ಲ. ಅವುಗಳನ್ನು ಪ್ರೇರಣೆ ಮಾಡುವುದಕ್ಕಾಗಿ ಭಗವಂತನು ಪ್ರಕೃತ್ಯಾದಿಗಳಲ್ಲಿ ಪ್ರವೇಶ ಮಾಡುತ್ತಾನೆ. ಅದೇ ರೀತಿಯಾಗಿ ದೇಹ, ಇಂದ್ರಿಯ, ಪ್ರಾಣ ಮೊದಲಾದವುಗಳಲ್ಲಿಯೂ ಕೂಡ ಪರಮಾತ್ಮನು ಪ್ರವೇಶ ಮಾಡುತ್ತಾನೆ. ಹೀಗೆ ಅನುಮಾನವನ್ನು ಮಾಡಬೇಕು. 'ತತ್ಸಾಧನಂ ಸ್ವತಂತ್ರಂ ಪ್ರೇರಣಾರ್ಥಂ ಭಗವತಾ ಅನುಪ್ರವಿಷ್ಟತ್ವಾತ್' ಎಂದು.

### ಪ್ರೇರಣೆಗೋಸ್ಕರ ಭಗವತ್ ಪ್ರವೇಶ

**तत्वप्रकाशिका – 'यः प्राणे तिष्ठन्' इत्यादेरीश्वरेणानुप्रविष्टत्वान्न स्वतन्त्रम्। अन्यथाऽनुप्रवेशवैयर्थ्यादिति भावः।**

'ಯಃ ಪ್ರಾಣೇ ತಿಷ್ಠನ್' ಇತ್ಯಾದಿ ಶ್ರುತಿಗಳಲ್ಲಿ ಪ್ರೇರಣೆಗೊಸ್ಕರ ಭಗವಂತನು ಆಯಾ ಪದಾರ್ಥಗಳಲ್ಲಿ ಪ್ರವೇಶ ಮಾಡುತ್ತಾನೆಂದು ಹೇಳಲಾಗಿದೆ. ಆದದ್ದರಿಂದ ಸಾಧನ ಪದಾರ್ಥಗಳು ಸ್ವತಂತ್ರವಾಗಲು ಸಾಧ್ಯವಿಲ್ಲ. ಪ್ರರಣೆಗೋಸ್ಕರ ಅವನು ಪ್ರವೇಶ ಮಾಡದಿದ್ದರೆ. ಅವನ ಪ್ರವೇಶವೇ ವ್ಯರ್ಥವಾಗಬೇಕಾದೀತು.

### ಈ ವಿಷಯದಲ್ಲಿ ಕೂರ್ಮಪುರಾಣವೇ ಆಧಾರ

**तत्वप्रकाशिका – साधनानां भगवदनुप्रविष्टत्वमेव कुत इत्यत आह – प्रकृतिमिति ।।**

ಸಾಧನೆಗಳಲ್ಲಿ ಭಗವಂತ ಅನುಪ್ರವೇಶವು ಯಾವ ಪ್ರಮಾಣದಿಂದ ಸಿದ್ಧವಾಗಿದೆ ಎಂಬ ಪ್ರಶ್ನೆಗೆ 'ಪ್ರಕೃತಿಂ ಪುರುಷಂ ಚೈವ' ಎಂಬ ಕೂರ್ಮಪುರಾಣವು ಆಧಾರವಾಗಿದೆ ಎಂದು ಉದಾಹರಿಸುತ್ತಿದ್ದಾರೆ.

ಕೂರ್ಮಪುರಾಣದ ವಚನಕ್ಕೆ ವ್ಯಾಖ್ಯಾನ

**तत्वप्रकाशिका – क्षोभयामास उन्मुखीचकार । अतो भगवतः स्वातन्त्र्येण सर्वकर्तृत्वे विरोधगन्धाभावाद्युक्तं सर्वगुणपूर्णत्वमिति सिद्धम् ।।**

ಭಾಷ್ಯದಲ್ಲಿ ಉದಾಹರಿಸಿದ ವಚನದಲ್ಲಿ 'ಕ್ಷೋಭಯಾಮಾಸ' ಎಂಬ ಪದಕ್ಕೆ ಸೃಷ್ಟಿಗೆ ಉನ್ಮುಖವನ್ನಾಗಿ ಮಾಡಿದನು ಎಂದರ್ಥ. ಆದ್ದರಿಂದ ಭಗವಂತನು ಸ್ವತಂತ್ರವಾಗಿ ಸರ್ವಕರ್ತೃವಾಗಿದ್ದಾನೆ ಎಂಬ ವಿಷಯದಲ್ಲಿ ವಿರೋಧದ ಗಂಧವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಥಮಸೂತ್ರದ ಬ್ರಹ್ಮಶಬ್ದದಿಂದ ಪ್ರತಿಪಾದ್ಯವಾದ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಆರಂಭಣಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಭಾವದೀಪ

'ಪಟಾದಿಸೃಷ್ಟಿಃ' ಎಂಬ ಭಾಷ್ಯಕ್ಕೆ ಅನುಗುಣವಾಗಿದೆ ಟೀಕೆ

**भावदीपः –** ॥ यथा प्राणादिः ॥ २१ ॥ पटादिसृष्टिरिति पूर्वभाष्यानुरोधादाह – **विमता सृष्टिरिति ।।** तच्च साधनजातमिति भाष्यदिशाऽऽह**– विप्रतिपन्नं वा साधनमिति ।। न स्वतन्त्रमिति ।।** तथा च प्राचीनानुमानस्यैतदनुमानबाध इति भावः ।

'ಪಟಾದಿಸೃಷ್ಟಿಃ' ಎಂಬ ಭಾಷ್ಯವಾಕ್ಯಕ್ಕೆ ಅನುಗುಣವಾಗಿ ಟೀಕೆಯಲ್ಲಿ 'ವಿಮತಾ ಸೃಷ್ಟಿಃ' ಎಂಬ ಅನುಮಾನವನ್ನು ಪ್ರಯೋಗ ಮಾಡಿದ್ದಾರೆ. 'ತಚ್ಚ ಸಾಧನಜಾತಂ' ಎಂಬ ಭಾಷ್ಯಕ್ಕೆ ಅನುಗುಣವಾಗಿ

'ವಿಪ್ರತಿಪನ್ನಂ ವಾ ಸಾಧನಂ' ಎಂಬ ಅನುಮಾನವನ್ನು ಟೀಕೆಯಲ್ಲಿ ಪ್ರಯೋಗ ಮಾಡಿದ್ದಾರೆ. ಉತ್ತರವನ್ನು ನೀಡುವಾಗ 'ನ ಸ್ವತಂತ್ರಂ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಈ ಅನುಮಾನದಿಂದಲೇ ಪೂರ್ವಪಕ್ಷದ ಅನುಮಾನಗಳೆಲ್ಲ ಬಾಧಿತವಾಗುತ್ತವೆಂದು ತಿಳಿಯಬೇಕು.

ವಿವರಣೆ - ಭಾಷ್ಯದಲ್ಲಿ 'ಸಾಧನಾಂತರೇಣ ಹಿ ಪಟಾದಿ ಸೃಷ್ಟಿಃ ದೃಷ್ಟಾ' - ತಂತು ಮೊದಲಾದ ಸಾಧನಗಳಿಂದಲೇ ಬಟ್ಟೆ ಮೊದಲಾದವುಗಳ ಸೃಷ್ಟಿಯಾಗುವುದು ಕಂಡಿದೆ ಎಂಬುದಾಗಿ ಹೇಳಿರುತ್ತಾರೆ. ಈ ಭಾಷ್ಯಕ್ಕೆ ವ್ಯಾಖ್ಯಾನವನ್ನು ಟೀಕೆಯಲ್ಲಿ ಅನುಮಾನವನ್ನು ಪ್ರಯೋಗ ಮಾಡುವ ಮೂಲಕ 'ವಿಮತಾಸೃಷ್ಟಿಃ' ಇತ್ಯಾದಿಯಾಗಿ ಮಾಡಿದ್ದಾರೆ. ಮತ್ತು 'ಸಾಧನಜಾತಂ ತೇನ ಅನುಪ್ರವಿಷ್ಟಮೇವ' ಎಂಬುದಾಗಿ ಮುಂದೆ ಸೂತ್ರಕ್ಕೆ ವ್ಯಾಖ್ಯಾನಮಾಡುವಾಗ ಭಾಷ್ಯದಲ್ಲಿ ಹೇಳಿರುತ್ತಾರೆ. ಅದಕ್ಕನುಗುಣವಾಗಿ ಪೂರ್ವಪಕ್ಷವನ್ನು 'ವಿಪ್ರತಿಪನ್ನಂ' ಇತ್ಯಾದಿ ಟೀಕೆಯಿಂದ ತೋರಿಸಿದ್ದಾರೆ.

'ತತ್ಸಾಧನಂ ನ ಸ್ವತಂತ್ರಂ ಭಗವತಾ ಅನುಪ್ರವಿಷ್ಟತ್ವಾತ್ ದೇಹೇಂದ್ರಿಯ ಪ್ರಾಣಾದಿವತ್' ಎಂಬ ಅನುಮಾನವನ್ನು 'ಯಥಾ ಪ್ರಾಣಾದಿಃ' ಎಂಬ ಸೂತ್ರದಿಂದ ಹೇಳಿರುತ್ತಾರೆ. ಈ ಅನುಮಾನದಿಂದ ಪ್ರಕೃತ್ಯಾದಿಗಳು ಸ್ವತಂತ್ರಸಾಧನವಲ್ಲ ಎಂದು ಸಿದ್ಧವಾಗುತ್ತದೆ. ಹೀಗೆ ಸಿದ್ಧಾಂತದಲ್ಲಿ ಪ್ರಯುಕ್ತವಾದ ಅನುಮಾನದಿಂದ ಪೂರ್ವಪಕ್ಷದಲ್ಲಿ ಪ್ರಯುಕ್ತವಾದ ಅನುಮಾನಗಳೆಲ್ಲವೂ ಬಾಧಿತವಾಗುತ್ತವೆ.

ಅತಃ ಎಂಬ ಪದಕ್ಕೆ ಅನೇಕಾರ್ಥಗಳು.

**भावदीपः** – समस्तसूत्रार्थं फलोक्त्योपसंहरति– **अत इति**।। कर्त्रन्यसाधने स्वातन्त्र्यस्याप्रामाणिकत्वाच्छ्रुतियुक्तिबाधितत्वात्। साधनश्रुतेरीशाधीनसाधनपरत्वात् तदभावपरश्रुतेः स्वातन्त्र्यादिधर्मपरत्वात्। साधनसद्भावस्य च श्रुतियुक्तिसिद्धत्वात् स्वाधीनसाधनैः सृष्टेर्युक्तत्वाच्चेत्यर्थः।।

ಈ ಅಧಿಕರಣದಲ್ಲಿರುವ ಎಲ್ಲಾ ಸೂತ್ರಗಳ ಮುಖ್ಯಫಲವನ್ನು ಹೇಳುವ ಮೂಲಕ ಅಧಿಕರಣವನ್ನು 'ಅತಃ' ಇತ್ಯಾದಿಯಾಗಿ ಉಪಸಂಹಾರ ಮಾಡುತ್ತಿದ್ದಾರೆ. 'ಅತಃ' ಎಂಬ ಪದಕ್ಕೆ ಕರ್ತೃವಿಗಿಂತ ಬೇರೆ ಸಾಧನವು ಸ್ವತಂತ್ರವಾಗಿದೆ ಎಂಬುದು ಅಪ್ರಾಮಾಣಿಕವಾಗಿದೆ ಆದ್ದರಿಂದ ಶ್ರುತಿಯುಕ್ತಬಾಧಿತವಾದ್ದರಿಂದ ಎಂದರ್ಥ. ಅಥವಾ ಪ್ರಕೃತ್ಯಾದಿ ಸಾಧನಗಳು ಈಶಾಧೀನವಾಗಿವೆ ಎಂದು ಸಮರ್ಥನೆ ಮಾಡಿದ್ದರಿಂದ

ತದಭಾವಪರವಾದ ಶ್ರುತಿಗಳು ಸ್ವಾತಂತ್ರ್ಯಾದಿ ಧರ್ಮಪರವಾದ್ದರಿಂದ ಅಥವಾ ಸಾಧನಸದ್ಭಾವವು ಶ್ರುತಿಯುಕ್ತಿಸಿದ್ಧವಾಗಿರುವುದರಿಂದ ಮತ್ತು ಸ್ವಾಧೀನವಾದ ಸಾಧನಗಳಿಂದಲೇ ಸೃಷ್ಟಿಯು ಯುಕ್ತವಾಗಿರುವುದರಿಂದ ಎಂಬುದಾಗಿ ಇಷ್ಟು ಅರ್ಥಗಳನ್ನು ತಿಳಿಯಬೇಕು.

### ವಿರೋಧಗಂಧಾಭಾವಾತ್ ಎಂಬುದಕ್ಕೆ ಮೂರು ಅರ್ಥ

**भावदीपः – विरोधगन्धेति ।।** साधनस्वातन्त्र्ययुक्तिविरोधो वा अद्व्य इत्यादिसाधनसत्वश्रुतिविरोधो वा महिमोत्कर्षविरोधादिर्वा कोऽपि नास्तीत्यर्थः ॥ २१ ॥

'ವಿರೋಧಗಂಧಾಭಾವಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಭಗವಂತನು ಸ್ವತಂತ್ರನಾಗಿ ಸರ್ವಕರ್ತೃವಾಗಿದ್ದಾನೆ ಎಂಬ ವಿಷಯದಲ್ಲಿ ವಿರೋಧಗಂಧವೇ ಇಲ್ಲದ್ದರಿಂದ ಎಂಬುದು ಇದರ ಅರ್ಥ. ಸಾಧನಗಳು ಸ್ವತಂತ್ರವಾಗಿವೆ ಎಂಬುದನ್ನು ಸಮರ್ಥನೆ ಮಾಡುವ ಯುಕ್ತಿವಿರೋಧವೂ ಬರುವುದಿಲ್ಲ. 'ಅದ್ವ್ಯಃ' ಇತ್ಯಾದಿ ಶ್ರುತಿಗಳು ಪ್ರಳಯಕಾಲದಲ್ಲಿ ಸಾಧನಗಳಿಗೆ ಅಸ್ತಿತ್ವವನ್ನು ಸಮರ್ಥನೆ ಮಾಡುತ್ತಿವೆ. ಅಂತಹ ಶ್ರುತಿವಿರೋಧವು ಕೂಡ ಬರುವುದಿಲ್ಲ. ಪರಮಾತ್ಮನ ಮಹಿಮೋತ್ಕರ್ಷಕ್ಕೆ ಯಾವುದೇ ವಿರೋಧವೂ ಬರುವುದಿಲ್ಲ ಎಂಬರ್ಥವನ್ನು ಇದಕ್ಕೆ ತಿಳಿಯಬೇಕು.

### ಭಾವದೀಪದ ವೈಶಿಷ್ಟ್ಯ

* 'ಪ್ರಕೃತ್ಯಾದಿ ಸಾಧನಜಾತಂ ಭಗವತಾನುಪ್ರವಿಷ್ಟತ್ವಾತ್' ಎಂಬ ಸಿದ್ಧಾಂತದ ಅನುಮಾನವನ್ನು ಸ್ಪಷ್ಟವಾಗಿ ತೋರಿಸಿ ಇದರ ಬಾಧವನ್ನು ಪೂರ್ವಪಕ್ಷಾನುಮಾನಗಳಿಗೆ ಹೇಳಿರುತ್ತಾರೆ.
* ಒಟ್ಟು ಈ ಅಧಿಕರಣದಲ್ಲಿ ಏನು ಸಮರ್ಥನೆ ಮಾಡಲಾಯಿತು ಎಂಬುದನ್ನು 'ಅತಃ' ಎಂಬ ಪದಕ್ಕೆ ವ್ಯಾಖ್ಯಾನ ಮಾಡುವ ನೆಪದಲ್ಲಿ ಸಂಗ್ರಹಿಸಿದ್ದಾರೆ.

೧. ಭಗವದತಿರಿಕ್ತವಾದ ಸಾಧನಗಳಲ್ಲಿ ಸ್ವಾತಂತ್ರ್ಯವು ಅಪ್ರಾಮಾಣಿಕವಾಗಿದೆ.

೨. ಭಗವದತಿರಿಕ್ತಸಾಧನಗಳಲ್ಲಿ ಸ್ವಾತಂತ್ರ್ಯವನ್ನು ಸಮರ್ಥನೆ ಮಾಡುವುದು ಶ್ರುತಿಯುಕ್ತಿಬಾಧಿತವಾಗಿದೆ.

೩. ಸೃಷ್ಟಿಮಾಡುವಾಗ ಸಾಧನಗಳನ್ನು ಅಪೇಕ್ಷಿಸುತ್ತಾನೆ ಎಂದು ಸಮರ್ಥಿಸುವ ಶ್ರುತಿಗಳು ಈಶಾಧೀನ್ಯವನ್ನು ಹೇಳುತ್ತಿವೆ.

೪. ಪ್ರಳಯಕಾಲದಲ್ಲಿ ಯಾವುದೂ ಇರಲಿಲ್ಲ ಎಂದು ಹೇಳುವ ಶ್ರುತಿಯು ಸ್ವತಂತ್ರವಾಗಿ ಯಾವುದೂ ಇರಲಿಲ್ಲ ಎಂಬ ಅಭಿಪ್ರಾಯವುಳ್ಳದ್ದಾಗಿದೆ.

೫. ಪ್ರಳಯಕಾಲದಲ್ಲಿ ಸಾಧನಗಳು ಇರುತ್ತವೆಂಬುದು ಶ್ರುತಿಯುಕ್ತಿಗಳಿಂದ ಸಿದ್ಧವಾಗಿದೆ.

೬. ಪರಮಾತ್ಮನು ತನ್ನ ಅಧೀನವಾದ ಸಾಧನಗಳಿಂದಲೇ ಸೃಷ್ಟಿಮಾಡುತ್ತಾನೆ ಎಂದು.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ಆರಂಭಣಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## आरम्भणाधिकरणम् (२।१।६)

'ತದನನ್ಯತ್ವಮ್' ಎಂಬುದರ ವ್ಯಾಖ್ಯಾನ

।। तदनन्यत्वमारम्भणशब्दादिभ्यः ।।२-१-१५।।

अत्र बहुयुक्तिविरोधो निरस्यते । अवरस्येत्यग्रे अभिधानात् स्वतन्त्रसाधनस्येति शेषः । स्वतन्त्रसाधनस्य तदनन्यत्वं ब्रह्मानन्यत्वं, न ततोऽन्यत्वम् । स्वरूपसामर्थ्यादेव तस्य सर्वकर्तृत्वमिति यावत् । न त्वन्यतः स्वतन्त्रसाधनमपेक्ष्येति भावः ।

ಈ ಅಧಿಕರಣದಲ್ಲಿ ವಿಷ್ಣುವಿನ ಜಗತ್‌ಕರ್ತೃತ್ವವಿಷಯದಲ್ಲಿ ಅನೇಕ ಬಗೆಯ ಯುಕ್ತಿವಿರೋಧಗಳನ್ನು ಪರಿಹರಿಸಲಾಗಿದೆ. ಮುಂದೆ 'ಸತ್ವಾಚ್ಚಾವರಸ್ಯ' ಎಂಬುದಾಗಿ ವಿಷ್ಣುವಿನ ಅಧೀನವಾದ ಸಾಧನೆಗಳಿವೆ ಎಂದು ಹೇಳಲಾಗುತ್ತದೆ. ಆದ್ದರಿಂದ ಈ ಸೂತ್ರದಲ್ಲಿ 'ಸ್ವತಂತ್ರವಾದ ಸಾಧನಕ್ಕೆ' ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಸ್ವತಂತ್ರವಾದ ಸಾಧನಕ್ಕೆ 'ತದನನ್ಯತ್ವಮ್' = ಬ್ರಹ್ಮಾಭೇದವನ್ನು ಹೇಳಬೇಕು. ಹೊರತು ಬ್ರಹ್ಮನಿಂದ ಭೇದವನ್ನು ಹೇಳಬಾರದು. ಬ್ರಹ್ಮನು ತನ್ನ ಸ್ವರೂಪ ಸಾಮರ್ಥ್ಯದಿಂದಲೇ ಸರ್ವಕರ್ತೃವಾಗಿದ್ದಾನೆ. ಮತ್ತೊಂದು ಸ್ವತಂತ್ರಸಾಧನ ಅಪೇಕ್ಷೆ ಅವನಿಗಿರುವುದಿಲ್ಲ ಎಂಬುದು ಸೂತ್ರದ ಅಭಿಪ್ರಾಯ.

'ಆರಂಭಣಶಬ್ದಾದಿಭ್ಯಃ' ಎಂಬುದರ ವ್ಯಾಖ್ಯಾನ

कुतः ? आरभ्यते । येन तदारम्भणमुपादानम् । आरम्भणपदेनाधिष्ठानादिसाधनजातं लक्षयित्वा तदाक्षेपो लक्षणीयः । तथा च ''किं स्विदासीदधिष्ठानमारम्भणं कतमत्स्वित्कथासीत्'' इति स्वतन्त्राधिष्ठानाद्याक्षेपकशब्दात् अपरतन्त्रत्वात् स्वतन्त्रत्वात् साधनसत्ताप्रदत्वादिति आपिपदोक्तव्यतिरेकिहेतुभ्यश्चेत्यर्थः ।

ಏಕೆಂದರೆ ಆರಂಭಣಶಬ್ದಾದಿಭ್ಯಃ = ಉಪಾದಾನ ಅಧಿಷ್ಠಾನಾದಿಗಳು ಯಾವುದಿದ್ದವು ? ಎಂಬುದಾಗಿ ಆಕ್ಷೇಪ ಮಾಡುತ್ತಿರುವುದರಿಂದ ಇಲ್ಲಿ 'ಆರಭ್ಯತೇ ಅನೇನ ಇತಿ' ಎಂಬ ನಿಷ್ಪತ್ತಿಯಿಂದ 'ಆರಂಭಣ' ಶಬ್ದಕ್ಕೆ 'ಉಪಾದಾನಕಾರಣ' ಎಂದರ್ಥ. 'ಆರಂಭಣ' ಪದದಿಂದ ಅಧಿಷ್ಠಾನಾದಿ ಸಮಸ್ತ ಸಾಧನಗಳನ್ನು ಲಕ್ಷಣಯಾ ವಿವಕ್ಷಿಸಬೇಕು. ಮತ್ತು ಅವುಗಳ ಆಕ್ಷೇಪವನ್ನು ಲಕ್ಷಣಯಾ ಸ್ವೀಕರಿಸಬೇಕು. ಹಾಗಾಗಿ 'ಕಿಂ ಸ್ವಿದಾಸೀದಾಧಿಷ್ಠಾನಮಾರಂಭಣಂ ಕತಮಸ್ವಿತ್ ಕಥಾಸೀತ್' ಜಗತ್‌ಕರ್ತೃವಾದ ಶ್ರೀಹರಿಯು ಸೃಷ್ಟಿ ಮಾಡುವಾಗ ಅಧಿಷ್ಠಾನಾದಿಗಳು ಯಾವುದಿದ್ದವೋ ಎಂಬುದಾಗಿಯೇ ಆಕ್ಷೇಪ ಮಾಡಲಾಗಿದೆ. ಪರಾಧೀನವಲ್ಲದ್ದರಿಂದ ಸ್ವತಂತ್ರನಾಗಿರುವುದರಿಂದ ಸಾಧನೆಗಳಿಗೆ ಸತ್ತಾಪ್ರದನಾದ್ದರಿಂದ ಮತ್ತು ಆದಿಪದದಿಂದ ಹೇಳಲ್ಪಟ್ಟ ವ್ಯತಿರೇಕ ಹೇತುಗಳಿಂದ ಎಂಬುದು 'ಆರಂಭಣಶಬ್ದಾದಿಭ್ಯಃ' ಎಂಬುದರ ಅರ್ಥ. ಈ ಎಲ್ಲಾ ಹೇತುಗಳಿಂದ ಪರಮಾತ್ಮನು ಯಾವುದೇ ಮತ್ತೊಂದು ಸ್ವತಂತ್ರಸಾಧನೆಗಳನ್ನು ಅಪೇಕ್ಷಿಸುವುದಿಲ್ಲ ಎಂಬುದು ತಿಳಿಯುತ್ತದೆ.

ಸೂತ್ರದಲ್ಲಿರುವ ಪದಗಳಿಗೆ ಕೃತ್ಯ ಚಿಂತನೆ

अत्र स्वतन्त्रसाधनाभाव इत्युक्ते ब्रह्मणोऽपि स्वातन्त्र्यं नेति स्यात् । तदनन्यत्वं स्वतन्त्रसाधनस्येत्युक्ते तदेव स्वतन्त्रसाधनं नान्यदिति लभ्यत इत्येवमुक्तम् । श्रुतावधिष्ठानस्यादित्वेऽपि आरम्भणशब्दस्य साधकतमरूपकारणवाचितया अर्थप्राधान्यात्तस्योक्तिः ।

ಸೂತ್ರದಲ್ಲಿ 'ಸ್ವತಂತ್ರಸಾಧನಾಭಾವಃ' ಎಂದೇ ಹೇಳಬಹುದಿತ್ತು. ಇದನ್ನು ಬಿಟ್ಟು 'ತದನನ್ಯತ್ವಮ್' ಎಂದೇಕೆ ಹೇಳಿದರು ? ಎಂದರೆ ಬ್ರಹ್ಮನಿಗೂ ಕೂಡ ಸ್ವಾತಂತ್ರ್ಯವು ಇಲ್ಲವೆಂದು ಭಾಸವಾಗುತ್ತಿತ್ತು. ಹಾಗಾಗಿ 'ಸ್ವತಂತ್ರಸಾಧನಾಭಾವಃ' ಎಂದು ಹೇಳಿರುವುದಿಲ್ಲ. 'ತದನನ್ಯತ್ವಮ್ ಸ್ವತಂತ್ರಸಾಧನಸ್ಯ' ಎಂದು ಹೇಳಿದರೆ ಬ್ರಹ್ಮನೊಬ್ಬನೇ ಸ್ವತಂತ್ರ-ಸಾಧನನಾಗಿದ್ದಾನೆ ಮತ್ತೊಂದು ಸ್ವತಂತ್ರಸಾಧನವು ಇರುವುದಿಲ್ಲ ಎಂಬರ್ಥವು ಲಭಿಸುತ್ತದೆ. ಆದ್ದರಿಂದ 'ತದನನ್ಯತ್ವಮ್' ಎಂದೇ ಸೂತ್ರದಲ್ಲಿ ಹೇಳಿದ್ದಾರೆ.

ಶ್ರುತಿಯಲ್ಲಿ ಅಧಿಷ್ಠಾನಶಬ್ದವು ಪ್ರಾರಂಭದಲ್ಲಿದೆ. ಅದಕ್ಕನುಗುಣವಾಗಿ ಸೂತ್ರದಲ್ಲೂ ಕೂಡ ಅಧಿಷ್ಠಾನಶಬ್ದವನ್ನೇ ಪ್ರಯೋಗ ಮಾಡಬೇಕಿತ್ತು. ಶ್ರುತಿಯಲ್ಲಿ ಅನಂತರ ಪ್ರಾಪ್ತವಾದ ಆರಂಭಣಶಬ್ದವನ್ನೇಕೆ ಉಲ್ಲೇಖ ಮಾಡಿದ್ದಾರೆ ? ಆರಂಭಣಶಬ್ದಕ್ಕೆ ಸಾಧಕತಮರೂಪವಾದ ಕಾರಣ ಎಂಬರ್ಥವಿದೆ. ಇದು ಸೃಷ್ಟಿಗೆ ಅತ್ಯವಶ್ಯವಾಗಿದೆ. ಹೀಗೆ ಅರ್ಥತಃ ಪ್ರಾಧಾನ್ಯವನ್ನು ಹೊಂದಿರುವುದರಿಂದ ಅಧಿಷ್ಠಾನಶಬ್ದವನ್ನು ಪರಿತ್ಯಾಗ ಮಾಡಿ, ಆರಂಭಣಶಬ್ದವನ್ನು ಉಲ್ಲೇಖ ಮಾಡಿದ್ದಾರೆ.

### 'ಕಿಂ' ಶಬ್ದವು ಆಕ್ಷೇಪಾರ್ಥಕ

**श्रुतावधिष्ठानादिमात्राक्षेपश्रवणेऽपि साधनसत्त्वावेदक ''अब्द्यः सम्भूतः'' इत्यादिश्रुत्यन्तरबलात् स्वातन्त्र्येणाधिष्ठानाद्याक्षेपपरत्वं लभ्यते । अग्रे परिहारानुक्तेः किंशब्दो न प्रश्नार्थक इति ध्येयम् । विद्यारण्येनाप्याक्षेपार्थत्वस्यैवोक्तेः ।**

ಶ್ರುತಿಯಲ್ಲಿ ಅಧಿಷ್ಠಾನಾದಿಗಳು ಯಾವುದಿದ್ದವು ? ಎಂದು ಆಕ್ಷೇಪ ಮಾಡಿದ್ದರಿಂದ ಅಧಿಷ್ಠಾನಾದಿಗಳು ಇರಲಿಲ್ಲ ಎಂದಷ್ಟೇ ತಿಳಿಯುತ್ತದೆ. ಆದರೆ 'ಅದ್ಭ್ಯಃ ಸಂಭೂತಃ' ಎಂಬ ಬೇರೆ ಶ್ರುತಿಗಳಿಂದ ನೀರು ಮೊದಲಾದ ಸಾಧನಗಳು ಸೃಷ್ಟಿಯ ಮೊದಲು ಇದ್ದವೆಂದು ತಿಳಿಯುತ್ತದೆ. ಆದ್ದರಿಂದ ಅರ್ಥಾತ್ ಸ್ವತಂತ್ರಸಾಧನಗಳು ಮೊದಲು ಯಾವುದು ಇರಲಿಲ್ಲ ಎಂದು ಸೂಚಿಸುವ ಆಕ್ಷೇಪದಲ್ಲೇ ತಾತ್ಪರ್ಯವಿದೆ ಎಂದು ತಿಳಿಯುತ್ತದೆ.

ಶ್ರುತಿಯಲ್ಲಿರುವ ಕಿಂಶಬ್ದಕ್ಕೆ ಪ್ರಶ್ನೆ ಎಂಬರ್ಥವನ್ನು ಏಕೆ ವಿವಕ್ಷಿಸಬಾರದು? ಎಂದರ ಶ್ರುತಿಯಲ್ಲಿ ಮುಂದೆ ಪರಿಹಾರವನ್ನು ಹೇಳಿರುವುದಿಲ್ಲ. ಆದ್ದರಿಂದ 'ಕಿಂ' ಶಬ್ದವು ಆಕ್ಷೇಪಾರ್ಥದಲ್ಲಿದೆ ಎಂದು ತಿಳಿಯಬೇಕು. ವಿದ್ಯಾರಣ್ಯರಿಂದಲೂ ಕೂಡ ಇಲ್ಲಿರುವ 'ಕಿಂ' ಶಬ್ದಕ್ಕೆ ಆಕ್ಷೇಪಾರ್ಥವನ್ನೇ ಅಂಗೀಕರಿಸಲಾಗಿದೆ.

ವಿಪಕ್ಷದಲ್ಲಿ ಬಾಧಕತರ್ಕ

**विपक्षे बाधकाचैवमित्याह -**

।। भावे चोपलब्धेः ।।२-१-१६।।

**स्वतन्त्रसाधनस्येत्यस्ति । प्रसङ्ग इति शेषः । उक्तवैपरीत्ये बाधकोक्तित्वात् तदन्येति लभ्यते । तदन्यस्वतन्त्रसाधनस्य भावे उपलब्धे प्रसङ्गः । प्रमाणैरुपलभ्येतेति यावत् । नोपलभ्यते । अतश्च तदनन्यत्वमित्यर्थः । प्रत्यक्षश्रुत्योरभावाद् युक्तेश्चान्ते निरासादिति भावः ।**

ವಿಷ್ಣುವಿಗಿಂತ ಬೇರೆಯಾದ ಸ್ವತಂತ್ರಸಾಧನವಿದೆ ಎಂದು ಹೇಳಿದರೆ ಬಾಧಕವಿದೆ ಎಂಬುದನ್ನು ಸಮರ್ಥನೆ ಮಾಡಲು 'ಭಾವೇ ಚೋಪಲಬ್ಧೇಃ' ಎಂಬ ಸೂತ್ರ ಹೊರಟಿದೆ.

'ಸ್ವತಂತ್ರಸಾಧನಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. 'ಪ್ರಸಂಗಃ' ಎಂಬ ಪದವನ್ನು ಶೇಷಪೂರಣ ಮಾಡಬೇಕು. ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಮೇಯಕ್ಕೆ ವಿಪರೀತವಾಗಿ ಹೇಳಿದರೆ ಬಾಧಕವು ಬರುತ್ತದೆ ಎಂದು ಈ ಸೂತ್ರ ಹೇಳಲು ಹೊರಟಿದೆ. ಆದ್ದರಿಂದ 'ತದನ್ಯ' ಎಂಬ ಪದವನ್ನೂ ಕೂಡ ಇಲ್ಲಿ ಇಟ್ಟುಕೊಳ್ಳಬೇಕು.

ಆಗ ಸೂತ್ರಾರ್ಥ ಹೀಗೆ - 'ತದನ್ಯಸ್ವತಂತ್ರಸಾಧನಸ್ಯಭಾವೇ', ವಿಷ್ಣುವಿಗಿಂತ ಅನ್ಯವಾದ ಸ್ವತಂತ್ರಸಾಧನೆಗಳು ಇದ್ದಲ್ಲಿ, ಉಪಲಬ್ಧೇಃ = ಉಪಲಬ್ಧವಾಗಬೇಕಾಗಿತ್ತು. ಪ್ರಮಾಣಗಳಿಂದ ತಿಳಿಯಲ್ಪಡಬೇಕಾಗಿತ್ತು ಎಂಬುದು ಅಭಿಪ್ರಾಯ. ಆದರೆ ಅಂಥ ಯಾವುದೇ ಪ್ರಮಾಣಗಳು ಕಾಣಿಸುತ್ತಿಲ್ಲ. ಆದ್ದರಿಂದ ಸ್ವತಂತ್ರಸಾಧನವು ವಿಷ್ಣುವಿಗಿಂತ ಭಿನ್ನವಲ್ಲ ಎಂಬುದು ಸೂತ್ರಾರ್ಥ. ವಿಷ್ಣುವಿಗಿಂತ ಭಿನ್ನವಾದ ಸ್ವತಂತ್ರಸಾಧನೆಗಳಿವೆ ಎಂಬ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣ ಹಾಗೂ

ಶ್ರುತಿಪ್ರಮಾಣಗಳು ಇರುವುದಿಲ್ಲ. ಯುಕ್ತಿಪ್ರಮಾಣವನ್ನು ಕೊನೆಯಲ್ಲಿ ನಿರಾಕರಣೆ ಮಾಡಲಾಗುತ್ತದೆ.

ವಿಷ್ಣುಭಿನ್ನವಾದ ಸಾಧನೆಗಳು ಇವೆಯಲ್ಲವೇ?

**ननु ''अद्भ्यः सम्भूतः पृथिव्यै रसाच्च'' इत्यादावबाद्युपलक्षितभूतादियुक्ततया हिरण्यगर्भस्य हरेः सकाशादुत्पत्त्युक्त्या कथं साधनान्तरानुपलम्भ इत्यत आह -**

॥ सत्वाच्चावरस्य ॥२-१-१७॥

'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ' ಇತ್ಯಾದಿ ಶ್ರುತಿಯಲ್ಲಿ ಅಬಾದಿಗಳಿಂದ ಪಂಚಮಹಾಭೂತಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಆದ್ದರಿಂದ ಹಿರಣ್ಯಗರ್ಭನು ಶ್ರೀಹರಿಯ ದೆಸೆಯಿಂದ ಹುಟ್ಟಿದನೆಂದು ಹೇಳಿರುವುದರಿಂದ ವಿಷ್ಣುಭಿನ್ನವಾದ ಸಾಧನೆಗಳೇ ಪ್ರಮಾಣಗಳಿಂದ ಉಪಲಬ್ಧವಾಗುತ್ತಿಲ್ಲ ಎಂದು ಹೇಗೆ ಹೇಳುವಿರಿ ? ಎಂಬ ಆಕ್ಷೇಪಕ್ಕೆ ಉತ್ತರವನ್ನು ನೀಡಲು 'ಸತ್ವಾಚ್ಚಾವರಸ್ಯ' ಎಂಬ ಸೂತ್ರವು ಹೊರಟಿದೆ.

ಸೃಷ್ಟಿಯ ಮೊದಲು ಅನೇಕ ಅಸ್ವತಂತ್ರಸಾಧನೆಗಳು ಇದ್ದವು

**चोवाधारणे । साधनस्येत्यस्ति । अवरस्य तदधीनस्य साधनस्य सत्त्वादेव ''अद्भ्य'' इत्यादिवचनं, न स्वतन्त्रस्य सत्त्वादित्यर्थः ॥**

ಸೂತ್ರದಲ್ಲಿರುವ 'ಚ'ಶಬ್ದವು ಅವಧಾರಣಾರ್ಥದಲ್ಲಿದೆ. 'ಸಾಧನಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. 'ಅವರಸ್ಯ' ಎಂದರೆ ವಿಷ್ಣುವಿನ ಅಧೀನವಾದ ಸಾಧನಗಳು ಇರುವುದರಿಂದಲೇ 'ಅದ್ಭ್ಯಃ' ಇತ್ಯಾದಿ ಶ್ರುತಿವಚನಗಳು ಸಾರ್ಥಕವಾಗಿವೆ. ಇದನ್ನು ಬಿಟ್ಟು, ಸ್ವತಂತ್ರವಾದ ಸಾಧನೆಯಿರುವುದಿಲ್ಲ ಎಂಬಭಿಪ್ರಾಯದಿಂದ 'ಅದ್ಭ್ಯಃ ಸಂಭೂತಃ' ಇತ್ಯಾದಿ ಶ್ರುತಿಗಳು ಹೊರಟಿರುವುದಲ್ಲ. ('ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ' ಇತ್ಯಾದಿ ಶ್ರುತಿಯು ಪಂಚಮಹಾಭೂತಗಳಿಂದ ಪಂಚತನ್ಮಾತ್ರಗಳಿಂದ ಹಾಗೂ ಶ್ರೀಹರಿಯಿಂದ ಚತುರ್ಮುಖನು

ಜನಿಸಿದನು ಎಂದು ಹೇಳುತ್ತಿದೆ. ಇದರಿಂದ ಸೃಷ್ಟಿಯ ಮೊದಲಿದ್ದ ಪಂಚಮಹಾಭೂತಾದಿಗಳು ವಿಷ್ಣುವಿನ ಅಧೀನವಾಗಿದ್ದವು ಎಂದು ತಿಳಿಯಬೇಕು.)

ಅಸ್ವತಂತ್ರಸಾಧನೆಗಳು ಇರಲು ಹೇಗೆ ಸಾಧ್ಯ?

साधनान्तरसत्त्वमुपेत्य तस्येशाधीनत्वमुक्तं, तन्नेत्याक्षिप्याह -

।। असद्व्यपदेशान्नेति चेन्न धर्मान्तरणं वाक्यशेषात् ।।२-१-१८।।

भावनिर्देशोऽयम् । साधनस्येत्यस्ति । ''नासदासीन्नो सदासीत्तदानीं नासीद्रजो नो व्योम'' इति श्रुतौ साधनस्याऽसत्त्वव्यपदेशान्नोक्तं युक्तमिति चेत् ।

ಸೃಷ್ಟಿಯ ಮೊದಲು ಅನೇಕ ಸಾಧನಗಳಿವೆ. ಆದರೆ ಅವೆಲ್ಲವೂ ಈಶ್ವರಾಧೀನವಾಗಿವೆ ಎಂಬುದಾಗಿ 'ಸತ್ವಾಚ್ಚಾವರಸ್ಯ' ಎಂಬ ಸೂತ್ರದಲ್ಲಿ ಹೇಳಲಾಯಿತು. ಇದು ತಪ್ಪು. ಎಂಬ ಆಕ್ಷೇಪಕ್ಕೆ ಉತ್ತರವನ್ನು ನೀಡಲು 'ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್' ಎಂಬ ಸೂತ್ರವು ಹೊರಟಿದೆ.

ಈ ಸೂತ್ರದಲ್ಲಿರುವ 'ಅಸತ್' ಎಂಬ ಶಬ್ದವು ಭಾವಪ್ರಧಾನದಿಂದ ನಿರ್ದಿಷ್ಟವಾಗಿದೆ. ಆದ್ದರಿಂದ ಅಸದ್ವ್ಯಪದೇಶಾತ್' ಎಂಬರ್ಥವು ದೊರೆಯುತ್ತದೆ. 'ಸಾಧನಸ್ಯ' ಎಂಬ ಪದವನ್ನು ಅಧ್ಯಾಹಾರ ಮಾಡಬೇಕು. 'ನಾಸದಾಸೀನ್ನೋ ಸದಾಸೀತ್ತದಾನೀಂ ನಾಸೀದ್ರಜೋ ನೋ ವ್ಯೋಮ' ಇತ್ಯಾದಿ ಶ್ರುತಿಯಲ್ಲಿ ಯಾವುದೇ ಸಾಧನಗಳು ಇರಲಿಲ್ಲವೆಂದು ಹೇಳುತ್ತಿದೆ. ಆದ್ದರಿಂದ ಅಸ್ವತಂತ್ರಸಾಧನವಿತ್ತು ಎಂದು ಹಿಂದಿನ ಸೂತ್ರದಲ್ಲಿ ಹೇಳಿದ್ದು ಯುಕ್ತವಲ್ಲ ?

'ಧರ್ಮಾಂತರೇಣ ವಾಕ್ಯಶೇಷಾತ್' ಎಂಬುದರ ವ್ಯಾಖ್ಯಾನ

न स्वतन्त्रत्वाव्यक्तत्वाविकृतत्वादिधर्मान्तरेणैवासत्त्वव्यदपेशो न स्वरूपेणेत्यर्थः । कुतो मुख्यार्थत्यागः । वाक्यशेषात् । तम आसीदिति प्रकृत्यादिसत्त्वपरवाक्यशेषान्यथाऽनुपपत्त्येत्यर्थः ।

ಈ ಆಕ್ಷೇಪವು ತಪ್ಪು. ಏಕೆಂದರೆ ಸ್ವತಂತ್ರತ್ವ, ಅವ್ಯಕ್ತತ್ವ, ಅವಿಕೃತತ್ವ ಮೊದಲಾದ ಬೇರೆ ಧರ್ಮಗಳಿಂದ ವಿಶಿಷ್ಟವಾಗಿ ಯಾವುದೇ ಸಾಧನಗಳು ಇರಲಿಲ್ಲ ಎಂದು 'ನಾಸದಾಸೀತ್' ಇತ್ಯಾದಿ ಶ್ರುತಿಯು ಹೇಳುತ್ತಿದೆ ಹೊರತು, ಸ್ವರೂಪತಃ ಯಾವುದೇ ಸಾಧನಗಳೇ ಇರಲಿಲ್ಲವೆಂದು ಶ್ರುತಿಯು ಹೇಳುತ್ತಿಲ್ಲ ಎಂಬುದು 'ಧರ್ಮಾಂತರೇಣ ವಾಕ್ಯಶೇಷಾತ್' ಎಂಬ ಸೂತ್ರಭಾಗದ ಅರ್ಥ. ಹೀಗೆ ಮುಖ್ಯಾರ್ಥವನ್ನೇಕೆ ತ್ಯಾಗ ಮಾಡಬೇಕು? ಎಂಬ ಪ್ರಶ್ನೆಗೆ ವಾಕ್ಯಶೇಷವೇ ಉತ್ತರಿಸುತ್ತಿದೆ. 'ತಮ ಆಸೀತ್' ಎಂಬುದಾಗಿ ಪ್ರಕೃತ್ಯಾದಿಗಳ ಅಸ್ತಿತ್ವವನ್ನು ಸಮರ್ಥನೆ ಮಾಡುವ ಈ ವಾಕ್ಯಶೇಷದ ಅನ್ಯಥಾನುಪಪತ್ತಿಯಿಂದ ಸ್ವತಂತ್ರವಾಗಿ ಯಾವುದು ಇರಲಿಲ್ಲ ಎಂಬರ್ಥವು ಲಭಿಸುತ್ತವೆ.

**यद्वा ''तस्माद्धान्यत्र परः किञ्चनास'' इति स्वातन्त्र्यनिषेधवाक्यशेषादित्यर्थः । अन्यथा पर इति व्यर्थमिति भावः । अत्रेशमुपेत्यान्यस्यासत्त्वशङ्कनात् न असदिति चेदित्यनेन पौनरुक्त्यम् ।।**

ಅಥವಾ 'ತಸ್ಮಾದ್ಧಾನ್ಯತ್ರ ಪರಃ ಕಿಂಚನಾಸ' ಎಂಬ ವಾಕ್ಯಶೇಷವು ಸ್ವತಂತ್ರವಾಗಿ ಏನೂ ಇರಲಿಲ್ಲ ಎನ್ನುತ್ತಿದೆ. ಒಂದುವೇಳೆ ಯಾವುದೇ ಸಾಧನಗಳು ಸ್ವರೂಪತಃ ಇರಲಿಲ್ಲ ಎಂಬಭಿಪ್ರಾಯವನ್ನು ವಿವಕ್ಷಿಸುವುದಾಗಿದ್ದಲ್ಲಿ ಈ ಶ್ರುತಿಯಲ್ಲಿರುವ 'ಪರಃ' ಎಂಬ ಶಬ್ದವು ವ್ಯರ್ಥವಾಗುತ್ತವೆ. 'ಪರ' ಶಬ್ದಕ್ಕೆ 'ಸ್ವತಂತ್ರವಾಗಿ' ಎಂದರ್ಥ. ಸ್ವತಂತ್ರವಾಗಿರಲಿಲ್ಲ ಎಂದರೆ ಅರ್ಥಾತ್ ಅಸ್ವತಂತ್ರವಾಗಿದ್ದವು ಎಂದು ತಿಳಿಯಬೇಕು.

ಈ ಸೂತ್ರದಲ್ಲಿ ಪರಮಾತ್ಮನನ್ನು ಒಪ್ಪಿ ಉಳಿದ ಸಾಧನಗಳಿಗೆ ಅಸತ್ವವನ್ನು ಆಶಂಕಿಸಲಾಗಿದೆ. ಹಾಗಾಗಿ 'ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬ ಸೂತ್ರದಿಂದ ಪುನರುಕ್ತಿದೋಷವನ್ನು ಆಕ್ಷೇಪ ಮಾಡಬಾರದು.

(ಅಸದಧಿಕರಣದ ಮೊದಲನೆಯ ಸೂತ್ರ 'ಅಸಿದಿತಿಚೇನ್ನ ಪ್ರತಿಷೇಧಮಾತ್ರತ್ವಾತ್' ಎಂಬುದು. ಈ ಸೂತ್ರದಲ್ಲಿ ಪ್ರಳಯಕಾಲದಲ್ಲಿ ಯಾವುದೇ ಪದಾರ್ಥವಿರಲಿಲ್ಲವೆಂದು ಆಕ್ಷೇಪ ಮಾಡಿ, ಪ್ರಾಗಭಾವಕ್ಕೆ ಜಗತ್‌ಕರ್ತೃತ್ವವನ್ನು ಪೂರ್ವಪಕ್ಷ ಮಾಡಲಾಗಿದೆ. ಅನಂತರ ಪ್ರಾಗಭಾವವು ನಿಷೇಧರೂಪವಾಗಿರುವುದರಿಂದ ಕರ್ತೃವಾಗುವುದಿಲ್ಲ ಎಂದು ಸಿದ್ಧಾಂತ

ಮಾಡಲಾಗಿದೆ. ಈ ಸೂತ್ರದಲ್ಲೂ ಇದೇ ವಿಷಯವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಪುನರುಕ್ತಿ ಬರುತ್ತದಲ್ಲವೇ? ಎಂದು ಆಕ್ಷೇಪ. ಆದರೆ ಸೃಷ್ಟಿಯ ಮೊದಲು ಈಶ್ವರನನ್ನು ಸೇರಿಸಿಕೊಂಡು, ಯಾವುದೇ ಪದಾರ್ಥವಿಲ್ಲವೆಂದು ಅಸದಧಿಕರಣದಲ್ಲಿ ಆಕ್ಷೇಪ ಮಾಡಲಾಗಿದೆ. ಈ ಸೂತ್ರದಲ್ಲಿ ಭಗವಂತನನ್ನು ಅಂಗೀಕರಿಸಿ ಉಳಿದ ಪದಾರ್ಥಗಳಿಲ್ಲವೆಂದು ಆಕ್ಷೇಪ ಮಾಡಲಾಗಿದೆ. ಈ ವ್ಯತ್ಯಾಸವಿರುವುದರಿಂದ ಪುನರುಕ್ತಿ ಇಲ್ಲವೆಂದು ತಿಳಿಯಬೇಕು.)

### ಸ್ವತಂತ್ರನಿಗೆ ಮತ್ತೊಂದರ ಅಪೇಕ್ಷೆಯಿಲ್ಲ

**ननु तस्यैव स्वतन्त्रत्वे साधानान्तरोपादानमयुक्तमित्यत आह -**

**।। युक्तेः शब्दान्तराच्च ।।**

ಆ ಪರಮಾತ್ಮನು ಸ್ವತಂತ್ರನಾದಲ್ಲಿ ಬೇರೆ ಸಾಧನಗಳನ್ನು ಏಕೆ ಅಪೇಕ್ಷೆ ಪಡುತ್ತಾನೆ. ಸ್ವತಂತ್ರನಾದವನಿಗೆ ಸಾಧನಾಂತರಗಳ ಉಪಾದಾನವು ಅಯುಕ್ತವಾಗುತ್ತದಲ್ಲವೇ? ಎಂಬ ಆಕ್ಷೇಪಕ್ಕೆ ಉತ್ತರಿಸಲು 'ಯುಕ್ತೇಃ ಶಬ್ದಾಂತರಾಚ್ಚ' ಎಂಬ ಸೂತ್ರವು ಹೊರಟಿದೆ.

### 'ಶಬ್ದವಿಶೇಷಾತ್' ಎಂಬುದರ ವ್ಯಾಖ್ಯಾನ

**स्वेच्छया लीलया स्वाधीनसाधनान्तरोपादानेन सृष्टेर्युक्तत्वात् लीलया दण्डमालम्ब्य गच्छतोऽपङ्गुत्ववत्, ईशत्वाविरोधित्वादिति यावत् । लीलयेति कुतो ज्ञायते ? शब्दान्तराच्च । शब्दविशेषः शब्दान्तरम् । विवक्षितार्थप्रतिपादकः शब्द इति यावत् ।**

ತನ್ನ ಇಚ್ಛೆಯಿಂದ ಕೇವಲ ಲೀಲೆಗೋಸ್ಕರ ಪರಮಾತ್ಮನು ತನ್ನ ಅಧೀನವೇ ಆದ ಅನೇಕ ಸಾಧನೆಗಳನ್ನು ಪರಿಗ್ರಹಿಸುತ್ತಾನೆ. ಅವುಗಳಿಂದಲೇ ಸೃಷ್ಟಿಯನ್ನು ಮಾಡುತ್ತಾನೆ. ಯಾರು ಲೀಲೆಯಿಂದ ಕೋಲನ್ನು ಹಿಡಿದು ನಡೆಯುತ್ತಾನೋ, ಅವನನ್ನು ನೋಡಿ, 'ಕುಂಟ' ಎಂದು ಯಾರೂ ಹೇಳುವುದಿಲ್ಲ. ಆದರಂತೆ ಲೀಲೆಗೋಸ್ಕರ ಮತ್ತೊಂದು ಸಾಧನವನ್ನು ಅಪೇಕ್ಷೆ ಪಟ್ಟರೆ ಈಶ್ವರನ ಸ್ವಾತಂತ್ರ್ಯಕ್ಕೆ ಅದು ವಿರುದ್ಧವಾಗುವುದಿಲ್ಲ.

ಲೀಲೆಗೋಸ್ಕರವೇ ಪರಮಾತ್ಮನು ಸಾಧನೆಗಳನ್ನು ಅಪೇಕ್ಷೆ ಪಡುತ್ತಾನೆಂದು ಹೇಗೆ ತಿಳಿಯುತ್ತದೆ? ಎಂಬ ಪ್ರಶ್ನೆಗೆ 'ಶಬ್ದಾಂತರಾಚ್ಚ' ಎಂದು ಉತ್ತರಿಸಲಾಗಿದೆ. 'ಶಬ್ದಾಂತರ' ಎಂದರೆ 'ಶಬ್ದವಿಶೇಷ' ಎಂದರ್ಥ. ವಿವಕ್ಷಿತವಾದ ಅರ್ಥವನ್ನು ಪ್ರತಿಪಾದನೆ ಮಾಡುವ ಶಬ್ದವಿರುವುದರಿಂದ ಎಂದಭಿಪ್ರಾಯ.

### ಪರಮಾತ್ಮನ ಲೀಲಾಸೃಷ್ಟಿ

तस्मात् ''शक्तोऽपि भगवान्विष्णुरकर्तुं कर्तुमन्यथा । स्वभिन्नं कारणाभिन्नं भिन्नं विश्वं करोत्यजः'' इति शब्दान्तरादित्यर्थः ।

ಆ ಶಬ್ದ ಯಾವುದು ಎಂದರೆ -

'ಶಕ್ತೋಽಪಿ ಭಗವಾನ್ ವಿಷ್ಣುಃ ಅಕರ್ತುಂ ಕರ್ತುಮನ್ಯಥಾ ।
ಸ್ವಭಿನ್ನಂ ಕಾರಣಾಭಿನ್ನಂ ಭಿನ್ನಂ ವಿಶ್ವಂ ಕರೋತ್ಯಜಃ ॥

ಭಗವಂತನಾದ ಮಹಾವಿಷ್ಣುವು ಮಾಡದಿರಲು, ಬೇರೆ ರೀತಿಯಾಗಿ ಮಾಡಲು ಸಮರ್ಥನೇ ಆಗಿದ್ದಾನೆ. ಆದರೂ ಕೂಡ ಪ್ರಕೃತ್ಯಾದಿ ಕಾರಣಗಳಿಂದ ಅಭಿನ್ನವಾದ ತನಗಿಂತ ಭಿನ್ನವಾದ ವಿಶ್ವವನ್ನು ಸೃಷ್ಟಿ ಮಾಡುತ್ತಾನೆ ಎಂಬ ಶಬ್ದವಿಶೇಷವಿರುವುದರಿಂದ ಪರಮಾತ್ಮನು ಸಾಧನೆಗಳನ್ನು ಅಪೇಕ್ಷಿಸಿ ಸೃಷ್ಟಿ ಮಾಡುತ್ತಾನೆಂದು ತಿಳಿಯಬೇಕು.

### 'ಶಬ್ದಾಂತರಾಚ್ಚ' ಎಂಬುದಕ್ಕೆ ಮತ್ತೊಂದು ವ್ಯಾಖ್ಯಾನ

यद्वा साधनान्तरमेव सृष्टौ मास्त्वित्यत उक्तं शब्देति । ''अद्भ्यः सम्भूतो हिरण्यगर्भ'' इति तत्सत्त्वबोधकशब्दान्तराच्च । न केवलं प्रागुक्तं ''अद्भ्यः सम्भूतः पृथिव्यै रसाच्च'' ''तम आसीत्'' इत्यादिशब्दात् किन्तु शब्दान्तरादपि साधनसत्त्वमुपेयमित्यर्थः । पूर्वश्रुतिसङ्ग्रहायैव शब्दान्तरादित्युक्तम् ।

ಅಥವಾ ಸೃಷ್ಟಿಯನ್ನು ಮಾಡಲು ಭಗವಂತನಿಗೆ ಬೇರೆ ಸಾಧನಗಳೇ ಬೇಕಾಗಿರುವುದಿಲ್ಲ? ಎಂಬ ಪ್ರಶ್ನೆಗೆ ಉತ್ತರಿಸಲು 'ಶಬ್ದಾಂತರಾಚ್ಚ' ಎಂದು ಹೇಳಿದ್ದಾರೆ. 'ಅದ್ಭ್ಯಃ ಸಂಭೂತಃ ಹಿರಣ್ಯಗರ್ಭಃ' ಎಂಬುದಾಗಿ ಶ್ರುತಿಯು ಪಂಚಮಹಾಭೂತಗಳಿಂದ ಚತುರ್ಮುಖನು ಹುಟ್ಟಿದನು ಎಂದು ಹೇಳುತ್ತಿದೆ. ಇದರಿಂದ ಪಂಚಮಹಾಭೂತಗಳು ಸೃಷ್ಟಿಯ ಮೊದಲು ಇದ್ದವೆಂದು ತಿಳಿಯುತ್ತದೆ. ಆದ್ದರಿಂದ ಬೇರೆ ಸಾಧನೆಗಳು ಇದ್ದವು ಎಂಬ ಶಬ್ದಾಂತರದಿಂದಲೂ ಕೂಡ ಹಿಂದೆ ಹೇಳಿದ ಅತಿರಿಕ್ತಸಾಧನಗಳಿವೆ ಎಂಬ ಪ್ರಮೇಯವು ಸಿದ್ಧವಾಗುತ್ತವೆ. ಆದ್ದರಿಂದ ಹಿಂದೆ ಹೇಳಿದ 'ಅದ್ಭ್ಯಃ ಸಂಭೂತಃ ಪೃಥಿವ್ಯೈ ರಸಾಚ್ಚ' ಮತ್ತು 'ತಮ ಆಸೀತ್' ಇತ್ಯಾದಿ ಶ್ರುತಿಗಳಿಂದಷ್ಟೇ ಅಲ್ಲ. 'ಅದ್ಭ್ಯಃ ಸಂಭೂತಃ ಹಿರಣ್ಯಗರ್ಭಃ' ಎಂಬ ಮತ್ತೊಂದು ಶ್ರುತಿಯಿಂದಲೂ ಕೂಡ ಭಗವದತಿರಿಕ್ತ ಸಾಧನಗಳಿವೆ ಎಂಬುದನ್ನು ಒಪ್ಪಬೇಕು. ಹಿಂದೆ ಉದಾಹರಿಸಿದ ಶ್ರುತಿಗಳ ಸಂಗ್ರಹಕ್ಕಾಗಿ 'ಶಬ್ದಾಂತರಾತ್' ಎಂಬ ಪದಪ್ರಯೋಗವನ್ನು ಸೂತ್ರದಲ್ಲಿ ಮಾಡಿದ್ದಾರೆ.

### ಶ್ರುತ್ಯಂತರದ ಉಲ್ಲೇಖಕ್ಕೆ ಸ್ವರಸ ಕಾರಣ

**आद्यश्रुतेरनीश्वरकर्तृकावान्तरसृष्टिविषयत्वेन अन्त्यश्रुतेः तमःप्रभृतेर्लये सत्त्वोक्तावपीशसृष्टौ कारणत्वं नेत्येवमन्यथानयनसम्भवात् शब्दान्तरोक्तिः । अत्राजस्येशादेव सृष्टतया तत्राबादेर्हेतुत्वोक्तेः ।।**

ಹಿಂದೆ ಉದಾಹರಿಸಿದ ಎರಡು ಶ್ರುತಿಗಳಲ್ಲಿ 'ಅದ್ಭ್ಯಃ ಸಂಭೂತಃ' ಎಂಬುದು ಮೊದಲನೆಯ ಶ್ರುತಿಯಾಗಿದೆ. ಇದು ಈಶ್ವರನನ್ನು ಬಿಟು ಬೇರೆ ದೇವತೆಯು ಅವಾಂತರಸೃಷ್ಟಿಯನ್ನು ಮಾಡುತ್ತಾನೆನ್ನುತ್ತಿದೆ. ಎರಡನೆಯ 'ತಮ ಆಸೀತ್' ಎಂಬ ಶ್ರುತಿಯು ಪ್ರಳಯಕಾಲದಲ್ಲಿ ಪ್ರಕೃತ್ಯಾದಿಗಳಿದ್ದವು ಎಂದು ಹೇಳುತ್ತಿದೆ. ಆದರೂ ಕೂಡ ಈಶ್ವರನು ಮಾಡುವ ಸೃಷ್ಟಿಯಲ್ಲಿ ಪ್ರಕೃತ್ಯಾದಿಗಳಿಗೆ ಕಾರಣತ್ವವನ್ನು ಹೇಳುತ್ತಿಲ್ಲ. ಹೀಗೆ ಬೇರೆ ಪ್ರಕಾರದಿಂದ ಶ್ರುತಿಯನ್ನು ವ್ಯಾಖ್ಯಾನ ಮಾಡುವ ಸಂದರ್ಭವಿದೆ. ಹೀಗೆ ಅನ್ಯಥಾ ವ್ಯಾಖ್ಯಾನ ಮಾಡಬಾರದು ಎಂದು ತಿಳಿಸಲು ಶ್ರುತ್ಯಂತರವನ್ನು ಉಲ್ಲೇಖ ಮಾಡಿದ್ದಾರೆ. ಈ ಶ್ರುತಿಯಲ್ಲಿ ಚತುರ್ಮುಖನು ಪರಮಾತ್ಮನಿಂದಲೇ ಸೃಷ್ಟನಾಗಿದ್ದಾನೆ. ಆ ಸೃಷ್ಟಿಯಲ್ಲಿ ಅಪ್ ಮೊದಲಾದವುಗಳು ಕಾರಣಗಳಾಗಿವೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.

ಇತರ ಸಾಧನಗಳ ವಿಷಯದಲ್ಲಿ ಯುಕ್ತಿ ಪ್ರಮಾಣ

साधनसत्वेऽनुमानं चाह -

।। पटवच्च ।।२-१-२०।।

विमता सृष्टिः कर्तृभिन्नसाधनसाध्या सृष्टित्वात् पटसृष्टिवदित्यर्थः ।।

ಭಗವದಿತರವಾದ ಸಾಧನಗಳು ಸೃಷ್ಟಿಯ ಪೂರ್ವದಲ್ಲಿದ್ದವು ಎನ್ನಲು ಯುಕ್ತಿಪ್ರಮಾಣವನ್ನು 'ಪಟವಚ್ಚ' ಎಂಬ ಸೂತ್ರ ಹೇಳುತ್ತಿದೆ.

'ವಿಮತಾ ಸೃಷ್ಟಿಃ ಕರ್ತೃಭಿನ್ನಸಾಧನಸಾಧ್ಯಾ । ಸೃಷ್ಟಿತ್ವಾತ್ ಪಟಸೃಷ್ಟಿವತ್' ವಿವಾದವಿಷಯವಾದ ಸೃಷ್ಟಿಯು ಕರ್ತೃಭಿನ್ನವಾದ ಸಾಧನಗಳಿಂದ ಉಂಟಾಗಿದೆ. ಸೃಷ್ಟಿಯಾಗಿರುವುದರಿಂದ ಪಟಸೃಷ್ಟಿಯಂತೆ ಎಂಬ ಅನುಮಾನವನ್ನು ಈ ಸೂತ್ರದಿಂದ ಹೇಳಿದ್ದಾರೆ.

ಸ್ವತಂತ್ರಸಾಧನವೇಕೆ ಇಲ್ಲ?

नन्वेवं कर्तृभिन्नस्वतन्त्रसाधनसाध्येत्यपि सुसाध्यमित्यत आह -

।। यथा प्राणादिः ।।२-१-२१।।

ಹಾಗಾದರೆ ಕರ್ತೃಭಿನ್ನವಾದ ಸ್ವತಂತ್ರ ಸಾಧನಗಳಿಂದ ಜಗತ್ತಿನ ಸೃಷ್ಟಿಯಾಗಿದೆ ಎಂದು ಸುಲಭವಾಗಿ ಸಾಧಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಯಥಾ ಪ್ರಾಣಾದಿಃ' ಎಂಬ ಸೂತ್ರವು ಉತ್ತರಿಸುತ್ತಿದೆ.

यथा प्राणदेहादिकं "प्राणे तिष्ठन्" इत्यादिनेशानुप्रविष्टत्वान्न स्वतन्त्रम् । अन्यथा प्रवेशवैयर्थ्यात् तथा "प्रकृतिं पुरुषं चैव प्रविश्य" इत्युक्त्या साधनमपीशानुप्रविष्टत्वात् न स्वतन्त्रमिति तत्साधनं बाधितमित्यर्थः ।।

'ಪ್ರಾಣೇ ತಿಷ್ಠನ್' ಇತ್ಯಾದಿ ಶ್ರುತಿಯು ಹೇಳುವಂತೆ ಪ್ರಾಣ, ದೇಹ ಮೊದಲಾದವುಗಳಲ್ಲಿ ಪರಮಾತ್ಮನು ಪ್ರವೇಶಿಸುತ್ತಾನೆ. ಆದ್ದರಿಂದ ಅವುಗಳು ಸ್ವತಂತ್ರಸಾಧನಗಳಾಗಲು ಸಾಧ್ಯವಿಲ್ಲ.

ಸ್ವತಂತ್ರಸಾಧನೆಗಳೇ ಆಗಿದ್ದಲ್ಲಿ ಅವುಗಳ ಒಳಗೆ ಪರಮಾತ್ಮನು ಪ್ರವೇಶಿಸುವುದು ವ್ಯರ್ಥವಾಗುತ್ತಿತ್ತು. ಅದರಂತೆ 'ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ' ಎಂಬ ಶ್ರುತಿಯು ಪರಮಾತ್ಮನು ಪ್ರಕೃತಿ, ಪುರುಷ ಇತ್ಯಾದಿ ಸಾಧನಗಳ ಒಳಗೂ ಕೂಡ ಪ್ರವೇಶಿಸುತ್ತಾನೆಂದು ಹೇಳುತ್ತಿದೆ. ಆದ್ದರಿಂದ ಸೃಷ್ಟಿಯ ಕಾಲದಲ್ಲಿರುವ ಪ್ರಕೃತ್ಯಾದಿಗಳು ಸ್ವತಂತ್ರಸಾಧನಗಳಾಗಲು ಸಾಧ್ಯವಿಲ್ಲ. ಆದ್ದರಿಂದ ಸಾಧನಗಳು ಸ್ವತಂತ್ರವೆಂದು ಸಾಧಿಸುವುದು ಪ್ರಮಾಣ-ಬಾಧಿತವಾಗುತ್ತದೆ. ಇಷ್ಟು ಸೂತ್ರದ ಅಭಿಪ್ರಾಯ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಆರಂಭಣಾಧಿಕರಣವು ಮುಗಿಯಿತು ॥

## ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ಆರಂಭಣಾಧಿಕರಣ
## ಮತ್ತು
## ವಿಮರ್ಶೆ

ಅದ್ವೈತಿಗಳ ಅಧಿಕರಣಶರೀರ ಹೀಗಿದೆ - ಹಿಂದಿನ ಅಧಿಕರಣದಲ್ಲಿ ವ್ಯಾವಹಾರಿಕಭೇದವನ್ನು ಒಪ್ಪಿಕೊಂಡು, 'ಸ್ಯಾಲ್ಲೋಕವತ್' ಎಂಬುದಾಗಿ ಸೂತ್ರಕಾರರು ಹೇಳಿದರು. ಈ ಅಧಿಕರಣದಲ್ಲಿ ಪಾರಮಾರ್ಥಿಕವಾದ ಕಾರ್ಯಪ್ರಪಂಚಕ್ಕೆ ಕಾರಣನಾದ ಬ್ರಹ್ಮನ ದೆಸೆಯಿಂದ ಭೇದವೇ ಇರುವುದಿಲ್ಲ. 'ವಾಚಾರಂಭಣಂ ವಿಕಾರೋ ನಾಮಧೇಯಮ್', 'ಇದಂ ಸರ್ವಂ ಯದಯಮಾತ್ಮಾ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗಿಂತ ಅತಿರಿಕ್ತವಾದ ಪ್ರಪಂಚವೇ ಇಲ್ಲವೆಂದು ತಿಳಿಯುತ್ತಿದೆ ಎಂಬುದಾಗಿ ಸಮರ್ಥನೆ ಮಾಡುತ್ತಿದ್ದಾರೆ.

ಸೂತ್ರದಲ್ಲಿರುವ 'ಅನನ್ಯತ್ವ' ಎಂಬ ಶಬ್ದಕ್ಕೆ ಬ್ರಹ್ಮಾಭೇದವೆಂಬ ಅರ್ಥವನ್ನು ವಿವಕ್ಷಿಸಲು ಸಾಧ್ಯವಿಲ್ಲ. ಸುಳ್ಳಾದ ಜಗತ್ತಿಗೆ ಸತ್ಯವಾದ ಬ್ರಹ್ಮನಿಂದ ಅಭೇದವು ಯುಕ್ತವಾಗುವುದಿಲ್ಲ. ಜಡವಾದ ಜಗತ್ತಿಗೂ ಚೇತನನಾದ ಬ್ರಹ್ಮನಿಂದ ಅಭೇದವನ್ನು ನಿಮ್ಮ ಸಿದ್ಧಾಂತದಲ್ಲಿಯೂ ಕೂಡ ಅಂಗೀಕಾರ ಮಾಡಿರುವುದಿಲ್ಲ.

ಆಕ್ಷೇಪ - ಅಜ್ಞಾನವಿಶಿಷ್ಟನಾದ ಬ್ರಹ್ಮನು ಜಗತ್ತಿಗೆ ಉಪಾದಾನಕಾರಣನಾಗಿದ್ದಾನೆ. ಇವನಿಗೂ ಜಗತ್ತಿಗೂ ಅಭೇದವನ್ನು ಸೂತ್ರಕಾರರು ಹೇಳುತ್ತಿದ್ದಾರೆ.

ಸಮಾಧಾನ - ಹೀಗೆ ಹೇಳಬಾರದು. ಮುಮುಕ್ಷುವಿನಿಂದ ಜ್ಞೇಯನಾದವನು ಶುದ್ಧಬ್ರಹ್ಮ. ಇವನ ಜ್ಞಾನದಿಂದಲೇ ಸಕಲವೂ ಕೂಡ ತಿಳಿದಂತಾಗುತ್ತದೆಂದು ಉದ್ದಾಲಕರು ಪ್ರಶಂಸೆ ಮಾಡಿರುತ್ತಾರೆ. ಮಿಥ್ಯಾಭೂತವಾದ ಅಜ್ಞಾನವಿಶಿಷ್ಟಬ್ರಹ್ಮನಿಗೂ ಮತ್ತು ಜಗತ್ತಿಗೂ ಅಭೇದವಿರುವುದರಿಂದ ಸಮಸ್ತ ಜಗತ್ತು ಜ್ಞಾತವಾಗುತ್ತದೆಂದು ಏಕೆ ಪ್ರಶಂಸೆ ಮಾಡಬೇಕು. ಕೇವಲ ಶುದ್ಧಬ್ರಹ್ಮನ ಜ್ಞಾನವನ್ನೇ ಪ್ರಶಂಸೆ ಮಾಡಿ, ಶುದ್ಧಬ್ರಹ್ಮನಿಂದ ಅಭೇದವನ್ನೇ ಸೂತ್ರಕಾರರು ಹೇಳಬೇಕಲ್ಲವೇ?

ಹೀಗೊಪ್ಪದಿದ್ದರೆ ಅಜ್ಞಾನವಿಶಿಷ್ಟನಲ್ಲಿ ಅಜ್ಞಾನವೂ ಕೂಡ ವಿಶೇಷಣವಾಗಿ ಸೇರಿರುವುದರಿಂದ ಮೋಕ್ಷಕ್ಕಾಗಿ ಅಜ್ಞಾನವನ್ನೂ ಕೂಡ ತಿಳಿಯಬೇಕೆಂದು ಹೇಳಬೇಕಾದೀತು. 'ಯೇನಾಶ್ರುತಂ ಶ್ರುತಮ್' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಞೇಯಕೋಟಿಯಲ್ಲಿ ಅಜ್ಞಾನವೂ ಕೂಡ ಸೇರಿಕೊಳ್ಳಬೇಕಾದೀತು.

ಆಕ್ಷೇಪ - ಭಾಮತಿಯಲ್ಲಿ ಸೂತ್ರದಲ್ಲಿರುವ ಅನನ್ಯತ್ವಶಬ್ದದ ವ್ಯಾಖ್ಯಾನವನ್ನು ಹೀಗೆ ಮಾಡಲಾಗಿದೆ - 'ನ ಖಲ್ವನನ್ಯತ್ವಮಿತ್ಯಭೇದಂ ಬ್ರೂಮಃ । ಕಿಂತು ಭೇದಂ ವ್ಯಾಸೇಧಾಮಃ' ಅನನ್ಯತ್ವಶಬ್ದಕ್ಕೆ ಬ್ರಹ್ಮಪ್ರತಿಯೋಗಿಕವಾದ ಭೇದಾಭಾವ ಎಂದರ್ಥ. ಹೊರತು ಬ್ರಹ್ಮಾಭೇದವೆಂದರ್ಥವಲ್ಲ. ಬ್ರಹ್ಮಪ್ರತಿಯೋಗಿಕವಾದ ಭೇದವಿಲ್ಲ ಎಂದು ಹೇಳಿದಾಗ ಭೇದವನ್ನು ನಿರಾಕರಣೆ ಮಾಡುತ್ತಿದ್ದಾರೆ . ('ವ್ಯಾಸೇಧಾಮಃ'-ನಿರಾಕರಣೆ ಮಾಡುತ್ತೇವೆ) ಅಭೇದವಿದೆಯೆಂದು ಹೇಳುತ್ತಿಲ್ಲ. 'ನ ಖಲ್ವನನ್ಯತ್ವಮಿತ್ಯಭೇದಂ ಬ್ರೂಮಃ । ಕಿಂತು ಭೇದಂ ವ್ಯಾಸೇಧಾಮಃ' ಎಂದು ಭಾಮತಿಯಲ್ಲಿ ಹೇಳಲಾಗಿದೆ. ಆದ್ದರಿಂದ ಭೇದಾಭಾವವನ್ನೇ ಅನನ್ಯತ್ವವೆಂದು ವಿವಕ್ಷಿಸುತ್ತೇವೆ.

ಸಮಾಧಾನ - ಜಗತ್ತಿಗೆ ಬ್ರಹ್ಮನ ದೆಸೆಯಿಂದ ಭೇದವಿಲ್ಲವೆಂದು ಹೇಳಿದರೆ, ಅಭೇದವಿದೆಯೆಂದು ಹೇಳಿದಂತೆ ಆಯಿತು. ಭೇದ ಹಾಗೂ ಅಭೇದಗಳು ಪರಸ್ಪರ ವಿರಹವ್ಯಾಪ್ಯವಾಗಿವೆ. ಭೇದವಿಲ್ಲದಿದ್ದರೆ, ಅಭೇದವಿರಲೇಬೇಕು. ಭೇದವೂ ಇಲ್ಲ, ಅಭೇದವೂ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ.

ಅಭೇದದ ವಿಧಾನವನ್ನು ಮಾಡದೇ ಭೇದಾಭಾವವೆಂದಷ್ಟೇ ವಿವಕ್ಷಿಸಿದರೂ ಕೂಡ ಮತ್ತೊಂದು ದೋಷ ಬರುತ್ತದೆ. ಬ್ರಹ್ಮ ಮಾತ್ರ ಸತ್ಯನು, ಜಗತ್ತು ಸುಳ್ಳು ಎಂಬ ವ್ಯವಸ್ಥೆಯನ್ನು ನೀವು ಮಾಡಬೇಕು. ಅಭೇದವಿದ್ದರೆ ಈ ವ್ಯವಸ್ಥೆಯು ಹೇಗೆ ಕೂಡುವುದಿಲ್ಲವೋ, ಅದರಂತೆ ಭೇದಾಭಾವವಿದ್ದಾಗಲೂ ಬ್ರಹ್ಮನು ಸತ್ಯ, ಜಗತ್ತು ಸುಳ್ಳು ಎಂಬ ವ್ಯವಸ್ಥೆಯು ಕೂಡುವುದಿಲ್ಲ.

ಆಕ್ಷೇಪ - ಜಗತ್ತಿಗೂ, ಬ್ರಹ್ಮನಿಗೂ ಯಾವ ಕಾಲದಲ್ಲಿ ಭೇದವಿಲ್ಲವೆಂದು ನಾನು ಹೇಳುತ್ತೇನೋ, ಅದೇ ಕಾಲದಲ್ಲಿ ಅಭೇದವನ್ನೂ ಕೂಡ ಇಲ್ಲವೆನ್ನುತ್ತೇನೆ. ಹೀಗೆ ಭೇದ ಮತ್ತು ಅಭೇದ ಎರಡೂ ಇಲ್ಲದ ವ್ಯವಸ್ಥೆಯನ್ನು ಕೂಡಿಸಬಹುದಲ್ಲವೇ?

ಸಮಾಧಾನ - ಹಾಗಾದರೆ ಏಕವಿಜ್ಞಾನದಿಂದ ಸರ್ವವಿಜ್ಞಾನದ ಪ್ರತಿಜ್ಞೆಯೂ ಕೂಡ ಅನುಪಪನ್ನ- ವಾಗಬೇಕಾದೀತು. ಅಭೇದವಿದ್ದರೆ ಮಾತ್ರ ಈ ಪ್ರತಿಜ್ಞೆಯು ಉಪಪನ್ನವಾಗುತ್ತದೆ.

ಆಕ್ಷೇಪ - ಏಕವಿಜ್ಞಾನದಿಂದ ಸರ್ವವಿಜ್ಞಾನವನ್ನು ಶ್ರುತಿಯು ಹೇಳುತ್ತಿದೆ. ಇದರ ಅನ್ಯಥಾನುಪಪತ್ತಿಯಿಂದ ಜಗತ್ತಿಗೂ ಬ್ರಹ್ಮನಿಗೂ ಭೇದವಿಲ್ಲವೆಂದು ಕಲ್ಪನೆ ಮಾಡುತ್ತೇನೆ. ಭೇದವಿಲ್ಲವೆಂದ ಮಾತ್ರಕ್ಕೆ ಅಭೇದವಿದೆ ಎಂದರ್ಥವಲ್ಲ. ಬ್ರಹ್ಮಮಾತ್ರನು ಸತ್ಯ, ಜಗತ್ತು ಮಿಥ್ಯಾ ಎಂಬ ವ್ಯವಸ್ಥೆಯನ್ನು ಕೂಡಿಸುವುದಕ್ಕಾಗಿ ಅಭೇದವೂ ಕೂಡ ಇರುವುದಿಲ್ಲವೆಂದು ಕಲ್ಪಿಸುತ್ತೇನೆ.

ಸಮಾಧಾನ - ಹಾಗಾದರೆ ಉಭಯ ಅನ್ಯಥಾನುಪಪತ್ತಿಯಿಂದ ಜಗತ್ತಿಗೂ, ಬ್ರಹ್ಮನಿಗೂ ಭೇದಾಭೇದವನ್ನೇ ಕಲ್ಪಿಸುವುದು ಸಮಂಜಸವಾಗುತ್ತದೆ. ಭೇದಾಭಾವ, ಅಭೇದಾಭಾವಗಳನ್ನು ಕಲ್ಪನೆ ಮಾಡುವುದಕ್ಕಿಂತ, ಭೇದಾಭೇದವನ್ನು ಕಲ್ಪನೆ ಮಾಡುವುದು ಲಘುವಾಗುತ್ತದೆ. ಅದು ಹೀಗೆ - ಏಕವಿಜ್ಞಾನೇನ ಸರ್ವವಿಜ್ಞಾನದ ಅನ್ಯಥಾನುಪಪತ್ತಿಯಿಂದ ಜಗತ್ತಿಗೂ, ಬ್ರಹ್ಮನಿಗೂ ಅಭೇದವು ಸಿದ್ಧವಾಗುತ್ತದೆ. ಸತ್ಯತ್ವಮಿಥ್ಯಾತ್ವಗಳ ವ್ಯವಸ್ಥಾನ್ಯಥಾನುಪಪತ್ತಿಯಿಂದ ಭೇದವು ಸಿದ್ಧವಾಗುತ್ತದೆ. ಮತ್ತು 'ಇದಂ ಸರ್ವಂ ಯದಯಮಾತ್ಮಾ' ಎಂಬುದಾಗಿ ಸಾಮಾನಾಧಿ- ಕರಣ್ಯವನ್ನು ಹೇಳುತ್ತಿರುವ ಶ್ರುತಿಯು ಅಭೇದಕ್ಕೆ ಗಮಕವಾಗಿದೆ. ಅನಂತರ 'ನೇತಿ ನೇತಿ' ಎಂಬ ಶ್ರುತಿಯು ಪರಮಾತ್ಮನು ಜಗತ್ತೂ ಆಗಿರುವುದಿಲ್ಲ. ಮೂರ್ತಪ್ರಪಂಚವೂ ಆಗಿರುವುದಿಲ್ಲ ಎಂಬುದಾಗಿ ಭೇದವನ್ನು ಪ್ರತಿಪಾದನೆ ಮಾಡುತ್ತಿದೆ. ಸಾಮಾನಾಧಿಕರಣ್ಯಶ್ರುತಿಯಿಂದ ಅಭೇದಸಿದ್ಧವಾಗುತ್ತದೆ. 'ನೇತಿ ನೇತಿ' ಎಂಬ ಶ್ರುತಿಯಿಂದ ಭೇದವು ಸಿದ್ಧವಾಗುತ್ತದೆ. ಇವೆರಡರ ಸ್ವಾರಸ್ಯಕ್ಕೋಸ್ಕರ ಭೇದಾಭೇದವನ್ನು ಒಪ್ಪುವುದು ಅತ್ಯಂತ ಸಮಂಜಸವಾಗುತ್ತದೆ.

ಮತ್ತು ಶ್ರುತಿಯಲ್ಲಿ ಮೃತ್ಪಿಂಡ ಮತ್ತು ಮೃಣ್ಮಯಗಳ ದೃಷ್ಟಾಂತವನ್ನು ನೀಡಲಾಗಿದೆ. ಶ್ರುತಿಯಲ್ಲಿಯೂ ಕೂಡ ಭೇದಾಭೇದವೇ ತಿಳಿಯುತ್ತದೆ. ಹೀಗೆ ಎಲ್ಲಾ ರೀತಿಯಿಂದಲೂ ಸ್ವಾರಸ್ಯಬರುವುದರಿಂದ ಭೇದಾಭಾವ, ಅಭೇದಾಭಾವವನ್ನು ಒಪ್ಪುವುದಕ್ಕಿಂತ ಭೇದಾಭೇದವನ್ನು ಒಪ್ಪುವುದೇ ಸೂಕ್ತವಾಗುತ್ತದೆ.

ಆಕ್ಷೇಪ - ಬ್ರಹ್ಮನಿಗೂ ಪ್ರಪಂಚಕ್ಕೂ ಭೇದಾಭೇದವನ್ನು ಹೇಳಲಾಗದು. ಅಭೇದವನ್ನು ಹೇಳಿದರೆ 'ಏಕರಸಂ ಪ್ರಂಪಚೋಪಶಮಂ' ಎಂಬ ಶ್ರುತಿಯು ಬ್ರಹ್ಮನನ್ನು 'ಏಕರಸ' (ಅಖಂಡ = ಏಕಪ್ರಕಾರ) ಎಂದು ಕರೆಯುತ್ತಿದೆ. ಆದರೆ ಜಗತ್ತು ಅನೇಕ ರಸಾತ್ಮಕವಾಗಿದೆ. ಬ್ರಹ್ಮನಂತೆ ಅಖಂಡವಾಗಿರುವುದಿಲ್ಲ. ಒಂದುವೇಳೆ ಜಗತ್ತಿಗೂ ಬ್ರಹ್ಮನಿಗೂ ಭೇದವನ್ನು ಹೇಳಿ, ಅಭೇದವನ್ನೂ ಕೂಡ ಹೇಳಿದರೆ, ಅನೇಕ ರಸಾತ್ಮಕವಾದ ಪ್ರಪಂಚದ ದೆಸೆಯಿಂದ ಬ್ರಹ್ಮನು ಅಖಂಡನೂ ಆಗಿರುವ ಕಾರಣ, ಅನೇಕ ರಸತ್ವವು ಬ್ರಹ್ಮನಲ್ಲಿ ಬರುತ್ತವೆ. ಆವಾಗ 'ಏಕರಸಂ ಪ್ರಪಂಚೋಪಶಮಂ' ಎಂಬ ಶ್ರುತಿಯು ಅನುಪಪನ್ನವಾಗುತ್ತದಲ್ಲವೆ?

ಸಮಾಧಾನ - ಈ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸಬಹುದು. ನೀವು ಭೇದಾಭಾವ ಮತ್ತು ಅಭೇದಾಭಾವವನ್ನು ಒಪ್ಪುತ್ತಿದ್ದೀರಿ. ಹಾಗಾದರೆ ಯಾವ ಕಾರಣದಿಂದ ಬ್ರಹ್ಮನಿಗೂ, ಪ್ರಪಂಚಕ್ಕೂ ಭೇದವಿಲ್ಲವೋ, ಆ ಕಾರಣದಿಂದಲೇ ಅನೇಕ ರಸವಾದ ಪ್ರಪಂಚದಿಂದ ಬ್ರಹ್ಮನಿಗೆ ಭೇದವಿಲ್ಲದ ಕಾರಣ ಬ್ರಹ್ಮನೂ ಕೂಡ ಅನೇಕ ರಸಸ್ವರೂಪನಾಗಬೇಕಾದೀತು ಎಂದು ನಾವು ಆಕ್ಷೇಪಿಸುತ್ತೇವೆ. ಆವಾಗ ನೀವು ಭೇದಾಭಾವವಿದ್ದರೂ ಕೂಡ ಜೊತೆಯಲ್ಲಿ ಅಭೇದಾಭಾವವಿರುವುದರಿಂದ ಜಗತ್ತು ಅನೇಕರಸ-ಸ್ವರೂಪವಾದರೂ, ಬ್ರಹ್ಮನು ಅನೇಕ ರಸಸ್ವರೂಪನಾಗಬೇಕಾಗಿಲ್ಲ ಎಂಬ ವ್ಯವಸ್ಥೆಯನ್ನು ಮಾಡುತ್ತೀರಿ. ನಾವೂ ಕೂಡ ಇದೇ ರೀತಿಯಲ್ಲೇ ವ್ಯವಸ್ಥೆಯನ್ನು ಮಾಡುತ್ತೇವೆ. ಬ್ರಹ್ಮನಿಗೂ ಪ್ರಪಂಚಕ್ಕೂ ಅಭೇದವಿದ್ದರೂ ಭೇದವು ಇರುವುದರಿಂದ ಬ್ರಹ್ಮನು ಏಕರಸಸ್ವರೂಪನಾಗುತ್ತಾನೆ. ಪ್ರಪಂಚವು ಅನೇಕ ರಸಸ್ವರೂಪವಾಗುತ್ತದೆ.

ಅನೇಕ ರಸಸ್ವರೂಪವಾದ ಪ್ರಪಂಚಕ್ಕಿಂತ ಬ್ರಹ್ಮನಲ್ಲಿ ಭೇದವಿಲ್ಲದಿದ್ದರೂ ಅಭೇದವಿರುವುದಿಲ್ಲ ಎಂಬ ಕಾರಣದಿಂದ ಬ್ರಹ್ಮನಿಗೆ ಏಕರಸತ್ವಶ್ರುತಿಯು ಉಪಪನ್ನವಾಗುತ್ತದೆಂದು ನೀವು ಹೇಗೆ

ವ್ಯಾಖ್ಯಾನ ಮಾಡುತ್ತೀರೋ, ಅದರಂತೆ ನಾವೂ ಕೂಡ ಬ್ರಹನಿಗೆ ಪ್ರಪಂಚದ ದೆಸೆಯಿಂದ ಅಭೇದವಿದ್ದರೂ ಕೂಡ ಭೇದವಿರುವ ಕಾರಣದಿಂದ ಬ್ರಹ್ಮನು ಏಕರಸಸ್ವರೂಪನಾಗುತ್ತಾನೆ. ಪ್ರಪಂಚವು ಅನೇಕರಸ- ಸ್ವರೂಪಾಗುತ್ತದೆಂದು ವ್ಯಾಖ್ಯಾನ ಮಾಡುತ್ತೇವೆ.

ಸತ್ಯಕ್ಕೆ ಅನೃತಾಭೇದವು ಹೇಗೆ ಅನುಪಪನ್ನವೋ, ಅದರಂತೆ ಸತ್ಯಕ್ಕೆ ಅನೃತದ ಜೊತೆಗೇ ಭೇದಾಭಾವವೂ ಕೂಡ ಅನುಪಪನ್ನವಾಗಿದೆ. ಆದ್ದರಿಂದ ಭೇದವೂ ಇರುವುದಿಲ್ಲ. ಅಭೇದವೂ ಇರುವುದಿಲ್ಲ ಎಂದು ಹೇಳುವುದಕ್ಕಿಂತ ಭೇದಾಭೇದವಿರುತ್ತದೆಂದು ಹೇಳುವುದೇ ಲೇಸು.

ಪ್ರಪಂಚಕ್ಕೂ, ಬ್ರಹ್ಮನಿಗೂ ಸಮಸತ್ತಾಕವಾದ ಭೇದವಿದೆ ಎಂದರೆ, ಸತ್ಯವಾದ ಭೇದ, ಸತ್ಯವಾದ ಅಭೇದವಿದೆ ಎಂಥರ್ಥ. ಇಂಥ ಭೇದಾಭೇದವನ್ನೇ ನೀನು ಒಪ್ಪಬೇಕಾಗುತ್ತದೆಂಬುದು ಗ್ರಂಥಕಾರರ ಅಭಿಪ್ರಾಯ. ಆದ್ದರಿಂದ 'ಭೇದಾಭಾವಮಾತ್ರಂ ತದನನ್ಯತ್ವಮ್' ಎಂಬ ಎರಡನೆಯ ಪಕ್ಷವು ನಿರಸ್ತವಾಯಿತು.

ಆಕ್ಷೇಪ - 'ಬ್ರಹ್ಮವ್ಯತಿರೇಕೇಣ ಅಸತ್ವಂ ತದನನ್ಯತ್ವಮ್' ಬ್ರಹ್ಮನಿಗಿಂತ ಅತಿರಿಕ್ತವಾದ ಜಗತ್ತು ಇರುವುದಿಲ್ಲ. ಇದನ್ನೇ ಅನನ್ಯತ್ವವೆಂದು ಹೇಳುತ್ತೇವೆ.

ಸಮಾಧಾನ - ಇದೂ ಕೂಡ ತಪ್ಪು. ಒಂದನ್ನು ವಿಶೇಷವಾಗಿ ನಿಷೇಧ ಮಾಡಿದರೆ, ಇನ್ನೊಂದಕ್ಕೆ ಸಮ್ಮತಿ ಕೊಟ್ಟಂತಾಗುತ್ತದೆ. (ದೇವದತ್ತನು ಮಾತ್ರ ಬರಬಾರದು ಎಂದು ಹೇಳಿದಾಗ, ಯಜ್ಞದತ್ತನು ಬರಬಹುದೆಂದು ಅರ್ಥಾತ್‌ಸಿದ್ಧವಾಗುತ್ತದೆ.) ಜಗತ್ತು ಇಲ್ಲವೆಂದು ಹೇಳದೇ ಬ್ರಹ್ಮನಿಗಿಂತ ಅತಿರಿಕ್ತವಾಗಿ ಇರುವುದಿಲ್ಲವೆಂದು ಹೇಳಿದರೆ, ಬ್ರಹ್ಮಸ್ವರೂಪವೆಂದು ಹೇಳಿದಂತಾಯಿತು. ಆವಾಗ ಆನಂದಾದಿಗಳು ಹೇಗೆ ಬ್ರಹ್ಮಾತ್ಮಕವೋ, ಅಥವಾ ಜೀವರು ಹೇಗೆ ಬ್ರಹ್ಮಾತ್ಮಕರೋ, ಅದೇ ರೀತಿಯಾಗಿ ಜಗತ್ತೂ ಕೂಡ ಬ್ರಹ್ಮಾತ್ಮಕವೆಂದು ಹೇಳಿದಂತಾಯಿತು. ಇದು ನಿಮ್ಮ ಸಿದ್ಧಾಂತಕ್ಕೆ ವಿರುದ್ಧವಾಗಿದೆ.

ಆಕ್ಷೇಪ - 'ಬ್ರಹ್ಮಣಿ ಅರೋಪಿತತ್ವಂ ತು ನ ತದನ್ಯತ್ವಮ್' ಬ್ರಹ್ಮನಲ್ಲಿ ಜಗತ್ತು ಆರೋಪಿತವಾದ್ದರಿಂದ ಬ್ರಹ್ಮನಿಗಿಂತ ಅಭಿನ್ನವಾಗಿದೆಯೆಂದು ಹೇಳುತ್ತೇವೆ.

ಸಮಾಧಾನ - ಹೀಗೂ ಕೂಡ ಹೇಳಲಾಗದು. ಅನನ್ಯಶಬ್ದದಿಂದ ಆರೋಪಿತತ್ವ ಎಂಬರ್ಥವು ತಿಳಿಯುವುದೇ ಇಲ್ಲ. ಶುಕ್ತಿಯಲ್ಲಿ ಆರೋಪಿತವಾದ ರಜತವನ್ನು ಶುಕ್ತಿಯಿಂದ

ಅನನ್ಯವಾಗಿದೆಯೆಂದು ಯಾರೂ ಕರೆಯುವುದಿಲ್ಲ. ಆದರಂತೆ ಜಗತ್ತು ಆರೋಪಿತವಾದ ಕಾರಣದಿಂದ ಅನನ್ಯವೆಂದು ಕರೆಯಬಾರದು.

ಯಾವುದು ಎಲ್ಲಿ ಆರೋಪಿತವೋ, ಅದು ಅದಕ್ಕಿಂತ ಅನನ್ಯವಾಗುವುದಾದರೆ, ಪ್ರಾತಿಭಾಸಿಕವಾದ ರಜತವು ವ್ಯಾವಹಾರಿಕವಾದ ಶುಕ್ತಿಯಲ್ಲಿ ಆರೋಪಿತವಾದ್ದರಿಂದ ಪ್ರಾತಿಭಾಸಿಕವು ವ್ಯಾವಹಾರಿಕವಾದ ಶುಕ್ತಿಯಿಂದ ಅನನ್ಯವಾಯಿತು. ಮತ್ತು ವ್ಯಾವಹಾರಿಕವಾದ ಜಗತ್ತು ಪಾರಮಾರ್ಥಿಕನಾದ ಬ್ರಹ್ಮನಲ್ಲಿ ಆರೋಪಿತವಾದ್ದರಿಂದ ವ್ಯಾವಹಾರಿಕವು ಪಾರಮಾರ್ಥಿಕವಾಯಿತು. ಆವಾಗ ಅನಿರ್ವಚನೀಯತ್ವವೇ ಅಸಿದ್ಧವಾಗುತ್ತದೆ. ಏಕೆಂದರೆ ಪಾರಮಾರ್ಥಿಕನಾದ ಬ್ರಹ್ಮನಿಂದ ಅನನ್ಯವಾಗಿರುವ ವ್ಯಾವಹಾರಿಕವಾದ ಜಗತ್ತೂ ಕೂಡ ಪಾರಮಾರ್ಥಿಕವೇ ಆಯಿತಲ್ಲವೇ? ಅಂಥ ವ್ಯಾವಹಾರಿಕಜಗತ್ತಿನಲ್ಲಿ ಸೇರಿರುವ ಶುಕ್ತಿಯೇ ಈಗ ಪಾರಮಾರ್ಥಿಕವಾಯಿತು. ಅಂಥ ಶುಕ್ತಿಯಲ್ಲಿ ಆರೋಪಿತವಾದ ಶುಕ್ತಿಯ ಜೊತೆ ಅನನ್ಯವಾಗಿರುವ ರಜತವೂ ಕೂಡ ಪಾರಮಾರ್ಥಿಕವೇ ಆಯಿತು. ಹೀಗೆ ಒಪ್ಪಿದರೆ, ಜಗತ್ತಿನಲ್ಲಿ ಅನಿರ್ವಾಚ್ಯವಾರ್ತೆಯೇ ಇಲ್ಲದಂತಾಗುತ್ತದೆ.

'ರೂಪ್ಯಮಿದಂ ನೇತಿ ತದನ್ಯಶಬ್ದಸ್ಯೈವ ಪ್ರಯೋಗಾಚ್ಚ' ಎಂಬ ಪಾಠವನ್ನು ವಿವಕ್ಷಿಸಿದಾಗ ಹೀಗೆ ಅರ್ಥವನ್ನು ತಿಳಿಯಬೇಕು - ಭ್ರಮೆಯು ಬರುವ ಕಾಲದಲ್ಲಿ 'ಇದಂ ರಜತಂ' ಎಂಬ ಜ್ಞಾನವು ಬರುತ್ತದೆ. ಬಾಧಕಾಲದಲ್ಲಿ 'ನೇದಂ ರಜತಂ' ಎಂಬ ಜ್ಞಾನವು ಬರುತ್ತದೆ. ಬಾಧಕಾಲದಲ್ಲಿ ಶುಕ್ತಿಯು ರಜತಕ್ಕಿಂತ ಭಿನ್ನವಾಗಿದೆಯೆಂದೇ ತಿಳಿಯುತ್ತದೆ ಹೊರತು, ಶುಕ್ತಿಯು ರಜತದ ದೆಸೆಯಿಂದ ಅನನ್ಯವಾಗಿದೆಯೆಂದು ಯಾರೂ ತಿಳಿಯುವುದಿಲ್ಲ. ಆದ್ದರಿಂದಲೂ ಆರೋಪಿತತ್ವವನ್ನು ಅನನ್ಯಶಬ್ದಾರ್ಥವೆಂದು ತಿಳಿಯಬಾರದು.

ಮತ್ತೊಂದು ದೋಷ - ಜಗತ್ತು ಬ್ರಹ್ಮನಲ್ಲಿ ಆರೋಪಿತವಾದಾಗ ಬ್ರಹ್ಮನು ಅಧಿಷ್ಠಾನನು, ಜಗತ್ತು ಆರೋಪಿತವೂ ಆಗಿರುತ್ತದೆ. ಆವಾಗ ಏಕವಿಜ್ಞಾನದಿಂದ ಸರ್ವವೂ ಕೂಡ ವಿಜ್ಞಾತವಾಗುತ್ತದೆಂದು ಶ್ರುತಿ ಹೇಳಿದ್ದು ಅಯುಕ್ತವಾಗುತ್ತದೆ.

ಮತ್ತೊಂದು ದೋಷ - ಮೃತ್ಪಿಂಡ ಹಾಗೂ ಮೃಣ್ಮಯಗಳ ದೃಷ್ಟಾಂತವನ್ನೂ ಕೂಡ ಕೂಡಿಸಲು ಸಾಧ್ಯವಿಲ್ಲ. ಮೃತ್ಪಿಂಡದಲ್ಲಿ ಮೃಣ್ಮಯವು ಆರೋಪಿತವಾಗಿರುವುದಿಲ್ಲ. ಕೇವಲ

ಉಪಾದಾನ ಉಪಾದೇಯಭಾವವಿರುತ್ತದೆ ಹೊರತು, ಅಧಿಷ್ಠಾನಅಧ್ಯಸ್ತಭಾವ ಇರುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿ ನೀಡಿರುವ ಮೃತ್ಪಿಂಡಾದಿ ದೃಷ್ಟಾಂತವೂ ಕೂಡ ಅನುಪಪನ್ನವಾಗುತ್ತದೆ.

ಕಥಂ ಹಿ ಬ್ರಹ್ಮವಿಜ್ಞಾನಾದ್ವಿಜ್ಞಾತಂ ಸಕಲಂ ಭವೇತ್ ।
ನಹಿ ಶುಕ್ತಿಸ್ವರೂಪಸ್ಯ ವಿಜ್ಞಾನಾದ್ರಜತಜ್ಞತಾ ॥೧॥

ಬ್ರಹ್ಮನು ಅಧಿಷ್ಠಾನನಾಗಿದ್ದಾನೆ, ಜಗತ್ತು ಆರೋಪಿತವಾಗಿದೆ. ಅಧಿಷ್ಠಾನನಾದ ಬ್ರಹ್ಮನ ಜ್ಞಾನದಿಂದ ಆರೋಪಿತವಾದ ಜಗತ್ತಿನ ಜ್ಞಾನವನ್ನು ಹೇಳಲು ಹೇಗೆ ಸಾಧ್ಯ ? ಶುಕ್ತಿಯ ಸ್ವರೂಪವನ್ನು ಯಾರು ತಿಳಿದಿರುತ್ತಾನೋ, ಅವನಿಗೆ ರಜತಜ್ಞಾನವು ಬರಲು ಸಾಧ್ಯವಿಲ್ಲ. ಹೊರತಾಗಿ

ಶುಕ್ತಿತತ್ತ್ವಾಪರಿಜ್ಞಾನಾದ್ಯಥೈವ ರಜತಜ್ಞತಾ ।
ಬ್ರಹ್ಮತತ್ತ್ವಾಪರಿಜ್ಞಾನಾತ್ ತಥಾ ಸರ್ವಜ್ಞತೋಚಿತಾ ॥೧॥

ಅವನಿಗೆ ಶುಕ್ತಿತತ್ತ್ವದ ಬಗ್ಗೆ ತಿಳಿಯದ ಕಾರಣ ರಜತಜ್ಞಾನವು ಬಂದಿರುತ್ತದೆ. ಆದ್ದರಿಂದ ಅಧಿಷ್ಠಾನದ ಅಜ್ಞಾನವು ಆರೋಪಿತದ ಜ್ಞಾನಕ್ಕೆ ಕಾರಣವಾಗಿರುತ್ತದೆ ಹೊರತು, ಅಧಿಷ್ಠಾನದ ಜ್ಞಾನವು ಆರೋಪಿತಜ್ಞಾನಕ್ಕೆ ಸರ್ವಥಾ ಕಾರಣವಲ್ಲ. ಅದರಂತೆ ಬ್ರಹ್ಮತತ್ತ್ವದ ಅಪರಿಜ್ಞಾನದಿಂದಲೇ ಸಮಗ್ರ ಜಗತ್ತಿನ ಜ್ಞಾನವು ಬರುತ್ತದೆಂದು ಹೇಳುವುದು ಉಚಿತ. ಹೊರತು, ಬ್ರಹ್ಮಜ್ಞಾನದಿಂದ ಸಮಸ್ತ ಜಗತ್ತಿನ ಜ್ಞಾನವು ಬರುತ್ತದೆಂದು ಹೇಳುವುದು ಸರ್ವಥಾ ಯುಕ್ತವಾಗುವುದಿಲ್ಲ.

ಭಾಮತಿಯಲ್ಲಿ ಹೀಗೆ ಸಮರ್ಥಿಸಲಾಗಿದೆ - ರಜ್ಜು ಜ್ಞಾತವಾದರೆ, ಆರೋಪಿತವಾದ ಸರ್ಪವೂ ಕೂಡ ಜ್ಞಾತವಾಗುತ್ತದೆ. ಏಕೆಂದರೆ ಸರ್ಪದ ತತ್ತ್ವ ರಜ್ಜುವೇ ಆಗಿದೆ. ಆದ್ದರಿಂದ ಬ್ರಹ್ಮನು ಜ್ಞಾತನಾದರೆ, ಸಮಸ್ತ ಜಗತ್ತು ಜ್ಞಾತವಾಗುತ್ತದೆ. ಬ್ರಹ್ಮಜ್ಞಾನದಿಂದ ಆರೋಪಿತವಾದ ಸಮಸ್ತ ಜಗತ್ತು ಜ್ಞಾತವಾಗಲೇಬೇಕು.

ಇದು ತಪ್ಪು. ಹಾಗಾದರೆ ನೀವು ಜಗತ್ತನ್ನೇ ಬ್ರಹ್ಮನೆಂದು ಹೇಳಿರುವುದರಿಂದ ಬ್ರಹ್ಮಜ್ಞಾನದಿಂದ ಬ್ರಹ್ಮನೇ ಜ್ಞಾತನಾಗುತ್ತಾನೆಂದು ಹೇಳಿದಂತಾಯಿತು. ಬ್ರಹ್ಮಜ್ಞಾನದಿಂದ ಜಗತ್ತಿನ ಜ್ಞಾನ ಬರುತ್ತದೆ ಎಂದು ಹೇಳಿದಂತಾಗಲಿಲ್ಲ.

ಆದರೆ ಇದು ಕೂಡುವುದಿಲ್ಲ. ತನಗೆ ತಾನೇ ಕಾರಣವಾಗುವುದು ಎಲ್ಲಿಯೂ ಕಂಡಿಲ್ಲ. ಮತ್ತು 'ಯೇನಾಶ್ರುತಂ ಶ್ರುತಂ ಭವತಿ ಅಮತಂ ಮತಮವಿಜ್ಞಾತಂ ವಿಜ್ಞಾತಮ್' ಎಂಬ ಶ್ರುತಿಯಲ್ಲಿರುವ ಅಶ್ರುತ ಮೊದಲಾದ ಪದಗಳೂ ಕೂಡ ಅಯುಕ್ತವಾಗುತ್ತವೆ.

ಮತ್ತು ಅಸಾಧಾರಣಧರ್ಮವನ್ನು 'ತತ್ವ' ಎಂದು ಕರೆಯುತ್ತಾರೆ. (ಜಗತ್ತಿನ ತತ್ವಜ್ಞಾನವು ಉಂಟಾಗಿದೆ ಎಂದರೆ ಜಗತ್ತಿನ ಅಸಾಧಾರಣಸ್ವರೂಪವು ತಿಳಿದಿದೆ ಎಂದರ್ಥ.) ಹೊರತು, ಭ್ರಮಾಧಿಷ್ಠಾನವನ್ನೇ ತತ್ವವೆಂದು ಕರೆಯಬಾರದು. ಹಾಗೇ ಹೇಳಿದರೆ ಆನಂದವು ಬ್ರಹ್ಮನ ತತ್ವವೆಂದು ರಜ್ಜುತ್ವವು ರಜ್ಜುವಿನ ತತ್ವವೆಂದು ಹೇಳಬೇಕಾದೀತು. ('ಸತ್ಯಂ ಜ್ಞಾನಂ ಅನಂತಂ ಬ್ರಹ್ಮ, ವಿಜ್ಞಾನಂ ಆನಂದಂ ಬ್ರಹ್ಮ' ಇತ್ಯಾದಿ ವಾಕ್ಯಗಳಿಂದ ಬ್ರಹ್ಮತತ್ವವು ಜ್ಞಾತವಾಗುತ್ತದೆಂದು ಅದ್ವೈತಿಗಳು ಹೇಳುತ್ತಾರೆ. ಹಾಗೆ ಹೇಳಿದರೆ ಬ್ರಹ್ಮನ ತತ್ವವೆಂದರೇನು ? ಜ್ಞಾನ, ಆನಂದ ಇವುಗಳನ್ನೆಲ್ಲಾ ಬ್ರಹ್ಮನ ತತ್ವವೆಂದು ವ್ಯವಹಾರ ಮಾಡಿದಂತಾಯಿತು. ಆರೋಪಾಧಿಷ್ಠಾನಗಳನ್ನೇ ತತ್ವವೆಂದು ನೀವು ಕರೆಯುತ್ತಿರುವುದರಿಂದ ಬ್ರಹ್ಮನ ತತ್ವ ಆನಂದ ಬ್ರಹ್ಮನ ಆರೋಪಕ್ಕೆ ಇದು ಅಧಿಷ್ಠಾನವಾಗಿದೆಯೆಂದು ಹೇಳಿದಂತಾಯಿತು. ಹೀಗೆ ಹೇಳಲು ಸಾಧ್ಯವಿಲ್ಲ. ಅಥವಾ ರಜ್ಜುವಿನ ತತ್ವ ರಜ್ಜುತ್ವ ಎಂದು ಕರೆಯುತ್ತಾರೆ. ಒಬ್ಬನಿಗೆ ಸರ್ಪದ ಭ್ರಮೆ ಬಂದಿರುವಾಗ ರಜ್ಜುವಿನ ತತ್ವಜ್ಞಾನ ಬಂದ ಕೂಡಲೇ ಸರ್ಪದಜ್ಞಾನ ಹೋಗುತ್ತದೆ. ಇಲ್ಲಿ ರಜ್ಜುವಿನ ತತ್ವಜ್ಞಾನವೆಂದರೆ ರಜ್ಜುತ್ವಪ್ರಕಾರದ ಜ್ಞಾನವಾಗಿದೆ. ಭ್ರಮಾಧಿಷ್ಠಾನವನ್ನೇ ತತ್ವವೆಂದು ಹೇಳುವುದಾದರೆ, ರಜ್ಜುವಿನ ಆರೋಪಕ್ಕೆ ಅಧಿಷ್ಠಾನವಾಗಿರುವ ರಜ್ಜುತ್ವವೂ ಕೂಡ ತತ್ವವೆಂದಾಗಬೇಕಾದೀತು.)

ಅಸಾಧಾರಣಸ್ವರೂಪವೇ ತತ್ವವೆಂದು, ಅಸಾಧಾರಣಧರ್ಮವೂ ಕೂಡ ತತ್ವವೆಂದು ಇಟ್ಟುಕೊಂಡು ಸರ್ಪದ ತತ್ವ ರಜ್ಜುವೆಂದು ನಿಮ್ಮಿಂದ ಉಪಪಾದನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಸರ್ಪದ ಸ್ವರೂಪವೇ ರಜ್ಜುವೆಂದು ನೀವು ಹೇಳಬೇಕು. ಅಥವಾ ಸರ್ಪದ ಧರ್ಮವೇ ರಜ್ಜುವೆಂದು ನೀವು ಹೇಳಬೇಕು. ಆದರೆ ಇವೆರಡೂ ಕೂಡ ಸಾಧ್ಯವಿಲ್ಲ. ಸರ್ಪವು ರಜ್ಜುಜ್ಞಾನದಿಂದ ನಿವರ್ತ್ಯವಾಗುತ್ತದೆ. ರಜ್ಜುಜ್ಞಾನ ಬಂದ ಕೂಡಲೇ ಸರ್ಪವೇ ಇರುವುದಿಲ್ಲ. ಹಾಗಾದರೆ ರಜ್ಜುಜ್ಞಾನದಿಂದ ನಿವರ್ತ್ಯವಾಗಿರುವ ಸರ್ಪದ ಸ್ವರೂಪ ರಜ್ಜುವಿನ ಸ್ವರೂಪವೆಂದು ಹೇಳಲು ಸಾಧ್ಯವೇ ಇಲ್ಲ. ರಜ್ಜುವಿನ ಧರ್ಮ ಸರ್ಪವಾಗಿದೆ ಎಂದೂ ಕೂಡ ಹೇಳಲು ಸುತರಾಂ ಸಾಧ್ಯವಾಗುವುದಿಲ್ಲ. ಏಕೆಂದರೆ ಸರ್ಪವು ಧರ್ಮಿಯಾಗಿದೆ. ರಜ್ಜುವೂ ಕೂಡ

ಯೋಜನೆ ಮಾಡಿಕೊಳ್ಳಬೇಕು. ಹೀಗೆ ಹೇಳಿದ್ದರಿಂದ ಮುಂದೆ ಹೇಳಲ್ಪಡುವ ಚೇತನತ್ವಯುಕ್ತಿಗೆ ಅನುಕೂಲತರ್ಕವನ್ನು ತೋರಿಸಿದಂತಾಯಿತು. ಕಾರ್ಯತ್ವಯುಕ್ತಿಗೆ ದೃಷ್ಟಾಂತಯುಕ್ತಿಯನ್ನು ಕೂಡ ಉಪಪಾದನೆ ಮಾಡಿದಂತಾಯಿತು. ಘಟಪಟಾದಿಗಳಿಗೆ ಜೀವನು ಕರ್ತೃವೆಂದಾಗಲಿ ಮಹದಾದಿ ತತ್ವಗಳ ಕಾರ್ಯಕ್ಕೆ ಯಾರು ಕರ್ತೃ ಎಂಬ ಪ್ರಶ್ನೆಗೆ ಏವಂ ಚ ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಮಹದಾದಿಕಂ ಜೀವಕರ್ತೃಕಂ ಕಾರ್ಯತ್ವಾತ್ ಘಟವತ್ ಎಂಬ ಅನುಮಾನವನ್ನು ಇಲ್ಲಿ ತಿಳಿಯಬೇಕು.

ವಿವರಣೆ – 'ಅನವಸ್ಥಿತೇರಸಂಭವಾಚ್ಚ ನೇತರಃ (೧/೨/೧೭) ಎಂಬ ಸೂತ್ರದಲ್ಲಿ ಜೀವಕರ್ತೃತ್ವವನ್ನು ಒಪ್ಪಿದರೆ ಅನವಸ್ಥಾದೋಷ ಹಾಗೂ ಅಸಂಭವದೋಷಗಳನ್ನು ಹೇಳುತ್ತಾರೆ. ಅದಕ್ಕೂ ಕೂಡ ಇಲ್ಲಿ ಉತ್ತರಿಸಲಾಗಿದೆ. ಜೀವನು ಸ್ವತಂತ್ರಕರ್ತೃ ಎಂದು ಒಪ್ಪುವುದರಿಂದ ಲಾಘವವೇ ಇರುವುದೇ ಹೊರತು ಅನವಸ್ಥಾ ದೋಷವು ಬರುವುದಿಲ್ಲ. ಘಟಪಟಾದಿಗಳಲ್ಲಿ ಕರ್ತೃತ್ವವು ಕಾಣಿಸುವುದರಿಂದ ಅಸಂಭವ ದೋಷವು ಕೂಡ ಬರುವುದಿಲ್ಲ. ಜೀವನು ಕರ್ತೃ ಎಂದು ಒಪ್ಪಿದರೆ ಅಂತಹ ದೋಷಗಳು ಬರಬಹುದು. ಸ್ವತಂತ್ರಕರ್ತೃ ಎಂದು ಒಪ್ಪಿದಾಗ ದೋಷಗಳಿಗೆ ಅವಕಾಶವಿಲ್ಲ ಎಂದು ತಿಳಿಯಬೇಕು.

'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಮುಂದಿನ ಸೂತ್ರದಲ್ಲಿ ಚೇತನತ್ವಯುಕ್ತಿಯನ್ನು ಹೇಳಿ ಜೀವನ ಸ್ವತಂತ್ರಕರ್ತೃತ್ವವನ್ನು ನಿರಾಕರಣೆ ಮಾಡುತ್ತಾರೆ. ಆ ಚೇತನತ್ವಯುಕ್ತಿಗೆ ಅನುಕೂಲತರ್ಕವನ್ನು ತೋರಿಸಿದಂತಾಯಿತು. 'ಜೀವಃ ಸ್ವತಂತ್ರಕರ್ತಾ ಚೇತನತ್ವಾತ್' ಎಂದು ಅನುಮಾನವನ್ನು ಪ್ರಯೋಗ ಮಾಡಿದರೆ ಸಿದ್ಧಾಂತದಲ್ಲಿ 'ಚೇತನತ್ವಸದ್ಭಾವೇಽಪಿ ಸ್ವತಂತ್ರಕರ್ತೃತ್ವಂ ನೋಪಪದ್ಯತೇ' ಎಂದು ಅಪ್ರಯೋಜಕಶಂಕಾ ಮಾಡಲಾಗುತ್ತದೆ. ಆದರೆ ಈಗ ಯದಿ 'ಜೀವಸ್ಯ ಸ್ವತಂತ್ರಕರ್ತೃತ್ವಂ ನ ಸ್ಯಾತ್ ತರ್ಹಿ ಕಲ್ಪನಾಗೌರವದೋಷಃ ಸ್ಯಾತ್ ತಸ್ಮಾತ್ ಸ್ವತಂತ್ರಕರ್ತೃತ್ವಮಂಗೀಕರಣೀಯಮ್' ಎಂಬ ಅನುಕೂಲತರ್ಕವನ್ನು ಹೇಳಿದಂತಾಯಿತು. ಅದರಿಂದ ಪೂರ್ವಪಕ್ಷವು ಬಲಿಷ್ಠವಾಯಿತು. ಮುಂದೆ 'ಉಪಸಂಹಾರದರ್ಶನಾತ್' ಎಂಬ ಸೂತ್ರದಲ್ಲಿ ಯಾವ 'ಕಾರ್ಯೋಪಸಂಹಾರ'ವೆಂಬ ಹೇತುವನ್ನು ಹೇಳುತ್ತಾರೋ ಅದಕ್ಕೆ ಘಟಪಟಾದಿ ಕಾರ್ಯಗಳೇ ದೃಷ್ಟಾಂತವಾಗಿದೆ ಎಂಬುದನ್ನು ಕೂಡ ಉಪಪಾದನೆ ಮಾಡಿದಂತಾಯಿತು. ಈ ದೃಷ್ಟಾಂತದಿಂದ ಮಹದಾದಿಕಾರ್ಯಗಳಲ್ಲೂ ಸಹ ಜೀವನೇ ಕರ್ತೃವಾಗಿದ್ದಾನೆಂದು ಸಾಧನೆ ಮಾಡಬಹುದು.

## ಯುಕ್ತಿಸಂವಾದಿಯಾದ ಶ್ರುತಿ

**भावदीपः – युक्तिसंवादिनीं श्रुतिमाह– तथा चेति।।** इयं च एतेन शिष्टा अपरिग्रहा इत्यत्र भाष्योक्ता।। **तस्यैवेति।।** एतेन युक्तेः श्रुतिबाधोऽपि परास्तः। अत इत्यस्यार्थः श्रुत्यादीति। यद्वा ईश्वरस्यैवाभावेन श्रुतेस्तत्परत्वायोगादित्यर्थः। आदिपदेन युक्त्यनुभवौ ग्राह्यौ। न ह्यत्राधिकरणे पूर्वपक्षिणा महदादिसकलकार्यकर्तृत्वं जीवस्यैव शङ्कितमिति सुधावाक्याविरोधश्चन्द्रिकायां स्फुटः ॥ छ ॥

ಯುಕ್ತಿಸಂವಾದಿಶ್ರುತಿಯನ್ನು 'ತಥಾ ಚ' ಎಂಬ ಟೀಕೆಯಿಂದ ಉಲ್ಲೇಖ ಮಾಡುತ್ತಿದ್ದಾರೆ. ಈ ಶ್ರುತಿಯು 'ಏತೇನ ಶಿಷ್ಟಾಃ ಪರಿಗ್ರಹಾಃ' ಎಂಬ ಸೂತ್ರದ ಭಾಷ್ಯದಲ್ಲಿ ಉಲ್ಲೇಖ ಮಾಡಲಾಗಿದೆ. 'ತಸ್ಯೈವ ಅಭಾವಾತ್' ಎಂದು ಹೇಳಿದ್ದರಿಂದ ಯುಕ್ತಿಗೆ ಶ್ರುತಿಬಾಧವನ್ನು ನಿರಾಕರಣೆ ಮಾಡಿದಂತಾಯಿತು. 'ಅತಃ' ಎಂಬ ಪದದ ಅರ್ಥವನ್ನು 'ಶ್ರುತ್ಯಾದಿ' ಎಂಬುದಾಗಿ ವಿವರಿಸಿದ್ದಾರೆ. ಅಥವಾ ಈಶ್ವರನೇ ಇಲ್ಲದ ಕಾರಣ ಶ್ರುತಿಗೆ ಈಶ್ವರಪರತ್ವವು ಅಯುಕ್ತವಾಗುತ್ತದೆ ಎಂದರ್ಥ. ಆದಿಪದದಿಂದ ಯುಕ್ತಿ ಮತ್ತು ಅನುಭವಗಳನ್ನು ವಿವಕ್ಷಿಸಬೇಕು. 'ನ ಹ್ಯತ್ರಾಧಿಕರಣೇ ಪೂರ್ವಪಕ್ಷಿಣಾ ಮಹದಾದಿಸಕಲಕಾರ್ಯಕರ್ತೃತ್ವಂ ಜೀವಸ್ಯೈವ ಶಂಕಿತಮ್' - ಈ ಅಧಿಕರಣದ ಪೂರ್ವಪಕ್ಷಿಯು ಮಹದಾದಿ ಸಕಲಕಾರ್ಯಗಳಿಗೆ ಕರ್ತೃತ್ವವನ್ನು ಜೀವನಲ್ಲಿ ಆಶಂಕಿಸುತ್ತಿಲ್ಲ ಎಂಬ ನ್ಯಾಯಸುಧೆಯಿಂದ ಬರುವ ವಿರೋಧವನ್ನು ಚಂದ್ರಿಕಾದಲ್ಲಿ ಪರಿಹರಿಸಲಾಗಿದೆ.

ವಿವರಣೆ – 'ಜೀವಾದ್ಭವಂತಿ ಭೂತಾನಿ' ಇತ್ಯಾದಿ ಶ್ರುತಿಯು ಮೇಲೆ ಉಲ್ಲೇಖಿಸಿದ ಯುಕ್ತಿಯ ಆಧಾರದಿಂದ ಬಲಿಷ್ಠವಾಗಿದೆ. ಆದ್ದರಿಂದ ಯುಕ್ತಿಗೆ ಕೇವಲ ಶ್ರುತಿಯ ಬಾಧವನ್ನು ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಯುಕ್ತಿಸಹಿತವಾದ ಶ್ರುತಿಯು ಪೂರ್ವಪಕ್ಷಿಗಳಿಗೆ ಆಧಾರವಾಗಿದೆ.

ಪ್ರಶ್ನೆ - ನ್ಯಾಯಸುಧೆಯಲ್ಲಿ ಮಹದಾದಿಸಕಲಕಾರ್ಯಕರ್ತೃತ್ವವನ್ನು ಈ ಅಧಿಕರಣದಲ್ಲಿ ಆಕ್ಷೇಪ ಮಾಡುತ್ತಿಲ್ಲ ಎಂದು ಹೇಳಿದ್ದಾರೆ. ಆದರೆ ನೀವು ಘಟಪಟಾದಿ-ಕಾರ್ಯಗಳ ದೃಷ್ಟಾಂತದಿಂದ ಮಹದಾದಿಗಳಿಗೂ ಜೀವನೇ ಕರ್ತೃವಾಗಿದ್ದಾನೆಂದು ಹೇಳುತ್ತಿದ್ದೀರಿ. ಆದ್ದರಿಂದ ನ್ಯಾಯಸುಧಾ ವಿರೋಧ ಬರುತ್ತದಲ್ಲವೇ?

ಈ ಪ್ರಶ್ನೆಗೆ ತಾತ್ಪರ್ಯಚಂದ್ರಿಕಾಗ್ರಂಥದಲ್ಲಿ ಉತ್ತರವನ್ನು ಹೀಗೆ ತಿಳಿಸಿದ್ದಾರೆ -

ಯತ್ತು ಸುಧಾಯಾಂ "ನ ಹ್ಯತ್ರಾಧಿಕರಣೇ ಪೂರ್ವಪಕ್ಷಿಣಾ ಮಹದಾದಿಸಕಲ-ಕಾರ್ಯಕರ್ತೃತ್ವಂ ಜೀವಸ್ಯ ಶಂಕಿತಮ್" ಇತ್ಯುಕ್ತಂ ತತ್ರಾದ್ಯೇ ಜೀವಸ್ಯ ಮಹದಾದಿಕರ್ತೃತ್ವಪಕ್ಷೇಽನುಭವವಿರೋಧಃ । ನತು ದ್ವಿತೀಯೇ । ಕಿಂತು ತದಾನುಕೂಲ್ಯಮೇವೇತ್ಯಾದ್ಯೇಽಪರಿತೋಷಮಾತ್ರಮಭಿಪ್ರೇಮತ್ ।

ಪ್ರಶ್ನೆ - ನ್ಯಾಯಸುಧೆಯಲ್ಲಿ 'ನ ಹ್ಯತ್ರಾಧಿಕರಣೇ ಪೂರ್ವಪಕ್ಷಿಣಾ ಮಹದಾದಿಸಕಲಕಾಲಕರ್ತೃತ್ವಂ ಜೀವಸ್ಯ ಶಂಕಿತಮ್' ಈ ಅಧಿಕರಣದಲ್ಲಿ ಮಹದಾದಿ ಸಕಲಕಾರ್ಯಪ್ರಪಂಚವನ್ನು ಕುರಿತು ಜೀವನೇ ಕರ್ತೃವಾಗಿದ್ದಾನೆಂದು ಪೂರ್ವಪಕ್ಷದಿಂದ ಆಕ್ಷೇಪವನ್ನು ಮಾಡಿರುವುದಿಲ್ಲ ಎಂಬ ವಾಕ್ಯವಿದೆ. ಈ ವಾಕ್ಯವನ್ನು ನೋಡಿದಾಗ ಟೀಕೆಯಲ್ಲಿ ನ್ಯಾಯವಿವರಣ ವಾಕ್ಯವನ್ನು ವ್ಯಾಖ್ಯಾನ ಮಾಡುತ್ತಾ ಪ್ರಥಮಪಕ್ಷವನ್ನು ಹೇಳಿದ್ದು ತಪ್ಪಲ್ಲವೇ? ಎಂಬ ಪ್ರಶ್ನೆ ಬರುತ್ತದೆ.

ಉತ್ತರ - ಆಪಾತತಃ ನ್ಯಾಯಸುಧಾ ಮಾತನ್ನು ನೋಡಿದರೆ ಟೀಕೆಯ ಪ್ರಥಮಪಕ್ಷ ತಪ್ಪೆಂದು ಕಾಣಿಸುತ್ತದೆ. ಆದರೆ ಟೀಕೆಯಲ್ಲಿ ಮಾಡಲ್ಪಟ್ಟ ಮೊದಲನೆಯ ಪೂರ್ವಪಕ್ಷದಲ್ಲಿ ಅಸ್ವಾರಸ್ಯವಿರುವುದರಿಂದ ಮತ್ತೊಂದು ಪೂರ್ವಪಕ್ಷವನ್ನು ತಿಳಿಯಬೇಕೆಂಬುದೇ ನ್ಯಾಯಸುಧೆಯ ಅಭಿಪ್ರಾಯ. ಏಕೆಂದರೆ ಜೀವನು ಘಟಪಟಾದಿಗಳಿಗೆ ಕರ್ತೃವಾಗಿದ್ದಾನೆಂದು ಅನುಭವಸಿದ್ಧವಾಗಿದೆ. ಆದರೆ ಮಹದಾದಿ ತತ್ವಗಳಿಗೆ ಜೀವನು ಕರ್ತೃವಾಗಿದ್ದಾನೆಂಬುದು ಅನುಭವ ವಿರುದ್ಧವಾಗಿದೆ. ಅಷ್ಟೇ ಅಲ್ಲದೇ 'ನಾಹಂ ಸರ್ವಕರ್ತಾ' 'ನಾನು ಸರ್ವಕರ್ತೃನಲ್ಲ' ಎಂಬ ಅನುಭವವೇ ಪ್ರತಿಯೊಬ್ಬರಿಗೂ ಇದೆ. ಆದ್ದರಿಂದ ಮಹದಾದಿ ತತ್ವಗಳಿಗೂ ಕೂಡ ಜೀವನೇ ಕರ್ತೃವಾಗಿದ್ದಾನೆಂಬ ಮೊದಲನೆಯ ಪೂರ್ವಪಕ್ಷದಲ್ಲಿ ಅಸ್ವಾರಸ್ಯವಿದೆ. ಆದರೆ ಎರಡನೆಯ ಪೂರ್ವಪಕ್ಷದಲ್ಲಿ ಅಸ್ವಾರಸ್ಯವಿಲ್ಲ. ಮಹದಾದಿತತ್ವಗಳಿಗೆ ಬ್ರಹ್ಮನು ಕರ್ತೃವಾಗಿದ್ದಾನೆಂದು ಒಪ್ಪಿ, ಘಟಪಟಾದಿ ಪದಾರ್ಥಗಳಿಗೆ ಮಾತ್ರ ಜೀವನೊಬ್ಬನೇ ಕರ್ತೃವಾಗಲಿ ಎಂಬುದು ಆಕ್ಷೇಪ. ಎರಡನೆಯ ಪಕ್ಷದಲ್ಲಿ ಅನುಭವವಿರೋಧವಿರುವುದಿಲ್ಲ ಅಷ್ಟೇ ಅಲ್ಲದೇ ಆನುಕೂಲ್ಯವೇ ಇರುತ್ತದೆ. ಆದ್ದರಿಂದ ಪ್ರಥಮಪಕ್ಷದಲ್ಲಿ ಅಸ್ವಾರಸ್ಯವಿದೆಯೆಂದು ತಿಳಿದು ನ್ಯಾಯಸುಧೆಯಲ್ಲಿ ಮತ್ತೊಂದು ಬಗೆಯ ಪೂರ್ವಪಕ್ಷವನ್ನು ತೋರಿಸಿದ್ದಾರೆ.

ಅತ ಏವಾತ್ರಾಪಿ ಟೀಕಾಯಾಮಾದ್ಯೇಽಪರಿತೋಷಾತ್ "ಯದ್ವಾ" ಇತ್ಯಾದಿನಾಽಧಿಕರಣಾಂತೇ ದ್ವಿತೀಯ ಉಕ್ತಮ್ । ನತ್ವಾದ್ಯಃ ಸುಧಾಯಾಂ ಸರ್ವಥಾ ನಾಭಿಪ್ರೇತಃ । ತಥಾತ್ವೇ "ದೇವಾದಿ" ಇತ್ಯುತ್ತರಸೂತ್ರ ಈಶ್ವರಸ್ಯಾದೃಶ್ಯತ್ವೋಕ್ತ್ಯಯೋಗಾತ್।

ಆದ್ದರಿಂದಲೇ ಟೀಕೆಯಲ್ಲಿಯೂ ಕೂಡ ಅಧಿಕರಣದ ಕೊನೆಯಲ್ಲಿ 'ಯದ್ವಾ' ಇತ್ಯಾದಿಯಾಗಿ ನ್ಯಾಯಸುಧೆಯಲ್ಲಿ ಹೇಳಿದ ಎರಡನೆಯ ಪೂರ್ವಪಕ್ಷವನ್ನು ಹೇಳಿರುತ್ತಾರೆ. ಆದ್ದರಿಂದ ಮೊದಲನೆಯ ಪೂರ್ವಪಕ್ಷದಲ್ಲಿ ಅಪರಿತೋಷವಿದೆಯೆಂಬುದು ಟೀಕೆಗೂ ಕೂಡ ಸಮ್ಮತವೆಂದು ಸ್ಪಷ್ಟವಾಗುತ್ತದೆ.

ಆದ್ದರಿಂದ ಮೊದಲನೆಯ ಪೂರ್ವಪಕ್ಷವು ನ್ಯಾಯಸುಧೆಗೆ ಅಭಿಪ್ರೇತವಲ್ಲವೆಂದು ಸರ್ವಥಾ ತಿಳಿಯಬಾರದು. ಹಾಗಾದಲ್ಲಿ 'ದೇವಾದಿವದಪಿ ಲೋಕೇ' ಎಂಬ ಮುಂದಿನ ಸೂತ್ರದಲ್ಲಿ ಈಶ್ವರನು ಇರುವುದಾದರೆ, ಪ್ರತ್ಯಕ್ಷಕ್ಕೆ ಯೋಗ್ಯನೋ, ಅಯೋಗ್ಯನೋ ? ಯೋಗ್ಯನಾಗುವುದಾದರೆ ಕಾಣಿಸಬೇಕಾದೀತು. ಅಯೋಗ್ಯನಾದರೆ ಯಾವಾಗಲೂ ಕೂಡ ಕಾಣಸದಿರಬೇಕಾದೀತು ಇತ್ಯಾದಿಯಾಗಿ ಆಶಂಕಿಸಿ ಅಂತರ್ಧಾನಶಕ್ತಿಯಿಂದ ಇದ್ದರೂ ಕೂಡ ಈಶ್ವರನು ಕಾಣಿಸುವುದಿಲ್ಲವೆಂದು ಸಮರ್ಥಿಸಲಾಗಿದೆ. ಇದನ್ನು ಹೇಳಿದ್ದೇ ವ್ಯರ್ಥವಾಗಬೇಕಾದೀತು.

### ಆಪಾದಕತರ್ಕದ ಸಮರ್ಥನೆ

**भावदीपः** – जीवकर्तृत्वं इति भाष्यस्थमापादकं सूत्रारूढं कुर्वन्सूत्रार्थमाह– **यदीति ।।** असद्व्यपदेशान्नेति चेदित्यतश्चेदिति वर्तते। स च यद्यर्थः। यदितर्ह्योश्च नित्यान्वय इति भावः। श्रुतौ व्यपदेशादीति नित्यसाकाङ्क्षत्वात्समासः। आदिपदेन वक्ष्यमाणयुक्त्यनुभवौ ग्राह्यौ।

'ಜೀವಕರ್ತೃತ್ವಪಕ್ಷೇ' ಇತ್ಯಾದಿ ಭಾಷ್ಯದಲ್ಲಿ ಆಪಾದಕ ತರ್ಕವನ್ನು ಹೇಳಿದ್ದಾರೆ. ಇದನ್ನು ಸೂತ್ರಾರೂಢ ಮಾಡಬೇಕಾಗಿದೆ. ಅದಕ್ಕಾಗಿ ಟೀಕಾಕಾರರು 'ಯದಿ' ಇತ್ಯಾದಿ ವಾಕ್ಯದಿಂದ ಭಾಷ್ಯದ ಜೋಡಣೆಯ ಜೊತೆ ಸೂತ್ರಾರ್ಥವನ್ನು ಹೇಳುತ್ತಿದ್ದಾರೆ. 'ಅಸದ್ವ್ಯಪದೇಶಾತ್ ನೇತಿ ಚೇತ್' ಎಂಬ ಸೂತ್ರದಲ್ಲಿರುವ 'ಚೇತ್' ಎಂಬ ಪದವನ್ನು ಇಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಅದರ ಅರ್ಥವನ್ನೇ 'ಯದಿ' ಎಂಬುದಾಗಿ ಟೀಕೆಯಲ್ಲಿ ಬರೆದಿದ್ದಾರೆ. 'ಯದಿ' ಶಬ್ದವಿದ್ದ ಮೇಲೆ 'ತರ್ಹಿ' ಎಂಬ ಶಬ್ದವು ಇರಲೇಬೇಕು.

ಏಕೆಂದರೆ ಯದಿ ಮತ್ತು ತರ್ಹಿಶಬ್ದಗಳೆರಡೂ ನಿತ್ಯಾನ್ವಯವುಳ್ಳ ಶಬ್ದಗಳಾಗಿವೆ. ಟೀಕೆಯಲ್ಲಿ 'ಶ್ರುತೌ ವ್ಯಪದೇಶಾದಿಸಿದ್ಧತ್ವಾತ್' ಎಂದು ಹೇಳಿದ್ದಾರೆ. ನಿತ್ಯಸಾಕಾಂಕ್ಷಿತವಾದ್ದರಿಂದ ಸಮಾಸವಾಗಿದೆ ಎಂದು ತಿಳಿಯಬೇಕು. 'ಆದಿ' ಪದದಿಂದ ಮುಂದೆ ಹೇಳಲ್ಪಡುವ ಯುಕ್ತಿ ಮತ್ತು ಅನುಭವಗಳನ್ನು ವಿವಕ್ಷಿಸತಕ್ಕದ್ದು.

**ವಿವರಣೆ** – 'ಜೀವಕರ್ತೃತ್ವಪಕ್ಷೇ ಹಿತಾಕರಣಂ ಅಹಿತಕರಣಂ ಚ ನ ಸ್ಯಾತ್' ಎಂಬ ಭಾಷ್ಯದ ವಾಕ್ಯವು ಆಪಾದಕತರ್ಕವಾಗಿದೆ. ಇದು ಸೂತ್ರದಿಂದ ಹೇಗೆ ತಿಳಿಯುತ್ತದೆಂಬುದನ್ನು ಪ್ರಕೃತ ಟೀಕೆಯಲ್ಲಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಹಿಂದೆ ಪ್ರಸಕ್ತವಾದ 'ಅಸದ್ವ್ಯಪದೇಶಾತ್ ನೇತಿ ಚೇತ್' ಎಂಬ ಸೂತ್ರದಲ್ಲಿರುವ 'ಚೇತ್' ಎಂಬ ಪದವನ್ನು ಇಲ್ಲಿ ಅಧ್ಯಾಹಾರ ಮಾಡಬೇಕು. ಆಗ ಸೂತ್ರವೇ ಆಪಾದಕತರ್ಕವನ್ನು ಹೇಳುತ್ತಿದೆ ಎಂದು ಸ್ಪಷ್ಟವಾಗುತ್ತದೆ.

**ಪ್ರಶ್ನೆ** – ಟೀಕೆಯಲ್ಲಿ 'ಶ್ರುತೌ ವ್ಯಪದೇಶಾದಿ ಸಿದ್ಧತ್ವಾತ್' ಎಂಬ ವಾಕ್ಯಪ್ರಯೋಗವಿದೆ. ಸಮಾಸಘಟಕವಾದ ಪದಕ್ಕೆ ಸಮಾಸ ಅಘಟಕವಾದ ಪದದಿಂದ ಅನ್ವಯ ಮಾಡುವುದು ಕೂಡುವುದಿಲ್ಲ. ಹಾಗಾದಲ್ಲಿ 'ಪದಾರ್ಥಃ ಪದಾರ್ಥೇನೈವ ಅನ್ವೇತಿ ನತು ಪದಾರ್ಥೇಕದೇಶೇನ' ಎಂಬ ನಿಯಮಕ್ಕೆ ಭಂಗ ಬರುತ್ತದೆ. ಹೀಗಿರುವಾಗ 'ವ್ಯಪದೇಶಾದಿಸಿದ್ಧತ್ವಾತ್' ಎಂಬ ಸಮಾಸಪದದಲ್ಲಿ ಏಕದೇಶವಾದ ವ್ಯಪದೇಶದ ಜೊತೆ ಸಮಾಸ ಅಘಟಿತವಾದ 'ಶ್ರುತೌ' ಎಂಬುದಕ್ಕೆ ಅನ್ವಯವನ್ನು ಹೇಗೆ ಹೇಳಿದ್ದಾರೆ?

**ಉತ್ತರ** – 'ನಿತ್ಯಸಾಕಾಂಕ್ಷತ್ವಾತ್ ಸಮಾಸಃ' ಎಂದು ಉತ್ತರ. ಚೈತ್ರಸ್ಯ ಗುರುಕುಲಂ ಎಂಬಲ್ಲಿ ಚೈತ್ರಪದಾರ್ಥಕ್ಕೆ ಗುರುವಿನ ಜೊತೆ ನಿತ್ಯಸಾಕಾಂಕ್ಷೆ ಇರುವುದರಿಂದ ಅನ್ವಯವನ್ನು ಮಾಡುವುದು ಹೇಗೆ ತಪ್ಪಾಗುವುದಿಲ್ಲವೋ ಅದರಂತೆ ಪ್ರಕೃತದಲ್ಲಿಯೂ ಕೂಡ ವ್ಯಪದೇಶ ಪದಾರ್ಥದ ಜೊತೆ ಶ್ರುತಿಪದಾರ್ಥದ ಜೊತೆ ಅನ್ವಯ ಮಾಡುವುದು ತಪ್ಪಾಗುವುದಿಲ್ಲ. ಸಮಾಸ ಅಘಟಿತವಾದ ಪದಾರ್ಥದಿಂದ ಸಮಾಸಘಟಿತವಾದ ಪದಾರ್ಥಕ್ಕೆ ಅನ್ವಯ ಮಾಡುವುದು ತಪ್ಪು. ಆದರೆ ನಿತ್ಯಸಾಕಾಂಕ್ಷಿತಸ್ಥಳಗಳಲ್ಲಿ ಈ ನಿಯಮವನ್ನು ಒಪ್ಪಬೇಕಾಗಿಲ್ಲ. ಆದ್ದರಿಂದ ಇದು ಸಾಪವಾದ ನಿಯಮವಾಗಿದೆ.

'ಶ್ರುತೌ ವ್ಯಪದೇಶಾದಿ ಸಿದ್ಧತ್ವಾತ್' ಎಂಬಲ್ಲಿ ಜೀವಕರ್ತೃತ್ವವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯುತ್ತದೆ. ಅಷ್ಟೇ ಅಲ್ಲ 'ಆದಿ'ಪದದಿಂದ ಯುಕ್ತಿ ಮತ್ತು ಅನುಭವಗಳಿಂದಲೂ ಕೂಡ ಜೀವಕರ್ತೃತ್ವವು ತಿಳಿಯುತ್ತಿದೆ ಎಂಬುದನ್ನು ತಿಳಿಯಬೇಕು.

ಅನಿಷ್ಟಾಪಾದನೆಯನ್ನು ಇಷ್ಟಾಪತ್ತಿ ಎನ್ನಲಾಗದು.

**भावदीपः** – एतेन हिताकरणादिदोषापादनं श्रुत्यनुभवयुक्तीनां तिसृणामप्याभासत्वसाधकं तासां स्वतो जीवकर्तृत्वविषयकत्वं इति सूचितं इष्टापत्तिं निराह– **विद्यते चेति**।। अन्यथा सर्वो जनः पूर्णानन्दो निर्दुःखश्च सदा स्यादिति भावः। तर्ह्यनवस्थितेरसम्भवाच्चेत्युक्तदोषः स्यादित्याशङ्क्याह– **अपि त्विति**॥२२॥

'ಭಾಷ್ಯದಲ್ಲಿ ಜೀವಕರ್ತೃತ್ವಪಕ್ಷೇ ಹಿತಾಕರಣಂ ಅಹಿತಕರಣಂ ಚ ನ ಸ್ಯಾತ್' ಎಂಬುದಾಗಿ ದೋಷವನ್ನು ಆಪಾದನೆ ಮಾಡಲಾಗಿದೆ. ಮತ್ತು ಜೀವಕರ್ತೃತ್ವಪಕ್ಷದಲ್ಲಿ ಪ್ರಮಾಣಭೂತವಾದ ಶ್ರುತಿ, ಅನುಭವ, ಯುಕ್ತಿಗಳು ಆಭಾಸಗಳಾಗಿವೆಯೆಂದು ಹೇಳಲಾಗಿದೆ. ಇವುಗಳು ಸ್ವತಃ ಜೀವಕರ್ತೃತ್ವ-ವಿಷಯಗಳಾಗಿವೆ ಎಂಬುದಾಗಿ ಸೂಚಿತವಾದ ಇಷ್ಟಾಪತ್ತಿಯನ್ನು ಪರಿಹರಿಸಲು 'ವಿದ್ಯತೇ ಚ' ಎಂಬ ವಾಕ್ಯ ಹೊರಟಿದೆ. ಒಂದು ವೇಳೆ ಹಿತಾಕರಣ ಹಾಗೂ ಅಹಿತ ಕರಣಗಳು ಇಲ್ಲವೆಂದು ಒಪ್ಪಿದರೆ ಆಗ ಸಕಲ ಜನರು ಪೂರ್ಣವಾದ ಆನಂದವುಳ್ಳವರು, ನಿರ್ದುಃಖಿಗಳು ನಿರಂತರ ಆಗಬೇಕಾದೀತು.

ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಒಪ್ಪದೇ ಇದ್ದರೆ ಅನವಸ್ಥಾ ಹಾಗೂ ಅಸಂಭವವೆಂಬ ಹಿಂದೆ ಹೇಳಿದ ದೋಷಗಳು ಬರುತ್ತವಲ್ಲವೇ ಎಂಬ ಆಶಂಕೆಗೆ 'ಅಪಿ ತು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಪರಮಾತ್ಮನು ಸ್ವತಂತ್ರನಾದುದರಿಂದ ಅನವಸ್ಥಾದಿ ದೋಷಗಳಿಗೆ ಅವಕಾಶವಿಲ್ಲ.

## ಭಾವದೀಪದ ವೈಶಿಷ್ಟ್ಯ

* ಇದು ಯುಕ್ತಿಪಾದ. ಇಲ್ಲಿ ಯುಕ್ತಿಯಿಂದ ಪ್ರಾಪ್ತವಾದ ಪೂರ್ವಪಕ್ಷವನ್ನಷ್ಟೇ ನಿರಾಕರಿಸಬೇಕು. ಆದರೆ ಟೀಕೆಯಲ್ಲಿ 'ಶ್ರುತಿಪ್ರಾಪ್ತಃ ನಿರಾಕ್ರಿಯತೇ' ಎಂದಿದ್ದಾರೆ. ಇದು ಹೇಗೆ? ಆದರೆ ಭಾವದೀಪದಲ್ಲಿ ಇದಕ್ಕೆ 'ಶ್ರುತಿಮೂಲಯುಕ್ತಿಪ್ರಾಪ್ತಃ' ಎಂದು ಸುಂದರವಾಗಿ ವ್ಯಾಖ್ಯಾನ ಮಾಡಿದ್ದಾರೆ. ಅಷ್ಟೇ ಅಲ್ಲದೇ ಟೀಕೆಯಲ್ಲಿ ಶ್ರುತಿಪ್ರಾಪ್ತಃ ಎನ್ನಲು ಕಾರಣವೇನೆಂಬುದನ್ನು ಚರ್ಚಿಸಿದ್ದಾರೆ.

* 'ಕರ್ತಾ ಶಾಸ್ತ್ರಾರ್ಥವತ್ತ್ವಾತ್' ಎಂಬ ಸೂತ್ರದಲ್ಲಿ ಹೇಗಿದ್ದರೂ ಜೀವಕರ್ತೃತ್ವವನ್ನುಸಮರ್ಥಿಸಿದ್ದಾರೆ. ಹೀಗಿದ್ದಾಗ ಇಲ್ಲೇಕೆ ಜೀವಕರ್ತೃತ್ವವನ್ನು ನಿರಾಕರಿಸಬೇಕು? ಎಂಬ ಪ್ರಶ್ನೆ ಸಹಜವಾಗಿ ಮೂಡುತ್ತದೆ. ಇದಕ್ಕೆ ಆ ಅಧಿಕರಣದಲ್ಲಿ ಸಿದ್ಧವಾದ ಪ್ರಮೇಯವನ್ನು ಕೂಡ ಇಲ್ಲಿ ಆಕ್ಷೇಪ ಮಾಡಲಾಗುತ್ತಿದೆ ಎಂಬುದಾಗಿ ಉತ್ತರವನ್ನು ನೀಡಿದ್ದಾರೆ.

* ಜೀವನು ಸ್ವತಂತ್ರಕರ್ತೃವಾಗಿದ್ದಾನೆಂದು ಆಕ್ಷೇಪ ಮಾಡುವ ಪೂರ್ವಪಕ್ಷಿಗಳು ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಒಪ್ಪುತ್ತಾರೋ ಅಸ್ವತಂತ್ರಕರ್ತೃತ್ವವನ್ನು ಒಪ್ಪುತ್ತಾರೋ? ಇದಕ್ಕೆ ಭಾವದೀಪದಲ್ಲಿ ಸುಂದರವಾಗಿ ಉತ್ತರಿಸಿದ್ದಾರೆ. ಅನೇಕ ವಿಕಲ್ಪಗಳ ಮೂಲಕ ಈಶ್ವರನನ್ನೇ ಒಪ್ಪುವ ಅವಶ್ಯಕತೆ ಇಲ್ಲ ಎಂಬುದು ಇಲ್ಲಿಯ ಪೂರ್ವಪಕ್ಷಿಗಳ ಅಭಿಪ್ರಾಯ.

* ಘಟಪಟಾದಿಗಳಿಗೆ ಜೀವನು ಕರ್ತೃವಾಗಬಹುದು. ಮಹತ್ತತ್ತ್ವ ಅಹಂಕಾರತತ್ತ್ವಾದಿಗಳ ಸೃಷ್ಟಿಗೆ ಜೀವನು ಹೇಗೆ ಕರ್ತೃವಾಗುತ್ತಾನೆ ಎಂಬ ಪ್ರಶ್ನೆಗೂ ಕೂಡ ಭಾವದೀಪದಲ್ಲಿ ಉತ್ತರವಿದೆ. 'ಮಹದಾದಿಕಂ ಜೀವಕರ್ತೃಕಂ ಕಾರ್ಯತ್ವಾತ್ ಘಟವತ್' ಎಂಬ ಅನುಮಾನದ ಆಧಾರದಿಂದ ಮಹತ್ತತ್ತ್ವಾದಿಗಳಿಗೂ ಕೂಡ ಜೀವನೇ ಕರ್ತೃವಾಗುತ್ತಾನೆಂದು ಪೂರ್ವಪಕ್ಷವನ್ನು ಪರಿಪುಷ್ಟಗೊಳಿಸಲಾಗಿದೆ.

* ಪೂರ್ವಪಕ್ಷಿಗಳಿಗೆ ಅನಿಷ್ಟಾಪಾದನೆಯನ್ನು ಭಾಷ್ಯವಾಕ್ಯದಲ್ಲಿ ತಿಳಿಸಿದ್ದಾರೆ. ಆದರೆ ಇದು ಸೂತ್ರದಿಂದ ಸ್ಪಷ್ಟವೇ ಆಗುವುದಿಲ್ಲ. ಅದಕ್ಕಾಗಿ 'ಅಸದ್ ವ್ಯಪದೇಶಾತ್ ನೇತಿ ಚೇತ್' ಎಂಬ ಸೂತ್ರದಿಂದ 'ಚೇತ್' ಎಂಬುದನ್ನು ಅಧ್ಯಾಹಾರ ಮಾಡಿಕೊಂಡು ಅನಿಷ್ಟಾಪಾದನೆಯನ್ನು ಸ್ಪಷ್ಟಪಡಿಸಿದ್ದಾರೆ.

## ಬ್ರಹ್ಮಸೂತ್ರ

'ಅಧಿಕಂ ತು ಭೇದನಿರ್ದೇಶಾತ್' ಎಂಬ ಸೂತ್ರ ವ್ಯಾಖ್ಯಾನ

**ब्रह्मसूत्रम् – अधिकं तु भेदनिर्देशात् ।।**

ಬೃಹತ್ತಾದ ಪ್ರಪಂಚವನ್ನು ಸೃಷ್ಟಿ ಮಾಡುವ ಪರಮಾತ್ಮನಿಗೆ ಬಹಳಷ್ಟು ಶ್ರಮವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಇತರ ಎಲ್ಲಾ ಜೀವರಿಗಿಂತಲೂ ವಿಶಿಷ್ಟವಾದ ಗುಣಧರ್ಮಗಳನ್ನು ಪರಮಾತ್ಮನು ಪಡೆದಿರುತ್ತಾನೆ. ಅತ್ಯಧಿಕವಾದ ಶಕ್ತಿ ಇರುವುದರಿಂದ ಪ್ರಪಂಚದ ಸೃಷ್ಟಿಯು ಅವನಿಗೆ ಕೇವಲ ಲೀಲೆ.

ಅರ್ಥ -- 'ತು' ಶಬ್ದವು ದೇವತೆಗಳ ಹಾಗೂ ಜೀವರ ಸಾಮರ್ಥ್ಯವನ್ನು ವ್ಯಾವೃತ್ತಿ ಮಾಡುತ್ತಿದೆ. ಬ್ರಹ್ಮನಾದರೂ ಜೀವನ ಅಪೇಕ್ಷೆಯಿಂದ, ಅಧಿಕಂ = ಬಹಳಷ್ಟು ಸಾಮರ್ಥ್ಯವನ್ನು ಪಡೆದಿರುತ್ತಾನೆ. ಏಕೆಂದರೆ 'ಭೇದನಿರ್ದೇಶಾತ್' = 'ಶ್ರೋತಾ ಮಂತಾ' ಇತ್ಯಾದಿಯಾಗಿ 'ಅಖಿಲಶ್ರೋತೃತ್ವ, ಅಂತರ್ಯಾಮಿತ್ವ' ಮೊದಲಾದ ವಿಶೇಷಗಳನ್ನು ಹೇಳಲಾಗಿದೆ. ಬ್ರಹ್ಮನು ಅಧಿಕವಾದ ಶಕ್ತಿ ಉಳ್ಳವನೆಂದು ಎಲ್ಲರೂ ವೇದದಿಂದ ತಿಳಿದುಕೊಳ್ಳುತ್ತಿದ್ದಾರೆ. ಮತ್ತು ಅಂತರ್ಯಾಮಿಯಾಗಿರುವುದು ಸಿದ್ಧವಾಗಿರುವುದರಿಂದ ಮೇಲಿನ ದೋಷಗಳಿಗೆ ಅವಕಾಶವಿಲ್ಲ.

## ಬ್ರಹ್ಮಸೂತ್ರಭಾಷ್ಯ

ಬ್ರಹ್ಮಕರ್ತೃತ್ವದಲ್ಲಿ ಯಾವುದೇ ಬಾಧಕವಿಲ್ಲ

**ब्रह्मसूत्रभाष्यम् – ।। अधिकं तु भेदनिर्देशात् ।।२।।**

**न च ब्रह्मणः श्रमचिन्तादिदोषप्राप्तिः, अधिकशक्तित्वात् । 'श्रोता मन्ता द्रष्टाऽऽदेष्टाऽऽघोष्टा विज्ञाता प्रज्ञाता सर्वेषां भूतानामन्तरपुरुषः' (ऐ.आ.३.२.४.) 'एष त आत्मा सर्वान्तरः' (बृ.५.५.१.) 'योऽशनायापिपासे शोकं मोहं जरां मृत्युमत्येति' (बृ.५.५.१.) इत्यादिविशेषनिर्देशात् ।।२।।**

ಅನುವಾದ - ಬ್ರಹ್ಮನು ಜಗತ್ತಿಗೆ ಕರ್ತೃವಾದರೆ ಅವನಿಗೂ ಕೂಡ ಶ್ರಮ ಚಿಂತೆ ಮೊದಲಾದ ದೋಷಗಳು ಪ್ರಾಪ್ತವಾಗುತ್ತವಲ್ಲವೆ ? ಎಂದು ಪ್ರಶ್ನಿಸಬಾರದು. ಏಕೆಂದರೆ ಅವನಿಗೆ ಅಧಿಕವಾದ ಶಕ್ತಿ ಇರುತ್ತದೆ. ಹೀಗೆ ಪ್ರಮಾಣಗಳು ಪ್ರತಿಪಾದನೆ ಮಾಡುತ್ತವೆ. ಬ್ರಹ್ಮನು ಎಲ್ಲವನ್ನು

ಕೇಳುವವನು, ಎಲ್ಲವನ್ನು ತಿಳಿಯುವವನು, ಎಲ್ಲವನ್ನು ನೋಡುವವನು, ಆಜ್ಞೆ ಮಾಡುವವನು, ಉಪದೇಶ ಮಾಡುವವನು, ಸರ್ವಜ್ಞನು, ವಿಶೇಷವಾಗಿ ಪ್ರತಿಯೊಂದನ್ನು ತಿಳಿಯುವವನು, ಸಕಲಪ್ರಾಣಿಗಳಲ್ಲಿ ಅಂತರ್ಯಾಮಿಯಾಗಿರುವವನು, ಆತ್ಮಶಬ್ದವಾಚ್ಯನು ಆಗಿ ಎಲ್ಲರೊಳಗೆ ನೆಲೆಸಿದ್ದಾನೆ. ಹಸಿವು, ನೀರಡಿಕೆ, ದುಃಖ, ಅಜ್ಞಾನ, ವಾರ್ಧಕ್ಯ, ಮರಣ, ಮೊದಲಾದ ದೋಷಗಳನ್ನು ದಾಟಿದ್ದಾನೆ. ಇವೇ ಮೊದಲಾದ ವಿಶೇಷಪ್ರಮಾಣಗಳ ಆಧಾರದಿಂದ ಪರಮಾತ್ಮನು ಅತ್ಯಧಿಕ ಶಕ್ತಿಯುಳ್ಳವನೆಂದು ನಿರ್ಧಾರವಾಗುತ್ತದೆ.

ಪ್ರತಿಪದಾರ್ಥ -- ಯಾವ ದೋಷಗಳ ಸಂಭಾವನೆಯಿಂದ ಜೀವನಿಗೆ ಕರ್ತೃತ್ವವನ್ನು ನಿರಾಕರಣೆ ಮಾಡಿದಿರೋ ಆ ದೋಷಗಳು ಬ್ರಹ್ಮನಲ್ಲಿಯೂ ಕೂಡ ಬರುತ್ತವೆ. ಅವನಲ್ಲಿಯೂ ಕೂಡ ಶ್ರಮಾದಿದೋಷಗಳು ಇವೆ. ಹೀಗೆ ಎರಡು ಪಕ್ಷಗಳು ಸಮಾನವಾಗಿರುವಾಗ ಜೀವಕರ್ತೃತ್ವವನ್ನೇ ಆಶ್ರಯಿಸಬಹುದಲ್ಲವೆ? ಎಂಬ ಆಶಂಕೆಗೆ ಉತ್ತರಿಸುತ್ತಿದ್ದಾರೆ. ಬ್ರಹ್ಮಣಃ = ಪರಬ್ರಹ್ಮನಿಗೆ, ಶ್ರಮಚಿಂತಾದಿದೋಷಪ್ರಾಪ್ತಿಃ = ದೇಹಶ್ರಮ, ಚಿಂತೆ, ಆಯಾಸ, ಆಲೋಚನೆ ಮೊದಲಾದ ದೋಷಗಳು, ನಚ = ಎಂದಿಗೂ ಇರುವುದಿಲ್ಲ. ಅಧಿಕಶಕ್ತಿತ್ವಾತ್ = ಅತ್ಯಧಿಕ ಶಕ್ತಿಯುಳ್ಳವನಾದ್ದರಿಂದ ಎಂಬುದಾಗಿ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಶ್ರೋತಾ = ಎಲ್ಲವನ್ನು ಕೇಳುವವನು, ಮಂತಾ = ತಿಳಿಯುವವನು, ದ್ರಷ್ಟಾ = ನೋಡುವವನು, ಆದೇಷ್ಟಾ = ಆದೇಶ ಮಾಡುವವನು, ಘೋಷ್ಟಾ = ಉಪದೇಶ ಮಾಡುವವನು, ವಿಜ್ಞಾತಾ = ಸರ್ವಜ್ಞನು, ಪ್ರಜ್ಞಾತಾ = ಎಲ್ಲವನ್ನು ವಿಶೇಷವಾಗಿ ತಿಳಿಯುವವನು, ಸರ್ವೇಷಾಂ = ಸಕಲವಿಧವಾದ, ಭೂತಾನಾಂ = ಪ್ರಾಣಿಗಳ, ಅಂತರಪುರುಷಃ = ಅಂತರ್ಯಾಮಿಯಾಗಿರುವ ಪುರುಷನು ಆಗಿರುತ್ತಾನೆ.

ಯಃ ಏಷ ತ ಆತ್ಮಾ = ಯಾವ ಈ ಆತ್ಮನೇ, ಸರ್ವಾಂತರಃ = ಎಲ್ಲರಲ್ಲಿ ನೆಲೆಸಿರುವವನು, ಯಃ = ಯಾವ ಪರಮಾತ್ಮನು, ಅಶನಾಯಾ ಪಿಪಾಸೇ = ಹಸಿವು ನೀರಡಿಕೆ ಮೊದಲಾದ, ಶೋಕಂ = ದುಃಖಗಳನ್ನು, ಮೋಹಂ = ಅಜ್ಞಾನವನ್ನು, ಜರಾಂ = ಮುಪ್ಪನ್ನು, ಮೃತ್ಯುಮ್ = ಮರಣವನ್ನು, ಅತ್ಯೇತಿ = ದಾಟಿರುತ್ತಾನೆ, ಇತ್ಯಾದಿ = ಇವೇ ಮೊದಲಾದ,

ವಿಶೇಷನಿರ್ದೇಶಾತ್ = ವಿಶೇಷವಾದ ಪ್ರಮಾಣಗಳಿರುವುದರಿಂದ ಪರಮಾತ್ಮನಲ್ಲಿ ಯಾವುದೇ ದೋಷಗಳಿಲ್ಲವೆಂದು ತಿಳಿಯುತ್ತಾರೆ.

### ಸತ್ತರ್ಕದೀಪಾವಳಿ

### ಪರಮಾತ್ಮನೂ ಕೂಡ ಪರತಂತ್ರನೆಂದು ಆಕ್ಷೇಪ

**सत्तर्कदीपावलिः – 'एतेन शिष्टा अपरिग्रहा अपि व्याख्याताः' इत्यत्र सङ्क्षेपेण निराकृतत्वात् श्रुतिप्राप्तजीवकर्तृत्वपक्षस्य विस्तारात् निराक्रियेत्युक्तम्। परमेश्वरस्यैव स्वातन्त्र्यमिति प्रतिपादयितुं जीवस्वातन्त्र्ये दूषिते परश्चेदयति। बहुकार्यव्यापृतस्य कर्तुः श्रमचिन्तादिदोषदर्शनात् जगत्कर्तुरपि श्रमचिन्तादिदोषप्रसक्तेः जीववत् पारतन्त्र्यमिति ।**

'ಏತೇನಾ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಸೂತ್ರದಲ್ಲಿ ಸಂಕ್ಷೇಪವಾಗಿ ನಿರಾಕರಣೆ ಮಾಡಲ್ಪಟ್ಟ ಶ್ರುತಿಪ್ರಾಪ್ತವಾದ ಜೀವಕರ್ತೃತ್ವಪಕ್ಷವನ್ನು ಈ ಅಧಿಕರಣದಲ್ಲಿ ವಿಸ್ತಾರವಾಗಿ ನಿರಾಕರಣೆ ಮಾಡಲಾಗುತ್ತಿದೆ ಎಂದು ಹೇಳಲಾಯಿತು. ಪರಮಾತ್ಮನೊಬ್ಬನೇ ಸ್ವತಂತ್ರನಾಗಿದ್ದಾನೆಂಬುದನ್ನು ಪ್ರತಿಪಾದನೆ ಮಾಡಲು ಜೀವಸ್ವಾತಂತ್ರ್ಯವನ್ನು ದೂಷಣೆ ಮಾಡಲಾಯಿತು. ಈ ಸಂದರ್ಭದಲ್ಲಿ ಪೂರ್ವಪಕ್ಷಿಯು ಹೀಗೆ ಆಕ್ಷೇಪ ಮಾಡುತ್ತಾನೆ - ಅನೇಕ ಕಾರ್ಯಗಳಲ್ಲಿ ತೊಡಗಿಸಿಕೊಂಡ ಕರ್ತೃವು ಶ್ರಮ, ಚಿಂತೆ ಮೊದಲಾದ ದೋಷಗಳಿಗೆ ಭಾಗಿಯಾಗುತ್ತಾನೆ. ಜಗತ್ತನ್ನು ಸೃಷ್ಟಿ ಮಾಡುವ ಪರಮಾತ್ಮನು ಬಹುಕಾರ್ಯವ್ಯಾಪಕನಾಗುವ ಕಾರಣ ಶ್ರಮ, ಚಿಂತಾ ಮೊದಲಾದ ದೋಷಗಳಿಗೆ ಭಾಗಿಯಾಗಬೇಕಾಗುತ್ತದೆ. ಹೀಗೆ ಜೀವನಂತೆ ಪರಮಾತ್ಮನಲ್ಲೂ ಕೂಡ ಪಾರತಂತ್ರ್ಯವೇ ಪ್ರಾಪ್ತವಾಗುತ್ತದೆ.

### ಪೂರ್ವಪಕ್ಷಿಗಳಿಗೆ ವ್ಯಾಘಾತಾದಿ ದೋಷಗಳು

**सत्तर्कदीपावलिः – तन्न वाच्यम् । जगत्कर्तुरीश्वरस्य ग्राहकेण वेदेन सर्वसामर्थ्ययुक्तत्वेन सर्वदोषरहितत्वेन गृहीतत्वात् । धर्मिग्राहकप्रमाणविरोधापत्तेः । तथाहि – 'श्रोता मन्ता' इत्यादिश्रुत्या परमात्मनो युगपत्**

**सर्वश्रोतृत्वसर्वमन्तृत्वसर्वादेष्टृत्वादि सर्वसामर्थ्यं श्रूयते । 'एष त आत्मा सर्वान्तरः' इति श्रुत्या एतस्यैव अशनायापिपासादिसर्वदोषराहित्यं श्रूयते । 'य आत्मा अपहतपाप्मा विजरो विमृत्युर्विशोकोऽविजिघत्सोऽपिपासः सत्यकामः सत्यसङ्कल्पः' इत्यादिश्रुत्या दृढीक्रियते । 'मूकोऽहम्' इतिवत् 'ईश्वरः श्रमचिन्तादिमान्' इति प्रतिज्ञापदव्याघातश्च स्यात् । कर्तुमकर्तुमन्यथाकर्तुं सर्वकर्तृत्वादीश्वरस्य । एतदाह – अधिकमित्यादिना ।।**

ಈ ಪೂರ್ವಪಕ್ಷವು ತಪ್ಪು. ಯಾವ ವೇದದಿಂದ ಜಗತ್‌ಕರ್ತೃವಾದ ಈಶ್ವರನು ತಿಳಿಯುತ್ತಾನೋ, ಅದೇ ವೇದದಿಂದ ಆ ಈಶ್ವರನು ಸರ್ವಸಮರ್ಥನಾಗಿದ್ದಾನೆ. ಸರ್ವದೋಷ-ರಹಿತನಾಗಿದ್ದಾನೆ ಎಂದೂ ಕೂಡ ತಿಳಿಯುತ್ತದೆ. ಒಂದು ವೇಳೆ ಈಗ ಪಾರತಂತ್ರ್ಯವನ್ನು ಒಪ್ಪಿದರೆ ಧರ್ಮಿಗ್ರಾಹಕಪ್ರಮಾಣವಿರೋಧವು ಪೂರ್ವಪಕ್ಷಿಗಳಿಗೆ ಪ್ರಾಪ್ತವಾಗುತ್ತದೆ. ಅದು ಹೀಗೆ - 'ಶ್ರೋತಾ ಮಂತಾ' ಇತ್ಯಾದಿ ಶ್ರುತಿಯ ಬಲದಿಂದ ಪರಮಾತ್ಮನಿಗೆ ಏಕಕಾಲದಲ್ಲಿ ಸರ್ವಶ್ರೋತೃತ್ವ, ಸರ್ವಮಂತೃತ್ವ, ಸರ್ವದ್ರಷ್ಟೃತ್ವ, ಸರ್ವಆದೇಶತ್ವ ಮೊದಲಾದ ಸಕಲ ಸಾಮರ್ಥ್ಯಗಳು ಶ್ರುತವಾಗುತ್ತಿವೆ. 'ಏಷ ತ ಆತ್ಮಾ ಸರ್ವಾಂತರಃ' ಇತ್ಯಾದಿ ಶ್ರುತಿಯ ಬಲದಿಂದ ಇದೇ ಪರಮಾತ್ಮನಿಗೆ ಹಸಿವು, ನೀರಡಿಕೆ ಮೊದಲಾದ ಸಕಲದೋಷಗಳ ರಾಹಿತ್ಯವು ಶ್ರುತವಾಗುತ್ತಿವೆ. 'ಯ ಆತ್ಮಾ ಅಪಹತಪಾಪ್ಮಾವಿಜರೋ ವಿಮೃತ್ಯುರ್ವಿಶೋಕೋಽವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ' ಇತ್ಯಾದಿ ಶ್ರುತಿಯೂ ಕೂಡ ಪರಮಾತ್ಮನಲ್ಲಿ ದೋಷರಾಹಿತ್ಯವನ್ನು ದೃಢಪಡಿಸುತ್ತಿದೆ. ಆದ್ದರಿಂದ ಯಾವ ಪೂರ್ವಪಕ್ಷಿಯು ಈಶ್ವರನಿಗೆ ಶ್ರಮ, ಚಿಂತೆ ಮೊದಲಾದ ದೋಷಗಳನ್ನು ಆಕ್ಷೇಪ ಮಾಡುತ್ತಿದ್ದಾನೋ, ಅಂಥವನಿಗೆ 'ಮೂಕೋಽಹಮ್' ಎಂಬ ವಚನದಂತೆ ಪ್ರತಿಜ್ಞೆಯಿಂದ ವ್ಯಾಘಾತದೋಷವು ಪ್ರಾಪ್ತವಾಗುತ್ತದೆ. ಈಶ್ವರನು ಕರ್ತೃಮಕರ್ತೃಮನ್ಯಥಾಕರ್ತುಂ ಸಮರ್ಥನಾಗಿದ್ದಾನೆ. ಇದನ್ನೇ ಭಾಷ್ಯದಲ್ಲಿ 'ಅಧಿಕಂ' ಇತ್ಯಾದಿಯಾಗಿ ನಿರ್ದೇಶಿಸಿದ್ದಾರೆ.

## ತತ್ವಪ್ರದೀಪ

### ಸೃಷ್ಟಿ ಮಾಡಬೇಕಾದರೆ ದೋಷವು ಅನಿವಾರ್ಯವಲ್ಲವೇ?

**तत्वप्रदीपः – ननु ब्रह्मणोऽपि सर्वदा सृष्ट्यादिकरणात् श्रमः तत्र तत्रोपायादिचिन्ता च स्याल्लोकवत्, स्वविद्वेषिनिर्माणायुक्तिश्चेत्यत आह – अधिकं तु भेदनिर्देशात् ।। 'चिन्तादि' इत्यादिशब्दाद् विद्वेषिनिर्माणादिनाऽपि नास्य दोषो भवति । अधिकशक्तित्वात् निर्दोषगुणपूर्णहेयोपादेयरहितत्वात् ।**

ಬ್ರಹ್ಮನೂ ಕೂಡ ನಿರಂತರ ಸೃಷ್ಟಿಯನ್ನು ಮಾಡುತ್ತಲೇ ಇರುತ್ತಾನೆ. ತತ್‌ಪ್ರಯುಕ್ತವಾದ ಶ್ರಮವು ಅವನಿಗೆ ಇದ್ದೇ ಇರುತ್ತದೆ. ಆಯಾ ವಸ್ತುಗಳನ್ನು ಸೃಷ್ಟಿ ಮಾಡುವಾಗ ಅದಕ್ಕೆ ಉಪಯೋಗಿಯಾದ ಉಪಾಯಾದಿಗಳ ಚಿಂತೆಗಳೂ ಕೂಡ ಅವನಿಗೆ ಇದ್ದೇ ಇರುತ್ತದೆ. ಲೋಕದಲ್ಲಿ ಸೃಷ್ಟಿ ಮಾಡುವ ವ್ಯಕ್ತಿಯಲ್ಲಿ ಶ್ರಮಚಿಂತಾದಿಗಳು ಇದ್ದಂತೆ ಇವನಲ್ಲೂ ಕೂಡ ಇರುತ್ತವೆ. ಮತ್ತು ತಾನೇ ಎಲ್ಲವನ್ನು ಸೃಷ್ಟಿ ಮಾಡುವುದಾದಲ್ಲಿ, ಪ್ರೇಕ್ಷಾವಂತನಾದ ಆ ಬ್ರಹ್ಮನು ತನ್ನನ್ನು ದ್ವೇಷ ಮಾಡುವ ವ್ಯಕ್ತಿಯನ್ನು ಸೃಷ್ಟಿ ಮಾಡಲಾರ. ಆದರೆ ಬ್ರಹ್ಮನನ್ನು ದ್ವೇಷಿಸುವ ವ್ಯಕ್ತಿಗಳು ಅನೇಕ ಮಂದಿ ಇದ್ದಾರೆ. ಇದೂ ಕೂಡ ಅಯುಕ್ತವಾಗುತ್ತದಲ್ಲವೇ? ಈ ಎಲ್ಲ ಪ್ರಶ್ನೆಗೆ ಉತ್ತರಿಸಲು 'ಅಧಿಕಂ ತು ಭೇದನಿರ್ದೇಶಾತ್' ಎಂಬ ಸೂತ್ರವು ಹೊರಟಿದೆ. ಭಾಷ್ಯದಲ್ಲಿರುವ 'ಚಿಂತಾದಿದೋಷಪ್ರಾಪ್ತಿಃ' ಎಂಬಲ್ಲಿ ಆದಿಶಬ್ದದಿಂದ ದ್ವೇಷಿಯನ್ನು ಸೃಷ್ಟಿ ಮಾಡುವುದೂ ಕೂಡ ಇವನಿಗೆ ದೋಷವಾಗುವುದಿಲ್ಲ ಎಂಬುದನ್ನು ವಿವಕ್ಷಿಸಬೇಕು. ಏಕೆಂದರೆ ಇವನನ್ನು ದ್ವೇಷಿಸುವ ಯಾವ ವ್ಯಕ್ತಿ ಇದ್ದಾನೋ, ಅವನಿಗಿಂತಲೂ ಅಧಿಕಶಕ್ತಿಯು ಬ್ರಹ್ಮನಲ್ಲಿದೆ. ನಿರ್ದುಷ್ಟವಾದ ಗುಣಪರಿಪೂರ್ಣತ್ವ, ಹೇಯೋಪಾದೇಯರಹಿತತ್ವ, ಮೊದಲಾದ ಧರ್ಮಗಳು ಇವನಲ್ಲಿರುವುದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

### ಬ್ರಹ್ಮನಲ್ಲಿರುವ ವೈಲಕ್ಷಣ್ಯ

**तत्वप्रदीपः – अल्पशक्तीनां हि दोषा भवेयुः । अधिकशक्तित्वमधिकं च प्रमाणतः प्रख्यापयिष्यति 'सर्वोपेता' इति ।। श्रोत्रादिशब्दैः सर्वश्रोतृत्वादिकमत्र**

**विवक्षितं स्वातन्त्र्येण च । सङ्कोचकारणाभावात् मुख्यस्वीकारोपपत्तेः । नाश्रुतत्वश्रोतृत्वादिकं जीवानां युक्तम् । 'नान्योऽतोऽस्ति श्रोता' इत्यादि च स्वातन्त्र्यापेक्षया ह्युच्यते । 'एष त आत्मा अन्तर्याम्यमृतः' इत्युक्तेरतोऽधिकत्वेन वैलक्षण्यनिर्देश एवायम् । भूतानामान्तरत्वं चाधिकशक्तित्वोपपादकं वैलक्षण्यम् । न हि दुःखिनां सर्वेषामन्तःस्थित्वा रमणमधिकशक्तित्वमन्तरेण सम्भवति ।**

ಅಲ್ಪಶಕ್ತಿಯಿದ್ದಲ್ಲಿ ದೋಷಗಳಿಗೆ ಅವಕಾಶವಿದೆ. ಬ್ರಹ್ಮನಿಗೆ ಅಧಿಕ ಶಕ್ತಿಯಿದೆ ಎಂಬುದನ್ನು ಅನೇಕ ಪ್ರಮಾಣಗಳಿಂದ ಮುಂದೆ 'ಸರ್ವೋಪೇತಾಚ ತದ್ದರ್ಶನಾತ್' ಎಂಬ ಶಬ್ದಮೂಲತ್ವಾಧಿಕರಣದಲ್ಲಿ ಸಮರ್ಥಿಸುತ್ತಾರೆ. ಶ್ರುತಿಯಲ್ಲಿರುವ ಶ್ರೋತ್ರಾದಿಶಬ್ದಗಳಿಂದ ಸರ್ವಶ್ರೋತೃತ್ವಾದಿಗಳು ವಿವಕ್ಷಿತವಾಗಿವೆ. ಮತ್ತು ಸ್ವಾತಂತ್ರ್ಯೇಣ ಆ ಧರ್ಮಗಳು ಬ್ರಹ್ಮನಲ್ಲಿವೆ ಎಂದು ತಿಳಿಯಬೇಕು. ಸಂಕೋಚಕ್ಕೆ ಕಾರಣವಿಲ್ಲದ್ದರಿಂದ ಸರ್ವಶ್ರೋತೃತ್ವವನ್ನು ಬ್ರಹ್ಮನಲ್ಲಿ ಸ್ವೀಕಾರ ಮಾಡುವುದು ಉಪಪನ್ನವಾಗುತ್ತದೆ. ಜೀವರಲ್ಲಿ ಅಶ್ರುತತ್ವ ಹಾಗೂ ಶ್ರೋತೃತ್ವಗಳೆಂಬ ವಿರುದ್ಧಧರ್ಮಗಳು ಸರ್ವಥಾ ಯುಕ್ತವಾಗುವುದಿಲ್ಲ. 'ನಾನ್ಯೋ್ತೋಽಸ್ತಿ ಶ್ರೋತಾ' ಇತ್ಯಾದಿ ಶ್ರುತಿಯನ್ನು ಸ್ವಾತಂತ್ರ್ಯಾಪೇಕ್ಷದಿಂದ ಕೂಡಿಸಬೇಕು. ಸ್ವತಂತ್ರನಾದ ಶ್ರೋತೃ ಎಂದರೆ ಬ್ರಹ್ಮನೊಬ್ಬನೇ ಆಗಿದ್ದಾನೆ. ಇತರರೆಲ್ಲರೂ ಅಸ್ವತಂತ್ರರಾದ ಶ್ರೋತೃಗಳಾಗಿದ್ದಾರೆಂಬುದು ಇದರ ಅಭಿಪ್ರಾಯ.

'ಏಷ ತ ಆತ್ಮಾ ಅಂತರ್ಯಾಮ್ಯಮೃತಃ' ಎಂಬುದಾಗಿ ಹೇಳಿರುವುದರಿಂದ ಬ್ರಹ್ಮನು ಸಕಲರಲ್ಲಿಯೂ ಅಂತರ್ಯಾಮಿಯಾಗಿದ್ದಾನೆಂದು ತಿಳಿಯುತ್ತದೆ. ಆದ್ದರಿಂದಲೇ ಇವನಲ್ಲಿ ಆಧಿಕ್ಯವಿದೆ. ಉಳಿದ ಜೀವರುಗಳಿಗಿಂತ ಇವರಲ್ಲಿರುವ ವೈಲಕ್ಷಣ್ಯದ ನಿರ್ದೇಶಕ್ಕೋಸ್ಕರ ಈ ಶ್ರುತಿಯನ್ನು ಉಲ್ಲೇಖ ಮಾಡಲಾಗಿದೆ. 'ಭೂತಾನಾಂ ಅಂತರಪುರುಷಃ' ಎಂಬುದಾಗಿ ಶ್ರುತಿಯು ಸಕಲ ಭೂತಗಳಲ್ಲಿ ಬ್ರಹ್ಮನು ಅಂತರ್ಯಾಮಿಯಾಗಿದ್ದಾನೆಂದು ಹೇಳುತ್ತಿದೆ. ಇದು ಅಧಿಕಶಕ್ತಿತ್ವಕ್ಕೆ ಉಪಪಾದಕವಾಗಿದೆ. ಇದೇ ಬ್ರಹ್ಮನಲ್ಲಿರುವ ವೈಲಕ್ಷಣ್ಯವೆಂದು ತಿಳಿಯಬೇಕು. ಏಕೆಂದರೆ ಸಕಲ ದುಃಖಿಗಳ ಒಳಗಡೆ ಕುಳಿತು, ಸುಖ ಪಡಬೇಕೆಂದರೆ ಅಧಿಕಶಕ್ತಿ ಇಲ್ಲದಿದ್ದರೆ ಕೂಡುವುದಿಲ್ಲ. ಹೀಗೆ ಅಂತರ ಎಂಬ ಪದದಿಂದ ಈ ಆಧಿಕ್ಯವು ಸ್ಪಷ್ಟವಾಗುತ್ತದೆ.

ತತ್ವಪ್ರಕಾಶಿಕಾ

ಜೀವ-ಬ್ರಹ್ಮ ಇಬ್ಬರಲ್ಲೂ ದೋಷ ಸಮಾನವೆ?

**तत्वप्रकाशिका –**

**यदि यत्किञ्चिद्दोषमात्रेण जीवकर्तृता निराक्रियते तर्हि ब्रह्मणोऽपि कर्तृत्वं न प्राप्नोति । तस्यापि श्रमादिदोषनियमात् । एवं च पक्षयोः साम्येऽनुभवादिसिद्धं जीवकर्तृत्वमेवाश्रयणीयमित्याशङ्कां परिहरत्सूत्रमुपन्यस्य व्याचष्टे – अधिकमिति ।।**

ಒಂದು ವೇಳೆ ಯಾವುದೋ ಒಂದು ದೋಷ ಇರುವ ಮಾತ್ರಕ್ಕೆ ಜೀವನಲ್ಲಿ ಕರ್ತೃತ್ವವನ್ನು ನಿರಾಕರಣೆ ಮಾಡುವುದಾದರೆ ಬ್ರಹ್ಮನಲ್ಲೂ ಕೂಡ ಕರ್ತೃತ್ವವು ಬರುವುದಿಲ್ಲ. ಅವನಲ್ಲೂ ಶ್ರಮಾದಿದೋಷಗಳು ಪ್ರಾಪ್ತವಾಗುತ್ತವೆ. ಆದ್ದರಿಂದ ಜೀವಪಕ್ಷ ಹಾಗೂ ಬ್ರಹ್ಮಪಕ್ಷಗಳಲ್ಲಿ ದೋಷವು ಸಮಾನವಾದಂತಾಯಿತು. ಹೀಗಿರುವಾಗ ನಮ್ಮ ಅನುಭವಕ್ಕೆ ಅನುಗುಣವಾಗಿ ಜೀವನಲ್ಲೇ ಕರ್ತೃತ್ವವನ್ನು ಆಶ್ರಯಿಸಬೇಕು. ಈ ಆಶಂಕೆಯನ್ನು ಪರಿಹಾರ ಮಾಡುವ ಸೂತ್ರವನ್ನು ಪಠಿಸಿ 'ಅಧಿಕಂ ತು' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಹಿತಾಕರಣ ಅಹಿತಕರಣ ದೋಷಗಳಿರುವುದರಿಂದ ಜೀವನಲ್ಲಿ ಕರ್ತೃತ್ವವನ್ನು ಒಪ್ಪಬಾರದೆಂದು ಸಮರ್ಥಿಸಲಾಯಿತು. ಹಾಗಾದರೆ ಬ್ರಹ್ಮನಲ್ಲೂ ಕೂಡ ಕರ್ತೃತ್ವವನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಯಾರಲ್ಲಿ ಕರ್ತೃತ್ವವಿರುತ್ತದೊ ಅವರಲ್ಲಿ ಶ್ರಮಾದಿದೋಷಗಳು ನಿಯಮೇನ ಇದ್ದೇ ಇರುತ್ತವೆ. ಆದ್ದರಿಂದ ಜೀವನಲ್ಲಿ ಹಿತಾಕರಣ, ಅಹಿತಕರಣ ದೋಷಗಳಿರುವುದರಿಂದ ಕರ್ತೃತ್ವವನ್ನು ಒಪ್ಪಲು ಸಾಧ್ಯವಿಲ್ಲವೆಂಬುದು ಹೇಗೋ ಅದರಂತೆ ಬ್ರಹ್ಮನಲ್ಲೂ ಕೂಡ ಶ್ರಮಾದಿ ದೋಷಗಳಿರುವುದರಿಂದ ಕರ್ತೃತ್ವವನ್ನು ಒಪ್ಪಲು ಆಗುವುದಿಲ್ಲ ಎಂಬುದು ಸಮಾನವಾಗಿದೆ. ಹೀಗಿರುವಾಗ ಅನುಭವಸಿದ್ಧವಾದ ಜೀವಕರ್ತೃತ್ವಪಕ್ಷವನ್ನೇ ಆಶ್ರಯಿಸುವುದು ಸಮಂಜಸವಾಗುತ್ತದೆ. ಈ ಆಶಂಕೆಯ ಪರಿಹಾರಕ್ಕಾಗಿ 'ಅಧಿಕಂತು ಭೇದನಿರ್ದೇಶಾತ್' ಎಂಬ ಸೂತ್ರವು ಹೊರಟಿದೆ.

## ಸೂತ್ರದಲ್ಲಿರುವ 'ತು' ಶಬ್ದದ ವ್ಯಾಖ್ಯಾನ

**तत्वप्रकाशिका – तुशब्दः साम्यव्यावर्तकः । भवेद् ब्रह्मप्रतिबन्धा जीवस्य कर्तृत्वसमर्थनम् । यदि ब्रह्मणि श्रमचिन्तासाधनस्मरणदुःखादिदोषा भवेयुः । न च ते तत्र सन्ति । श्रुतिषु तस्य सर्वेभ्योऽखिलश्रोतृत्वान्तर्यामि विशनायाद्यतीततत्वाद्यतिशयस्य निर्देशात् । न ह्येवं विधस्य ते दोषाः शङ्कितुमपि शक्यन्त इति भावः ।। २३ ।।**

ಸೂತ್ರದಲ್ಲಿರುವ ತು ಶಬ್ದವು ಜೀವಪಕ್ಷ ಹಾಗೂ ಬ್ರಹ್ಮಪಕ್ಷಗಳಲ್ಲಿ ದೋಷಸಾಮ್ಯವನ್ನು ವ್ಯಾವೃತ್ತಿ ಮಾಡುತ್ತಿದೆ. ಬ್ರಹ್ಮಪ್ರತಿಬಂಧಿಯಿಂದ ಜೀವನಿಗೆ ಕರ್ತೃತ್ವವನ್ನು ಸಮರ್ಥಿಸಬಹುದಿತ್ತು. ಒಂದು ವೇಳೆ ಬ್ರಹ್ಮನಲ್ಲಿ ಶ್ರಮ, ಚಿಂತೆ ಇವುಗಳಿಂದ ಉಂಟಾಗುವ ದುಃಖಾದಿದೋಷಗಳು ಇದ್ದಿದ್ದರೆ ಆಗ ಬ್ರಹ್ಮನ ಪ್ರತಿಬಂಧಿಯಿಂದ ಜೀವನ ಕರ್ತೃತ್ವವನ್ನು ಸಮರ್ಥಿಸಬಹುದಿತ್ತು. ಆದರೆ ಬ್ರಹ್ಮನಲ್ಲಿ ಶ್ರಮಾದಿ ದೋಷಗಳು ಇರಲು ಸಾಧ್ಯವಿಲ್ಲ. ಏಕೆಂದರೆ ಎಲ್ಲಾ ಶ್ರುತಿಗಳಲ್ಲಿ ಬ್ರಹ್ಮನಿಗೆ ಅಖಿಲಶ್ರೋತೃತ್ವ ಅಂತರ್ಯಾಮಿತ್ವ. ಈ ಧರ್ಮಗಳು ಉಳಿದವರೆಲ್ಲರಿಗಿಂತಲೂ ಅತ್ಯತಿಶಯವಾಗಿದೆ ಎಂದು ಹೇಳಲ್ಪಟ್ಟಿದೆ. ಇಂಥ ಗುಣವುಳ್ಳ ಬ್ರಹ್ಮನಲ್ಲಿ ಸ್ಮರಣೆ, ದುಃಖ ಮೊದಲಾದ ದೋಷಗಳನ್ನು ಶಂಕೆ ಮಾಡಲು ಕೂಡ ಸಾಧ್ಯವಿಲ್ಲ.

ವಿವರಣೆ - 'ನ ಚ ಬ್ರಹ್ಮಣಃ ಶ್ರಮಚಿಂತಾದಿದೋಷಪ್ರಾಪ್ತಿಃ' ಎಂಬುದಾಗಿ ಬ್ರಹ್ಮನಲ್ಲಿ ಶ್ರಮ ಚಿಂತೆ ಮೊದಲಾದ ದೊಷಗಳಿಗೆ ಅವಕಾಶ ಇಲ್ಲವೆಂದು ಹೇಳಿರುವರು. ಈ ವಿಷಯವು ಸೂತ್ರಕಾರರಿಗೆ ಹೇಗೆ ಸಮ್ಮತ ? ಎಂಬ ಪ್ರಶ್ನೆಗೆ ಟೀಕೆಯಲ್ಲಿ 'ತು ಶಬ್ದಃ ಸಾಮ್ಯವ್ಯಾವರ್ತಕಃ' ಎಂಬುದಾಗಿ ಉತ್ತರಿಸುತ್ತಿದ್ದಾರೆ. ಸೂತ್ರದಲ್ಲಿರುವ ತು ಶಬ್ದವು ಜೀವನಲ್ಲಿರುವ ಶ್ರಮ ಚಿಂತಾದಿ ದೋಷಗಳು ಬ್ರಹ್ಮನಲ್ಲಿ ಇರುವುದಿಲ್ಲ ಎಂದು ಸೂಚನೆ ಮಾಡುತ್ತಿದೆ. ಆದ್ದರಿಂದ ಜೀವರಂತೆ ಬ್ರಹ್ಮನಲ್ಲೂ ಕೂಡ ಆಕ್ಷೇಪವು ಸಮಾನವೆಂದು ಹೇಳಬಾರದು.

ಚಿಂತೆಗೆ ಕಾರಣವಾದ ಸ್ಮರಣೆ ಮೊದಲಾದ ದೋಷಗಳು ಸರ್ವಜ್ಞನಲ್ಲಿ ಯುಕ್ತವಾಗುವುದಿಲ್ಲ. ದುಃಖವೆಂಬ ದೋಷವಿದ್ದರೆ ಆನಂದೋದ್ರೇಕದಿಂದ ಸರ್ವನಿಯಾಮಕತ್ವ ಮೊದಲಾದ ಯುಕ್ತಿಗಳು ಕೂಡುವುದಿಲ್ಲ. ಬ್ರಹ್ಮನಲ್ಲಿ ಅಖಿಲಶ್ರೋತೃತ್ವ, ಅಂತರ್ಯಾಮಿತ್ವ, ಮೊದಲಾದ ಗುಣಗಳನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿರುವುದರಿಂದ ದೋಷಗಳನ್ನು ಶಂಕೆ ಮಾಡಲೂ ಕೂಡ ಸಾಧ್ಯವಿಲ್ಲ ಎಂಬುದು ಟೀಕೆಯ ಅಭಿಪ್ರಾಯ.

### ಭಾವದೀಪ

#### ಭಾಷ್ಯದಲ್ಲಿ ಹೇಳಿದ ಅರ್ಥವು ಉತ್ಸೂತ್ರಿತವಲ್ಲ.

**भावदीपः –** ॥ अधिकं तु भेदनिर्देशात् ॥ २३ ॥ सौत्रतुशब्दव्यावर्त्यं व्यञ्जयन्नवतारयति। यदि यत्किञ्चिदिति। न च ब्रह्मणः श्रमचिन्तादिदोषप्राप्तिरिति भाष्यमुत्सूत्रमिति भ्रमनिरासायाह – **तुशब्द इति।** एतमेवार्थं भाष्यविवरणेन व्यनक्ति। भवेदिति। आदिपदार्थोक्तिः साधनेत्यादि। आत्मेत्यस्यार्थ अन्तर्यामित्वेति॥ २३ ॥

ಸೂತ್ರದಲ್ಲಿರುವ 'ತು'ಶಬ್ದದಿಂದ ಪರಿಹಾರವಾಗುವ ಆಕ್ಷೇಪವನ್ನು ಸ್ಪಷ್ಟಪಡಿಸುವ ಮೂಲಕ ಸೂತ್ರಕ್ಕೆ ಅವತಾರಿಕೆ ನೀಡಲು 'ಯದಿ ಯತ್ಕಿಂಚಿತ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ಟೀಕೆಯಲ್ಲಿ ಬ್ರಹ್ಮನಿಗೆ ಶ್ರಮ, ಚಿಂತೆ ಮೊದಲಾದ ದೋಷಗಳನ್ನು ಆಕ್ಷೇಪ ಮಾಡಲಾಗಿದೆ. ಇದು ಉತ್ಸೂತ್ರಿತವಾಗಿದೆಯಲ್ಲವೇ? ಎಂಬ ಭ್ರಾಂತಿಯ ನಿರಾಸಕ್ಕೋಸ್ಕರ 'ತು ಶಬ್ದಃ ಸಾಮ್ಯವ್ಯಾವರ್ತಕಃ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದೇ ಅರ್ಥವನ್ನು ಭಾಷ್ಯವನ್ನು ವಿವರಿಸುವುದರ ಮೂಲಕ ಸ್ಪಷ್ಟಪಡಿಸಲು 'ಭವೇತ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಭಾಷ್ಯದಲ್ಲಿ 'ಶ್ರಮಚಿಂತಾದಿ ದೋಷಪ್ರಾಪ್ತಿಃ' ಎಂದು ಹೇಳಿದ್ದಾರೆ. ಇಲ್ಲಿರುವ ಆದಿಪದದಿಂದ ಸಾಧನಸ್ಮರಣದುಃಖಾದಿ ದೋಷಗಳನ್ನು ವಿವಕ್ಷಿಸಬೇಕೆಂದು ಟೀಕೆಯಲ್ಲಿ ತಿಳಿಸಿರುತ್ತಾರೆ. ಭಾಷ್ಯದಲ್ಲಿರುವ 'ಆತ್ಮ' ಎಂಬ ಶಬ್ದದ ಅರ್ಥವನ್ನು ಟೀಕೆಯಲ್ಲಿ 'ಅಂತರ್ಯಾಮಿತ್ವ' ಎಂಬ ಪದದಿಂದ ಹೇಳಿದ್ದಾರೆ.

### ಬ್ರಹ್ಮಸೂತ್ರ

#### 'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – अश्मादिवच्च तदनुपपत्तिः ॥**

ಜೀವನು ಚೇತನನಾಗಿದ್ದರೂ ಸ್ವತಂತ್ರಕರ್ತೃವಲ್ಲ. ಏಕೆಂದರೆ ಜಡವಾದ ಕಲ್ಲಿನಂತೆ ಅಸ್ವತಂತ್ರನಾಗಿದ್ದಾನೆ.

ಅರ್ಥ -- 'ಚ' ಶಬ್ದವು 'ಅಪಿ' ಶಬ್ದದ ಅರ್ಥದಲ್ಲಿದೆ. 'ಅಶ್ಮಾದಿವತ್' ಜಡವಾದ ಕಲ್ಲಿನಂತೆ ಜೀವನು ಚೇತನನಾಗಿದ್ದರೂ, ತದನುಪಪತ್ತಿಃ = ಅಸ್ವತಂತ್ರನಾದ್ದರಿಂದ ಸ್ವತಂತ್ರಕರ್ತೃತ್ವವು ಇರುವುದಿಲ್ಲ.

ಬ್ರಹ್ಮಸೂತ್ರಭಾಷ್ಯ

ಜೀವನಲ್ಲಿ ಅಸ್ವಾತಂತ್ರ್ಯವೇ ಇದೆ

**ब्रह्मसूत्रभाष्यम् – ।। अश्मादिवच्च तदनुपपत्तिः ।।३।।**

**चेतनत्वेऽप्यश्मादिवदस्वतन्त्रत्वात् स्वतः कर्तृत्वानुपपत्तिर्जीवस्य ।**

ಅನುವಾದ - ಪರಮಾತ್ಮನು ಹೇಗೆ ಚೇತನನಾಗಿದ್ದಾನೋ ಅದರಂತೆ ಜೀವಾತ್ಮನೂ ಕೂಡ ಚೇತನನಾಗಿದ್ದಾನೆ. ಜೀವನಿಗೆ ಕಲ್ಲಿನಂತೆ ಅಸ್ವಾತಂತ್ರ್ಯವಿದೆ. ಸ್ವತಂತ್ರಕರ್ತೃತ್ವವು ಇರುವುದಿಲ್ಲ.

ಪ್ರತಿಪದಾರ್ಥ -- ಚೇತನನಾದ್ದರಿಂದ ಪರಮಾತ್ಮನು ಹೇಗೆ ಮತ್ತೊಂದರ ಅಪೇಕ್ಷೆ ಇಲ್ಲದವನಾಗಿದ್ದಾನೊ, ಅದರಂತೆ ಜೀವನೂ ಕೂಡ ಮತ್ತೊಂದರ ಅಪೇಕ್ಷೆ ಇಲ್ಲದವನಾಗಿದ್ದಾನೆ. ಆದ್ದರಿಂದ ಏಕೆ ಕರ್ತೃವಾಗಬಾರದು ? ಎಂಬ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. ಜೀವಸ್ಯ = ಜೀವನಿಗೆ, ಚೇತನತ್ವೇऽಪಿ = ಚೈತನ್ಯವಿದ್ದರೂ, ಅಶ್ಮಾದಿವತ್ = ಕಲ್ಲು ಮೊದಲಾದ ಜಡಪದಾರ್ಥಗಳಂತೆ, ಅಸ್ವತಂತ್ರತ್ವಾತ್ = ಸ್ವತಂತ್ರ್ಯವಿಲ್ಲದ ಕಾರಣ ಸ್ವತಃ ಮತ್ತೊಂದರ ಅಪೇಕ್ಷೆಯಿಲ್ಲದೆ, ಕರ್ತೃತ್ವಾನುಪಪತ್ತಿಃ = ಕರ್ತೃತ್ವವು ಕೂಡುವುದಿಲ್ಲ.

ಬೊಂಬೆಯಂತೆ ಜೀವ

**ब्रह्मसूत्रभाष्यम् –**

**यथा दारुमयीं योषां नरः स्थिरसमाहितः ।**
**इङ्गयत्यङ्गमङ्गानि तथा राजन्निमाः प्रजाः ।। इति च भारते ।।३।।**

ಅನುವಾದ - ಮಹಾಭಾರತದಲ್ಲಿ ಜೀವನಿಗೆ ಕರ್ತೃತ್ವವಿಲ್ಲವೆಂದು ಸಾಧಿಸಲಾಗಿದೆ-

ಎಲೈ ಜನಮೇಜಯರಾಜನೇ! ಏಕಾಗ್ರತೆಯನ್ನು ಹೊಂದಿ ಒಬ್ಬ ವ್ಯಕ್ತಿಯು ಮರದ ಹೆಣ್ಣುಗೊಂಬೆಯನ್ನು ಹೇಗೆ ಕುಣಿಸುತ್ತಾನೋ ಅಥವಾ ತನ್ನ ಇಚ್ಛೆ ಬಂದಂತೆ ಕೈಕಾಲುಗಳನ್ನು ಅಲ್ಲಾಡಿಸುತ್ತಾನೋ ಅದರಂತೆ ಪರಮಾತ್ಮನು ಎಲ್ಲಾ ಜೀವರನ್ನು ನಿಯಂತ್ರಣ ಮಾಡುತ್ತಾನೆ.

ಪ್ರತಿಪದಾರ್ಥ -- ಅಸ್ವಾತಂತ್ರ್ಯವೆಂಬ ಹೇತುವಿಗೆ ಅಸಿದ್ಧಿಯನ್ನು ಆಶಂಕಿಸುತ್ತಿದ್ದಾರೆ. ರಾಜನ್ = ಜನಮೇಜಯರಾಜನೇ! ಯಥಾ = ಯಾವ ರೀತಿಯಾಗಿ, ಸ್ಥಿರಸಮಾಹಿತಃ = ಚಾಂಚಲ್ಯವನ್ನು ಬಿಟ್ಟು ಮನಸ್ಸಿನ ಏಕಾಗ್ರತೆಯಿಂದ ತಾನು ಮಾಡುವ ಕಾರ್ಯದಲ್ಲಿ ತೀವ್ರ ಮನಸ್ಸುಳ್ಳವನಾದ, ನರಃ = ಮನುಷ್ಯನು, ದಾರುಮಯೀಂ ಯೋಷಾಂ = ಮರದ ಹೆಣ್ಣುಪ್ರತಿಮೆಯನ್ನು, ಇಂಗಯತಿ = ಕುಣಿಸುತ್ತಾನೋ, ಯಥಾ = ಯಾವ ರೀತಿಯಾಗಿ, ನರಂ = ಮನುಷ್ಯನು, ಅಂಗಂ = ತನ್ನ ಕೈಕಾಲುಗಳನ್ನು, ಅಂಗಾನಿ = ಬೆರಳು ಮೊದಲಾದವುಗಳನ್ನು, ಇಂಗಯತಿ = ಅಲುಗಾಡಿಸುತ್ತಾನೋ, ತಥಾ = ಅದೇ ರೀತಿಯಾಗಿ, ಇಮಾಃ = ಈ ಎಲ್ಲ ಜನರನ್ನು, ಭಗವಾನ್ = ಪರಮಾತ್ಮನು, ಇಂಗಯತಿ = ನಿಯಂತ್ರಿಸುತ್ತಾನೆ.

### ಸತ್ತರ್ಕದೀಪಾವಳಿ

### ಜೀವಾಸ್ವಾತಂತ್ರ್ಯದಲ್ಲಿ ದಾರ್ಢ್ಯ

**सत्तर्कदीपावळिः – जीवास्वातन्त्र्यं यदुक्तं दृढीकरोति – अश्मादिवत् इत्यादिना ।। चेतनप्रेरिताचेतनदृष्टान्तेन जीवानाम् ईशप्रेर्यत्वे प्रमाणमाह – यथेति ।। नरो यथा दारुमयीं योषां नियमति । तदङ्गानि च इङ्गयति तथा हरिः इङ्गयति इमाः प्रजाः इत्यर्थः ।।**

ಜೀವನಲ್ಲಿ ಈ ಹಿಂದೆ ಅಸ್ವಾತಂತ್ರ್ಯವನ್ನು ಉಪಪಾದನೆ ಮಾಡಲಾಯಿತು. ಅದನ್ನೇ ದೃಢಪಡಿಸಲು 'ಅಶ್ಮಾದಿವಚ್ಚ' ಇತ್ಯಾದಿ ಸೂತ್ರವು ಹೊರಟಿದೆ. ಅಚೇತನವಾದ ಗೊಂಬೆಯು ಚೇತನನಿಂದ ಪ್ರೇರಿತವಾಗುತ್ತದೆ. ಅದರಂತೆ ಜೀವರುಗಳು ಈಶ್ವರನಿಂದ ಪ್ರೇರಿತರಾಗಿದ್ದಾರೆ. ಈ ವಿಷಯದಲ್ಲಿ ಪ್ರಮಾಣವನ್ನು 'ಯಥಾ' ಇತ್ಯಾದಿಯಾಗಿ ಉಲ್ಲೇಖ ಮಾಡುತ್ತಿದ್ದಾರೆ. ಮನುಷ್ಯನು ಹೇಗೆ ಮರದ ಹೆಣ್ಣು ಬೊಂಬೆಯನ್ನು ನಿಯಮನ ಮಾಡುತ್ತಾನೋ, ಅದರಂತೆ ಪರಮಾತ್ಮನು ಸಕಲಜೀವರನ್ನು ನಿಯಮನ ಮಾಡುತ್ತಾನೆ. ಆ ಮರದ ಹೆಣ್ಣು ಬೊಂಬೆಯಲ್ಲಿರುವ ಮನುಷ್ಯನು ತನ್ನ ಕೈಕಾಲುಗಳನ್ನು ಅಲುಗಾಡಿಸಿದಾಗ ಆ ಗೊಂಬೆಯೂ ಕೂಡ ಅಲುಗಾಡುತ್ತದೆ. ಅದರಂತೆ ಶ್ರೀಹರಿಯು ಈ ಎಲ್ಲ ಪ್ರಜೆಗಳನ್ನು ನಿಯಂತ್ರಣ ಮಾಡುತ್ತಾನೆ.

## ತತ್ವಪ್ರದೀಪ

### ಜೀವರುಗಳಲ್ಲಿ ಸ್ವಲ್ಪವೂ ಕರ್ತೃತ್ವವಿಲ್ಲ

**तत्वप्रदीपः – ननु यदश्मादीनां कर्तृत्वविरोध्यचेतनत्वं न तत् जीवानामस्ति । तस्माद् वैलक्षण्यात् तेभ्योऽधिकशक्तित्वात् कर्तृत्वं च स्यात्, इत्यत आह – अश्मादिवच्च तदनुपपत्तिः ।। यद्यपि 'चेतनत्वविशेषस्तथाऽपि पारतन्त्र्ये न कश्चिद्विशेषः' इत्यभिप्रेत्य अश्मदार्वादिकमुदाहरन् । अश्मादिवदल्पमपि न स्वतः कर्तृत्वम् । किं पुनर्जगद्विषयमिति ।**

ಕಲ್ಲು ಮೊದಲಾದವುಗಳಲ್ಲಿ ಕರ್ತೃತ್ವಕ್ಕೆ ವಿರೋಧಿಯಾದ ಅಚೇತನತ್ವವಿದೆ. ಇಂಥ ಅಚೇತನ್ವವು ಜೀವರುಗಳಿಗೆ ಇರುವುದಿಲ್ಲ. ಹೀಗೆ ಜಡಪದಾರ್ಥಗಳಿಗಿಂತ ವೈಲಕ್ಷಣ್ಯವು ಜೀವರುಗಳಿಗೆ ಇದೆ. ಜಡಪದಾರ್ಥಗಳಿಗಿಂತ ಅಧಿಕಶಕ್ತಿಯು ಇರುವ ಕಾರಣ ಕರ್ತೃತ್ವವು ಬರಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಲು 'ಅಶ್ಮಾದಿವಚ್ಚ ತದನುಪಪತ್ತಿಃ' ಇತ್ಯಾದಿ ಭಾಷ್ಯ ವಾಕ್ಯವು ಹೊರಟಿದೆ.

ವಾಸ್ತವಿಕವಾಗಿ ಜೀವರುಗಳಲ್ಲಿ ಚೇತನತ್ವವೆಂಬ ವೈಶಿಷ್ಟ್ಯವಿದೆ. ಜಡಪದಾರ್ಥಗಳಲ್ಲಿ ಈ ಚೇತನತ್ವವು ಇರುವುದಿಲ್ಲ. ಆದರೂ ಕೂಡ ಪಾರತಂತ್ರ್ಯವಿಷಯದಲ್ಲಿ ಜೀವ ಹಾಗೂ ಜಡಪದಾರ್ಥಗಳಲ್ಲಿ ಯಾವುದೇ ವೈಲಕ್ಷಣ್ಯವಿಲ್ಲ. ಈ ಅಭಿಪ್ರಾಯದಿಂದ ಅಶ್ಮಾದಿಗಳ ದೃಷ್ಟಾಂತವನ್ನು ಹೇಳಿರುತ್ತಾರೆ.

ಸೂತ್ರಕ್ಕೆ ಹೀಗೂ ಅರ್ಥ ಮಾಡಬಹುದು - ಅಶ್ಮಾದಿಗಳಂತೆ ಸ್ವಲ್ಪವೂ ಕೂಡ ಸ್ವತಃ ಕರ್ತೃತ್ವವು ಜೀವರುಗಳಲ್ಲಿ ಇರುವುದಿಲ್ಲ. ಹೀಗಿರುವಾಗ ಸಮಸ್ತ ಜಗದ್ವಿಷಯಕವಾದ ಕರ್ತೃತ್ವ ಬರುವುದು ಹೇಗೆ ಸಾಧ್ಯವಾಗುತ್ತದೆ ?

### ಅಸ್ವಾತಂತ್ರ್ಯವೆಂಬ ಹೇತುವಿಗೆ ಅಸಿದ್ಧಿದೋಷವಿಲ್ಲ

**तत्वप्रदीपः – समाहितम् = समाधानम् । 'नपुंसके भावे क्तः' इति सूत्राद् भावेऽपि क्तप्रत्ययदर्शनात् । स्थिरसमाधान इत्यर्थः । अङ्गं = हस्तादि,**

**अङ्गानि = अङ्गुल्यादीनि । न चास्वतन्त्र्याद् इत्यसिद्धो हेतुः । हिताकरणादिना साधितत्वात् । आनुभविकत्वाच्च सर्वस्य ।।**

'ಸಮಾಹಿತ' ಶಬ್ದಕ್ಕೆ 'ಸಮಾಧಾನ' ಎಂದರ್ಥ. 'ನಪುಂಸಕೇ ಭಾವೇ ಕ್ತಃ' ಎಂಬ ಸೂತ್ರದಿಂದ ಭಾವಾರ್ಥದಲ್ಲೂ ಕೂಡ 'ಕ್ತ' ಪ್ರತ್ಯಯ ಬರುವುದು ಕಂಡಿದೆ. ಸ್ಥಿರಸಮಾಧಾನವುಳ್ಳವನು ಎಂಬುದು ಇದರ ಅರ್ಥ. (ಮನಸ್ಸಿನಲ್ಲಿ ಚಾಂಚಲ್ಯವನ್ನು ಬಿಟ್ಟು ಸಮಾಧಾನಚಿತ್ತದಿಂದ ಮರದ ಬೊಂಬೆಯನ್ನು ಚಾಲನೆ ಮಾಡಿದಾಗ ಎಂಬುದು ಇದರ ಅಭಿಪ್ರಾಯ.) 'ಅಂಗ' ಶಬ್ದದಿಂದ ಹಸ್ತಾದಿಗಳನ್ನು, 'ಅಂಗಾನಿ' ಎಂಬ ಶಬ್ದದಿಂದ ಬೆರಳು ಮೊದಲಾದವುಗಳನ್ನು ವಿವಕ್ಷಿಸಬೇಕು. ಅಸ್ವತಂತ್ರತ್ವ ಎಂಬ ಹೇತುವಿನಿಂದ ಸ್ವಾಭಾವಿಕ ಕರ್ತೃತ್ವವಿಲ್ಲವೆಂದು ಸಾಧನೆ ಮಾಡಲಾಗಿದೆ. ಆದರೆ ಈ ಹೇತುವೇ ಅಸಿದ್ಧವಾಗಿದೆ ಅಲ್ಲವೇ? ಎಂದು ಪ್ರಶ್ನಿಸಬಾರದು. ಹಿತಾಕರಣಾದಿಹೇತುಗಳಿಂದ ಈ ಹಿಂದೆ ಅಸ್ವಾತಂತ್ರ್ಯವನ್ನು ಜೀವರುಗಳಲ್ಲಿ ಸಾಧನೆ ಮಾಡಿದ್ದಾಗಿದೆ. ಅಷ್ಟೇ ಅಲ್ಲದೇ ಸಕಲ ಜೀವರುಗಳಿಗೂ ತಾವು ಅಸ್ವತಂತ್ರರಾಗಿದ್ದೇವೆ ಎಂಬ ಅನುಭವವೂ ಕೂಡ ಇರುತ್ತದೆ. ಆದ್ದರಿಂದ ಹೇತ್ವಸಿದ್ಧಿಗೆ ಅವಕಾಶವಿಲ್ಲ.

### ತತ್ತ್ವಪ್ರಕಾಶಿಕಾ

ಅನುಮಾನದಿಂದ ಜೀವನಿಗೆ ಸ್ವತಂತ್ರಕರ್ತೃತ್ವದ ಪ್ರತಿಪಾದನೆ-ಹಾಗೂ ನಿರಾಕರಣೆ

**तत्वप्रकाशिका – अथापि जीवोऽन्यनिरपेक्षतया कर्ता चेतनत्वादीश्वरवदिति किं न स्यात्। न चेश्वराभ्युपगमानभ्युपगमाभ्यां विरोधः । परसिद्धेनैव न्यायेन परस्य बोधनादित्याशङ्कां परिहरत्सूत्रमुपन्यस्य व्याचष्टे – अस्मादिवच्चेति ।।**

ಆದರೂ ಅಧಿಕ ಆಕ್ಷೇಪಕ್ಕೆ ಅವಕಾಶವಿದೆ - ಮತ್ತೊಬ್ಬರ ಅಪೇಕ್ಷೆಯನ್ನು ಹೊಂದಿದ ಜೀವನು ಕರ್ತೃವಾಗಿದ್ದಾನೆಂದು 'ಜೀವಃ ಅನ್ಯನಿರಪೇಕ್ಷತಯಾ ಕರ್ತಾ, ಚೇತನತ್ವಾತ್ ಈಶ್ವರವತ್' ಈಶ್ವರನು ಚೇತನನಾಗಿದ್ದಾನೆ. ಹಾಗೂ ಮತ್ತೊಬ್ಬರನ್ನು ಅಪೇಕ್ಷೆ ಪಡದೆ ಸ್ವತಂತ್ರವಾಗಿ ಕರ್ತೃ ಆಗಿದ್ದಾನೆ. ಅದರಂತೆ ಜೀವನು ಚೇತನನಾಗಿದ್ದರಿಂದ ಅನ್ಯನಿರಪೇಕ್ಷನಾಗಿ

## ತತ್ತ್ವಪ್ರದೀಪ

### ಜೀವರುಗಳಲ್ಲಿ ಸ್ವಲ್ಪವೂ ಕರ್ತೃತ್ವವಿಲ್ಲ

**तत्वप्रदीपः – ननु यदश्मादीनां कर्तृत्वविरोध्यचेतनत्वं न तत् जीवानामस्ति । तस्माद् वैलक्षण्यात् तेभ्योऽधिकशक्तित्वात् कर्तृत्वं च स्यात्, इत्यत आह – अश्मादिवच्च तदनुपपत्तिः ।। यद्यपि 'चेतनत्वविशेषस्तथाऽपि पारतन्त्र्ये न कश्चिद्विशेषः' इत्यभिप्रेत्य अश्मदार्वादिकमुदाहरन् । अश्मादिवदल्पमपि न स्वतः कर्तृत्वम् । किं पुनर्जगद्विषयमिति ।**

ಕಲ್ಲು ಮೊದಲಾದವುಗಳಲ್ಲಿ ಕರ್ತೃತ್ವಕ್ಕೆ ವಿರೋಧಿಯಾದ ಅಚೇತನತ್ವವಿದೆ. ಇಂಥ ಅಚೇತನ್ವವು ಜೀವರುಗಳಿಗೆ ಇರುವುದಿಲ್ಲ. ಹೀಗೆ ಜಡಪದಾರ್ಥಗಳಿಗಿಂತ ವೈಲಕ್ಷಣ್ಯವು ಜೀವರುಗಳಿಗೆ ಇದೆ. ಜಡಪದಾರ್ಥಗಳಿಗಿಂತ ಅಧಿಕಶಕ್ತಿಯು ಇರುವ ಕಾರಣ ಕರ್ತೃತ್ವವು ಬರಬಹುದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಲು 'ಅಶ್ಮಾದಿವಚ್ಚ ತದನುಪಪತ್ತಿಃ' ಇತ್ಯಾದಿ ಭಾಷ್ಯ ವಾಕ್ಯವು ಹೊರಟಿದೆ.

ವಾಸ್ತವಿಕವಾಗಿ ಜೀವರುಗಳಲ್ಲಿ ಚೇತನತ್ವವೆಂಬ ವೈಶಿಷ್ಟ್ಯವಿದೆ. ಜಡಪದಾರ್ಥಗಳಲ್ಲಿ ಈ ಚೇತನತ್ವವು ಇರುವುದಿಲ್ಲ. ಆದರೂ ಕೂಡ ಪಾರತಂತ್ರ್ಯವಿಷಯದಲ್ಲಿ ಜೀವ ಹಾಗೂ ಜಡಪದಾರ್ಥಗಳಲ್ಲಿ ಯಾವುದೇ ವೈಲಕ್ಷಣ್ಯವಿಲ್ಲ. ಈ ಅಭಿಪ್ರಾಯದಿಂದ ಅಶ್ಮಾದಿಗಳ ದೃಷ್ಟಾಂತವನ್ನು ಹೇಳಿರುತ್ತಾರೆ.

ಸೂತ್ರಕ್ಕೆ ಹೀಗೂ ಅರ್ಥ ಮಾಡಬಹುದು - ಅಶ್ಮಾದಿಗಳಂತೆ ಸ್ವಲ್ಪವೂ ಕೂಡ ಸ್ವತಃ ಕರ್ತೃತ್ವವು ಜೀವರುಗಳಲ್ಲಿ ಇರುವುದಿಲ್ಲ. ಹೀಗಿರುವಾಗ ಸಮಸ್ತ ಜಗದ್ವಿಷಯಕವಾದ ಕರ್ತೃತ್ವ ಬರುವುದು ಹೇಗೆ ಸಾಧ್ಯವಾಗುತ್ತದೆ ?

### ಅಸ್ವಾತಂತ್ರ್ಯವೆಂಬ ಹೇತುವಿಗೆ ಅಸಿದ್ಧಿದೋಷವಿಲ್ಲ

**तत्वप्रदीपः – समाहितम् = समाधानम् । 'नपुंसके भावे क्तः' इति सूत्राद् भावेऽपि क्तप्रत्ययदर्शनात् । स्थिरसमाधान इत्यर्थः । अङ्गं = हस्तादि,**

**अङ्गानि = अङ्गुल्यादीनि । न चास्वतन्त्र्याद् इत्यसिद्धो हेतुः । हिताकरणादिना साधितत्वात् । आनुभविकत्वाच्च सर्वस्य ।।**

'ಸಮಾಹಿತ' ಶಬ್ದಕ್ಕೆ 'ಸಮಾಧಾನ' ಎಂದರ್ಥ. 'ನಪುಂಸಕೇ ಭಾವೇ ಕ್ತಃ' ಎಂಬ ಸೂತ್ರದಿಂದ ಭಾವಾರ್ಥದಲ್ಲೂ ಕೂಡ 'ಕ್ತ' ಪ್ರತ್ಯಯ ಬರುವುದು ಕಂಡಿದೆ. ಸ್ಥಿರಸಮಾಧಾನವುಳ್ಳವನು ಎಂಬುದು ಇದರ ಅರ್ಥ. (ಮನಸ್ಸಿನಲ್ಲಿ ಚಾಂಚಲ್ಯವನ್ನು ಬಿಟ್ಟು ಸಮಾಧಾನಚಿತ್ತದಿಂದ ಮರದ ಬೊಂಬೆಯನ್ನು ಚಾಲನೆ ಮಾಡಿದಾಗ ಎಂಬುದು ಇದರ ಅಭಿಪ್ರಾಯ.) 'ಅಂಗ' ಶಬ್ದದಿಂದ ಹಸ್ತಾದಿಗಳನ್ನು, 'ಅಂಗಾನಿ' ಎಂಬ ಶಬ್ದದಿಂದ ಬೆರಳು ಮೊದಲಾದವುಗಳನ್ನು ವಿವಕ್ಷಿಸಬೇಕು. ಅಸ್ವತಂತ್ರತ್ವ ಎಂಬ ಹೇತುವಿನಿಂದ ಸ್ವಾಭಾವಿಕ ಕರ್ತೃತ್ವವಿಲ್ಲವೆಂದು ಸಾಧನೆ ಮಾಡಲಾಗಿದೆ. ಆದರೆ ಈ ಹೇತುವೇ ಅಸಿದ್ಧವಾಗಿದೆ ಅಲ್ಲವೇ? ಎಂದು ಪ್ರಶ್ನಿಸಬಾರದು. ಹಿತಾಕರಣಾದಿಹೇತುಗಳಿಂದ ಈ ಹಿಂದೆ ಅಸ್ವಾತಂತ್ರ್ಯವನ್ನು ಜೀವರುಗಳಲ್ಲಿ ಸಾಧನೆ ಮಾಡಿದ್ದಾಗಿದೆ. ಅಷ್ಟೇ ಅಲ್ಲದೇ ಸಕಲ ಜೀವರುಗಳಿಗೂ ತಾವು ಅಸ್ವತಂತ್ರರಾಗಿದ್ದೇವೆ ಎಂಬ ಅನುಭವವೂ ಕೂಡ ಇರುತ್ತದೆ. ಆದ್ದರಿಂದ ಹೇತ್ವಸಿದ್ಧಿಗೆ ಅವಕಾಶವಿಲ್ಲ.

### ತತ್ವಪ್ರಕಾಶಿಕಾ

### ಅನುಮಾನದಿಂದ ಜೀವನಿಗೆ ಸ್ವತಂತ್ರಕರ್ತೃತ್ವದ ಪ್ರತಿಪಾದನೆ-ಹಾಗೂ ನಿರಾಕರಣೆ

**तत्वप्रकाशिका – अथापि जीवोऽन्यनिरपेक्षतया कर्ता चेतनत्वादीश्वरवदिति किं न स्यात्। न चेश्वराभ्युपगमानभ्युपगमाभ्यां विरोधः । परसिद्धेनैव न्यायेन परस्य बोधनादित्याशङ्कां परिहरत्सूत्रमुपन्यस्य व्याचष्टे – अश्मादिवचेति ।।**

ಆದರೂ ಅಧಿಕ ಆಕ್ಷೇಪಕ್ಕೆ ಅವಕಾಶವಿದೆ - ಮತ್ತೊಬ್ಬರ ಅಪೇಕ್ಷೆಯನ್ನು ಹೊಂದಿದ ಜೀವನು ಕರ್ತೃವಾಗಿದ್ದಾನೆಂದು 'ಜೀವಃ ಅನ್ಯನಿರಪೇಕ್ಷತಯಾ ಕರ್ತಾ, ಚೇತನತ್ವಾತ್ ಈಶ್ವರವತ್' ಈಶ್ವರನು ಚೇತನನಾಗಿದ್ದಾನೆ. ಹಾಗೂ ಮತ್ತೊಬ್ಬರನ್ನು ಅಪೇಕ್ಷೆ ಪಡದೆ ಸ್ವತಂತ್ರವಾಗಿ ಕರ್ತೃ ಆಗಿದ್ದಾನೆ. ಅದರಂತೆ ಜೀವನು ಚೇತನನಾಗಿದ್ದರಿಂದ ಅನ್ಯನಿರಪೇಕ್ಷನಾಗಿ

ಕರ್ತೃ ಆಗಲೇಬೇಕು ಎಂದು ಸಾಧಿಸುತ್ತೇವೆ. ಹೀಗೆ ಅನುಮಾನವನ್ನು ಮಾಡಿದಾಗ ದೃಷ್ಟಾಂತಭೂತನಾದ ಈಶ್ವರನನ್ನು ಒಪ್ಪಿದ್ದರೋ ಒಪ್ಪಿಲ್ಲವೋ? ಎಂಬ ಪ್ರಶ್ನೆಗೆ ಉತ್ತರಿಸಬೇಕಾಗುತ್ತದೆ. ಪರಸಿದ್ಧವಾದ ನ್ಯಾಯದಿಂದಲೇ ಪರನಿಗೆ ಶಂಕೆ ಮಾಡಬಹುದು. ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು 'ಅಷ್ಮಾದಿವಚ್ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಜೀವಃ ಅನ್ಯನಿರಪೇಕ್ಷತಯಾ ಕರ್ತಾ ಚೇತನತ್ವಾತ್ ಈಶ್ವರವತ್' ಎಂಬ ಅನುಮಾನದಲ್ಲಿ ದೃಷ್ಟಾಂತನಾದ ಈಶ್ವರನನ್ನು ಒಪ್ಪಲಾಗಿದೆಯೋ ಅಥವಾ ಒಪ್ಪಿಲ್ಲವೋ? ಎಂಬ ಪ್ರಶ್ನೆ ಪ್ರಾಪ್ತವಾಗುತ್ತದೆ. ಈಶ್ವರನನ್ನು ಒಪ್ಪುತ್ತೇವೆಂದು ಉತ್ತರಿಸಿದರೆ ಅಂತಹ ಈಶ್ವರನು ಸಿದ್ಧವಾಗುವಾಗಲೇ ಸ್ವತಂತ್ರಕರ್ತೃ ಎಂದೇ ಸಿದ್ಧವಾಗುತ್ತಾನೆ. ಆಗ ಜೀವನು ಸ್ವತಂತ್ರಕರ್ತೃ ಎಂದು ನಿಮಗೆ ಸಮರ್ಥಿಸಲು ಬರುವುದಿಲ್ಲ. ಒಂದು ವೇಳೆ ಈಶ್ವರನನ್ನು ಒಪ್ಪದೇ ಹೊದರೆ ಆಗ 'ಈಶ್ವರವತ್' ಎಂಬ ದೃಷ್ಟಾಂತವು ಸಿದ್ಧವಾಗದ ಕಾರಣ ಅನುಮಾನದಿಂದ ಸ್ವತಂತ್ರ ಕರ್ತೃತ್ವವನ್ನು ಜೀವನಲ್ಲಿ ಸಾಧಿಸಲು ಆಗುವುದಿಲ್ಲ. ಹೀಗೆ ಈಶ್ವರನನ್ನು ಒಪ್ಪಿದರೂ ಒಪ್ಪದಿದ್ದರೂ ಜೀವನ ಸ್ವತಂತ್ರಕರ್ತೃತ್ವವು ಸಿದ್ಧವಾಗುವುದಿಲ್ಲ ಎಂಬುದು ಆಕ್ಷೇಪದ ಅಭಿಪ್ರಾಯ.

'ಜೀವಃ ಅನ್ಯನಿರಪೇಕ್ಷತಯಾ ಕರ್ತಾ ಚೇತನತ್ವಾತ್' ಎಂಬುದನ್ನು ಸಾಧನಾನುಮಾನ ಎಂದು ತಿಳಿಯಬಾರದು. 'ಪರಸಿದ್ಧನ್ಯಾಯೇನ' ಎಂಬ ಟೀಕೆಯ ಮಾತಿನಿಂದ ಇದು ದೂಷಣಾನುಮಾನ ಎಂದು ತಿಳಿಯುತ್ತದೆ. 'ಯದಿ ಈಶ್ವರಃ ಅನ್ಯಾನಪೇಕ್ಷಯಾ ಜಗತ್ ಕರ್ತಾ ತರ್ಹಿ ಚೇತನತ್ವಾವಿಶೇಷಾತ್ ಜೀವೋಽಪಿ ತಥೈವ ಜಗತ್‌ಕರ್ತಾ ಸ್ಯಾತ್' 'ಒಂದು ವೇಳೆ ಈಶ್ವರನು ಸ್ವತಂತ್ರವಾಗಿ ಜಗತ್‌ಕರ್ತೃ ಆದರೆ ಚೇತನತ್ವವು ಸಮಾನವಾದ್ದರಿಂದ ಜೀವನೂ ಕೂಡ ಹಾಗೆಯೇ ಜಗತ್‌ಕರ್ತೃ ಆಗಬೇಕಾದೀತು ಎಂಬುದಾಗಿ ಪರಸಿದ್ಧವಾದ ನ್ಯಾಯದಿಂದಲೇ ಪರನನ್ನು ದೂಷಿಸುವ ದೂಷಣಾನುಮಾನವಿದು.

### ಅಸ್ವಾತಂತ್ರ್ಯಹೇತುವಿನಿಂದ ಸ್ವತಂತ್ರಕರ್ತೃತ್ವವಿಲ್ಲವೆಂದು ಸಾಧನೆ

**ತತ್ವಪ್ರಕಾಶಿಕಾ – न चेतनत्वहेतुना जीवस्यान्यानपेक्षकर्तृत्वं साध्यम्। अस्वातन्त्र्येण हेतुना अश्मादिवत्तदभावस्यापि साधयितुं शक्यत्वात् । स्वतन्त्रो ह्यन्यनिरपेक्षः कार्यं करोति चेतनत्वं त्वप्रयोजकमिति भावः । चोऽपि शब्दार्थः।**

ಚೇತನತ್ವ ಎಂಬ ಹೇತುವಿನಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವವನ್ನು ಸಾಧಿಸಲು ಆಗುವುದಿಲ್ಲ. ಜೀವನಲ್ಲಿ ಅಸ್ವಾತಂತ್ರ್ಯ ಎಂಬ ಹೇತುವಿನಿಂದ ಕಲ್ಲು ಮೊದಲಾದವುಗಳಂತೆ ಸ್ವತಂತ್ರಕರ್ತೃತ್ವಾಭಾವವನ್ನು ಸಾಧಿಸಬಹುದು. ಸ್ವತಂತ್ರನಾದವನು ಮತ್ತೊಂದರ ಅಪೇಕ್ಷೆ ಇಲ್ಲದೆ ಕಾರ್ಯವನ್ನು ಮಾಡಲು ಸಮರ್ಥನಾಗುತ್ತಾನೆ. ಚೇತನನಾಗಿರುವಿಕೆಯು ಇದಕ್ಕೆ ಅಪ್ರಯೋಜಕವೆಂದು ತಿಳಿಯಬೇಕು. ಸೂತ್ರದಲ್ಲಿರುವ ಚ ಶಬ್ದವು ಅಪಿಶಬ್ದಾರ್ಥದಲ್ಲಿ ಪ್ರಯುಕ್ತವಾಗಿ.

ವಿವರಣೆ - 'ಜೀವಃ ಅನ್ಯನಿರಪೇಕ್ಷತಯಾ ನ ಕರ್ತಾ ಅಸ್ವತಂತ್ರತ್ವಾತ್ ಅಶ್ಮಾದಿವತ್' ಕಲ್ಲು ಮೊದಲಾದವುಗಳು ಅಸ್ವಂತ್ರಗಳಾಗಿವೆ ಕರ್ತೃ ಕೂಡ ಆಗಿರುವುದಿಲ್ಲ. ಅದರಂತೆ ಜೀವನು ಅಸ್ವತಂತ್ರನಾಗಿರುವುದರಿಂದ ಸ್ವತಂತ್ರಕರ್ತೃ ಆಗಲು ಸಾಧ್ಯವಿಲ್ಲ ಎಂಬ ಅನುಮಾನದಲ್ಲಿ 'ಅಸ್ವಾತಂತ್ರ್ಯವಿರಲಿ, ಅನ್ಯನಿರಪೇಕ್ಷತಯಾ ಕರ್ತೃತ್ವವೇ ಇರಲಿ' ಎಂಬುದಾಗಿ ಅಪ್ರಯೋಜಕ ಶಂಕೆಯನ್ನು ಮಾಡುವುದಾದರೆ 'ಯದಿ ಜೀವಃ ಅನ್ಯನಿರಪೇಕ್ಷತಯಾ ಕರ್ತಾ ಸ್ಯಾತ್ ತರ್ಹಿ ಅಸ್ವಾತಂತ್ರ್ಯಂ ನ ಸ್ಯಾತ್' ಒಂದು ವೇಳೆ ಜೀವನು ಅನ್ಯನಿರಪೇಕ್ಷನಾಗಿ ಕರ್ತೃ ಆಗುವುದಾದರೆ ಆಗ ಅಸ್ವಾತಂತ್ರ್ಯವು ಇಲ್ಲದಿರಬೇಕಾದೀತು' ಎಂಬ ಅನುಕೂಲತರ್ಕವನ್ನು ವಿವಕ್ಷಿಸಬೇಕು. ಆದ್ದರಿಂದ ಯಾರು ಮತ್ತೊಂದರ ಅಪೇಕ್ಷೆ ಇಲ್ಲದೆ ಕರ್ತೃ ಆಗಿರುತ್ತಾನೋ ಅವನು ಸ್ವತಂತ್ರನಾಗಿರುತ್ತಾನೆ ಎಂಬ ವ್ಯಾಪ್ತಿಯನ್ನೇ ಹೇಳಬೇಕು. ಇದೇ ವ್ಯಾಪ್ತಿಯನ್ನು ಮತ್ತೊಂದು ಮುಖದಲ್ಲಿ 'ಸ್ವತಂತ್ರೋ ಹಿ' ಎಂಬ ಟೀಕಾವಾಕ್ಯವು ಉಪಪಾದನೆ ಮಾಡುತ್ತಿದೆ. ಸ್ವಾತಂತ್ರ್ಯವನ್ನು ವ್ಯಾಪಕವೆಂದು ಅನ್ಯನಿರಪೇಕ್ಷತಯಾ ಕರ್ತೃತ್ವವನ್ನು ವ್ಯಾಪ್ಯವೆಂದು ತಿಳಿಯಬೇಕು.

ಸೂತ್ರದಲ್ಲಿರುವ 'ಚ' ಎಂಬ ಶಬ್ದವು 'ಅಪಿ' ಎಂಬ ಶಬ್ದಾರ್ಥದಲ್ಲಿ ಪ್ರಯುಕ್ತವಾಗಿದೆ. ಆದ್ದರಿಂದ ಜೀವನು ಚೇತನನಾಗಿದ್ದರೂ ಕೂಡ ಕಲ್ಲು ಮೊದಲಾದ ಪದಾರ್ಥಗಳಂತೆ ಅಸ್ವತಂತ್ರನಾದ್ದರಿಂದ ಸ್ವತಂತ್ರಕರ್ತೃತ್ವವು ಅನುಪಪನ್ನವಾಗುತ್ತದೆ ಎಂಬುದು ಸೂತ್ರದ ಅರ್ಥ.

### ಹಿತಾಕರಣ ಅಹಿತಕರಣಗಳೆಂಬ ದೋಷದ ಪರಿಹಾರ ಸಾಧ್ಯವಿಲ್ಲ

**तत्वप्रकाशिका – एतेन कर्मसापेक्षतया हिताक्रियादि दोषपरिहारोऽपि परास्तः। तस्याप्यस्वतन्त्रत्वात् । अस्वातन्त्र्यमेव जीवस्य कुत इत्यत आह – यथेति ।। अस्वातन्त्र्यस्य हिताक्रियादिनैव सिद्धौ सूत्रार्थे सम्मतिर्वा ।।**

ಹೀಗೆ ಹೇಳಿದ್ದರಿಂದ ಕರ್ಮಕ್ಕೆ ಅನುಸಾರಿಯಾಗಿ ಹಿತಾಕರಣ ಅಹಿತಕರಣ ಎಂಬ ದೋಷಪರಿಹಾರವನ್ನು ಕೂಡ ಪರಿಹಾರ ಮಾಡಿದಂತಾಯಿತು. ಏಕೆಂದರೆ ಇವುಗಳೂ ಕೂಡ ಅಸ್ವತಂತ್ರವಾಗಿವೆ. ಜೀವನಿಗೆ ಅಸ್ವಾತಂತ್ರವನ್ನು ಏಕೆ ಹೇಳಬೇಕು ? ಎಂಬ ಪ್ರಶ್ನೆಗೆ 'ಯಥಾ ದಾರುಮಯೀ' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ. ಅಥವಾ ಅಸ್ವಾತಂತ್ರ್ಯವು ಹಿತಾಕರಣ ಅಹಿತಕರಣಗಳಿಂದ ಸಿದ್ಧವಾಗುವುದಾದರೆ ಸೂತ್ರಾರ್ಥಕ್ಕೆ ಮಹಾಭಾರತದ ಸಮ್ಮತಿಯನ್ನು ತೋರಿಸಿದಂತಾಗುತ್ತದೆ.

ಈ ಅಧಿಕರಣದ ಪ್ರಥಮಸೂತ್ರದಲ್ಲಿ ಯಾರು ಸ್ವತಂತ್ರಕರ್ತನೊ ಅವನಿಗೆ ಹಿತಾಕರಣ ಅಹಿತಕರಣಗಳೆಂಬ ದೋಷವು ಇರುವುದಿಲ್ಲ ಎಂದು ಹೇಳಲಾಯಿತು. ಇದಕ್ಕೆ ಉತ್ತರವನ್ನು ಪೂರ್ವಪಕ್ಷಿಗಳು ಹೀಗೆ ಹೇಳುತ್ತಾರೆ - ಜೀವನು ಸ್ವತಂತ್ರಕರ್ತೃ ಆಗಿದ್ದರೂ ಕೂಡ ತನ್ನ ಕರ್ಮಕ್ಕೆ ಅಧೀನವಾಗಿ ಪ್ರವೃತ್ತಿಯನ್ನು ಮಾಡುತ್ತಾನೆ. ಆದ್ದರಿಂದ ಹಿತವಾದದ್ದನ್ನು ಮಾಡಬಾರದೆಂಬ ಅಥವಾ ಅಹಿತವಾದದದ್ದನ್ನು ಮಾಡಬೇಕೆಂಬ ಕರ್ಮವು ಅಂಥ ಜೀವನಿಗೆ ಇರುವುದರಿಂದ ಅದಕ್ಕನುಗುಣವಾಗಿ ಹಿತಾಕರಣ ಅಹಿತಕರಣಗಳೆಂಬ ದೋಷಗಳಿಗೆ ತುತ್ತಾಗುತ್ತಾನೆ. ಆದ್ದರಿಂದ ಈ ಎರಡು ದೋಷಗಳು ಜೀವನ ಸ್ವಾತಂತ್ರ್ಯಕ್ಕೆ ಪ್ರತಿಬಂಧಕವಾಗುವುದಿಲ್ಲ ಎಂದು.

ಪೂರ್ವಪಕ್ಷಿಗಳ ಈ ಸಮಾಧಾನವನ್ನು ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಜೀವನು ಅಸ್ವತಂತ್ರನಾಗಿದ್ದಾನೆಂದು ಈ ಸೂತ್ರದಲ್ಲಿ ಹೇಳಿರುವುದರಿಂದ ಅಸ್ವತಂತ್ರನಾದ್ದರಿಂದಲೇ ಹಿತಾಕರಣ ಅಹಿಕರಣಗಳೆಂಬ ದೋಷಗಳಿಗೆ ಪಾತ್ರನಾಗಿದ್ದಾನೆ. ಕರ್ಮವು ಅಸ್ವತಂತ್ರವಾಗಿದ್ದು ಭಗವದಧೀನವಾಗಿರುವುದರಿಂದ ಭಗವದಧೀನವಾಗಿದೆ. ಜೀವನು ಕರ್ಮದ ಅಧೀನವಾದರೆ ಭಗವಂತನ ಅಧೀನವಾಗಿದ್ದಾನೆ ಎಂದೇ ಹೇಳಿದಂತಾಯಿತು. ಆದ್ದರಿಂದ ಜೀವನಿಗೆ ಸ್ವಾತಂತ್ರ್ಯವು ಯುಕ್ತವಾಗುವುದಿಲ್ಲ ಎಂಬುದು ಈ ಸೂತ್ರದ ಅಭಿಪ್ರಾಯ.

### ಭಾವದೀಪ

### ಪೂರ್ವಪಕ್ಷಿಗಳ ಅನುಮಾನಕ್ಕೆ ಪ್ರತ್ಯನುಮಾನ

**भावदीपः** – ॥ अश्मादिवच्च तदनुपपत्तिः ॥ २४ ॥ **विरोध इति** ।। अभ्युपगमे अन्यनिरपेक्षतया इत्युक्तिविरोधः । अनभ्युपगमे ईश्वरवदित्युक्तिविरोध इत्यर्थः। भाष्यं

व्याचष्टे – **न चेतनत्वेति**।। स्वतःशब्दार्थोऽन्यानपेक्षेति। हेतोरप्रयोजकत्वमा-शङ्क्यानुपपत्तिपदतात್पर्यमाह – **स्वतन्त्रो हीति**।। हेतूच्छित्तिरेव विपक्षे बाधिकेति भावः।

**ಟೀಕೆಯಲ್ಲಿ** 'ವಿರೋಧಃ' ಎಂದು ಹೇಳಿದ್ದಾರೆ. ಈಶ್ವರನನ್ನು ಅಂಗೀಕಾರ ಮಾಡಿದರೆ 'ಈಶ್ವರವತ್' ಎಂಬ ದೃಷ್ಟಾಂತವಚನದಿಂದ ವಿರೋಧ ಬರುತ್ತದೆ ಎಂದರ್ಥ. ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಚೇತನತ್ವಹೇತುನಾ' ಇತ್ಯಾದಿ ಟೀಕೆಯು ಹೊರಟಿದೆ. ಭಾಷ್ಯದಲ್ಲಿರುವ 'ಸ್ವತಃ'ಶಬ್ದದ ಅರ್ಥವನ್ನು 'ಅನ್ಯ ಅನಪೇಕ್ಷ' ಎಂದು ಹೇಳಿದ್ದಾರೆ. ಹೇತುವಿಗೆ ಅಪ್ರಯೋಜಕತ್ವವನ್ನು ಆಶಂಕೆ ಮಾಡಿ ಅನುಪಪತ್ತಿ ಪದದ ತಾತ್ಪರ್ಯವನ್ನು 'ಸ್ವತಂತ್ರೋ ಹಿ' ಎಂದು ವಿವರಿಸಿದ್ದಾರೆ. ಹೇತೂಚ್ಛಿತ್ತಿಯೇ ವಿಪಕ್ಷದಲ್ಲಿ ಬಾಧಕವಾಗಿದೆ ಎಂದು ತಿಳಿಯಬೇಕು.

**ವಿವರಣೆ** – ಈಶ್ವರನನ್ನು ಅಂಗೀಕಾರ ಮಾಡಿದರೂ ಮಾಡದಿದ್ದರೂ ಕೂಡ ವಿರೋಧ ಬರುವುದೆಂದು ಟೀಕೆಯಲ್ಲಿ ಹೇಳಿದ್ದಾರೆ. ಅಂಗೀಕಾರ ಮಾಡದಿದ್ದರೆ ಹೇಗೆ ವಿರೋಧ ಬರುತ್ತದೆ? ಎಂದರೆ, ಈಶ್ವರನನ್ನು ಪೂರ್ವಪಕ್ಷಿಗಳು ಅಂಗೀಕಾರ ಮಾಡಿದರೆ ಅಸ್ವತಂತ್ರನೆಂದೇ ಅಂಗೀಕಾರ ಮಾಡಬೇಕು. ಆಗ ಈಶ್ವರವತ್ ಎಂಬ ದೃಷ್ಟಾಂತವು ತಪ್ಪಾಗುತ್ತದೆ ಎಂದರ್ಥ.

'ಜೀವಃ ಅನ್ಯಾನಪೇಕ್ಷತಯಾ ಕರ್ತಾ ಚೇತನತ್ವಾತ್' ಎಂದು ಪೂರ್ವಪಕ್ಷಿಗಳು ಅನುಮಾನವನ್ನು ಮಾಡಿದರು. ಅದಕ್ಕೆ ಪ್ರತಿಯಾಗಿ ಸಿದ್ಧಾಂತದ ಅನುಮಾನವು ಹೀಗಿದೆ – 'ಜೀವಃ ಅನ್ಯಸಾಪೇಕ್ಷತಯಾ ಏವ ಕರ್ತಾ ಅಸ್ವತಂತ್ರತ್ವಾತ್' ಎಂದು. ಪೂರ್ವಪಕ್ಷಿಗಳ ಅನುಮಾನದಲ್ಲಿರುವ ಚೇತನತ್ವಹೇತುವು ಅಪ್ರಯೋಜಕವಾಗಿದೆ ಎಂದೂ ಕೂಡ ಇದರಿಂದ ಹೇಳಿದಂತಾಯಿತು.

## ಚೇತನತ್ವೇಽಪಿ ಎಂಬ ಭಾಷ್ಯವು ಉತ್ಸೂತ್ರಿತವಲ್ಲ

**भावदीपः** – उक्तहेतोः कागतिरित्यत आह – **चेतनत्वं त्विति**।। प्रागुक्तलाघवतर्कस्तु निरसिष्यत इति भावः। चेतनत्वेऽपीति भाष्यमुत्सूत्रमिति भ्रम निरासायाह – **चोऽपीति**।। अनुक्तसमुच्चय इति भावः।। **एतेनेति**।। अश्मादिवदित्युक्तिलब्धास्वातन्त्र्यहेतुनेत्यर्थः।। २४ ।।

ಪೂರ್ವಪಕ್ಷದಲ್ಲಿ ಹೇಳಿದ ಹೇತುವಿಗೆ ಏನು ಗತಿ ಎಂದರೆ 'ಚೇತನತ್ವಂ ತು' ಎಂದು ಹೇಳಿದ್ದಾರೆ. ಹಿಂದೆ ಪೂರ್ವಪಕ್ಷ ಮಾಡುವಾಗ ಹೇಳಲ್ಪಟ್ಟ ಲಾಘವತರ್ಕವನ್ನು ಮುಂದೆ ನಿರಾಕರಿಸುವವರಿದ್ದೇವೆ. 'ಚೇತನತ್ವೇऽಪಿ' ಎಂಬ ಭಾಷ್ಯವು ಉತ್ಸೂತ್ರಿತವಾಗಿದೆ ಎಂಬ ಭ್ರಮೆಯ ನಿರಾಸಕ್ಕಾಗಿ 'ಚೋऽಪಿ ಶಬ್ದಾರ್ಥ:' ಎಂಬ ಟೀಕಾವಾಕ್ಯವು ಹೊರಟಿದೆ. ಅನುಕ್ತವಾದುದನ್ನು ಸಮುಚ್ಚಯ ಮಾಡುತ್ತಿದೆ ಎಂದು ಇದರ ಅರ್ಥ. 'ಏತೇನ' ಎಂಬುದಕ್ಕೆ 'ಅಶ್ಮಾದಿವತ್' ಎಂಬುದರಿಂದ ತಿಳಿಯಲ್ಪಟ್ಟ ಅಸ್ವಾತಂತ್ರ್ಯವೆಂಬ ಹೇತುವಿನಿಂದ ಎಂದರ್ಥ.

## ಬ್ರಹ್ಮಸೂತ್ರ

### 'ಉಪಸಂಹಾರದರ್ಶನಾನ್ನೇತಿ ಚೇತ್' ಇತ್ಯಾದಿ ಸೂತ್ರದ ವಾಖ್ಯಾನ

**ब्रह्मसूत्रम् – उपसंहारदर्शनान्नेति चेत् क्षीरवद्धि ।।**

ಜೀವನು ಯಾವ ಕೆಲಸವನ್ನು ಪ್ರಾರಂಭ ಮಾಡುತ್ತಾನೋ ಅದನ್ನು ಸಮಾಪ್ತಿ ಮಾಡುವುದರಿಂದ ಸ್ವತಂತ್ರಕರ್ತೃ ಎಂದು ಹೇಳಬಹುದಲ್ಲವೇ? ಇದು ತಪ್ಪು. ಹಸುವಿನ ಕೆಚ್ಚಲಿನಲ್ಲಿ ಹಾಲು ಹುಟ್ಟುತ್ತದೆ. ಹಾಲನ್ನು ಮಾಡಿದ್ದು ಹಸುವಲ್ಲ. ಅದರಂತೆ ಅನೇಕ ಕೆಲಸಗಳನ್ನು ಜೀವನು ಮಾಡಿದ್ದರೂ ತನ್ನ ಸ್ವಾತಂತ್ರ್ಯದಿಂದ ಪೂರೈಸಲು ಸಾಧ್ಯವಾಗುವುದಿಲ್ಲ. ಅವನಿಗೆ ನಿಯಾಮಕನಾದ ಪರಮಾತ್ಮನ ಅಧೀನವಾಗಿಯೇ ಎಲ್ಲಾ ಕೆಲಸಗಳನ್ನು ಮುಗಿಸುತ್ತಾನೆ.

ಅರ್ಥ -- ಉಪಸಂಹಾರದರ್ಶನಾತ್ = ಜೀವನು ಪ್ರಾರಂಭ ಮಾಡಿದ ಕಾರ್ಯದ ಸಮಾಪ್ತಿಯನ್ನು ಮಾಡುವುದು ಅನುಭವಸಿದ್ಧವಾದ್ದರಿಂದ ಜೀವನೇ ಸ್ವತಂತ್ರಕರ್ತೃವಾಗಿದ್ದಾನೆ. ಆದ್ದರಿಂದ ಬ್ರಹ್ಮನಿಗೆ ಜಗತ್‌ಕರ್ತೃತ್ವವು ಅಯುಕ್ತವಾಗಿದೆಯಲ್ಲವೇ? ಇತಿ ಚೇನ್ನ = ಯಾವ ಕಾರಣದಿಂದ, ಕ್ಷೀರವತ್ = ಹಸುಗಳ ಕೆಚ್ಚಲಿನಲ್ಲಿ ಯಾವ ಕ್ಷೀರವು ಇರುತ್ತದೋ ಅದರಂತೆ ಜೀವನಿಂದ ಮಾಡಲ್ಪಟ್ಟ ಉಪಸಂಹಾರವೂ ಕೂಡ ಪರಮಾತ್ಮನ ಅಧೀನವಾಗಿಯೇ ನಡೆದಿರುತ್ತದೆ. ಹಿ ಶಬ್ದದಿಂದ ಈ ಅರ್ಥದಲ್ಲಿ 'ಅನ್ನಂ' ಎಂಬ ಪ್ರಮಾಣಪ್ರಸಿದ್ಧಿಯನ್ನು ಸೂಚಿಸಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

### ಜೀವನಲ್ಲಿ ಕರ್ತೃತ್ವವು ಸುತರಾಂ ಇಲ್ಲ

**ब्रह्मसूत्रभाष्यम् – ।। उपसंहारदर्शनान्नेति चेत् क्षीरवद्धि ।।४।।**

**जीवेन कार्योपसंहारदर्शनात् तस्य कर्तृत्वमिति चेत् - न, यथा गोषु क्षीरं दृश्यमानमपि प्राणादेव जायते ।**

**'अन्नं रसादिरूपेण प्राणः परिणयत्यसौ ।' इति वचनात् । एवं जीवे दृश्यमानोऽपि कार्योपसंहारोऽस्वातन्त्र्यात् परकृत एव । 'य आत्मानमन्तरो यमयति ।' 'नाहं कर्ता नकर्ता त्वं कर्ता यस्तु सदा प्रभुः ।' इत्यादेः ।।४।।**

ಅನುವಾದ - ಮಾಡಲು ಹೊರಟ ಕಾರ್ಯವನ್ನು ಸಮಾಪ್ತಿ ಮಾಡುತ್ತಾನಾದ್ದರಿಂದ ಜೀವನಿಗೆ ಕರ್ತೃತ್ವವನ್ನು ಒಪ್ಪಬೇಕಲ್ಲವೆ? ಎಂಬ ಪ್ರಶ್ನೆ ಸರಿಯಲ್ಲ. ಯಾವ ರೀತಿಯಾಗಿ ಹಸುವಿನ ಕೆಚ್ಚಲಲ್ಲಿ ಹಾಲು ಕಂಡರೂ ಕೂಡ ಅದನ್ನು ಹಸು ತಯಾರಿಸುವುದಿಲ್ಲ. ತಿಂದ ಆಹಾರವನ್ನು ಕ್ಷೀರ ಮೊದಲಾದ ರಸರೂಪವಾಗಿ ಮುಖ್ಯಪ್ರಾಣನು ಪರಿಣಾಮ ಮಾಡುತ್ತಾನೆ. ಹೀಗೆ ಪ್ರಮಾಣ ಇರುವುದರಿಂದ ಯಾವುದಕ್ಕೂ ನಾವು ಕರ್ತೃಗಳಲ್ಲವೆಂದು ತಿಳಿಯುತ್ತಾರೆ. ಅದೇ ರೀತಿಯಾಗಿ ಜೀವನಲ್ಲಿ ಯಾವುದೇ ಕಾರ್ಯದ ಉಪಸಂಹಾರ ಕಂಡರೂ ಅಸ್ವಾತಂತ್ರ್ಯವಿರುವುದರಿಂದ ಅಂತರ್ಯಾಮಿಯಾದ ಪರಮಾತ್ಮನೇ ಅದನ್ನು ಮಾಡಿ ಮುಗಿಸಿದ್ದಾನೆ ಎಂದು ತಿಳಿಯಬೇಕು.

ಪರಮಾತ್ಮನು ಜೀವನ ಒಳಗಡೆ ಇದ್ದು ಅವನನ್ನು ನಿಯಂತ್ರಣ ಮಾಡುತ್ತಾನೆ ಎಂದು ಉಪನಿಷತ್ತು ಹೇಳುತ್ತದೆ. ನಾನು ಕರ್ತೃವಲ್ಲ ನೀನೇ ಕರ್ತೃವಾಗಿರುವಿ. ಸಮಸ್ತ ಜಗತ್ತಿಗೂ ಕೂಡ ನಿರಂತರವಾಗಿ ನೀನೇ ಪ್ರಭುವಾಗಿರುವಿ. ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಜೀವನಲ್ಲಿ ಕರ್ತೃತ್ವವು ಸುತರಾಂ ಇರುವುದಿಲ್ಲವೆಂದು ತಿಳಿಯಬೇಕು.

ಪ್ರತಿಪದಾರ್ಥ -- ಜೀವನಿಗೆ ಸ್ವತಃ ಕರ್ತೃತ್ವವಿಲ್ಲವೆಂದು ಆಕ್ಷೇಪಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವೇನ = ಜೀವನಿಂದ, ಕಾರ್ಯೋಪಸಂಹಾರದರ್ಶನಾತ್ = ಪ್ರಾರಂಭ ಮಾಡಿದ ಕಾರ್ಯದ ಸಮಾಪ್ತಿಯು ಕಾಣಸುತ್ತಿರುವುದರಿಂದ, ತಸ್ಯ = ಅವನಿಗೆ ಕರ್ತೃತ್ವಂ = ಕರ್ತೃತ್ವವನ್ನು ಒಪ್ಪಬೇಕು. ಇತಿ ಚೇತ್ = ಹೀಗೆ ಆಕ್ಷೇಪ ಮಾಡುವುದು, ನ = ಸರಿಯಲ್ಲ, ಯಥಾ = ಯಾವ ರೀತಿಯಾಗಿ, ಗೋಷು = ಹಸುಗಳಲ್ಲಿ, ಕ್ಷೀರಂ = ಹಾಲು, ದೃಶ್ಯಮಾನಮಪಿ = ಕಾಣಸುತ್ತಿದ್ದರೂ, ಪ್ರಾಣಾದೇವ = ಮುಖ್ಯಪ್ರಾಣನಿಂದಲೇ, ಜಾಯತೇ = ಹುಟ್ಟುತ್ತದೆ. ಅನ್ನಂ = ತಿನ್ನಲ್ಪಟ್ಟ ಆಹಾರವು, ರಸಾದಿರೂಪೇಣ = ಹಾಲು ಮೊದಲಾದ ರಸರೂಪವಾಗಿ, ಅಸೌ = ಸರ್ವಶರೀರ

ಪ್ರೇರಕನಾಗಿ ಪ್ರಸಿದ್ಧನಾದ, ಪ್ರಾಣಃ = ಪ್ರಾಣನು, ಪರಿಣಯತಿ = ಪರಿಣಾಮವನ್ನು ಮಾಡುತ್ತಾನೆ. ಇತಿ ವಚನಾತ್ = ಹೀಗೆ ಪ್ರಮಾಣವಿರುವುದರಿಂದ, ಏವಂ = ಅದೇರೀತಿಯಾಗಿ, ಜೀವೇ = ಜೀವನಲ್ಲಿ, ದೃಶ್ಯಮಾನೋಽಪಿ = ಕಾಣಿಸುತ್ತಿದ್ದರೂ, ಕಾರ್ಯೋಪಸಂಹಾರಃ = ಕಾರ್ಯದ ಉಪಸಂಹಾರವು, ಅಸ್ವಾತಂತ್ರ್ಯಾತ್ = ಜೀವನು ಅಸ್ವತಂತ್ರನಾದ್ದರಿಂದ, ಪರಕೃತ ಏವ = ಪರಮಾತ್ಮನ ಅಧೀನ ಎಂದೇ ಒಪ್ಪಬೇಕು. ಯಃ = ಯಾವ ಪರಮಾತ್ಮನು, ಆತ್ಮಾನಂ = ಜೀವನನ್ನು, ಅಂತರಃ = ಅಂತರ್ಯಾಮಿಯಾಗಿ, ಯಮಯತಿ = ಪ್ರೇರಣೆ ಮಾಡುತ್ತಾನೆ.

ಅಹಂ = ನಾನು, ನಕರ್ತಾ = ಸ್ವತಂತ್ರಕರ್ತೃವಲ್ಲ. ತ್ವಂ = ನೀನು, ನ ಕರ್ತಾ = ಸ್ವತಂತ್ರಕರ್ತೃವಲ್ಲ. ಯಸ್ತು = ಯಾವಾತನು, ಸದಾ = ಯಾವಾಗಲೂ, ಪ್ರಭುಃ = ಸ್ವಾಮಿಯಾಗಿದ್ದಾನೋ ಅಂಥ ಶ್ರೀಹರಿಯೇ ಕರ್ತೃವಾಗಿದ್ದಾನೆ. ಇತ್ಯಾದೇಃ = ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ ಜೀವನಲ್ಲಿ ಕರ್ತೃತ್ವವಿಲ್ಲವೆಂದು ತಿಳಿಯುತ್ತದೆ.

### ಸತ್ತರ್ಕದೀಪಾವಳಿ

### ಜೀವಕರ್ತೃತ್ವವಿಲ್ಲವೆಂಬುದನ್ನು ಅನುಭವಾರೂಢ ಮಾಡಿಕೊಳ್ಳಬೇಕು

**सत्तर्कदीपावलिः – एतमर्थमाक्षिप्य दृष्टान्तान्तरेण च 'आत्मानमन्तरो यमयति' इत्यादिवचनैश्च अनुभवारूढं करोति – उपसंहारेति ॥**

ಹಿಂದೆ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ ಮತ್ತೊಂದು ದೃಷ್ಟಾಂತದಿಂದ ಪರಮಾತ್ಮನೊಬ್ಬನೇ ಸ್ವತಂತ್ರಕರ್ತೃವೆಂಬುದನ್ನು ಸಮರ್ಥನೆ ಮಾಡುತ್ತಿದ್ದಾರೆ 'ಯ ಆತ್ಮಾನಮಂತರೋ ಯಮಯತಿ' ಇವೇ ಮೊದಲಾದ ಶ್ರುತಿವಚನಗಳಿಂದ ಈ ವಿಷಯವನ್ನು ಅನುಭವಾರೂಢ ಮಾಡಲು 'ಉಪಸಂಹಾರ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

ತತ್ವಪ್ರದೀಪ

ಜೀವನ ಸಂಕಲ್ಪಕ್ಕೆ ಅನುಗುಣವಾಗಿ ಕೆಲಸ ಮಾಡಿಸುವವನು ಪರಮಾತ್ಮ

**तत्वप्रदीपः – उपसंहारदर्शनान्नेति चेन्न क्षीरवद्धि ।। जीवेन कार्योपसंहारो दृश्यते । 'इदं कार्यमेवमुपसंहरामि' इति बुद्ध्या निरूप्यते । स च कार्योपसंहारस्तेन तथा क्रियमाणो दृश्यते । अतस्तस्य कर्तृत्वमिति चेन्न । यथा गोषु दृश्यमानं क्षीरं गोव्यतिरिक्तकर्तृकम्; एवमित्थं करिष्यामीति जीवे दृश्यमानो जीवेऽन्यैर्दृश्यमानश्चापि कार्योपसंहारः परकृत एव । तथाहि श्रुतिस्मृतयः ।।**

ಜೀವನು ತಾನು ಅಂದುಕೊಂಡ ಕೆಲಸವನ್ನು ಮಾಡಿ ಮುಗಿಸುವುದು ಕಂಡಿದೆ. ಈ ಕಾರ್ಯವನ್ನು ಹೀಗೆ ಉಪಸಂಹಾರ ಮಾಡುತ್ತೇನೆಂದು ಸಂಕಲ್ಪ ಮಾಡುತ್ತಾನೆ. ಸಂಕಲ್ಪಕ್ಕೆ ಅನುಗುಣವಾಗಿಯೇ ಈ ಕೆಲಸವನ್ನು ಮಾಡಿ ಮುಗಿಸುತ್ತಾನೆ. ಆದ್ದರಿಂದ ಜೀವರಿಗೆ ಕರ್ತೃತ್ವವನ್ನು ಒಪ್ಪಬೇಕು.

ಇದು ತಪ್ಪು. ಹಸುವಿನಲ್ಲಿ ಹಾಲಿದೆ. ಇದಕ್ಕೆ ಹಸು ಕರ್ತೃವಲ್ಲ. ಅದರಂತೆ ಈ ಕೆಲಸವನ್ನು ಹೀಗೆ ಮಾಡುತ್ತೇನೆ ಎಂಬುದಾಗಿ ಸಂಕಲ್ಪ ಮಾಡಿ, ಯಾವ ಕೆಲಸವನ್ನು ಮುಗಿಸುತ್ತಾನೋ, ಇದಕ್ಕೆ ಕರ್ತೃವಾದವನು ಜೀವನಲ್ಲ. ಪರಮಾತ್ಮನೇ ಆಗಿದ್ದಾನೆ. ಈ ವಿಷಯದಲ್ಲಿ ಅನೇಕ ಶ್ರುತಿ-ಸ್ಮೃತಿಗಳು ಆಧಾರವಾಗಿವೆ.

ತತ್ವಪ್ರಕಾಶಿಕಾ

ಕಾರ್ಯೋಪಸಂಹಾರ ಇರುವುದರಿಂದ ಜೀವನು ಸ್ವತಂತ್ರಕರ್ತೃವೆಂದು ಆಕ್ಷೇಪ

**तत्वप्रकाशिका – जीवस्य स्वतःकर्तृत्वाभावमाक्षिप्य समादधत्सूत्रं पठित्वाऽऽक्षेपांशं तावद् व्याचष्टे – उपसंहारेति ।। न जीवस्य स्वतः कर्तृत्वाभावो वक्तव्यः । अनुभवविरोधात् । स हि यत्कर्तुमारभते तदवसाययतीत्यनुभूयत इत्यर्थः ।**

ಜೀವನು ಸ್ವತಂತ್ರಕರ್ತೃ ಅಲ್ಲವೆಂಬ ವಿಷಯವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು ಪಠಿಸುತ್ತಾ ಸೂತ್ರದಲ್ಲಿರುವ ಆಕ್ಷೇಪಭಾಗವನ್ನು ಉಪಸಂಹಾರ ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. ಜೀವನು ಸ್ವತಂತ್ರಕರ್ತೃ ಅಲ್ಲವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಅನುಭವವಿರೋಧವಿದೆ. ಯಾವುದೇ ಕಾರ್ಯವನ್ನು ಮಾಡಲು ಪ್ರಾರಂಭಿಸಿದರೆ ಅದನ್ನು ಜೀವನು ಮುಕ್ತಾಯ ಮಾಡುತ್ತಾನೆಂಬುದು ಅನುಭವಸಿದ್ಧವಾಗಿದೆ ಎಂದರ್ಥ.

ವಿವರಣೆ - 'ಉಪಸಂಹಾರದರ್ಶನಾತ್' ಎಂಬುದು ಸೂತ್ರದಲ್ಲಿರುವ ಆಕ್ಷೇಪಭಾಗ. ಜೀವನು ಯಾವುದೇ ಕಾರ್ಯವನ್ನು ಮಾಡಲು ಪ್ರಾರಂಭಿಸಿದರೆ ಅದರ ಉಪಸಂಹಾರವನ್ನು ಕೂಡ ಮಾಡುತ್ತಾನೆಂಬುದು ಪ್ರತಿಯೊಬ್ಬರ ಅನುಭವದಿಂದ ಸಿದ್ಧವಾಗಿದೆ. ಆದ್ದರಿಂದ ಜೀವನಿಗೆ ಸ್ವತಂತ್ರಕರ್ತೃತ್ವವು ಅನುಪಪನ್ನವಾಗಿದೆ ಎಂಬುದು ಸೂತ್ರದಲ್ಲಿರುವ ಅಭಿಪ್ರಾಯ..

ಜೀವನಲ್ಲಿರುವ ಕಾರ್ಯೋಪಸಂಹಾರವು ಭಗವದಧೀನ

**तत्वप्रकाशिका – परिहारांशं व्याचष्टे – नेति ।। कार्योपसंहारदर्शनेन जीवस्यान्यानपेक्षतया न कर्तृत्वसिद्धिः । तत्कार्योपसंहारस्येश्वरनिमित्तत्वात्। न च जीवे दृश्यमानत्वेन जीवस्यैवासाविति वाच्यम् । गोषु वर्तमानस्यापि क्षीरस्यान्नं रसादिरुपेणेति वचनात् प्राणाधीनत्ववदत्राप्युपपत्तेः।**

ಸೂತ್ರದಲ್ಲಿರುವ ಪರಿಹಾರಭಾಗವನ್ನು 'ನ' ಇತ್ಯಾದಿ ಭಾಷ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಕಾರ್ಯವು ಸಮಾಪ್ತಿಯಾಗುವ ಕಾರಣದಿಂದ ಜೀವನು ಸ್ವತಂತ್ರಕರ್ತೃ ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ ಈಶ್ವರನಿಮಿತ್ತದಿಂದಲೇ ಜೀವನು ಕಾರ್ಯದ ಉಪಸಂಹಾರವನ್ನು ಮಾಡುತ್ತಾನೆ.

ಜೀವನಲ್ಲಿ ಕಾರ್ಯದ ಉಪಸಂಹಾರವು ಕಾಣಿಸುತ್ತಿರುವುದರಿಂದ ಜೀವನು ಸ್ವತಂತ್ರಕರ್ತೃವೆಂದು ಏಕೆ ಹೇಳಬಾರದು ?

ಈ ಪ್ರಶ್ನೆ ತಪ್ಪು. ಗೋವಿನಲ್ಲಿ ಕ್ಷೀರವು ಇದೆ. ಆದರೆ 'ಅನ್ನಂ ರಸಾದಿರೂಪೇಣ' ಇತ್ಯಾದಿ ಭಾಷ್ಯದಲ್ಲಿ ಉದಾಹರಿಸಿದ ಪ್ರಮಾಣದಂತೆ ಆ ಕ್ಷೀರವು ಪ್ರಾಣದೇವರ ಅಧೀನವಾಗಿದೆ ಎಂದು ಹೇಗೆ ಹೇಳುತ್ತೇವೋ ಅದರಂತೆ ಜೀವನಲ್ಲಿಯೂ ಕೂಡ ಕಾರ್ಯಸಮಾಪ್ತಿಯು ಭಗವದಧೀನವೆಂದು ಉಪಪಾದನೆ ಮಾಡಬೇಕು.

ವಿವರಣೆ - 'ಕ್ಷೀರವದ್ಧಿ' ಎಂಬ ಸೂತ್ರಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಅನ್ನಂ ರಸಾದಿರೂಪೇಣ' ಎಂಬ ಪ್ರಮಾಣವಚನದಂತೆ ಹಸುವಿನಲ್ಲಿರುವ ಕ್ಷೀರವು ಮುಖ್ಯಪ್ರಾಣನ ಅಧೀನವಾದಂತೆ ಜೀವರಲ್ಲಿ ಕಾಣಿಸುತ್ತಿರುವ ಕಾರ್ಯೋಪಸಂಹಾರವು ಭಗವದಧೀನವೆಂದು ಹೇಳಬೇಕು ಜೀವನಲ್ಲಿ ಅಸ್ವಾತಂತ್ರ್ಯವೆಂಬ ಬಾಧಕವು ಇರುವುದರಿಂದ ಕಾರ್ಯೋಪಸಂಹಾರವು ಜೀವಕರ್ತೃಕವಲ್ಲ. 'ಯ ಆತ್ಮಾನಂ ಅಂತರೋ ಯಮಯತಿ' ಎಂಬ ಪ್ರಮಾಣವಚನದಂತೆ ಪರಮಾತ್ಮನ ಅಧೀನವೆಂದು ಸಮರ್ಥಿಸಬೇಕು. ಆದ್ದರಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವವು ಸಿದ್ಧವಾಗುವುದಿಲ್ಲ ಎಂದು ಕ್ಷೀರವದ್ಧಿ ಎಂಬ ಸಿದ್ಧಾಂತಭಾಗದ ಅಭಿಪ್ರಾಯ.

### ಸ್ವಂತಂತ್ರಕರ್ತೃತ್ವಕ್ಕೆ ಅಸ್ವಾತಂತ್ರ್ಯವೇ ಬಾಧಕ

**तत्वप्रकाशिका – न च बाधकवचनबलात् क्षीरस्याऽन्याधीनत्वेऽपि कार्योपसंहारस्य बाधकाभावाज्जीवकर्तृत्वमिति वक्तव्यम् । जीवस्यास्वातन्त्र्येण कार्योपसंहारकर्तृत्वानुपपत्तेरेव बाधकत्वादिति भावः । ननु जीवस्यास्वातन्त्र्यात् कार्योपसंहारकर्तृत्वाभावेऽपि कुतोऽसावीश्वरकृत इत्यत आह – य इति ॥**

ಜೀವನು ಕಾರ್ಯಸಮಾಪ್ತಿಯನ್ನು ಮಾಡುತ್ತಾನೆ. 'ಅನ್ನಂ ರಸಾದಿ ರೂಪೇಣ' ಇತ್ಯಾದಿ ಬಾಧಕವಿರುವುದರಿಂದ ಹಸುವಿನಲ್ಲಿರುವ ಕ್ಷೀರವು ಪ್ರಾಣನ ಅಧೀನವೆಂದು ಒಪ್ಪಬೇಕು. ಆದರೆ ಜೀವನಲ್ಲಿರುವ ಕಾರ್ಯೋಪಸಂಹಾರವು ಜೀವನಲ್ಲೇ ಇದೆ ಎಂದು ಹೇಳಿದರೆ ಯಾವುದೇ ಬಾಧಕವಿಲ್ಲ. ಆದ್ದರಿಂದ ಜೀವನು ಸ್ವತಂತ್ರಕರ್ತೃ ಎಂದು ಹೇಳಬಹುದಲ್ಲವೆ ?

ಇದು ತಪ್ಪು. ಜೀವನಲ್ಲಿ ಅಸ್ವಾತಂತ್ರ್ಯವು ಸಿದ್ಧವಾಗಿರುವುದರಿಂದ ಕಾರ್ಯೋಪಸಂಹಾರದ ಕರ್ತೃತ್ವವು ಅನುಪಪನ್ನವಾಗಿದೆ. ಇದೇ ಈ ವಿಷಯದಲ್ಲಿರುವ ಬಾಧಕ.

ಜೀವನು ಅಸ್ವತಂತ್ರನಾದ್ದರಿಂದ ಕಾರ್ಯೋಪಸಂಹಾರರೂಪ ಕರ್ತೃತ್ವವಿಲ್ಲವೆಂದು ಒಪ್ಪೋಣ. ಆದರೆ ಈಶ್ವರನ ಅಧೀನವೆಂದೇ ಏಕೆ ಹೇಳಬೇಕು ? ಎಂಬ ಪ್ರಶ್ನೆಗೆ 'ಯ ಆತ್ಮಾನಮ್' ಎಂಬುದಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - ಕಾರ್ಯೋಪಸಂಹಾರದ ಅನುಪಪತ್ತಿಯನ್ನು ಭಾಷ್ಯದಲ್ಲಿ ಹೇಳಿದ್ದಾರೆ. ಇದು ಕೇವಲ ಉಪಲಕ್ಷಣ. ವಿಚಾರ ಮಾಡಿದರೆ ಕಾರ್ಯೋಪಸಂಹಾರ ಕರ್ತೃತ್ವವು ಕೂಡ

ಜೀವನಲ್ಲಿ ಕಾಣಸುತ್ತಿಲ್ಲ. ರೈತರು ಕೆಲವುಬಾರಿ ಕೃಷಿಯನ್ನು ಪ್ರಾರಂಭಿಸಿದರೆ ಅದರ ಮುಕ್ತಾಯದಿಂದ ಫಲವನ್ನು ಅನುಭವಿಸಲು ಆಗುವುದಿಲ್ಲ. ಯೋಧರು ಜಯವನ್ನು ಗಳಿಸಲೇ ಬೇಕೆಂದು ಯುದ್ಧಪ್ರಾರಂಭ ಮಾಡಿದಾಗ ಜಯವನ್ನು ಕಾಣುತ್ತಿಲ್ಲ. ವ್ಯಾಪಾರ ಮಾಡುವವರು ಶ್ರೀಮಂತರಾಗಲು ಹೊರಟರೂ ಶ್ರೀಮಂತರಾಗುತ್ತಿಲ್ಲ. ಹೀಗೆ ಅನೇಕಸ್ಥಳದಲ್ಲಿ ಕಾರ್ಯವಿಚ್ಛೇದವು ಕಾಣಸುತ್ತಿರುವುದರಿಂದ ಕಾರ್ಯೋಪಸಂಹಾರವು ಕೂಡ ಇರುವುದಿಲ್ಲ ಎಂದು ತಿಳಿಯಬೇಕು.

## ಭಾವದೀಪ

### ಸೌತ್ರಹೇತುವನ್ನು ಪರಂಪರಯಾ ಯೋಜನೆ ಮಾಡಬೇಕು

**भावदीपः –** ॥ उपसंहारद० ॥ २५ ॥ भाष्ये साक्षात्सौत्रहेत्वन्वयाय तस्य कर्तृत्वमिति साध्योक्तिः फलगत्येति मत्वा सूत्रे अनुवृत्ततदनुपपत्तिपदेन नञन्वयमुपेत्य तत्र सौत्रहेतुं परंपरया योजयन्सूत्रार्थमाह **– न जीवस्येति।।** भाष्ये इति चेन्नेत्यध्याहृत्योक्तनञा प्राचीनभाष्यस्यान्वयमाह **– कार्येति।।**

ಭಾಷ್ಯದಲ್ಲಿ ನೇರವಾಗಿ ಸೂತ್ರದಲ್ಲಿರುವ ಹೇತುವಿನ ಅನ್ವಯವನ್ನು ತೋರಿಸುವುದಕ್ಕೋಸ್ಕರ 'ತಸ್ಯ ಕರ್ತೃತ್ವಂ' ಎಂಬುದಾಗಿ ಸಾಧ್ಯನಿರ್ದೇಶ ಮಾಡಿದ್ದಾರೆ. ಫಲತಃ ಈ ಸಾಧ್ಯವು ಸೂತ್ರದಿಂದ ತಿಳಿಯುತ್ತದೆ. ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕಾದ ತದನುಪಪತ್ತಿ ಪದದ ಜೊತೆ ಸೂತ್ರದಲ್ಲಿರುವ ನಞ್ ಅನ್ವಯವನ್ನು ಹೊಂದುತ್ತದೆ. ಹೀಗೆ ಸಮರ್ಥನೆ ಮಾಡುವುದಕ್ಕಾಗಿ ಮತ್ತು ಸೂತ್ರದಲ್ಲಿರುವ ಹೇತುವು ಪರಂಪರೆಯಿಂದ ಯೋಜನೆ ಹೊಂದುತ್ತದೆ ಎಂದು ತೋರಿಸುವುದಕ್ಕಾಗಿ ಸೂತ್ರಾರ್ಥವನ್ನು ಟೀಕೆಯಲ್ಲಿ 'ನ ಜೀವಸ್ಯ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಭಾಷ್ಯದಲ್ಲಿ 'ಇತಿ ಚೇನ್ನ' ಎಂಬುದನ್ನು ಅಧ್ಯಾಹಾರ ಮಾಡಿಕೊಂಡು ಹಿಂದಿನ ಭಾಷ್ಯದಿಂದ ಅನ್ವಯಕ್ರಮವನ್ನು 'ಕಾರ್ಯೋಪಸಂಹಾರದರ್ಶನೇನ' ಎಂದು ಟೀಕೆಯಲ್ಲಿ ತೋರಿಸಿದ್ದಾರೆ.

### ಹಸುವಿನಲ್ಲಿ ಕ್ಷೀರೋತ್ಪತ್ತಿಯು ಪ್ರಾಣದೇವರ ಅಧೀನ

**भावदीपः –** अन्यानपेक्षतयेति। भाष्ये स्वतःपदानुवृत्तिरिति भावः। एवं जीव इत्यादिभाष्योक्तमेव हेतुमाह**– तत्कार्येति।।** यथेत्यादिभाष्यदिशा क्षीरवदिति

सूत्रांशार्थमाह – **गोष्विति ।।** एवं जीव इत्यादिभाष्यतात्पर्यमत्राप्युपपत्तेरिति। अस्वातन्त्र्यादिति भाष्योक्तं हेतुमवतार्य व्याचष्टे – **न च बाधकेति ।।** अयं च हेतुरश्मादिवच्चेति सूत्रलब्ध इति भावेनानुपपत्तेरेवेत्येवकारप्रयोगः ॥ २५ ॥

'ಕಾರ್ಯೋಪಸಂಹಾರದರ್ಶನೇನ ಅನ್ಯಾನಪೇಕ್ಷತಯಾ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಮತ್ತೊಂದರ ಅಪೇಕ್ಷೆ ಇಲ್ಲದೆಯೇ ಜೀವನು ಸ್ವತಃ ಕಾರ್ಯವನ್ನು ಮಾಡಿ ಮುಗಿಸುತ್ತಾನೆಂಬುದು ಇದರ ಅರ್ಥ. ಭಾಷ್ಯದಲ್ಲಿ 'ಸ್ವತಃ' ಎಂಬ ಪದವನ್ನು ಅನುವೃತ್ತಿಮಾಡಬೇಕು. ಹೀಗೆ ಜೀವೇ ಇತ್ಯಾದಿ ಭಾಷ್ಯದಲ್ಲಿ ಹೇಳಿದ ಹೇತುವನ್ನೇ 'ತತ್ಕಾರ್ಯ' ಇತ್ಯಾದಿ ಟೀಕೆಯಲ್ಲಿ ವಿವರಿಸುತ್ತಿದ್ದಾರೆ. 'ಯಥಾ' ಇತ್ಯಾದಿ ಭಾಷ್ಯದ ಪ್ರಕಾರ 'ಕ್ಷೀರವತ್' ಎಂಬ ಸೂತ್ರಾಂಶವನ್ನು ವ್ಯಾಖ್ಯಾನ ಮಾಡಲು 'ಗೋಷು' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಏವಂ ಜೀವೇ' ಇತ್ಯಾದಿ ಭಾಷ್ಯದ ತಾತ್ಪರ್ಯವನ್ನು ಕೂಡ ಇದರಿಂದ ಹೇಳಿದಂತಾಯಿತು. 'ಅಸ್ವಾತಂತ್ರ್ಯಾತ್' ಎಂದು ಭಾಷ್ಯದಲ್ಲಿ ಹೇಳಿದ ಹೇತುವಿಗೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡಲು 'ನಚ ಬಾಧಕ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಈ ಹೇತುವು 'ಅಶ್ಮಾದಿವಚ್ಚ' ಎಂಬ ಹೇತುವಿನಿಂದ ಲಬ್ಧವಾಗಿದೆ. ಈ ಅಭಿಪ್ರಾಯದಿಂದ 'ಅನುಪಪತ್ತೇರೇವ' ಎಂದು 'ಏವ'ಕಾರವನ್ನು ಪ್ರಯೋಗಿಸಿದ್ದಾರೆ.

ಬ್ರಹ್ಮಸೂತ್ರ

'ದೇವಾದಿವದಪಿ ಲೋಕೇ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – देवादिवदपि लोके ।।**

ನಿಯಾಮಕನಾದ ಪರಮಾತ್ಮನು ಕಣ್ಣಿಗೆ ಕಾಣಿಸುವುದಿಲ್ಲ. ದೇವತೆಗಳು ಅನೇಕ ಮಂದಿ ಇದ್ದರೂ ಅದೃಶ್ಯತ್ವ ಶಕ್ತಿಯಿಂದ ಹೇಗೆ ಕಾಣಿಸುವುದಿಲ್ಲವೋ ಆದರಂತೆ ಪರಮಾತ್ಮನೂ ಕೂಡ ಕಾಣಿಸಿರುವುದಿಲ್ಲ. ಲೋಕದಲ್ಲಿ ಇಂತಹ ಅದೃಶ್ಯತ್ವ ಶಕ್ತಿಯು ನೀಚವಾದ ಪಿಶಾಚಾದಿಗಳಲ್ಲಿಯೂ ಕಂಡಿದೆ.

ಅರ್ಥ -- ಎಲ್ಲೆಡೆ ಸ್ವತಂತ್ರ ಕಾರಣನಾದ ಈಶ್ವರನು, ಅಪಿ = ಇದ್ದರೂ ಕೂಡ, ದೇವಾದಿವತ್= ದೇವತೆ ಮೊದಲಾದವರಂತೆ ಗೋಚರನಾಗುವುದಿಲ್ಲ. ಏಕೆಂದರೆ ಲೋಕೇ = ಜಗತ್ತಿನಲ್ಲಿ ನೀಚವಾದ ಪಿಶಾಚಾದಿಗಳಲ್ಲಿಯೂ ಅದೃಶ್ಯತ್ವ ಶಕ್ತಿಯು ಕಂಡಿರುತ್ತದೆ. ಹೀಗಿರುವಾಗ ಸರ್ವೋತ್ತಮನಾದ ಪರಮಾತ್ಮನಲ್ಲಿ ಇಂತಹ ಶಕ್ತಿಯು ಇರುತ್ತದೆಂದು ಪ್ರತ್ಯೇಕವಾಗಿ ಹೇಳಬೇಕೇನು?

## ಬ್ರಹ್ಮಸೂತ್ರಭಾಷ್ಯ

### ಈಶ್ವರನಲ್ಲಿ ಕೈಮುತ್ಯನ್ಯಾಯದಿಂದ ಅದೃಶ್ಯಶಕ್ತಿಯ ಸಮರ್ಥನೆ

**ब्रह्मसूत्रभाष्यम् – ।। देवादिवदपि लोके ।।५।।**

**न च कर्तुरीश्वरस्यादृष्टिविरोधः । देवादिवददृश्यत्वशक्तियोगात् । लोकेऽपि पिशाचादीनां तादृशी शक्तिर्दृष्टा किम्वीश्वरस्य ।**

ಅನುವಾದ - ಈಶ್ವರನು ಜಗತ್‌ಕರ್ತೃವಾಗುವುದಾದರೆ ನಮಗೇಕೆ ಕಾಣಿಸುತ್ತಿಲ್ಲ? ಕಾಣಿಸುತ್ತಿಲ್ಲವಾದ್ದರಿಂದ ಅವನು ಜಗತ್ತಿಗೆ ಕರ್ತೃವಾಗುವುದಿಲ್ಲ. ಈ ಆಕ್ಷೇಪ ತಪ್ಪು. ಏಕೆಂದರೆ ಕಣ್ಣಿಗೆ ಕಾಣಿಸುವುದಿಲ್ಲವೆಂದ ಮಾತ್ರಕ್ಕೆ ಇಲ್ಲವೆಂದರ್ಥವಲ್ಲ. ದೇವತೆಗಳು ನಮಗೆ ಕಾಣದಿದ್ದರೂ ಕಣ್ಣಿಗೆ ಕಾಣಿಸುವ ಶಕ್ತಿ ಅವರಲ್ಲಿರುತ್ತದೆ. ಲೋಕದಲ್ಲಿಯೂ ಇದಕ್ಕೆ ಉದಾಹರಣೆ ಕಂಡಿದೆ - ಪಿಶಾಚ ಮೊದಲಾದವು ತಮ್ಮ ಅದೃಶ್ಯತ್ವ ಶಕ್ತಿಯಿಂದ ನಮಗೆ ಕಾಣಿಸಿಕೊಳ್ಳದೆ ಕೆಲಸವನ್ನು ಮಾಡುವುದು ಕಂಡಿದೆ. ಇನ್ನು ಭಗವಂತನ ವಿಷಯದಲ್ಲಿ ಇಂಥ ಶಕ್ತಿಯಿರುವುದರಲ್ಲಿ ಏನೂ ಆಶ್ಚರ್ಯವಿಲ್ಲ.

ಪ್ರತಿಪದಾರ್ಥ -- ಜೀವನಿಗೆ ಈಶ್ವರಾಧೀನಕರ್ತೃತ್ವವನ್ನು ಹೇಳುವ ಅವಶ್ಯಕತೆಯಿಲ್ಲ. ಈಶ್ವರನೇ ಇರುವುದಿಲ್ಲ. ಇರುವುದಾದಲ್ಲಿ ನಮ್ಮ ಕಣ್ಣಿಗೆ ಕಾಣಸಬೇಕಾಗಿತ್ತು. ಈ ಆಕ್ಷೇಪಕ್ಕೆ ಉತ್ತರಿಸುತ್ತಿದ್ದಾರೆ. ಕರ್ತುಃ = ಸರ್ವಕರ್ತೃವಾದ, ಈಶ್ವರಸ್ಯ = ಈಶ್ವರನಿಗೆ, ಅದೃಷ್ಟಿವಿರೋಧಃ = ಕಣ್ಣಿಗೆ ಕಾಣಿಸುವುದಿಲ್ಲವೆಂಬ ಅದರ್ಶನವಿರೋಧವು, ನಚ = ಬರುವುದಿಲ್ಲ. ದೇವಾದಿವತ್ = ದೇವತೆಗಳಂತೆ, ಅದೃಶ್ಯತ್ವಶಕ್ತಿಯೋಗಾತ್ = ಅದೃಶ್ಯಶಕ್ತಿ ಇರುವುದರಿಂದ ಯುಕ್ತವಾಗುತ್ತದೆ. ಲೋಕೇ = ಲೋಕದಲ್ಲಿ, ಪಿಶಾಚಾದೀನಾಂ = ಪಿಶಾಚಿ ಮೊದಲಾದವುಗಳಿಗೆ, ತಾದೃಶೀಶಕ್ತಿಃ = ಅದೃಶ್ಯಶಕ್ತಿಯು, ದೃಷ್ಟಾ = ಕಂಡಿರುತ್ತದೆ. ಹೀಗಿರುವಾಗ, ಈಶ್ವರಸ್ಯ = ಬ್ರಹ್ಮನ ವಿಷಯದಲ್ಲಿ, ಕಿಮು = ಹೇಳುವುದೇನು?

### ಯುಕ್ತಿಯಿಂದ ಆಗಮವು ಬಾಧ್ಯವಲ್ಲ

**ब्रह्मसूत्रभाष्यम् –**

**'न युक्तियोगाद् वाक्यानि निराकार्याण्यपि क्वचित् ।**
**विरोध एव वाक्यानां युक्तयो न तु युक्तयः ।।'**
**इति बृहत्संहितायाम् ।।९।।**

ಅನುವಾದ - ಯುಕ್ತಿಯ ಆಧಾರದಿಂದ ಆಗಮ ಪ್ರಮಾಣಗಳನ್ನು ನಿರಾಕರಣೆ ಮಾಡಬಾರದು. ಪ್ರಮಾಣಗಳಿಗೆ ವಿರುದ್ಧವಾದ ಯುಕ್ತಿಗಳು ಯುಕ್ತಿಗಳೆಂದೇ ಕರೆಸಿಕೊಳ್ಳುವುದಿಲ್ಲ. ಹೀಗೆ ಬೃಹತ್ ಸಂಹಿತೆಯು ಹೇಳುತ್ತಿದೆ.

ಪ್ರತಿಪದಾರ್ಥ -- ಪರಮಾತ್ಮನು ಅನುಪಲಬ್ಧನಾದ ಕಾರಣದಿಂದ ಇಲ್ಲವೆಂದು ಹೇಳಬಾರದೆನ್ನಲು ಶ್ರುತಿಪ್ರಮಾಣವನ್ನು ಹೇಳಿದರು. ಈ ಶ್ರುತಿಯನ್ನು ನಿರಾಕರಣೆ ಮಾಡಬಾರದೆನ್ನಲು ಸ್ಮೃತಿಯನ್ನು ಆಧಾರವನ್ನಾಗಿ ಹೇಳುತ್ತಿದ್ದಾರೆ. ಯುಕ್ತಿಯೋಗಾತ್ = ಯುಕ್ತಿಯ ಆಧಾರದಿಂದ, ವಾಕ್ಯಾನಿ = ಆಗಮವಾಕ್ಯಗಳನ್ನು, ನ ನಿರಾಕಾರ್ಯಾಣಿ = ನಿರಾಕರಣೆ ಮಾಡಬಾರದು, ಕ್ವಚಿತ್ = ಕೆಲವುಸ್ಥಳಗಳಲ್ಲಿ, ವಾಕ್ಯನಾಂ = ವಾಕ್ಯಗಳ, ವಿರೋಧ, ಏವ = ವಿರೋಧವು ಪ್ರಾಪ್ತವಾದರೆ, ಯುಕ್ತಯಃ = ಯುಕ್ತಿಗಳು, ನ ತು ಯುಕ್ತಮ್ = ಯುಕ್ತಿಗಳೆಂದೆ ಕರೆಸಿಕೊಳ್ಳುವುದಿಲ್ಲ. ಇತಿ = ಹೀಗೆ, ಬೃಹತ್‌ಸಂಹಿತಾಯಾಮ್ = ಬೃಹತ್‌ಸಂಹಿತೆಯಲ್ಲಿ ಹೇಳಲಾಗಿದೆ.

### ಸತ್ತರ್ಕದೀಪಾವಳಿ

### ಕೇವಲ ಯುಕ್ತಿಯು ಶುಷ್ಕತರ್ಕ ಎನಿಸುತ್ತದೆ

**सत्तर्कदीपावलिः – न च सर्वकर्तुरीश्वरस्य वेदसिद्धस्य प्रत्यक्षेण अनुपलम्भबाधः शङ्कनीयः । देवादिवद् दृष्टिप्रतिबन्धसामर्थ्यात् चक्षुरादीन्द्रियवत् अतीन्द्रियत्वाच्च । न च योग्यत्वे सत्यदृश्यमानत्वात् खपुष्पवदीश्वरो**

**नास्तीति वाच्यम् । विशेषणासिद्धत्वात् हेतोः । नच युक्तिप्रयोगेण ईश्वराभाव साधयितुं शक्यते । ईश्वरग्राहकमानबाधितत्वाद् युक्तेः । अतो युज्यन्ते परस्परविरोधपरिहारेण व्यवस्थाप्यन्ते वाक्यानि एभिरिति युक्तयो न्याया वक्तव्याः । न तु अप्रतिष्ठितशुष्कतर्काः प्रमाणबाधिता युक्तयः । तदेतदाह – देवादिवत् इत्यादिना ॥**

ಸರ್ವಕರ್ತೃವಾದ ಈಶ್ವರನು ವೇದದಿಂದ ಸಿದ್ಧನಾಗಿದ್ದಾನೆ. ಆದ್ದರಿಂದ ಪ್ರತ್ಯಕ್ಷದಿಂದ ಕಾಣಿಸುತ್ತಿಲ್ಲವಾದ್ದರಿಂದ ಅನುಪಲಂಭಬಾಧ ಬರುತ್ತದೆಂದು ಆಶಂಕಿಸಬಾರದು. ದೇವತೆಗಳಲ್ಲಿ ಹೇಗೆ ದೃಷ್ಟಪ್ರತಿಬಂಧಸಾಮರ್ಥ್ಯವಿದೆಯೋ, ಅದರಂತೆ ಇವನಲ್ಲೂ ಕೂಡ ದೃಷ್ಟಿಪ್ರತಿಬಂಧ ಸಾಮರ್ಥ್ಯವಿದೆ. ಮತ್ತು ಚಕ್ಷುರಾದಿ ಇಂದ್ರಿಯಗಳಂತೆ ಇವನೂ ಕೂಡ ಅತೀಂದ್ರಿಯನಾಗಿದ್ದಾನೆ.

'ಈಶ್ವರಃ ನಾಸ್ತಿ ಯೋಗ್ಯತ್ವೇ ಸತಿ ಅದೃಶ್ಯಮಾನತ್ವಾತ್ ಖಪುಷ್ಪವತ್' ಎಂಬ ಅನುಮಾನದಿಂದ ಈಶ್ವರನನ್ನು ಇಲ್ಲವೆಂದು ಹೇಳಬಾರದು. ಏಕೆಂದರೆ ಹೇತುವಿನಲ್ಲಿ ಯೋಗ್ಯತ್ವ ಎಂಬ ವಿಶೇಷಣವೇ ಅಸಿದ್ಧವಾಗಿದೆ. ಇವನು ಪ್ರತ್ಯಕ್ಷದಿಂದ ಕಾಣಿಸುತ್ತಿಲ್ಲವಾದ್ದರಿಂದ ಅಯೋಗ್ಯನಾಗಿದ್ದಾನೆ.

ಯುಕ್ತಿಯನ್ನು ಪ್ರಯೋಗಿಸುವ ಮೂಲಕ ಈಶ್ವರನನ್ನು ಇಲ್ಲವೆಂದು ಸಾಧಿಸುವುದು ಸರಿಯಲ್ಲ. ಆ ಯುಕ್ತಿಯು ಯಾವ ಪ್ರಮಾಣವನ್ನು ಉಪಜೀವಿಸಿಕೊಂಡಿದೆಯೋ, ಅಂಥ ಈಶ್ವರಗ್ರಾಹಕವಾದ ಪ್ರಮಾಣದಿಂದ ಈ ಯುಕ್ತಿಯು ಬಾಧಿತವಾಗಿದೆ. ಆದ್ದರಿಂದ ವಾಕ್ಯಗಳಲ್ಲಿ ಪರಸ್ಪರವಿರೋಧವು ಪ್ರಾಪ್ತವಾದಾಗ ಯುಕ್ತಿಯನ್ನು ಅವಲಂಬಿಸಿ ವಿರೋಧವನ್ನು ಪರಿಹಾರ ಮಾಡಬೇಕು. ಇಂಥ ಸಂದರ್ಭದಲ್ಲಷ್ಟೇ ಯುಕ್ತಿಗಳು ಉಪಯುಕ್ತವಾಗುತ್ತವೆ. ಮತ್ತು ಆ ಯುಕ್ತಿಗಳು ಪ್ರತ್ಯಕ್ಷ ಅಥವಾ ಆಗಮವನ್ನು ಅವಲಂಬಿಸಿರಬೇಕು. ಪ್ರತ್ಯಕ್ಷ ಅಥವಾ ಆಗಮವನ್ನು ಅವಲಂಬಿಸಿರದ ಯುಕ್ತಿಗಳು ಶುಷ್ಕತರ್ಕ ಎನಿಸುತ್ತದೆ. ಪ್ರಮಾಣ ಬಾಧಿತವಾಗಿರುತ್ತದೆ. ಇದನ್ನೇ 'ದೇವಾದಿವತ್' ಇತ್ಯಾದಿ ಭಾಷ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

## ತತ್ವಪ್ರದೀಪ

### ವಾಕ್ಯಗಳ ವಿರೋಧಪರಿಹಾರಕ್ಕಾಗಿ ಮಾತ್ರ ಯುಕ್ತಿಗಳು

**तत्वप्रदीपः – ननु जीवादन्यः कर्ताऽस्ति चेत्, दृश्येत । दृश्यन्ते हि लोके दृश्यमानानां घटादीनां कर्तार इत्यत आह – देवादिवदपि लोके ॥ वाक्यानां परस्परविरोध एव युक्तयो भवन्ति । न तु केवलयुक्तयः स्वतन्त्रा युक्तयः स्युः, युक्त्याभासा एव प्रतिसाधनसम्भवात् ।**

ಜೀವನಿಗಿಂತ ಭಿನ್ನನಾದ ಮತ್ತೊಬ್ಬ ಕರ್ತೃ ಇರುವುದಾದಲ್ಲಿ ಕಣ್ಣಿಗೆ ಕಾಣಸಬೇಕಿತ್ತು. ಏಕೆಂದರೆ ಲೋಕದಲ್ಲಿ ಘಟ-ಪಟಾದಿಕಾರ್ಯಗಳಿಗೆ ಕುಲಾಲಾದಿ ಕರ್ತೃಗಳಿರುವುದು ಕಣ್ಣಿಗೆ ಕಾಣಿಸುತ್ತಿದೆ. ಈ ಪ್ರಶ್ನೆಗೆ ಉತ್ತರವನ್ನು ನೀಡಲು 'ದೇವಾದಿವದಪಿ ಲೋಕೇ' ಎಂಬ ಸೂತ್ರವು ಹೊರಟಿದೆ.

ವಾಕ್ಯಗಳಿಗೆ ಪರಸ್ಪರ ವಿರೋಧ ಬಂದರೆ ಮಾತ್ರ ಯುಕ್ತಿಗಳು ಸಾಧಕವಾಗುತ್ತದೆ. ಕೇವಲ ಸ್ವತಂತ್ರವಾದ ಯುಕ್ತಿಗಳು ಏನನ್ನೂ ಕೂಡ ಸಾಧಿಸಲಾರವು. ಅವು ಯುಕ್ತ್ಯಾಭಾಸವೆಂದೇ ಕರೆಸಿಕೊಳ್ಳುತ್ತವೆ. ಏಕೆಂದರೆ ಸ್ವತಂತ್ರವಾದ ಯಾವುದೇ ಯುಕ್ತಿ ಹೇಳಿದರೂ ಅದಕ್ಕೆ ಪ್ರತಿಯಾಗಿ ಮತ್ತೊಂದು ಯುಕ್ತಿಯನ್ನು ಹೇಳಲು ಸಾಧ್ಯವಿದೆ.

### ಕೇವಲ ಯುಕ್ತಿಗಳು ಪ್ರಮಾಣವೇ ಅಲ್ಲ ಎಂಬುದರ ಸಮರ್ಥನೆ

**तत्वप्रदीपः – यथा 'विमतः कर्ता नास्ति, योग्यत्वे सति अनुपलभ्यमानत्वात् सम्प्रतिपन्नवत्' इत्येतस्मिन्नेव, 'जगतः कर्तास्ति तस्य कार्यत्वात्, यत्कार्यं तस्य कर्ताऽस्ति यथा घटस्य' इति नैवमनुमानयिष्यते, आश्रयासिद्धत्वात् हेतोः ।**

'ವಿಮತಃ ಕರ್ತಾ, ನಾಸ್ತಿ, ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್, ಸಂಪ್ರತಿಪನ್ನವತ್' ಈ ಕೋಣೆಯಲ್ಲಿ ಘಟವು ಕಣ್ಣಿಗೆ ಕಾಣಸಲು ಯೋಗ್ಯವಾಗಿದ್ದು ಅನುಪಲಭ್ಯಮಾನವಾಗಿದೆ.

ಆದ್ದರಿಂದ ಇರುವುದಿಲ್ಲ. ಅದರಂತೆ ಕರ್ತೃವೂ ಕೂಡ ಕಣ್ಣಿಗೆ ಗೋಚರನಾಗಿದ್ದೂ ಕೂಡ ಅನುಲಪಲಭ್ಯಮಾನವಾಗಿರುವುದರಿಂದ ಇರುವುದಿಲ್ಲ.

ಈ ಅನುಮಾನಕ್ಕೆ ಪ್ರತಿಯಾಗಿ ಅನುಮಾನ ಮಾಡಬಹುದು -

'ಜಗತಃ ಕರ್ತಾ, ಅಸ್ತಿ, ತಸ್ಯ ಕಾರ್ಯತ್ವಾತ್, ಯತ್ಕಾರ್ಯಂ ತಸ್ಯ ಕರ್ತಾSಸ್ತಿ, ಯಥಾ ಘಟಸ್ಯ' ಘಟವು ಕಾರ್ಯವಾಗಿದೆ. ಅದಕ್ಕೆ ಒಬ್ಬ ಕರ್ತೃ ಇದ್ದೇ ಇದ್ದಾನೆ. ಅದರಂತೆ ಜಗತ್ತು ಕರ್ತೃವಿನ ಕಾರ್ಯವಾಗಿರುವುದರಿಂದ ಕರ್ತೃ ಇದ್ದಾನೆ ಎಂಬುದು ಪ್ರತಿಯಾದ ಅನುಮಾನ.

ಹೀಗೆ ಅನುಮಾನ ಮಾಡಬಾರದು. ಹೇತುವು ಆಶ್ರಯಸಿದ್ಧವಾಗಿದೆ.

ವಿವರಣೆ - 'ನೈವಂ ಅನುಮಾನಯೀಷ್ಯತೇ' ಎಂಬುದಾಗಿ ಪ್ರಯೋಗ ಮಾಡಿದ್ದಾರೆ. ಇದು 'ನೈವಂ ಪ್ರಯುಜ್ಯತೇ' ಎಂಬ ಆಧುನಿಕ ಪ್ರಯೋಗದ ಅರ್ಥದಲ್ಲಿ ಪ್ರಯುಕ್ತವಾಗಿದೆ. ಅನುಮಾನಶಬ್ದದ ಮೇಲೆ ಕ್ಯಚ್ ಪ್ರತ್ಯಯ ಮಾಡಿಕೊಂಡು, ಲೃಟ್ ಲಕಾರದಲ್ಲಿ 'ಅನುಮಾನಯೀಷ್ಯತೇ' ಎಂಬುದಾಗಿ ಪ್ರಯೋಗಿಸಿದ್ದಾರೆ.

ಆಧಾರವಿಲ್ಲದ ಯುಕ್ತಿಗಳು ಅಪ್ರಮಾಣವಾಗುತ್ತವೆ. ಏಕೆಂದರೆ ಹೇತುವಿಗೆ ಆಶ್ರಯಸಿದ್ಧಿದೋಷವು ಪ್ರಾಪ್ತವಾಗುತ್ತದೆ. ಸಾಧ್ಯಧರ್ಮೀ ಆದ ಆಶ್ರಯವು ಇಲ್ಲದಿದ್ದರೆ ಆಶ್ರಯವು ಅಸಿದ್ಧವಾಗುತ್ತದೆ. ಹೇತುವಿಗೆ ಆಶ್ರಯಾಸಿದ್ಧಿದೋಷವು ಬರುತ್ತದೆ. ಪ್ರಕೃತ ಜಗತ್‌ಕರ್ತೃವೆಂಬ ಆಶ್ರಯವೇ ಇಲ್ಲದ ಕಾರಣ ಎರಡು ಅನುಮಾನಗಳಲ್ಲಿರುವ ಹೇತುವಿಗೆ ಆಶ್ರಯಾಸಿದ್ಧಿಯು ಪ್ರಾಪ್ತವಾಗುವುದರಿಂದ ಎರಡು ಅನುಮಾನಗಳೂ ಕೂಡ ಅಪ್ರಮಾಣವೆಂದು ಭಾವಿಸಬೇಕು.

ಆಶ್ರಯಾಸಿದ್ಧಿದೋಷಪ್ರಯುಕ್ತವಾಗಿ ಅನುಮಾನ ದುಷ್ಟವಾಗದು

**तत्वप्रदीपः – न । निषेधहेतोः असतोऽप्याश्रयत्वात्, अन्यथा आश्रयत्वनिषेधस्यैव निर्हेतुकत्वेन असाध्यत्वप्रसङ्गात् ।**

ಇದು ತಪ್ಪು. ನಿಷೇಧಸಾಧ್ಯಕವಾದ ಹೇತುವಿಗೆ ಅಸತ್ತೂ ಕೂಡ ಆಶ್ರಯವಾಗುತ್ತದೆ. ಇಲ್ಲದಿದ್ದರೆ ಆಶ್ರಯತ್ವನಿಷೇಧವೇ ನಿರ್ಹೇತುಕವಾಗುವುದರಿಂದ ಇದನ್ನು ಸಾಧಿಸಲು ಸಾಧ್ಯವಾಗದೇ ಇರಬೇಕಾದೀತು.

ವಿವರಣೆ - ನಿಷೇಧ ಹೇತುವಿಗೆ ಅಸತ್ತೂ ಕೂಡ ಆಶ್ರಯವಾಗುತ್ತದೆ. - 'ಶಶವಿಷಾಣಂ ನಾಸ್ತಿ ಅನುಪಲಭ್ಯಮಾನತ್ವಾತ್' ಎಂಬುದಾಗಿ ಅನುಮಾನ ಮಾಡುತ್ತೇವೆ. ಇಲ್ಲಿ ಸಾಧ್ಯವು ನಿಷೇಧರೂಪವಾಗಿದೆ. ಆದ್ದರಿಂದ ಈ ಸಾಧ್ಯಕ್ಕೆ ಆಶ್ರಯವಾಗಿರುವ ಧರ್ಮಿಯು ಅಸಿದ್ಧವಾದರೂ ಕೂಡ ಆಶ್ರಯಾಸಿದ್ಧಿದೋಷವನ್ನು ಹೇಳಬಾರದು. ಆದ್ದರಿಂದ ನಿಷೇಧಸಾಧ್ಯಕವಾದ ಹೇತುವಿಗೆ ಅಸತ್ತೂ ಕೂಡ ಆಶ್ರಯವಾಗಬಹುದು.

'ವಿಮತಃ ಕರ್ತಾ, ನಾಸ್ತಿ, ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್' ಎಂಬ ಅನುಮಾನಕ್ಕೆ ಆಶ್ರಯಾಸಿದ್ಧಿ ಎಂಬ ದೋಷವಿರುವುದರಿಂದಲೇ ದುಷ್ಟವಾಗಿದೆ ಎಂದು ಹೇಳಬಹುದು. ಇದಕ್ಕೆ ಪ್ರತಿಯಾದ 'ಜಗತಃ ಕರ್ತಾ, ಅಸ್ತಿ, ತಸ್ಯ ಕಾರ್ಯತ್ವಾತ್' ಎಂಬ ಅನುಮಾನದಿಂದ ದೋಷವನ್ನು ಹೇಳುವ ಅವಶ್ಯಕತೆಯಿಲ್ಲ. ಆಶ್ರಯಾಸಿದ್ಧಿದೋಷ-ವಿರುವುದರಿಂದಲೇ ಯಾರೂ ಕೂಡ 'ವಿಮತಃ ಕರ್ತಾ ನಾಸ್ತಿ' ಎಂಬುದಾಗಿ ಸಾಧನೆ ಮಾಡುವುದಿಲ್ಲ ಎಂಬುದಾಗಿ ಈ ಹಿಂದೆ ಹೇಳಲಾಯಿತು. ಇದು ಸರಿಯಲ್ಲ.

ಪ್ರಕೃತ 'ವಿಮತಃ ಕರ್ತಾ, ನಾಸ್ತಿ, ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್' ಎಂಬುದಾಗಿ ಅನುಮಾನವನ್ನು ಪ್ರಯೋಗ ಮಾಡಿದಾಗ, ಸಾಧ್ಯವು ನಿಷೇಧರೂಪವಾಗಿದೆ. ಇದನ್ನು ಸಾಧಿಸುವ ಅನುಪಲಭ್ಯಮಾನತ್ವವೆಂಬ ಹೇತುವಿಗೆ ಯಾವ ಜಗತ್‌ಕರ್ತೃವು ಆಶ್ರಯವಾಗಿದ್ದಾನೋ, ಇವನು ಅಸಿದ್ಧವಾದರೂ ಕೂಡ ಅನುಮಾನಕ್ಕೆ ಆಶ್ರಯಾಸಿದ್ಧಿ-ದೋಷವನ್ನು ಹೇಳಲು ಸಾಧ್ಯವಿಲ್ಲ.

ಒಂದುವೇಳೆ ನಿಷೇಧಸಾಧ್ಯಕಹೇತುವಿಗೆ ಅಸತ್ತು ಆಶ್ರಯ ಆಗದಿದ್ದರೆ ಆಶ್ರಯಾಸಿದ್ಧಿ ಬರುವುದಿಲ್ಲವೆಂದು ಹೇಳಲು ಹೇತುವೇ ಇಲ್ಲವೆಂದಾಗುತ್ತದೆ. ಅದು ಹೀಗೆ - 'ಆಶ್ರಯಾಸಿದ್ಧಿದೋಷವನ್ನು ಯಾರು ಹೇಳುತ್ತಾರೋ, ಅವರು ಆಶ್ರಯವನ್ನು ನಿಷೇಧ ಮಾಡುತ್ತಾರೆ. ಆಗ ಆಶ್ರಯಾನಿಷೇಧಕ್ಕೂ ಕೂಡ ಹೇತುವಿಲ್ಲ ಎಂದು ಹೇಳಿದಂತಾಗುತ್ತದೆ. ''ವಿಮತಃ ಕರ್ತಾ ಇತ್ಯಯಂ ಪಕ್ಷಃ ಹೇತೋಃ ನಾಶ್ರಯಃ'' ಎಂಬ ಪ್ರತಿಜ್ಞೆಗೆ ಏನಾದರೂ ಹೇತುವನ್ನು ಹೇಳಬೇಕು. ಆದರೆ ಆಶ್ರಯವೇ ಇಲ್ಲವೆಂದಾದ ಮೇಲೆ ಇದಕ್ಕೆ ಹೇತುವನ್ನು ಹೇಳಲು ಹೇಗೆ ಸಾಧ್ಯವಾಗುತ್ತದೆ ? ಆದ್ದರಿಂದ ಯಾರು ಆಶ್ರಯಾಸಿದ್ಧಿದೋಷವನ್ನು ಹೇಳುತ್ತಾರೋ, ಅವರಿಗೆ ಪಕ್ಷವು ಹೇತುವಿಗೆ ಆಶ್ರಯವಾಗುವುದಿಲ್ಲವೆಂದೂ ಕೂಡ ಹೇಳಲು ಸಾಧ್ಯವಾಗುವುದಿಲ್ಲ. ಹಾಗಾಗಿ ಆಶ್ರಯಾಸಿದ್ಧಿಯನ್ನು ದೋಷವೆಂದು ಅಂಗೀಕಾರ ಮಾಡಬಾರದು. ಆದ್ದರಿಂದ ವಿಮತಃ ಕರ್ತಾ ನಾಸ್ತಿ ಯೋಗ್ಯತ್ವೇ ಇತಿ ಅನುಲಭ್ಯಮಾನತ್ವಾತ್' ಎಂಬುದಾಗಿ ಅನುಮಾನವನ್ನು ಪ್ರಯೋಗ ಮಾಡಿದರೆ ಆಶ್ರಯಾಸಿದ್ಧಿದೋಷಪ್ರಯುಕ್ತವಾಗಿ

ಸ್ವತಃ ತಾನು ದುಷ್ಟವೆಂದು ಸಿದ್ಧವಾಗುವುದಿಲ್ಲ. ಇದಕ್ಕೆ ಪ್ರತಿಯಾದ 'ಜಗತಃ ಕರ್ತಾ, ಅಸ್ತಿ, ತಸ್ಯ ಕಾರ್ಯತ್ವಾತ್' ಎಂಬ ಅನುಮಾನದಿಂದಲೇ ಇದು ದುಷ್ಟವಾಗಬೇಕು.

ಅನುಮಾನವು ಪ್ರಮಾಣವಾಗುವುದಾದರೆ ಈಶ್ವರನಿಲ್ಲ ಎಂದಾಗಲಿ

**तत्वप्रदीपः – अस्तु तर्हि निषेधहेतोः असदाश्रयत्वम् । तथाऽपि न परकीयहेतोः तादृक्त्वं युक्तम् । यदि पक्षादन्य आश्रयः, अतो तर्हि महानेष्वेव दोषः । न हि भिन्नाधिकरणत्वं साध्यसाधनयोः साम्प्रतम् । जगन्निर्मातुः खल्वस्तित्वं साध्यते । साधनधर्मो निर्मेयाधिकरण इत्यसिद्धः । पक्षवृत्त्यभावात्।**

ನಿಷೇಧಸಾಧ್ಯಕವಾದ ಹೇತುವಿಗೆ ಆಶ್ರಯವು ಅಸಿದ್ಧವಾಗಿರಬಹುದು ಎಂಬುದನ್ನು ಅಂಗೀಕರಿಸೋಣ. ಆದರೆ ಪರಕೀಯನ ಕಾರ್ಯತ್ವಹೇತುವಿಗೆ ಅಸದಾಶ್ರಯತ್ವವು ಯುಕ್ತವಾಗುವುದಿಲ್ಲ. ಒಂದು ವೇಳೆ ಪಕ್ಷವನ್ನು ಬಿಟ್ಟು, ಬೇರೆ ಪದಾರ್ಥವು ಆಶ್ರಯವಾಗುತ್ತದೆನ್ನಬೇಕು. ಆಗ ಹೀಗೆ ಅನುಮಾನವನ್ನು ಪ್ರಯೋಗಿಸುವವರಿಗೆ ದೊಡ್ಡ ದೋಷ ಬರುತ್ತದೆ. ಏಕೆಂದರೆ ಸಾಧ್ಯಸಾಧನಗಳಿಗೆ ಭಿನ್ನಾಧಿಕರಣತ್ವವು ಯುಕ್ತವಾಗುವುದಿಲ್ಲ. ಜಗನ್ನಿರ್ಮಾತೃವಿನಲ್ಲಿ ಅಸ್ತಿತ್ವವನ್ನು ಸಾಧನೆ ಮಾಡಲಾಗುತ್ತಿದೆ. ಸಾಧನಧರ್ಮವೆನಿಸಿದ ಕಾರ್ಯತ್ವವು ಆ ಜಗನ್ನಿರ್ಮಾತೃವಿನಲ್ಲಿ ಇರುವುದಿಲ್ಲ. ಸಾಧನಧರ್ಮದ ಅಧಿಕರಣವು ನಿರ್ಣಯವಾಗಿದೆ. ಆದ್ದರಿಂದಲೇ ಅಸಿದ್ಧವಾಗುತ್ತದೆ. ಏಕೆಂದರೆ ಕಾರ್ಯತ್ವವಿರುವುದು ಜಗತ್ತಿನಲ್ಲಿ ಹೊರತು, ಪಕ್ಷದಲ್ಲಿ ಅಲ್ಲ.

ವಿವರಣೆ - ಎರಡು ಅನುಮಾನಗಳಲ್ಲಿ ಅಸದಾಶ್ರಯತ್ವವು ಇದ್ದೇ ಇರುತ್ತದೆ. ಆದರೆ ಮೊದಲನೆಯ ಅನುಮಾನದಲ್ಲಿ ಹೇತುವು ನಿಷೇಧಸಾಧಕವಾಗಿರುವುದರಿಂದ ಅದರ ಆಶ್ರಯವು ಅಸಿದ್ಧವಾಗಬಹುದು. ಆದರೆ ಎರಡನೆಯ ಅನುಮಾನದಲ್ಲಿ ಇರುವ ಹೇತುವು ನಿಷೇಧಸಾಧ್ಯಕವಲ್ಲವಾದ್ದರಿಂದ ಅಸದಾಶ್ರಯತ್ವವು ಯುಕ್ತವಾಗುವುದಿಲ್ಲ. ಹೀಗೆ ಹೇಳಿದಾಗ ಪೂರ್ವಪಕ್ಷದವರು ಉತ್ತರಿಸುತ್ತಾರೆ. ಹೇತುವಿಗೆ ಆಶ್ರಯವಿಲ್ಲವೆಂದು ಹೇಳಿದರೆ ದೋಷವು ಪ್ರಾಪ್ತವಾಗುತ್ತದೆ. ಆದರೆ ಪಕ್ಷಾತಿರಿಕ್ತವಾದದ್ದು ಆಶ್ರಯವಾಗುತ್ತದೆಂದು ಹೇಳುತ್ತೇವೆ. ಪಕ್ಷಾತಿರಿಕ್ತವಾದ ಜಗತ್ತಿನಲ್ಲಿ ಕಾರ್ಯತ್ವವೆಂಬ ಹೇತುವಿದೆ. ಪಕ್ಷದಲ್ಲಿ ಅಸ್ತಿತ್ವವಿದೆ.

ಎಂಬುದಾಗಿ ಪೂರ್ವಪಕ್ಷಿಯು ತನ್ನ ಅನುಮಾನವನ್ನು ನಿರ್ದುಷ್ಟವೆಂದು ಸಮರ್ಥಿಸಿ-ಕೊಳ್ಳುತ್ತಾನೆ.

ಹೀಗೆ ಅನುಮಾನವನ್ನು ಪ್ರಯೋಗ ಮಾಡುವವರಲ್ಲಿ ಇದೊಂದು ದೊಡ್ಡ ದೋಷ ಬರುತ್ತದೆ - ಕಾರ್ಯತ್ವಹೇತುವಿಗೆ ಪಕ್ಷವೃತ್ತಿತ್ವವು ಇರುವುದಿಲ್ಲ. ಆದ್ದರಿಂದ ಹೇತುವಿಗೆ ಅಸಿದ್ಧಿದೋಷವು ಬರುತ್ತದೆ. ಆದ್ದರಿಂದ ಭಿನ್ನಾಧಿಕರಣತ್ವವನ್ನು ನಿನ್ನಿಂದ ಹೇಳಲು ಸಾಧ್ಯವಿಲ್ಲ. ಸಾಧ್ಯಸಾಧನಗಳಿಗೆ ವೈಯಧಿಕರಣ್ಯವಿದೆ. ಏಕೆಂದರೆ ಕಾರ್ಯತ್ವಹೇತುವು ಜಗತ್ತಿನಲ್ಲಿದೆ. ಅಸ್ತಿತ್ವವು ಕರ್ತೃವಿನಲ್ಲಿದೆ. ಆದ್ದರಿಂದ ಸಾಧನಧರ್ಮದ ಅಧಿಕರಣವು ನಿರ್ಣಯವಾಯಿತು. ಹಾಗಾಗಿ ಹೇತುವಿಗೆ ಪಕ್ಷವೃತ್ತಿತ್ವವಿಲ್ಲದ ಕಾರಣ ಅಸಿದ್ಧಿದೋಷವು ಪ್ರಾಪ್ತವಾಗುತ್ತದೆ.

ಹೀಗೆ ಎರಡನೆಯ ಅನುಮಾನದಲ್ಲಿರುವ ಕಾರ್ಯತ್ವಹೇತುವು ನಿಷೇಧಸಾಧ್ಯಕವಲ್ಲದ ಕಾರಣ ಆಶ್ರಯಾಸಿದ್ಧಿದೋಷವನ್ನು ಹೊಂದುತ್ತದೆ. ಆದ್ದರಿಂದಲೇ ದುಷ್ಟವಾಗುತ್ತದೆ. ಹಾಗಾಗಿ ಯುಕ್ತಿಯಿಂದ ಈಶ್ವರನನ್ನು ಸಾಧನೆ ಮಾಡುವುದಾದರೆ 'ವಿಮತಃ ಕರ್ತಾ ನಾಸ್ತಿ ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್' ಎಂಬ ಅನುಮಾನಕ್ಕೆ ಯಾವುದೇ ದೋಷವು ಬರುವುದಿಲ್ಲ. ಆದ್ದರಿಂದ ಯುಕ್ತಿಯಿಂದಲೇ ಈಶ್ವರನು ಇಲ್ಲವೆಂದು ಸಿದ್ಧವಾಗುತ್ತದೆ. ಎರಡನೆಯ 'ಜಗತಃ ಕರ್ತಾ, ಅಸ್ತಿ, ತಸ್ಯ ಕಾರ್ಯತ್ವಾತ್' ಎಂಬ ಅನುಮಾನವು ದುಷ್ಟವಾದ್ದರಿಂದ ಮೊದಲನೆಯ ಅನುಮಾನಕ್ಕೆ ಸತ್ಪ್ರತಿಪಕ್ಷ ಎನಿಸುವುದಿಲ್ಲ. ಆದ್ದರಿಂದ ಮೊದಲನೆಯ ಅನುಮಾನವೇ ನಿರ್ದುಷ್ಟವಾಗುತ್ತದೆ. ತನ್ಮೂಲಕವಾಗಿ ಈಶ್ವರನು ಇಲ್ಲವೆಂದು ಯುಕ್ತಿಯಿಂದ ಸಿದ್ಧವಾಗುತ್ತದೆ ಎಂಬುದು ಅಭಿಪ್ರಾಯ.

### ವೈಯಧಿಕರಣ್ಯವು ಅನುಮಾನದಲ್ಲಿ ದೋಷವಲ್ಲ

**तत्वप्रदीपः – तदपि प्रलापमात्रम् । व्याप्तिसद्भावे साध्यसाधनयोरधिकरण-भेदस्य अकिञ्चित्करत्वात् । तदभावे तदेव दूषणं, नान्वेषणीयमपरम् । व्याप्त्यभावादेव शब्दनित्यत्वादौ घटकृतकत्वादेरहेतुत्वं न व्यधिकरणत्वात् । अधिकरणभेदेऽपि व्याप्यस्य हेतुत्वदर्शनात् ।**

**उक्तं च गुरुभिः –**

**रोहिण्युदय आसन्नः कृत्तिकाऽभ्युदिता यतः ।**
**इत्युक्ते साधनं नो किं न ह्याज्ञैवात्र साधिका' इति ।**

**अतो व्याप्तिरेव प्रयोजिका । न च जगतः कर्तारमन्तरेण कार्यत्वं युक्तम्।**

ಇದೂ ಕೂಡ ಕೇವಲ ವ್ಯರ್ಥವಾದ ಮಾತುಗಳು. ಏಕೆಂದರೆ ವ್ಯಾಪ್ತಿಯು ಇದ್ದರೆ ಸಾಧ್ಯಸಾಧನಗಳ ವೈಯಧಿಕರಣ್ಯವು ಅಕಿಂಚಿತ್ಕರವಾಗುತ್ತದೆ. ವ್ಯಾಪ್ತಿಯಿಲ್ಲದಿದ್ದರೆ ವ್ಯಾಪ್ತಿಯಿಲ್ಲವೆಂಬುದೇ ದೋಷವಾಗುತ್ತದೆ. ಮತ್ತೊಂದು ದೋಷವನ್ನು ಅನುಮಾನದಲ್ಲಿ ಹುಡುಕುವ ಅವಶ್ಯಕತೆಯಿರುವುದಿಲ್ಲ. ಉದಾಹರಣೆ - 'ಶಬ್ದಃ ನಿತ್ಯಃ ಘಟಸ್ಯ ಕೃತಕತ್ವಾತ್' ಎಂಬುದಾಗಿ ಅನುಮಾನ ಮಾಡಿದರೆ, ವ್ಯಾಪ್ತಿಯಿಲ್ಲದ್ದರಿಂದಲೇ ಅನುಮಾನವನ್ನು ದುಷ್ಟವೆನ್ನುತ್ತಾರೆ. ವ್ಯಧಿಕರಣವಾಗಿರುವುದರಿಂದ ದುಷ್ಟವೆಂದು ಯಾರೂ ಹೇಳುವುದಿಲ್ಲ. ಏಕೆಂದರೆ ಅಧಿಕರಣಭೇದವಿದ್ದರೂ ವ್ಯಾಪ್ಯವು ಹೇತುವಾಗಿರುವುದು ಕಂಡಿದೆ. ಇದನ್ನು ಗುರುಗಳಾದ ಶ್ರೀಮಧ್ವಾಚಾರ್ಯರು ಹೇಳಿದ್ದಾರೆ -

ರೋಹಿಣ್ಯುದಯ ಆಸನ್ನಃ ಕೃತ್ತಿಕಾಽಭ್ಯುದಿತಾ ಯತಃ ।
ಇತ್ಯುಕ್ತೇ ಸಾಧನಂ ನೋ ಕಿಂ ನ ಹ್ಯಾಜ್ಞೈವಾತ್ರ ಸಾಧಿಕಾ ॥

'ರೋಹಿಣ್ಯುದಯ ಆಸನ್ನಃ ಕೃತ್ತಿಕಾಯಾಃ ಅಭ್ಯುದಿತ್ವಾತ್' ಎಂಬುದಾಗಿ ಸಾಧನೆ ಮಾಡಿದಾಗ ಇದು ಸಾಧಕವಾಗುವುದಿಲ್ಲವೇನು? ಸಾಧಕವಾಗುವುದಿಲ್ಲವೆಂಬ ನಿನ್ನ ಆಜ್ಞೆಯು ಸಾಧಕವಾಗುವುದಿಲ್ಲ. ಆದ್ದರಿಂದ ವ್ಯಾಪ್ತಿಯು ಪ್ರಯೋಜಕವಾಗಿದೆ. ಪ್ರಕೃತ ಜಗತ್ತಿನ ಕರ್ತೃವನ್ನು ಬಿಟ್ಟು, ಕಾರ್ಯತ್ವವು ಯುಕ್ತವಾಗುವುದಿಲ್ಲ. ಆದ್ದರಿಂದ ವ್ಯಾಪ್ತಿಯು ಇದ್ದೇ ಇದೆ.

ವಿವರಣೆ - 'ಜಗತಃ ಕರ್ತಾ ಅಸ್ತಿ ತಸ್ಯ ಕಾರ್ಯತ್ವಾತ್' ಎಂಬ ಅನುಮಾನವು ದುಷ್ಟವಾಗಿರುವುದರಿಂದ, 'ವಿಮತಃ ಕರ್ತಾ ನಾಸ್ತಿ ಯೋಗ್ಯತ್ವೇ' ಎಂಬ ಅನುಮಾನಕ್ಕೆ ಯಾವುದೇ ದೋಷವು ಬರುವುದಿಲ್ಲ. ಮೊದಲನೆಯ ಅನುಮಾನವು ನಿರ್ದುಷ್ಟವಾಗಿದೆ ಎಂಬುದಾಗಿ ಏನು ಹೇಳಲ್ಪಟ್ಟಿತೋ, ಇದೂ ಕೂಡ ಕೇವಲ ಪ್ರಲಾಪವಾಗಿದೆ. ಏಕೆಂದರೆ ವ್ಯಾಪ್ತಿ ಇದ್ದಾಗ ಸಾಧ್ಯಸಾಧನಗಳ ವೈಯಧಿಕರಣ್ಯವು ದೋಷವೇ ಆಗುವುದಿಲ್ಲ. ವ್ಯಾಪ್ತಿಯಿಲ್ಲದಿದ್ದರೆ ವ್ಯಾಪ್ತಿಯಿಲ್ಲವೆಂಬುದೇ ದೋಷವಾಗುತ್ತದೆ ಹೊರತು, ಪುನಃ ಅಲ್ಲಿ

ವೈಯಧಿಕರಣ್ಯದೋಷವನ್ನು ಹುಡುಕುವ ಆವಶ್ಯಕತೆಯಿರುವುದಿಲ್ಲ. ಉದಾಹರಣೆ - 'ಶಬ್ದಃ ನಿತ್ಯಃ ಘಟಸ್ಯ ಕೃತಕತ್ವಾತ್' ಎಂದು ಹೇಳಿದಾಗ ಕೃತಕತ್ವವು ಘಟದಲ್ಲಿದೆ, ನಿತ್ಯತ್ವವು ಶಬ್ದದಲ್ಲಿದೆ. ಇಲ್ಲಿ ವ್ಯಾಪ್ಯವ್ಯಾಪಕಗಳಿಗೆ ವೈಯಧಿಕರಣ್ಯವಿರುವುದರಿಂದ ಅನುಮಾನವನ್ನು ದುಷ್ಟವೆಂದು ಯಾರೂ ಹೇಳುವುದಿಲ್ಲ. ವ್ಯಾಪ್ತಿಯಿಲ್ಲವಾದ್ದರಿಂದ ದುಷ್ಟವೆಂದೇ ಎಲ್ಲರೂ ಹೇಳುತ್ತಾರೆ. ಆದ್ದರಿಂದ ವೈಯಧಿಕರಣ್ಯವನ್ನು ದೋಷವೆಂದು ನೀವು ಪರಿಗಣಿಸಿದ್ದೇ ತಪ್ಪು. ಅನುಮಾನಕ್ಕೆ ಸಾಮಾನಾಧಿಕರಣ್ಯವು ಪ್ರಯೋಜಕವಲ್ಲ. ವ್ಯಾಪ್ತಿಯೇ ಪ್ರಯೋಜಕವಾಗಿದೆ. ಹಾಗಾಗಿ ಶ್ರೀಮದಾಚಾರ್ಯರು 'ರೋಹಿಣ್ಯುದಯ ಆಸನ್ನಃ ಕೃತ್ತಿಕಾಯಾಃ ಅಭ್ಯುದಿತತ್ವಾತ್' ಎಂಬ ಅನುಮಾನವನ್ನು ನಿರ್ದುಷ್ಟಾನುಮಾನವೆಂದು ಪರಿಗಣಿಸಿದ್ದಾರೆ. ಈ ಅನುಮಾನದಲ್ಲಿ ಕೃತ್ತಿಕೆಯ ಉದಯವು ಹೇತು ಹಾಗೂ ಸಾಧ್ಯವು ಬೇರೆ ಬೇರೆ ಅಧಿಕರಣದಲ್ಲಿದೆ. ಆದರೂ ಕೂಡ ಇದು ಸಾಧಕವಾಗುತ್ತದೆ. ಒಂದು ವೇಳೆ ಪೂರ್ವಪಕ್ಷಿಯಾದ ನೀನು ಹೇತುಸಾಧಕವಾಗುವುದಿಲ್ಲವೆಂದು ಆಜ್ಞೆ ಮಾಡಿದ ಮಾತ್ರಕ್ಕೆ ಸಾಧಕವಾಗುವುದಿಲ್ಲ ಎಂದೇನಿಲ್ಲ. ಅದರಂತೆ ಪ್ರಕೃತ 'ಜಗತಃ ಕರ್ತಾ ಅಸ್ತಿ ತಸ್ಯ ಕಾರ್ಯತ್ವಾತ್' ಎಂಬುದಾಗಿ ಅನುಮಾನ ಮಾಡಿದಾಗ, ಹೇತುಸಾಧ್ಯಗಳಿಗೆ ವೈಯಧಿಕರಣ್ಯವಿರಬಹುದು. ಆದರೆ ಜಗತ್ ಕಾರ್ಯತ್ವವು ಜಗತ್‌ಕರ್ತೃತ್ವವನ್ನು ಬಿಟ್ಟು ಇರಲು ಸಾಧ್ಯವಿಲ್ಲ. ಹೀಗೆ ಕಾರ್ಯತ್ವ ಹಾಗೂ ಕರ್ತೃತ್ವಗಳಿಗೆ ವ್ಯಾಪ್ತಿಯಿರುವುದರಿಂದ ಈ ಅನುಮಾನವನ್ನು ನಿರ್ದುಷ್ಟವೆಂದೇ ಪರಿಗಣಿಸಬೇಕು. ಎರಡನೆಯ ಅನುಮಾನವು ನಿರ್ದುಷ್ಟವಾದ್ದರಿಂದ ಮೊದಲನೆಯ ಅನುಮಾನಕ್ಕೆ ಇದು ಪ್ರತಿಪಕ್ಷಾನುಮಾನ ಆಗುತ್ತದೆ.

### ಅನುಮಾನದಿಂದ ಈಶ್ವರನನ್ನು ಸಾಧಿಸಬಹುದಲ್ಲವೇ?

**तत्वप्रदीपः – न चात्र सशरीरत्वमुपाधिः । प्रतिसाधनस्यैव उपाधित्वात् । तस्य चात्र अदृष्टत्वात् । 'न तस्य कार्यं करणं च विद्यते' 'सदेहः सुखगन्धश्च' इत्यादिश्रुतेः जगत्कर्तुरशरीरत्वात् स्वरूपचैतन्यदेहत्वाच्च श्रुत्यवसिते कर्तरि वः किमनुमानं फलतीति चेत्,**

ಎರಡನೆಯ ಅನುಮಾನಕ್ಕೆ ಸಶರೀರತ್ವವನ್ನು ಉಪಾಧಿಯೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಸಾಧನದ ವಿರೋಧಿಗೆ ಅನುಕೂಲವಾದ ಧರ್ಮವೇ ಉಪಾಧಿಯಾಗುತ್ತದೆ. ಇಂಥ ಧರ್ಮವು ಪ್ರಕೃತ ಕಾಣಸುತ್ತಿಲ್ಲ. ಮತ್ತು 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬ

ಶ್ರುತಿಯಿಂದ ಜಗತ್ಕರ್ತೃವಿಗೆ ಶರೀರವಿದೆ ಎಂದು ತಿಳಿಯುತ್ತಿದೆ. 'ಸದ್ದೇಹಃ ಸುಖಗಂಧಶ್ಚ' ಎಂಬ ಶ್ರುತಿಯಿಂದ ಚೇತನಾತ್ಮಕವಾದ ದೇಹವಿದೆಯೆಂದು ತಿಳಿಯುತ್ತಿದೆ. ಹೀಗೆ ಶ್ರುತಿಯ ಬೆಂಬಲವಿರುವುದರಿಂದ ಎರಡನೆಯ ಅನುಮಾನವು ನಿರ್ದುಷ್ಟವೇ ಆಗುತ್ತದೆ. ಆಗ ಮೊದಲನೆಯ ನಿಮ್ಮ ಅನುಮಾನವು ಏನು ಫಲವನ್ನು ಕೊಟ್ಟಂತಾಯಿತು?

ವಿವರಣೆ - 'ಜಗತಃ ಕರ್ತಾ ಅಸ್ತಿ ತಸ್ಯ ಕಾರ್ಯತ್ವಾತ್' ಎಂಬ ಅನುಮಾನವನ್ನು ಪ್ರಯೋಗ ಮಾಡಿದರೆ ಅರ್ಥಾತ್ ಸಕರ್ತೃಕತ್ವವನ್ನೇ ಸಾಧನೆ ಮಾಡಿದಂತಾಯಿತು. 'ಯತ್ ಸಕರ್ತೃಕಂ ತತ್ ಶರೀರಜನ್ಯಂ' ಎಂಬ ವ್ಯಾಪ್ತಿಯು ಲೋಕದಲ್ಲಿ ಸಿದ್ಧವಾಗಿದೆ. ಪ್ರಕೃತ ಶರೀರವಿಲ್ಲದ ಕಾರಣ ಕರ್ತೃವೂ ಕೂಡ ಇಲ್ಲವೆಂದು ಸಾಧಿಸುತ್ತೇವೆ ಎಂಬುದಾಗಿ ಪ್ರಥಮಾನುಮಾನವನ್ನು ಪ್ರಯೋಗ ಮಾಡುವವನು ಆಕ್ಷೇಪಿಸುತ್ತಿದ್ದಾನೆ.

('ಜಗತಃ ಕರ್ತಾ ಅಸ್ತಿ ತಸ್ಯ ಕಾರ್ಯತ್ವಾತ್' ಎಂಬ ಅನುಮಾನದಲ್ಲಿ ಅಸ್ತಿತ್ವವು ಸಾಧ್ಯವಾಗಿದೆ. ಕಾರ್ಯತ್ವವು ಹೇತುವಾಗಿದೆ. ಇಂಥ ಸಂದರ್ಭದಲ್ಲಿ ಸಶರೀರತ್ವವೆಂಬ ಉಪಾಧಿಗೆ ಸಾಧ್ಯವ್ಯಾಪಕತ್ವ, ಹಾಗೂ ಸಾಧನ ಅವ್ಯಾಪಕತ್ವವನ್ನು ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆ ಬರುತ್ತದೆ. ಆದರೆ ಇಲ್ಲಿ ಈ ಅನುಮಾನದಿಂದ ಅರ್ಥಾತ್ ಸಿದ್ಧವಾಗುವ ನಿಷೇಧ ಮೇಲೆ ಈ ಉಪಾಧಿದೋಷವನ್ನು ಪರಿಗಣಿಸಬೇಕು. ಜಗತ್ತಿಗೆ ಕರ್ತೃವಿದ್ದಾನೆ ಎಂದು ಹೇಳಿದಾಗ 'ಜಗತ್ ಸಕರ್ತೃಕಂ ಕಾರ್ಯತ್ವಾತ್' ಎಂದೇ ಹೇಳಿದಂತಾಗುತ್ತದೆ. ಈಗ ಯತ್ರ ಸಕರ್ತೃಕತ್ವಂ ತತ್ರ ಸಶರೀರತ್ವಂ' ಎಂಬುದಾಗಿ ಸಾಧ್ಯವ್ಯಾಪಕತ್ವವನ್ನು ಹೇಳಬಹುದು. ಕಾರ್ಯತ್ವವಿರುವಲ್ಲಿ ಸಶರೀರತ್ವವಿಲ್ಲದ ಕಾರಣ, ಸಾಧನಾವ್ಯಾಪಕತ್ವವನ್ನೂ ಕೂಡ ಹೇಳಬಹುದು ಎಂಬುದು ಪ್ರಕೃತ ಆಕ್ಷೇಪಕಾರರ ಅಭಿಪ್ರಾಯವಾಗಿದೆ.)

ಹೀಗೆ ಉಪಾಧಿದೋಷವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಯಾವುದು ಉಪಾಧಿಯಾಗುತ್ತದೆ ಎಂದರೆ ಸಾಧನಕ್ಕೆ ವಿರೋಧಿಯಾದ ಯಾವ ಧರ್ಮವಿದೆಯೋ, ಅದನ್ನೇ ಉಪಾಧಿಯೆಂದು ಪರಿಗಣಿಸಬೇಕು. ಸಾಧ್ಯಾಭಾವಸಾಧನೆಗೆ ಅನುಕೂಲವಾಗಬೇಕು ಎಂದರ್ಥ. ಪ್ರಕೃತ 'ಜಗತಃ ಕರ್ತಾ ಅಸ್ತಿ ತಸ್ಯ ಕಾರ್ಯತ್ವಾತ್' ಎಂಬ ಅನುಮಾನದಲ್ಲಿ ಸಾಧ್ಯಾಭಾವಕ್ಕೆ = ಕರ್ತೃತ್ವಾಭಾವಕ್ಕೆ ಸಾಧಕವಾದ ಧರ್ಮವನ್ನು ಉಪಾಧಿಯೆನ್ನಬೇಕು. ಇಂಥ ಧರ್ಮವನ್ನು ಪ್ರಕೃತ ನಿಮ್ಮಿಂದ ಹೇಳಲು ಸಾಧ್ಯವಿಲ್ಲ. ಏಕೆಂದರೆ ಅನೇಕ ಶ್ರುತಿವಾಕ್ಯಗಳಿಂದ ಜಗತ್ಕರ್ತೃವಿಗೆ ದೇಹವಿದೆಯೆಂದೇ ಸ್ಪಷ್ಟವಾಗಿ ತಿಳಿಯುತ್ತಿದೆ.

'ನ ತಸ್ಯ ಕಾರ್ಯಂ ಕರಣಂಚ ವಿದ್ಯತೇ' ಎಂಬ ಶ್ರುತಿ ವಾಕ್ಯದಲ್ಲಿ ಕರಣಶಬ್ದದಿಂದ ಜಗತ್‌ಕರ್ತೃವಿಗೆ ದೇಹವಿದೆ ಎಂದು ತಿಳಿಯುತ್ತಿದೆ. 'ಸದ್ದೇಹಃ ಸುಖಗಂಧಶ್ಚ' ಎಂಬ ಪೈಂಗೀಶ್ರುತಿಯ ಪೂರ್ಣವಾಕ್ಯ ಹೀಗಿದೆ -

ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ತತ್ ಪರಾಕ್ರಮಃ ।
ಜ್ಞಾನಜ್ಞಾನಃ ಸುಖಸುಖಃ ಸವಿಷ್ಣುಃ ಪರಮೋ ಮತಃ ॥

ಈ ಶ್ರುತಿಯಲ್ಲಿ 'ಸದ್ದೇಹ' ಎಂಬ ಪದದಿಂದ ಚೇತನಾತ್ಮಕವಾದ ದೇಹವುಳ್ಳನೆಂದು ತಿಳಿಯುತ್ತಿದೆ. ಹೀಗೆ ಶ್ರುತಿಗಳ ಆಧಾರದಿಂದ 'ಜಗತಃ ಕರ್ತಾ ಅಸ್ತಿ ತಸ್ಯ ಕಾರ್ಯತ್ವಾತ್' ಎಂಬ ಎರಡನೆಯ ಅನುಮಾನವು ನಿರ್ದುಷ್ಟವೆಂದು ಸಿದ್ಧವಾಯಿತು. ಶ್ರುತಿಗಳ ಆಧಾರವಿರುವುದರಿಂದ ಅನುಮಾನವು ಸಾಧಕವಾಗುತ್ತದೆ. ಆದ್ದರಿಂದ 'ವಿಮತಃ ಕರ್ತಾ ನಾಸ್ತಿ ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್' ಎಂಬ ಮೊದಲನೆಯ ಅನುಮಾನವು ದುಷ್ಟವಾಯಿತು. ಏಕೆಂದರೆ ಪ್ರಥಮಾನುಮಾನಕ್ಕೆ ಯಾವುದೇ ಶ್ರುತಿಗಳ ಆಧಾರ ಇರುವುದಿಲ್ಲ.

### ಉಪಾಧಿದೋಷಗ್ರಸ್ತವಾದ್ದರಿಂದ ಸಾಧ್ಯವಿಲ್ಲ

**ತತ್ವಪ್ರದೀಪः – मैवम् । प्रमाणबाहुल्ये दार्ढ्यदर्शनात् । मानसिद्धेऽपि हि मानान्तरमाद्रियन्ते परीक्षकाः । श्रुत्यननुसारे चोपाधिदोषो दुर्निवार इत्यवादिष्म ।**

ಇದು ತಪ್ಪು. ಪ್ರಮಾಣಬಾಹುಲ್ಯವಿದ್ದಾಗ ದಾರ್ಢ್ಯವಿರುವುದು ಕಂಡಿದೆ. ಪ್ರಮಾಣದಿಂದ ಸಿದ್ಧವಾದ ವಿಷಯದಲ್ಲೂ ಕೂಡ ಜ್ಞಾನಿಜನರು ಮತ್ತೊಂದು ಪ್ರಮಾಣದಲ್ಲಿ ಆಧಾರವುಳ್ಳವ-ರಾಗುತ್ತಾರೆ. ಶ್ರುತಿಯನ್ನು ಅನುಸರಿಸದೇ ಇದ್ದಾಗ ಉಪಾಧಿದೋಷ ಬಂದೇ ಬರುತ್ತದೆಂಬುದು ನನ್ನ ಅಭಿಪ್ರಾಯ.

ವಿವರಣೆ - ಶ್ರುತಿಯನ್ನು ಅನುಸರಿಸದೇ ಇದ್ದಾಗ 'ಜಗತಃ ಕರ್ತಾ ಅಸ್ತಿ ತಸ್ಯ ಕಾರ್ಯತ್ವಾತ್' ಎಂಬ ಅನುಮಾನಕ್ಕೆ ಸಶರೀರತ್ವವೆಂಬ ಉಪಾಧಿದೋಷವು ಪ್ರಾಪ್ತವಾಗುತ್ತದೆ. ಆಗ ಪ್ರಥಮಾನುಮಾನಕ್ಕೆ ಉಪಾಧ್ಯಭಾವವೆಂಬ ಮತ್ತೊಂದು ಹೇತು ದೊರೆಯುತ್ತದೆ. ಆದ್ದರಿಂದ 'ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್' ಎಂಬ

ಪ್ರಮಾಣದ ಜೊತೆ ಉಪಾಧ್ಯಭಾವವೆಂಬ ಮತ್ತೊಂದು ಹೇತುವು ದೊರಕುವುದರಿಂದ ಪ್ರಮಾಣಬಾಹುಲ್ಯವಿದೆ. ಕರ್ತೃವಿಲ್ಲವೆಂಬ ಸಾಧನೆಯು ದೃಢವಾಗುತ್ತದೆ. ಈಗಾಗಲೇ 'ಯೋಗ್ಯತ್ವೇ ಸತಿ ಅನುಪಲಭ್ಯಮಾನತ್ವಾತ್' ಎಂಬ ಪ್ರಮಾಣವಿದ್ದರೂ ಕೂಡ ಮತ್ತೊಂದು ಪ್ರಮಾಣವನ್ನು ಅಪೇಕ್ಷಿಸುವುದು ತಪ್ಪಲ್ಲ. ಏಕೆಂದರೆ ಜ್ಞಾನಿಜನರು ಪ್ರಮಾಣಸಿದ್ಧವಾದ ವಿಷಯದಲ್ಲೂ ಕೂಡ ಪ್ರಮಾಣಾಂತರದಲ್ಲಿ ಆಧಾರವುಳ್ಳವರಾಗುತ್ತಾರೆ. ಆದ್ದರಿಂದ ಶ್ರುತಿಯನ್ನು ಅನುಸರಿಸಿದಾಗ ಉಪಾಧಿದೋಷ ಬರುವುದಿಲ್ಲವೆಂದು ನೀವು ಹೇಳಿದ್ದು ಯುಕ್ತವಾಗುವುದಿಲ್ಲ.

ಪರಸ್ಪರ ಅಪೇಕ್ಷಿತವಾದ ಶ್ರುತಿ-ಯುಕ್ತಿಗಳು ಸಮಾನವಲ್ಲವೇ?

**तत्वप्रदीपः – नन्वेवं परस्परापेक्षत्वेन श्रुतियुक्त्योः साम्यमेव । तथाहि – यथा श्रुतिनिरपेक्षाया युक्तेर्विरोधितदन्तरसद्भावेन आभासत्वं, श्रुत्यनुसारिण्याः प्रामाण्यं प्रतिसाधनस्य कालात्ययापदिष्टत्वेन, एवं युक्तिनिरपेक्षश्रुतेर्विरोधितदन्तरसद्भवे गौणार्थत्वं, युक्त्यनुसारिण्या मुख्यार्थत्वं, विरोधेऽप्यननुसारिण्याः दुर्बलत्वेनेति ।**

ಪರಸ್ಪರ ಅಪೇಕ್ಷೆಯಿದ್ದಾಗ ಶ್ರುತಿಯುಕ್ತಿಗಳು ಸಮಾನವೇ ಆಗುತ್ತವೆ. ಅದು ಹೀಗೆ - ಶ್ರುತಿಯ ಅಪೇಕ್ಷೆ ಇಲ್ಲದ ಯುಕ್ತಿಗೆ ಮತ್ತೊಂದು ವಿರೋಧಿಯಿದ್ದಾಗ ಆಭಾಸತ್ವವನ್ನೇ ಹೇಳಬೇಕು. ಶ್ರುತಿಗೆ ಅನುಸಾರಿಯಾದ ಯುಕ್ತಿಗೆ ಪ್ರಾಮಾಣ್ಯವನ್ನು ಹೇಳಬೇಕು. ಏಕೆಂದರೆ ವಿರೋಧಿಯಾದ ಹೇತುವು ಬಾಧದೋಷದಿಂದ ಕೂಡಿರುತ್ತದೆ. ಇದರಂತೆ ಯುಕ್ತಿಯ ಅಪೇಕ್ಷೆಯಿಲ್ಲದ ಶ್ರುತಿಗೆ ಮತ್ತೊಂದು ಶ್ರುತಿಯ ವಿರೋಧವಿದ್ದಾಗ ಗೌಣಾರ್ಥವನ್ನು ಹೇಳಬೇಕು. ಯುಕ್ತಿಯನ್ನು ಅನುಸರಿಸಿದ ಶ್ರುತಿಗೆ ಮುಖ್ಯಾರ್ಥತ್ವವನ್ನು ಹೇಳಬೇಕು. ವಿರೋಧವಿದ್ದಾಗಲೂ ಕೂಡ ಯುಕ್ತಿಯನ್ನು ಅನುಸರಿಸದ ಶ್ರುತಿಯು ದುರ್ಬಲವಾಗುತ್ತದೆ.

ವಿವರಣೆ - ಶ್ರುತಿಯು ಯುಕ್ತಿಯನ್ನು ಅನುಸರಿಸುತ್ತಿದೆ. ಯುಕ್ತಿಯು ಶ್ರುತಿಯನ್ನು ಅನುಸರಿಸುತ್ತದೆ. ಆದ್ದರಿಂದ ಶ್ರುತಿ-ಯುಕ್ತಿಗಳೆರಡೂ ಕೂಡ ಸಮಾನವೇ ಆಗಿವೆ ಇವುಗಳಲ್ಲಿ ತಾರತಮ್ಯವೇ ಇಲ್ಲ. ಏಕೆಂದರೆ ಯಾವಾಗ ಶ್ರುತಿಯನ್ನು ಅಪೇಕ್ಷೆ ಪಡದ ಯುಕ್ತಿ ಇರುತ್ತದೋ, ಅದು ಮತ್ತೊಂದು ಯುಕ್ತಿಯಿಂದ ಆಭಾಸವಾಗುತ್ತದೆ. ಶ್ರುತಿಯನ್ನು

ಅನುಸರಿಸಲ್ಪಡುವ ಯಾವ ಯುಕ್ತಿಯಿರುತ್ತದೋ, ಅದೇ ಪ್ರಮಾಣವಾಗುತ್ತದೆ. ಏಕೆಂದರೆ ಶ್ರುತಿಯನ್ನು ಅನುಸರಿಸದೇ ಇರುವ ವಿರೋಧಿಯಾದ ಮತ್ತೊಂದು ಯುಕ್ತಿಯು ಪ್ರಬಲ ಪ್ರಮಾಣವಿರೋಧವೆಂಬ ಬಾಧದೋಷದಿಂದ ಗ್ರಸ್ತವಾಗುತ್ತದೆ. ಆದ್ದರಿಂದ ಶ್ರುತಿ-ನಿರಪೇಕ್ಷಿತವಾದ ಯುಕ್ತಿಗೆ ಆಭಾಸತ್ವವನ್ನು ಹೇಳಲೇಬೇಕು. ಇದೇ ರೀತಿಯಲ್ಲಿ ಯುಕ್ತಿಯನ್ನು ಅನುಸರಿಸದೇ ಇರುವ ಯಾವ ಶ್ರುತಿಯಿದೆಯೋ, ಅದು ಯುಕ್ತಿಯನ್ನು ಅನುಸರಿಸುವ ಮತ್ತೊಂದು ಶ್ರುತಿಯಿಂದ ಬಾಧಿತವಾಗುತ್ತದೆ, ಗೌಣಾರ್ಥವುಳ್ಳದ್ದಾಗುತ್ತದೆ. ಯುಕ್ತಿಯನ್ನು ಅನುಸರಿಸುವ ಶ್ರುತಿಯೇ ಮುಖ್ಯಾರ್ಥವುಳ್ಳದ್ದಾಗುತ್ತದೆ. ಹೀಗೆ ಶ್ರುತಿ-ಯುಕ್ತಿಗಳೆರಡೂ ಸಮಾನವಾಗಿವೆ ಹೊರತು, ಇವುಗಳಲ್ಲಿ ಪ್ರಾಬಲ್ಯ-ದೌರ್ಬಲ್ಯವನ್ನು ವಿಚಾರ ಮಾಡಲು ಸಾಧ್ಯವಿಲ್ಲ. ಶ್ರುತಿ-ಯುಕ್ತಿಗಳೆರಡೂ ಪರಸ್ಪರವಾಗಿ ಅವಲಂಬನೆ ಮಾಡಿಕೊಂಡಿರುವುದರಿಂದ ಉಪಾಧಿದೋಷವನ್ನು ಪರಿಹರಿಸಿಕೊಳ್ಳಲು ಶ್ರುತಿಯನ್ನು ಅವಲಂಬಿಸಿದ್ದು ಅಯುಕ್ತವಾಗಿದೆ.

### ಶ್ರುತಿ-ಯುಕ್ತಿಗಳ ನಡುವೆ ಯುಕ್ತಿಯು ಅಪ್ರಮಾಣವಾಗುತ್ತದೆ

**तत्वप्रदीपः – विषम उपन्यासः । दृश्यते हि युक्तेः तदन्तरविरोधो दुर्वारः । केवलस्य तर्कस्याप्रतिष्ठानात् । न च मिथो विरुद्धयोयुक्त्योः एकतरयाऽपि केवलयाऽर्थसिद्धिः । सत्प्रतिपक्षत्वात् । नच श्रुतियुक्त्योर्मियो विरोधे श्रुतेरप्रामाण्यम् । क्लृप्तं चयुक्तेराभासत्वम्, अत एतदाह – न युक्तियोगाद् वाक्यानि निराकार्याण्यपि क्वचित् इति ।। वदिष्यति च – यद् वाक्योक्तं न तद्युक्तिर्विरोद्धुं शक्नुयात् क्वचित् इति ।।**

ಈ ವಿಷಯದ ನಿರೂಪಣೆಯು ವಿಪರೀತವಾಗಿದೆ. ಏಕೆಂದರೆ ಯುಕ್ತಿಗೆ ಮತ್ತೊಂದರ ವಿರೋಧವು ಇದ್ದೇ ಇರುತ್ತದೆ. ಕೇವಲವಾದ ಯುಕ್ತಿಯು ಸಾಧ್ಯಸಾಧಕವಾಗಲು ಸಾಧ್ಯವೇ ಇಲ್ಲ. ಪರಸ್ಪರ ವಿರುದ್ಧವಾದ ಎರಡು ಯುಕ್ತಿಗಳ ನಡುವೆ ಯಾವುದೇ ಒಂದು ಯುಕ್ತಿಯಿಂದ ಅರ್ಥಸಿದ್ಧಿಯಾಗಲೂ ಕೂಡ ಸಾಧ್ಯವಿಲ್ಲ. ಏಕೆಂದರೆ ಅದಕ್ಕೆ ಸತ್ಪ್ರತಿಪಕ್ಷದೋಷ ಇರುತ್ತದೆ. ಆದರೆ ಶ್ರುತಿ ಹಾಗೂ ಯುಕ್ತಿಗಳ ನಡುವೆ ಪರಸ್ಪರ ವಿರೋಧ ಬಂದಾಗ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲ. ಯುಕ್ತಿಗೆ ಆಭಾಸತ್ವವೆಂಬುದು ಪ್ರಮಾಣ-ಸಿದ್ಧವಾಗಿರುತ್ತದೆ. ಆದ್ದರಿಂದಲೇ ಭಾಷ್ಯದಲ್ಲಿ 'ನ ಯುಕ್ತಿಯೋಗಾದ್ ವಾಕ್ಯಾನಿ

ನಿರಾಕಾರ್ಯಾಣ್ಯಪಿ ಕ್ವಚಿತ್' ಯುಕ್ತಿಯ ವಿರೋಧದಿಂದ ವಾಕ್ಯಗಳ ಅರ್ಥವನ್ನು ನಿರಾಕರಣ ಮಾಡಬಾರದು ಎಂದು ಹೇಳಿರುತ್ತಾರೆ. ಮುಂದೆಯೂ ಕೂಡ 'ಯದ್ ವಾಕ್ಯೋಕ್ತಂ ನ ತದ್ಯುಕ್ತಿರ್ವಿರೋದ್ಧುಂ ಶಕ್ನುಯಾತ್ ಕ್ವಚಿತ್' ವಾಕ್ಯದಿಂದ ಸಾಧಿಸಲ್ಪಟ್ಟ ವಿಷಯವು ಯುಕ್ತಿಯಿಂದ ವಿರೋಧ ಮಾಡಲು ಸಾಧ್ಯವಿಲ್ಲ ಎಂಬುದಾಗಿ ಹೇಳುವವರಿದ್ದಾರೆ.

ವಿವರಣೆ - ಯುಕ್ತಿ ಹಾಗೂ ಶ್ರುತಿಗಳು ಪರಸ್ಪರ ಅವಲಂಬಿತವಾಗಿರುವುದರಿಂದ ಸಮಬಲವುಳ್ಳವುಗಳಾಗಿವೆ ಎಂದು ಹೇಳಬಾರದು. ಏಕೆಂದರೆ ಎರಡು ಯುಕ್ತಿಗಳಲ್ಲಿ ಪರಸ್ಪರ ವಿರೋಧ ಬಂದಾಗ ಎರಡೂ ಕೂಡ ಅಪ್ರಮಾಣವಾಗುತ್ತದೆ. ಹಾಗಾಗಿ ಶ್ರುತಿ-ಯುಕ್ತಿಗಳಲ್ಲಿ ಪರಸ್ಪರ ವಿರೋಧ ಬಂದಾಗ ಶ್ರುತಿ ಪ್ರಮಾಣವಾಗುತ್ತದೆ. ಯುಕ್ತಿ ಆಭಾಸವಾಗುತ್ತದೆ. ಈ ಕಾರಣದಿಂದ ಶ್ರುತಿ-ಯುಕ್ತಿಗಳ ನಡುವೆ, ಶ್ರುತಿಯು ಪ್ರಬಲವಾಗಿದೆ. ಯುಕ್ತಿಯು ದುರ್ಬಲವಾಗಿದೆ ಎಂದು ಒಪ್ಪಬೇಕು.

ಶ್ರುತಿಗೆ ಕೇವಲ ಯುಕ್ತಿಯ ವಿರೋಧ ಬರುವುದೇ ಇಲ್ಲ

**तत्वप्रदीपः – न च विरोधादर्थान्तरकल्पना इति दौर्बल्यम् । युक्तिमात्रविरोधात् वाक्यस्य यथाश्रुतार्थाद् अचलनात् । अग्नीषोमीयादेः पापहेतुत्वगोचरस्येव स्वयमाभासस्य तस्य विरोद्धुमसामर्थ्यात् । तदाह स्म – नावाक्या युक्तिरिष्यते इति ।। श्रौतेऽर्थे वाक्यरहिता युक्तिर्नेष्यते-इत्यर्थः। प्रत्यक्षे तु तन्मूला सा प्रवर्ततां नाम । अत एव तद्विरोधात् अभिमानिव्यपदेश उक्तः ।**

ಯುಕ್ತಿಯ ವಿರೋಧವು ಬರುವುದರಿಂದ ಶ್ರುತಿಗೆ ಅರ್ಥಾಂತರವನ್ನು ಕಲ್ಪನೆ ಮಾಡಬೇಕು. ಆದ್ದರಿಂದ ಶ್ರುತಿಯು ದುರ್ಬಲವಾಗುತ್ತದೆ ಅಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಕೇವಲ ಯುಕ್ತಿಯ ವಿರೋಧದಿಂದ ಶ್ರುತಿಗೆ ಯಥಾಶ್ರುತವಾದ ಅರ್ಥವನ್ನು ಪರಿತ್ಯಾಗ ಮಾಡಬಾರದು. ಉದಾಹರಣೆ - ಅಗ್ನೀಷೋಮೀಯ ಯಾಗಕ್ಕೆ ಪಾಪಹೇತುತ್ವವನ್ನು ಸಮರ್ಥನೆ ಮಾಡುವ ಯುಕ್ತಿಯು ಸ್ವಯಂ ಆಭಾಸವಾಗಿದೆ. ಪುನಃ ಇದು ಶ್ರುತಿಯನ್ನು ವಿರೋಧ ಮಾಡಲು ಅಸಮರ್ಥವಾಗುತ್ತದೆ. ಇದನ್ನೇ ಶ್ರೀಮದಾಚಾರ್ಯರು 'ನಾವಾಕ್ಯಾ ಯುಕ್ತಿರಿಷ್ಯತೇ' ಎಂಬುದಾಗಿ ಹೇಳಿದ್ದಾರೆ. ಶ್ರುತಿಸಿದ್ಧವಾದ ಅರ್ಥದಲ್ಲಿ ಶ್ರುತಿಯ ಬೆಂಬಲವಿಲ್ಲದ

ಯುಕ್ತಿಯನ್ನು ಅಂಗೀಕಾರ ಮಾಡಿರುವುದಿಲ್ಲ ಎಂಬುದು ಇದರ ಅರ್ಥ. ಒಂದು ವೇಳೆ ಯುಕ್ತಿಗೆ ಪ್ರತ್ಯಕ್ಷದ ಬೆಂಬಲವಿದ್ದರೆ ಆಗ ಅದು ಪ್ರವೃತ್ತಿ ಮಾಡುತ್ತದೆ. ಅಂಥ ಪ್ರತ್ಯಕ್ಷದ ಬೆಂಬಲವುಳ್ಳ ಯುಕ್ತಿಯ ವಿರೋಧವಿರುವುದರಿಂದಲೇ 'ಮೃದಬ್ರವೀತ್' ಇತ್ಯಾದಿ ಸ್ಥಳದಲ್ಲಿ ಮೃದಾಭಿಮಾನಿ-ದೇವತೆಗಳೆಂದು ಶ್ರುತಿಗೆ ಅನ್ಯಾರ್ಥವನ್ನು ಅಂಗೀಕರಿಸಲಾಗಿದೆ.

ವಿವರಣೆ - ಯುಕ್ತಿಯು ಶ್ರುತಿಯನ್ನು ವಿರೋಧ ಮಾಡಲು ಸಮರ್ಥವೇ ಆಗುವುದಿಲ್ಲ. ಉದಾಹರಣೆ - 'ಅಗ್ನೀಷೋಮಿಯಯಾಗಃ ಪಾಪಹೇತುಃಹಿಂಸಾ ಸಾಧನತ್ವಾತ್' ಎಂಬ ಯುಕ್ತಿಯು ಅಗ್ನೀಷೋಮಿಯ ಯಾಗಕ್ಕೆ ಪಾಪಹೇತುತ್ವವನ್ನು ಸಮರ್ಥನೆ ಮಾಡುತ್ತಿದೆ. ಇದರಿಂದ ಅಗ್ನೀಷೋಮಿಯಯಾಗವನ್ನು ಶ್ರುತಿಯು ವಿಧಾನ ಮಾಡಿದರೂ ಕೂಡ ಅಂಗೀಕಾರ ಮಾಡಬಾರದು ಎಂಬುದಾಗಿ ಹೇಳಲಾಗದು. ಏಕೆಂದರೆ 'ಯಾಗೀಯ ಹಿಂಸಾ ನ ಅಧರ್ಮಸಾಧನಂ' ಎಂಬ ಶ್ರುತಿಯಿಂದ ಈ ಯುಕ್ತಿಯೇ ಸ್ವತಃ ದುಷ್ಟವಾಗಿದೆ. ಶ್ರುತಿಯ ವಿರೋಧವಿರುವ ಆಭಾಸಮಯವಾದ ಈ ಯುಕ್ತಿಯು ಪುನಃ ಶ್ರುತಿಯನ್ನು ವಿರೋಧ ಮಾಡಲು ಸಾಧ್ಯವೇ ಇಲ್ಲ.

'ತದಾಹ ಸ್ಮ' ಎಂಬುದಾಗಿ ಪ್ರಯೋಗ ಮಾಡಿದ್ದಾರೆ. 'ಆಹ' ಎಂಬುದು ವರ್ತಮಾನಕಾಲವನ್ನು ಹೇಳುವ ಲಟ್‌ಲಕಾರದ ರೂಪವಾಗಿದೆ. ಇದಕ್ಕೆ 'ಲಟಸ್ಮೇ' ಎಂಬ ಸೂತ್ರದಿಂದ 'ಸ್ಮ' ಎಂಬುದು ಪ್ರಾಪ್ತವಾದರೆ, ಭೂತಕಾಲದ ಅರ್ಥವನ್ನು ತಿಳಿಸುತ್ತದೆ. ಆದ್ದರಿಂದ 'ಆಹ ಸ್ಮ' ಎಂದರೆ 'ಹೇಳಿದ್ದಾರೆ' ಎಂಬರ್ಥವನ್ನು ತಿಳಿಯಬೇಕು.

### ಅರ್ಥಾಂತರ ಮಾಡಿದ ಮಾತ್ರಕ್ಕೆ ದುರ್ಬಲವಾಗದು

**तत्वप्रदीपः – नच तद्विरोघात् अर्थान्तरकल्पना इति दौर्बल्यम् । न ह्येक एव स्वार्थः शब्दानाम् । रूढयौगिकगौणादीनां शाब्दिकपरिगृहीतानाम् अनेकत्वात् । तत्र चोपजीव्यविरोधे प्रत्यक्षस्याभासत्वम् । श्रुतेस्तु स्वार्थ एवान्यस्मिन् वृत्तिरिति निर्णयः ।**

ಶ್ರುತಿಯ ಬೆಂಬಲವಿರುವ ಯುಕ್ತಿಯ ವಿರೋಧ ಬಂದಾಗ ಶ್ರುತಿಗೆ ಅರ್ಥಾಂತರವನ್ನು ಕಲ್ಪನೆ ಮಾಡಬೇಕು. ಆಗಲೂ ಕೂಡ ಶ್ರುತಿಯು ದುರ್ಬಲವಾಗುತ್ತದೆ ಎಂದು ಸರ್ವಥಾ ತಿಳಿಯಬಾರದು. ಏಕೆಂದರೆ ಶಬ್ದಗಳಿಗೆ ಒಂದೇ ಅರ್ಥವು ಸ್ವಾರ್ಥ ಎನಿಸಿಕೊಳ್ಳುವುದಿಲ್ಲ.

ರೂಢ, ಯೌಗಿಕ, ಗೌಣ ಇತ್ಯಾದಿ ಪ್ರಭೇದದಿಂದ ಅನೇಕ ಅರ್ಥಗಳು ಸ್ವಾರ್ಥವೆಂದೇ ಶಬ್ದತತ್ವಜ್ಞಾನವುಳ್ಳವರಿಂದ ಪರಿಗ್ರಹಿಸಲ್ಪಡುತ್ತವೆ. ಉಪಜೀವ್ಯವಿರೋಧವಿದ್ದಾಗ ಪ್ರತ್ಯಕ್ಷವು ಆಭಾಸವಾಗುತ್ತದೆ. ಆದರೆ ಶ್ರುತಿಗೆ ಬೇರೆ ಅರ್ಥವನ್ನು ಅಂಗೀಕಾರ ಮಾಡಿದರೂ ಕೂಡ ಅದು ಸ್ವಾರ್ಥವೇ ಆಗುತ್ತದೆಂಬುದು ನಿರ್ಣಯ.

ವಿವರಣೆ - ಉಪಜೀವ್ಯವಿರೋಧ ಬಂದಾಗ ಪ್ರತ್ಯಕ್ಷವು ಆಭಾಸವಾಗುತ್ತದೆ. ಯುಕ್ತಿಯೂ ಕೂಡ ಆಭಾಸವಾಗುತ್ತದೆ. ಆದರೆ ಶ್ರುತಿಯು ಆಭಾಸವಾಗಲು ಸಾಧ್ಯವೇ ಇಲ್ಲ. ಇದಕ್ಕೆ ಪ್ರಬಲ ಪ್ರಮಾಣವಿರೋಧವು ಬಂದರೆ, ಇನ್ನೊಂದು ಅರ್ಥವನ್ನು ಅಂಗೀಕಾರ ಮಾಡಬೇಕು. ಅಂಗೀಕಾರ ಮಾಡಲ್ಪಟ್ಟ ಆ ಅರ್ಥವೂ ಕೂಡ ಸ್ವಾರ್ಥವೇ ಹೊರತು, ಅನ್ಯಾರ್ಥವಲ್ಲ. ಆದ್ದರಿಂದ ಉಪಜೀವ್ಯವಿರೋಧ ಬಂದಾಗ ಶ್ರುತಿಗೆ ಅನ್ಯಾರ್ಥವನ್ನು ಕಲ್ಪನೆ ಮಾಡಬೇಕೆಂಬುದು ಅಯುಕ್ತವಾಗಿದೆ. ಮತ್ತು ಆ ಅನ್ಯಾರ್ಥವನ್ನು ಕಲ್ಪನೆ ಮಾಡಿದಾಗಲೂ ಶ್ರುತಿಯು ದುರ್ಬಲವಾಗುತ್ತದೆಂಬುದೂ ಕೂಡ ಅಯುಕ್ತವಾಗಿದೆ.

### ಶ್ರುತಿಗಳಲ್ಲಿ ಪರಸ್ಪರ ವಿರೋಧವೇ ಇಲ್ಲ

**तत्वप्रदीपः – न च श्रुतीनां मिथो विरोधः । निर्दोषत्वेन प्रबलप्रमाणत्वात्।**

**'न विरोधः कुत्रचिद्वेदेषु सर्वेषु तथेतिहासे ।'**
**'सर्वोत्कर्षे देवदेवस्य विष्णोर्महातात्पर्यं नैव चान्यत्र सत्यम् ।'**
**'ततो वेदास्तत्पराः सर्व एव ।'**
**'सर्वज्ञं सर्वकर्तारं नारायणमनामयम् ।**
**सर्वोत्तमं ज्ञापयन्ति महातात्पर्यमत्र हि ।**
**सर्वेषामपि वेदानामितिहासपुराणयोः' इत्यादि श्रुतिस्मृतिभ्यश्च ।**

ಶ್ರುತಿಗಳಿಗೆ ಪರಸ್ಪರ ವಿರೋಧ ಬರಲು ಸಾಧ್ಯವಿಲ್ಲ. ನಿರ್ದುಷ್ಟವಾಗಿರುವುದರಿಂದ ಪ್ರಬಲ ಪ್ರಮಾಣವಾಗಿರುತ್ತದೆ.

'ನ ವಿರೋಧಃ ಕುತ್ರಚಿದ್ವೇದೇಷು ಸರ್ವೇಷು ತಥೇತಿಹಾಸೇ ।'

ಸಮಸ್ತ ವೇದದಲ್ಲಿ ಸಕಲ ಇತಿಹಾಸದಲ್ಲಿ ಎಲ್ಲೂ ಕೂಡ ಪರಸ್ಪರ ವಿರೋಧ ಎಂಬುದೇ ಬರಲು ಸಾಧ್ಯವಿಲ್ಲ.

'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋಃ ಮಹಾತಾತ್ಪರ್ಯಂ ನೈವ ಚಾನ್ಯತ್ರ ಸತ್ಯಮ್ ।'

ಸಮಸ್ತ ವೇದಗಳಿಗೆ ಸರ್ವೋತ್ತಮನಾದ ದೇವತೆಗಳಿಗೂ ದೇವನಾದ ಮಹಾವಿಷ್ಣುವಿನಲ್ಲೇ ಮಹಾತಾತ್ಪರ್ಯ ಹೊರತು, ಬೇರೆ ಎಲ್ಲೂ ಕೂಡ ಮಹಾತಾತ್ಪರ್ಯವಿಲ್ಲ. ಇದೇ ಸತ್ಯವಾದ ವಿಚಾರ.

'ತತೋ ವೇದಸ್ತಾತ್ಪರಾಃ ಸರ್ವ ಏವ ।'

ಸಕಲ ವೇದವು ವಿಷ್ಣುಪರವೇ ಆಗಿದೆ.

'ಸರ್ವಜ್ಞಂ ಸರ್ವಕರ್ತಾರಂ ನಾರಾಯಣಮನಾಮಯಮ್ ।
ಸರ್ವೋತ್ತಮಂ ಜ್ಞಾಪಯಂತಿ ಮಹಾತಾತ್ಪರ್ಯಮತ್ರ ಹಿ ।
ಸರ್ವೇಷಾಮಪಿ ವೇದಾನಾಮಿತಿಹಾಸಪುರಾಣಯೋಃ'

ಸರ್ವಜ್ಞನೂ, ಸರ್ವಕರ್ತೃವೂ, ನಿರ್ದೋಷನೂ, ಸರ್ವೋತ್ತಮನೂ ಆಗಿರುವ ನಾರಾಯಣನಲ್ಲೇ ವೇದವು ಮಹಾತಾತ್ಪರ್ಯವನ್ನು ಹೊಂದಿದೆ. ಹಾಗೂ ಇತಿಹಾಸಪುರಾಣಗಳೂ ಕೂಡ ಅಂಥ ವಿಷ್ಣುವಿನಲ್ಲೇ ಮಹಾತಾತ್ಪರ್ಯವುಳ್ಳವುಗಳಾಗಿವೆ ಇತ್ಯಾದಿ ಶ್ರುತಿ-ಸ್ಮೃತಿಗಳ ಆಧಾರದಿಂದ ಸಕಲವೇದ ಇತಿಹಾಸಪುರಾಣಗಳ ಅಭಿಪ್ರಾಯ ಒಂದೇ ಹೊರತು, ಭಿನ್ನಭಿನ್ನವಾಗಿರುವುದಿಲ್ಲ.

'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯ ವಿರೋಧವೂ ಇಲ್ಲ

**तत्वप्रदीपः – 'तत्तु समन्वयात्' 'गतिसामान्यात्' 'एतेन सर्वे व्याख्याताः' इत्यादि सूत्रैश्च अविरोधः । अयमेव प्रतिपादयिष्यते समयनिरासादूर्ध्वमाऽध्यायपरिसमाप्तेः । 'अहं ब्रह्मास्मि' इत्यत्र च 'अहं'शब्दो युक्त्यागमविरोधात् जीवस्वरूपं त्यक्त्वाऽहेयत्वयोगेन ब्रह्माभिधत्त इति श्लिष्यते ।**

'ತತ್ತುಸಮನ್ವಯಾತ್', 'ಗತಿಸಾಮಾನ್ಯಾತ್', 'ಏತೇನ ಸರ್ವೇ ವ್ಯಾಖ್ಯಾತಾಃ' ಇತ್ಯಾದಿ ಸೂತ್ರಗಳಿಂದಲೂ ಕೂಡ ವಿರೋಧವು ಬರುವುದಿಲ್ಲ. ಈ ವಿಷಯವನ್ನು ಸಮಯಪಾದ ಮುಗಿದ ಮೇಲೆ ಅಧ್ಯಾಯ ಮುಗಿಯುವ ತನಕ ಪ್ರತಿಪಾದನೆ ಮಾಡುತ್ತಾರೆ.

'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯಲ್ಲಿ 'ಅಹಂ' ಶಬ್ದದಿಂದ ಬ್ರಹ್ಮನೇ ಚೆನ್ನಾಗಿ ಪ್ರತಿಪಾದ್ಯನಾಗಿದ್ದಾನೆ. ಯುಕ್ತಿ ಮತ್ತು ಆಗಮಗಳ ವಿರೋಧ ಬರುವುದರಿಂದ ಜೀವಸ್ವರೂಪ ಎಂಬರ್ಥವನ್ನು ಸ್ವೀಕರಿಸಬಾರದು. ಅಹೇಯತ್ವವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, ಬ್ರಹ್ಮನೇ ಪ್ರತಿಪಾದ್ಯನೆಂದು ಹೇಳಬೇಕು.

ವಿವರಣೆ - 'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಯು ಉಳಿದ ಶ್ರುತಿಗಳಿಗೆ ವಿರುದ್ಧವಾಗಿರುವುದಿಲ್ಲ. ಈ ಶ್ರುತಿಯನ್ನು ಆಪಾತತಃ ನೋಡಿದಾಗ ಜೀವಬ್ರಹ್ಮಭೇದ ಪ್ರತಿಪಾದಕವಾದ ಶ್ರುತಿಗಳಿಗಿಂತ ವಿರುದ್ಧವಾದ ವಿಷಯವನ್ನು ಹೇಳುತ್ತಿದೆ ಎಂದೆನಿಸುತ್ತದೆ. ಆದರೆ ಉಳಿದ ಶ್ರುತಿಗಳಂತೆ ಈ ಶ್ರುತಿಯೂ ಕೂಡ ಭೇದಪ್ರತಿಪಾದಕವೇ ಆಗಿದೆ, ಐಕ್ಯಪ್ರತಿಪಾದಕವಾಗಿಲ್ಲ. 'ಅಹಂ' ಶಬ್ದಕ್ಕೆ ಜೀವಸ್ವರೂಪ ಎಂಬರ್ಥವನ್ನು ವಿವಕ್ಷಿಸುವುದಾಗಿದ್ದಲ್ಲಿ ಜೀವಬ್ರಹ್ಮೈಕ್ಯವು ಈ ಶ್ರುತಿಗೆ ವಿಷಯವಾಗಿದೆ ಎಂದು ಹೇಳಬಹುದಿತ್ತು. ಆದರೆ ಜೀವಸ್ವರೂಪ ಎಂಬರ್ಥವನ್ನು ಹೇಳಿದರೆ ಯುಕ್ತಿ ಮತ್ತು ಆಗಮಗಳ ವಿರೋಧವು ಬರುತ್ತದೆ. ಆದ್ದರಿಂದ 'ಅಹಂ' ಶಬ್ದಕ್ಕೆ ಜೀವಸ್ವರೂಪ ಎಂಬರ್ಥವನ್ನು ಹೇಳಬಾರದು. 'ಓ ಹಾಕ್ ತ್ಯಾಗೇ' ಎಂಬ ಧಾತುವಿನಿಂದ 'ಅಹಂ' ಎಂಬ ಶಬ್ದವು ನಿಷ್ಪನ್ನವಾಗಿದೆ. ಹೇಯನಾಗದೇ ಇರುವುದರಿಂದ ಅಹೇಯನೆನಿಸುತ್ತಾನೆ ಎಂಬುದು ಇದರ ಅರ್ಥ. ಇಂಥ ಅಹೇಯತ್ವವು ಬ್ರಹ್ಮನಲ್ಲಷ್ಟೇ ಇರುತ್ತದೆ. ಇದರಂತೆ 'ಅಸ್ಮಿ' ಎಂಬ ಶಬ್ದಕ್ಕೆ ಅಸ್ತೀತಿ ಮೇಯನಾಗಿದ್ದಾನೆ ಎಂದರ್ಥ. ಭಗವದಿತರವಾದ ಸಕಲಪದಾರ್ಥವು ಭಗವದಧೀನವಾಗಿ ಇರುವಿಕೆಯನ್ನು ಹೊಂದಿದೆ. ಆದ್ದರಿಂದ 'ಅಸ್ತಿ' ಎಂಬುದಾಗಿ ಆ ಪದಾರ್ಥಗಳು ಮೇಯವಾಗಲು ಸಾಧ್ಯವಿಲ್ಲ. ಭಗವಂತನ ಇರುವಿಕೆಯು ಮತ್ತೊಂದರ ಅಧೀನವಾಗಿದೇ ಸ್ವತಂತ್ರವಾಗಿರುವುದರಿಂದ 'ಅಸ್ತಿ' ಎಂಬ ಮೇಯಕ್ಕೆ ವಿಷಯವಾಗಿದೆ. 'ಶ್ಲಿಷ್ಯತೇ' ಎಂಬುದಕ್ಕೆ ಚೆನ್ನಾಗಿ ಹೊಂದಾಣಿಕೆಯಾಗುತ್ತದೆ ಎಂದರ್ಥ. 'ಅಹಂ' ಎಂಬ ಶಬ್ದವು ಬ್ರಹ್ಮ ಎಂಬರ್ಥದಲ್ಲಿ ಸುಸ್ಪಷ್ಟವಾಗಿ ಹೊಂದಾಣಿಕೆಯಾಗಿದೆ ಎಂದು ತಿಳಿಯಬೇಕು.

'ಅಹಂ' ಶಬ್ದಕ್ಕೆ ಅತ್ಯಂತ ಅಪೂರ್ವಾರ್ಥ

**तत्वप्रदीपः – प्रसिद्धश्चायमर्थः श्रुतिस्मृतिषु । 'तस्योपनिषदहमिति । अ इति ब्रह्म, तत्राऽगतमहमिति' । अत्र च ब्रह्मण्यागतमहमिति नाम वाचकत्वेन इत्यर्थः । अन्तर्यामित्वाच्च । 'सर्वान्तर्यामको विष्णुः**

**सर्वनाम्नाऽभिधीयते' इत्यादेः । तन्नियामके च तच्छब्दोऽतिमुख्य इति 'तदधीनत्वात्' इत्यादौ उदितम् ।**

ಈ ಅರ್ಥವು ಶ್ರುತಿ-ಸ್ಮೃತಿಗಳಲ್ಲಿ ಪ್ರಸಿದ್ಧವೇ ಆಗಿದೆ. 'ತಸ್ಯೋಪನಿಷದಹಮ್ । ಅ ಇತಿ ಬ್ರಹ್ಮ, ತತ್ರಾऽಗತಮಹಮಿತಿ' ಬ್ರಹ್ಮನ ರಹಸ್ಯವೆಂದರೆ ಬ್ರಹ್ಮ ಎಂಬುದು. 'ಅ' ಎಂದರೆ ಬ್ರಹ್ಮ. ಅವನ ಬಗ್ಗೆ ತಿಳಿಯಲ್ಪಡುವುದೇ 'ಅಹಂ' ಎನಿಸುತ್ತದೆ. 'ಬ್ರಹ್ಮಣಿ ಆಗತಂ ಅಹಂ' ಎಂಬುದಕ್ಕೆ ವಾಚಕತ್ವೇನ ತಿಳಿಯಲ್ಪಡುತ್ತಾನೆ ಎಂದರ್ಥ. ಅಂತರ್ಯಾಮಿಯಾಗಿರುವುದರಿಂದಲೂ ಹೀಗೆ ಪ್ರತಿಪಾದ್ಯನಾಗಿದ್ದಾನೆ. 'ಸರ್ವಾಂತರ್ಯಾಮಕೋ ವಿಷ್ಣುಃ ಸರ್ವನಾಮ್ನಾऽಭಿಧೀಯತೇ' ಎಂಬ ಶ್ರುತಿಯು ಇದಕ್ಕೆ ಆಧಾರವಾಗಿದೆ. ತನ್ನಿಯಾಮಕದಲ್ಲಿ ತತ್ ಶಬ್ದವು ಅತ್ಯಂತ ಮುಖ್ಯವಾಗಿರುತ್ತದೆ ಎಂಬುದನ್ನು 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಪ್ರತಿಪಾದನೆ ಮಾಡಿದ್ದಾಗಿದೆ.

ವಿವರಣೆ - 'ಅಹಂ' ಎಂಬಲ್ಲಿ 'ಆ' ಎಂಬುದಕ್ಕೆ ಆಗತ ಎಂದರ್ಥ. 'ಹ' ಎಂಬುದಕ್ಕೆ 'ಹನಹಿಂಸಾಗತ್ಯೋಃ' ಎಂಬ ಧಾತುವಿನಿಂದ 'ಹಂ' ಎಂಬುದು ನಿಷ್ಪನ್ನವಾಗಿದೆ. ಇದರಿಂದ 'ಗತಂ' ಎಂಬರ್ಥವು ದೊರೆಯುತ್ತದೆ. 'ಅ' ಎಂಬ ಶಬ್ದದ ಸಪ್ತಮೀ ವಿಭಕ್ತಿಯು 'ಏ' ಎಂದಾಗುತ್ತದೆ. 'ಏ + ಹಂ' ಎಂದು ವಿಗ್ರಹ ಮಾಡಿ ಸಮಾಸ ಮಾಡಿದಾಗ 'ಅಹಂ' ಎಂದಾಗುತ್ತದೆ. 'ಗತಂ' ಎಂಬುದಕ್ಕೆ 'ಆಗತಂ' ಎಂಬರ್ಥವನ್ನು ವಿವಕ್ಷಿಸಿದಾಗ ಬ್ರಹ್ಮನಲ್ಲಿ 'ಅಹಂ' ಎಂಬ ಶಬ್ದವು ವಾಚಕತ್ವೇನ ಅವಗತವಾಗಿದೆ ಎಂದರ್ಥ.

ಇದರಿಂದ ಒಂದು ಪ್ರಮೇಯವು ತಿಳಿಯುತ್ತದೆ. ಸಮಸ್ತ ಬ್ರಹ್ಮಪ್ರತಿಪಾದಕವಾದ ವೇದರಾಶಿಯನ್ನು 'ಅಹಂ' ಎಂಬ ಒಂದೇ ಶಬ್ದದಿಂದ ವ್ಯಾಖ್ಯಾನ ಮಾಡಬಹುದು. ಎಲ್ಲಾ ಶಬ್ದಗಳು ಬ್ರಹ್ಮನಲ್ಲಿ ತಿಳಿಯಲ್ಪಟ್ಟಿದೆ ಎಂಬುದು 'ಅಹಂ' ಶಬ್ದದ ನಿಷ್ಪತ್ತಿ. ಆದ್ದರಿಂದ ಎಲ್ಲಾ ಶಬ್ದಗಳು ಅಹಂ ಎಂದು ಕರೆಸಿಕೊಳ್ಳುತ್ತವೆ. ಇಂಥ 'ಅಹಂ' ಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದ ಸರ್ವವೇದಪ್ರತಿಪಾದ್ಯನಾಗಿದ್ದಾನೆ ಎಂದು ಅರ್ಥವಾಗುತ್ತದೆ.

'ಅಸ್ಮಿ' ಎಂಬುದಕ್ಕೆ ಅಪೂರ್ವ ವ್ಯಾಖ್ಯಾನ

**तत्वप्रदीपः – नच 'अस्मि' इत्यनेन विरोधः । 'अहेयत्वादहं नामा अस्म्यसनात् मिनुतेरपि' । अस्तीति मेयं चास्मीत्युच्यते।**

'ಅಸ್ಮಿ' ಎಂಬುದರಿಂದಲೂ ಕೂಡ ವಿರೋಧವಿಲ್ಲ. 'ಅಹೇಯತ್ವಾದಹಂ ನಾಮಾ ಅಸ್ಮ್ಯಸನಾತ್ ಮಿನುತೇರಪಿ' ಎಂಬುದು ಇದರ ನಿಷ್ಪತ್ತಿ. 'ಅಸ್ತಿ' ಎನಿಸುವುದರಿಂದ ಮತ್ತು ಮೇಯಂ ಎನಿಸಿಕೊಳ್ಳುವುದರಿಂದ 'ಅಸ್ಮಿ' ಎನಿಸಿಕೊಳ್ಳುತ್ತಾನೆ.

ವಿವರಣೆ - 'ಅಹೇಯತ್ವಾದಹಂ ನಾಮಾ ಅಸ್ಮ್ಯಸನಾತ್ ಮಿನುತೇರಪಿ' ಎಂದು ಉಪನಿಷತ್ತು ಹೇಳುತ್ತಿದೆ. ಇಲ್ಲಿ 'ಅಹೇಯತ್ವಾದಹಂ ನಾಮಾ ಅಸ್ಮಿ' ಎಂದು ಅನ್ವಯ ಮಾಡಿಕೊಂಡು, 'ಅಸನಾತ್ ಮಿನುತೇರಪಿ ಅಸ್ಮಿ' ಎಂದು ಕರೆಸಿಕೊಳ್ಳುತ್ತೇನೆ ಎಂದು ಅನ್ವಯ ಮಾಡಿಕೊಳ್ಳಬೇಕು. 'ಅಸ್ಮಿ' ಎಂಬಲ್ಲಿ 'ಅಸು' ಮತ್ತು 'ಮಿ' ಎಂದು ಎರಡು ಪದವಿಭಾಗ ಮಾಡಬೇಕು. 'ಅಸು' ಎಂಬುದು 'ಅಸ ಭುವಿ' ಎಂಬ ಧಾತುವಿನಿಂದ ಅಥವಾ 'ಅಸು ನಿರಸನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಮಿ' ಎಂಬುದು 'ಮಿನು ಹಿಂಸಾಯಾಂ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಅಸು' ಎಂಬುದಕ್ಕೆ ಸಕಲಪದಾರ್ಥಗಳಿಗೆ ಸತ್ತಾಪ್ರದನಾಗಿದ್ದಾನೆ ಎಂಬರ್ಥವು ಅಸ ಭುವಿ ಧಾತುವನ್ನು ವಿವಕ್ಷಿಸಿದಾಗ ತಿಳಿಯುತ್ತದೆ. 'ಅಸು ನಿರಸನೇ' ಎಂಬ ಧಾತುವನ್ನು ವಿವಕ್ಷಿಸಿದಾಗ 'ದುಷ್ಟರನ್ನು ನಾಶಗೊಳಿಸುತ್ತಾನೆ'. 'ದುಷ್ಟಗುಣಗಳನ್ನು ನಾಶಗೋಳಿಸುತ್ತಾನೆ' ಇತ್ಯಾದಿ ಅರ್ಥಗಳು ತಿಳಿಯುತ್ತವೆ. ಅದರಂತೆ 'ಮಿ' ಎಂಬುದಕ್ಕೆ 'ದುಷ್ಟರನ್ನು ಹಿಂಸಿಸುತ್ತಾನೆ' ಇತ್ಯಾದಿ ಅರ್ಥಗಳು ತಿಳಿಯುತ್ತವೆ. ಆದ್ದರಿಂದ 'ಅಸ್ಮಿ' ಎಂಬ ಶಬ್ದಕ್ಕೆ 'ಇರುತ್ತೇನೆ' ಎಂದಷ್ಟೇ ಅರ್ಥವಲ್ಲ. ಯೋಗವೃತ್ತಿಯಿಂದ ಅನೇಕ ಅಪೂರ್ವಾರ್ಥವನ್ನು ತಿಳಿಯಬೇಕು.

### 'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತ್ಯರ್ಥವು ಕ್ಲಿಷ್ಟವಲ್ಲ

**तत्वप्रदीपः – प्रसिद्धश्चायमर्थभेदः, 'पयः पास्यामि गोपाला' इत्यादौ शब्दस्य । अविद्वद्रूढेर्योगोपबृंहिताया विद्वद्रूढेरतिबलिष्ठत्वात् । अतो न क्वापि श्रुतीनां विरोधः ।**

ಈ ಅರ್ಥವು ಪ್ರಸಿದ್ಧವೇ ಆಗಿದೆ. 'ಪಯಃ ಪಾಸ್ಯಾಮಿ ಗೋಪಾಲಾ' ಇತ್ಯಾದಿಗಳಲ್ಲಿ ಹೇಗೋ ಹಾಗೇ ಇಲ್ಲೂ ಕೂಡ ತಿಳಿಯಬೇಕು. ಇದನ್ನು ಕ್ಲಿಷ್ಟಾರ್ಥವೆಂದು ಆಶಂಕಿಸಬಾರದು. ಅವಿದ್ವದ್ರೂಢಿಗಿಂತ ಯೋಗೋಪಬೃಂಹಿತವಾದ ವಿದ್ವದ್ರೂಢಿಯು ಅತ್ಯಂತ ಬಲಿಷ್ಠವಾಗಿರುತ್ತದೆ. ಆದ್ದರಿಂದ ಶ್ರುತಿಗಳಿಗೆ ಎಲ್ಲೂ ಕೂಡ ವಿರೋಧ ಇಲ್ಲ.

ವಿವರಣೆ - 'ಪ್ರಸಿದ್ಧಶ್ಚ' ಇತ್ಯಾದಿ ವಾಕ್ಯದಲ್ಲಿ ಅನ್ವಯವನ್ನು ಹೀಗೆ ತಿಳಿಯಬೇಕು - ಇಲ್ಲಿ ಅರ್ಥ ಪ್ರಭೇದವು 'ಪಯಃ ಪಾಸ್ಯಾಮಿ ಗೋಪಾಲಾ' ಇತ್ಯಾದಿ ಶಬ್ದಗಳಲ್ಲಿ ಪ್ರಸಿದ್ಧವಾಗಿದೆ ಎಂದು. ಅರ್ಥಭೇದ ಶಬ್ದಕ್ಕೆ ಅರ್ಥಪ್ರಭೇದ ಎಂದರ್ಥ. ಬೇರೆ ಬೇರೆ ಅರ್ಥಗಳು ಪ್ರಸಿದ್ಧವಾಗಿದೆ. ಆದ್ದರಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಗೆ ಅಪೂರ್ವವಾದ ಈ ಅರ್ಥವನ್ನು ಹೇಳಿರುವುದು ಅಪ್ರಸಿದ್ಧವೆಂದು ತಿಳಿಯಬಾರದು. 'ಪಯಃ ಪಾಸ್ಯಾಮಿ ಗೋಪಾಲಾ' ಎಂಬಲ್ಲಿ ಸಾಮಾನ್ಯವಾಗಿ ಹಾಲನ್ನು ಕುಡಿಯುವೆನು ಎಂಬರ್ಥವು ತಿಳಿಯುತ್ತದೆ. ಆದರೆ ಬೇರೆ ಬೇರೆ ಅರ್ಥವನ್ನೂ ಕೂಡ ಈ ಶಬ್ದಕ್ಕೆ ಹೇಳುವುದು ಪ್ರಸಿದ್ಧವಾಗಿದೆ. ಅದರಂತೆ ಇಲ್ಲೂ ಕೂಡ ತಿಳಿಯಬೇಕು.

'ಅಹಂ' ಎಂಬ ಶಬ್ದಕ್ಕೆ, ಮತ್ತು 'ಅಸ್ಮಿ' ಎಂಬ ಶಬ್ದಕ್ಕೆ ಅತ್ಯಂತ ಕ್ಲಿಷ್ಟವಾದ ಅರ್ಥವನ್ನು ಕಲ್ಪನೆ ಮಾಡಿದಂತಾಯಿತಲ್ಲವೇ? ಸುಲಭವಾದ ಅರ್ಥವನ್ನು ಹೇಳಲು ಬರುವಾಗ ಕ್ಲಿಷ್ಟವಾದ ಅರ್ಥವನ್ನು ಹೇಳುವುದು ತಪ್ಪಾಗುತ್ತದೆ. (ಕಾವ್ಯಾಲಂಕಾರ ಎಂಬ ಗ್ರಂಥವನ್ನು ವಾಮನ ಎಂಬ ಕವಿಯು ಬರೆದಿದ್ದಾನೆ. ಅದರ ವೃತ್ತಿಯಲ್ಲಿ ಅವನು ಹೀಗೆ ಹೇಳುತ್ತಾನೆ - 'ಕೊಂದನು' ಎಂದು ಹೇಳಲು 'ಜಘಾನ' ಎನ್ನಬೇಕು. ಆದರೆ ಇದೇ ಅರ್ಥದಲ್ಲಿ 'ಜೇಘ್ನೀಸೀಷ್ಟ' ಎಂಬ ಧಾತುವೂ ಕೂಡ ನಿಷ್ಪನ್ನವಾಗುತ್ತದೆ. ಹೀಗೆ ಧಾ ಏದೆ ಎಂದು ತಿಳಿದು 'ಜಘಾನ' ಎಂಬ ಪದವನ್ನು ಪ್ರಯೋಗ ಮಾಡದೇ 'ಜೇಘ್ನೀಸೀಷ್ಟ' ಎಂಬ ಪದವನ್ನು ಪ್ರಯೋಗ ಮಾಡಬಾರದು. ಇದು ಕ್ಲಿಷ್ಟಕಲ್ಪನೆಯಾಗುತ್ತದೆ. ಇದು ಕಾವ್ಯದೋಷವೆನಿಸುತ್ತದೆ ಎನ್ನುತ್ತಾನೆ.) ಈ ಉದಾಹರಣೆಯಂತೆ ಪ್ರಕೃತದಲ್ಲೂ 'ಅಹಂ' ಎಂಬ ಶಬ್ದಕ್ಕೆ ಮತ್ತು 'ಅಸ್ಮಿ' ಎಂಬ ಶಬ್ದಕ್ಕೆ ಪ್ರಸಿದ್ಧವಾದ ಅರ್ಥವನ್ನೇ ವಿವಕ್ಷಿಸಲು ಬರುವಾಗ ಅಪ್ರಸಿದ್ಧವಾದ ಅರ್ಥವನ್ನು ನೀವು ಹೇಳುತ್ತಿರುವುದು ತಪ್ಪಲ್ಲವೇ? ಎಂಬುದು ಇಲ್ಲಿಯ ಆಕ್ಷೇಪದ ಅಭಿಪ್ರಾಯ.

ಹೀಗೆ ಆಕ್ಷೇಪ ಮಾಡಬಾರದು. ಅವಿದ್ವದ್ರೂಢಿಗಿಂತ ಯೋಗದಿಂದ ಕೂಡಿದ ವಿದ್ವದ್ರೂಢಿಯು ಅತ್ಯಂತ ಬಲಿಷ್ಠವಾಗಿರುತ್ತದೆ. ಅಥವಾ ವಿದ್ವದ್ರೂಢಿಯಿಂದ ಕೂಡಿದ ಯೋಗವು ಅತ್ಯಂತ ಬಲಿಷ್ಠವಾಗಿರುತ್ತದೆ. ಆದ್ದರಿಂದ ಪ್ರಕೃತದಲ್ಲಿ ನಾವು ಹೇಳಿದ ಅರ್ಥವು ಯೋಗೋಪಬೃಂಹಿತವಾದ ವಿದ್ವದ್ರೂಢಿಗೆ ವಿಷಯವಾಗಿರುವುದರಿಂದ ಕ್ಲಿಷ್ಟಕಲ್ಪನೆ ಎನಿಸುವುದಿಲ್ಲ.

'ಅಸ್ಮಿ' ಎಂಬುದರಿಂದಲೂ ಕೂಡ ವಿರೋಧವಿಲ್ಲ. 'ಆಹೇಯತ್ವಾದಹಂ ನಾಮಾ ಅಸ್ಮ್ಯಸನಾತ್ ಮಿನುತೇರಪಿ' ಎಂಬುದು ಇದರ ನಿಷ್ಪತ್ತಿ. 'ಅಸ್ತಿ' ಎನಿಸುವುದರಿಂದ ಮತ್ತು ಮೇಯಂ ಎನಿಸಿಕೊಳ್ಳುವುದರಿಂದ 'ಅಸ್ಮಿ' ಎನಿಸಿಕೊಳ್ಳುತ್ತಾನೆ.

ವಿವರಣೆ - 'ಆಹೇಯತ್ವಾದಹಂ ನಾಮಾ ಅಸ್ಮ್ಯಸನಾತ್ ಮಿನುತೇರಪಿ' ಎಂದು ಉಪನಿಷತ್ತು ಹೇಳುತ್ತಿದೆ. ಇಲ್ಲಿ 'ಆಹೇಯತ್ವಾದಹಂ ನಾಮಾ ಅಸ್ಮಿ' ಎಂದು ಅನ್ವಯ ಮಾಡಿಕೊಂಡು, 'ಅಸನಾತ್ ಮಿನುತೇರಪಿ ಅಸ್ಮಿ' ಎಂದು ಕರೆಸಿಕೊಳ್ಳುತ್ತೇನೆ ಎಂದು ಅನ್ವಯ ಮಾಡಿಕೊಳ್ಳಬೇಕು. 'ಅಸ್ಮಿ' ಎಂಬಲ್ಲಿ 'ಅಸು' ಮತ್ತು 'ಮಿ' ಎಂದು ಎರಡು ಪದವಿಭಾಗ ಮಾಡಬೇಕು. 'ಅಸು' ಎಂಬುದು 'ಅಸ ಭುವಿ' ಎಂಬ ಧಾತುವಿನಿಂದ ಅಥವಾ 'ಅಸು ನಿರಸನೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಮಿ' ಎಂಬುದು 'ಮಿನು ಹಿಂಸಾಯಾಂ' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. 'ಅಸು' ಎಂಬುದಕ್ಕೆ ಸಕಲಪದಾರ್ಥಗಳಿಗೆ ಸತ್ತಾಪ್ರದನಾಗಿದ್ದಾನೆ ಎಂಬರ್ಥವು ಅಸ ಭುವಿ ಧಾತುವನ್ನು ವಿವಕ್ಷಿಸಿದಾಗ ತಿಳಿಯುತ್ತದೆ. 'ಅಸು ನಿರಸನೇ' ಎಂಬ ಧಾತುವನ್ನು ವಿವಕ್ಷಿಸಿದಾಗ 'ದುಷ್ಟರನ್ನು ನಾಶಗೊಳಿಸುತ್ತಾನೆ'. 'ದುಷ್ಟಗುಣಗಳನ್ನು ನಾಶಗೊಳಿಸುತ್ತಾನೆ' ಇತ್ಯಾದಿ ಅರ್ಥಗಳು ತಿಳಿಯುತ್ತವೆ. ಅದರಂತೆ 'ಮಿ' ಎಂಬುದಕ್ಕೆ 'ದುಷ್ಟರನ್ನು ಹಿಂಸಿಸುತ್ತಾನೆ' ಇತ್ಯಾದಿ ಅರ್ಥಗಳು ತಿಳಿಯುತ್ತವೆ. ಆದ್ದರಿಂದ 'ಅಸ್ಮಿ' ಎಂಬ ಶಬ್ದಕ್ಕೆ 'ಇರುತ್ತೇನೆ' ಎಂದಷ್ಟೇ ಅರ್ಥವಲ್ಲ. ಯೋಗವೃತ್ತಿಯಿಂದ ಅನೇಕ ಅಪೂರ್ವಾರ್ಥವನ್ನು ತಿಳಿಯಬೇಕು.

'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತ್ಯರ್ಥವು ಕ್ಲಿಷ್ಟವಲ್ಲ

**तत्वप्रदीपः – प्रसिद्धश्चायमर्थभेदः, 'पयः पास्यामि गोपाला' इत्यादौ शब्दस्य । अविद्वद्रूढेर्योगोपबृंहिताया विद्वद्रूढेरतिबलिष्ठत्वात् । अतो न क्वापि श्रुतीनां विरोधः ।**

ಈ ಅರ್ಥವು ಪ್ರಸಿದ್ಧವೇ ಆಗಿದೆ. 'ಪಯಃ ಪಾಸ್ಯಾಮಿ ಗೋಪಾಲಾ' ಇತ್ಯಾದಿಗಳಲ್ಲಿ ಹೇಗೋ ಹಾಗೇ ಇಲ್ಲೂ ಕೂಡ ತಿಳಿಯಬೇಕು. ಇದನ್ನು ಕ್ಲಿಷ್ಟಾರ್ಥವೆಂದು ಆಶಂಕಿಸಬಾರದು. ಅವಿದ್ವದ್ರೂಢಿಗಿಂತ ಯೋಗೋಪಬೃಂಹಿತವಾದ ವಿದ್ವದ್ರೂಢಿಯು ಅತ್ಯಂತ ಬಲಿಷ್ಠವಾಗಿರುತ್ತದೆ. ಆದ್ದರಿಂದ ಶ್ರುತಿಗಳಿಗೆ ಎಲ್ಲೂ ಕೂಡ ವಿರೋಧ ಇಲ್ಲ.

ವಿವರಣೆ - 'ಪ್ರಸಿದ್ಧಶ್ಚ' ಇತ್ಯಾದಿ ವಾಕ್ಯದಲ್ಲಿ ಅನ್ವಯವನ್ನು ಹೀಗೆ ತಿಳಿಯಬೇಕು - ಇಲ್ಲಿ ಅರ್ಥ ಪ್ರಭೇದವು 'ಪಯಃ ಪಾಸ್ಯಾಮಿ ಗೋಪಾಲಾ' ಇತ್ಯಾದಿ ಶಬ್ದಗಳಲ್ಲಿ ಪ್ರಸಿದ್ಧವಾಗಿದೆ ಎಂದು. ಅರ್ಥಭೇದ ಶಬ್ದಕ್ಕೆ ಅರ್ಥಪ್ರಭೇದ ಎಂದರ್ಥ. ಬೇರೆ ಬೇರೆ ಅರ್ಥಗಳು ಪ್ರಸಿದ್ಧವಾಗಿದೆ. ಆದ್ದರಿಂದ 'ಅಹಂ ಬ್ರಹ್ಮಾಸ್ಮಿ' ಎಂಬ ಶ್ರುತಿಗೆ ಅಪೂರ್ವವಾದ ಈ ಅರ್ಥವನ್ನು ಹೇಳಿರುವುದು ಅಪ್ರಸಿದ್ಧವೆಂದು ತಿಳಿಯಬಾರದು. 'ಪಯಃ ಪಾಸ್ಯಾಮಿ ಗೋಪಾಲಾ' ಎಂಬಲ್ಲಿ ಸಾಮಾನ್ಯವಾಗಿ ಹಾಲನ್ನು ಕುಡಿಯುವೆನು ಎಂಬರ್ಥವು ತಿಳಿಯುತ್ತದೆ. ಆದರೆ ಬೇರೆ ಬೇರೆ ಅರ್ಥವನ್ನೂ ಕೂಡ ಈ ಶಬ್ದಕ್ಕೆ ಹೇಳುವುದು ಪ್ರಸಿದ್ಧವಾಗಿದೆ. ಅದರಂತೆ ಇಲ್ಲೂ ಕೂಡ ತಿಳಿಯಬೇಕು.

'ಅಹಂ' ಎಂಬ ಶಬ್ದಕ್ಕೆ, ಮತ್ತು 'ಅಸ್ಮಿ' ಎಂಬ ಶಬ್ದಕ್ಕೆ ಅತ್ಯಂತ ಕ್ಲಿಷ್ಟವಾದ ಅರ್ಥವನ್ನು ಕಲ್ಪನೆ ಮಾಡಿದಂತಾಯಿತಲ್ಲವೇ? ಸುಲಭವಾದ ಅರ್ಥವನ್ನು ಹೇಳಲು ಬರುವಾಗ ಕ್ಲಿಷ್ಟವಾದ ಅರ್ಥವನ್ನು ಹೇಳುವುದು ತಪ್ಪಾಗುತ್ತದೆ. (ಕಾವ್ಯಾಲಂಕಾರ ಎಂಬ ಗ್ರಂಥವನ್ನು ವಾಮನ ಎಂಬ ಕವಿಯು ಬರೆದಿದ್ದಾನೆ. ಅದರ ವೃತ್ತಿಯಲ್ಲಿ ಅವನು ಹೀಗೆ ಹೇಳುತ್ತಾನೆ - 'ಕೊಂದನು' ಎಂದು ಹೇಳಲು 'ಜಘಾನ' ಎನ್ನಬೇಕು. ಆದರೆ ಇದೇ ಅರ್ಥದಲ್ಲಿ 'ಜೇಘ್ನೀಯಿಸೀಷ್ಟ' ಎಂಬ ಧಾತುವೂ ಕೂಡ ನಿಷ್ಪನ್ನವಾಗುತ್ತದೆ. ಹೀಗೆ ಧಾ ಇದೆ ಎಂದು ತಿಳಿದು 'ಜಘಾನ' ಎಂಬ ಪದವನ್ನು ಪ್ರಯೋಗ ಮಾಡದೇ 'ಜೇಘ್ನೀಯಿಸೀಷ್ಟ' ಎಂಬ ಪದವನ್ನು ಪ್ರಯೋಗ ಮಾಡಬಾರದು. ಇದು ಕ್ಲಿಷ್ಟಕಲ್ಪನೆಯಾಗುತ್ತದೆ. ಇದು ಕಾವ್ಯದೋಷವೆನಿಸುತ್ತದೆ ಎನ್ನುತ್ತಾನೆ.) ಈ ಉದಾಹರಣೆಯಂತೆ ಪ್ರಕೃತದಲ್ಲೂ 'ಅಹಂ' ಎಂಬ ಶಬ್ದಕ್ಕೆ ಮತ್ತು 'ಅಸ್ಮಿ' ಎಂಬ ಶಬ್ದಕ್ಕೆ ಪ್ರಸಿದ್ಧವಾದ ಅರ್ಥವನ್ನೇ ವಿವಕ್ಷಿಸಲು ಬರುವಾಗ ಅಪ್ರಸಿದ್ಧವಾದ ಅರ್ಥವನ್ನು ನೀವು ಹೇಳುತ್ತಿರುವುದು ತಪ್ಪಲ್ಲವೇ? ಎಂಬುದು ಇಲ್ಲಿಯ ಆಕ್ಷೇಪದ ಅಭಿಪ್ರಾಯ.

ಹೀಗೆ ಆಕ್ಷೇಪ ಮಾಡಬಾರದು. ಅವಿದ್ವದ್ರೂಢಿಗಿಂತ ಯೋಗದಿಂದ ಕೂಡಿದ ವಿದ್ವದ್ರೂಢಿಯು ಅತ್ಯಂತ ಬಲಿಷ್ಠವಾಗಿರುತ್ತದೆ. ಅಥವಾ ವಿದ್ವದ್ರೂಢಿಯಿಂದ ಕೂಡಿದ ಯೋಗವು ಅತ್ಯಂತ ಬಲಿಷ್ಠವಾಗಿರುತ್ತದೆ. ಆದ್ದರಿಂದ ಪ್ರಕೃತದಲ್ಲಿ ನಾವು ಹೇಳಿದ ಅರ್ಥವು ಯೋಗೋಪಬೃಂಹಿತವಾದ ವಿದ್ವದ್ರೂಢಿಗೆ ವಿಷಯವಾಗಿರುವುದರಿಂದ ಕ್ಲಿಷ್ಟಕಲ್ಪನೆ ಎನಿಸುವುದಿಲ್ಲ.

### ಅನೇಕ ಭಾಷ್ಯವಚನಗಳ ಆಧಾರ

**तत्वप्रदीपः – अत एवाऽह स्म – 'विरुद्धवत् प्रतीयन्ते' इत्यादि । परस्परविरोध इत्यादौ च विरोधे प्रतीत इत्यर्थः । 'यथा विरुद्धता न स्यात् तथाऽर्थः कल्प्य एतयोः' इति च । अतः सूक्तम् –**

**'प्रत्यक्षयोरागमयोर्विरोधे निश्चयाय तु ।**
**अनुमाद्या न स्वतन्त्राः प्रामाण्यपदवीं ययुः ।।' इति ।**

ಆದ್ದರಿಂದಲೇ ಶ್ರೀಮದಾಚಾರ್ಯರು ಭಾಷ್ಯದಲ್ಲಿ ಹೀಗೆ ಹೇಳಿದ್ದಾರೆ - 'ವಿರುದ್ಧವತ್ ಪ್ರತೀಯಂತೇ' ಇತ್ಯಾದಿಯಾಗಿ. 'ಪರಸ್ಪರವಿರೋಧೇ' ಎಂಬಲ್ಲೂ ಕೂಡ ವಿರೋಧವು ಪ್ರತೀತವಾದಾಗ ಎಂದರ್ಥ. ಮತ್ತು 'ಯಥಾ ವಿರುದ್ಧತಾ ನ ಸ್ಯಾತ್ ತಥಾऽರ್ಥಃ ಕಲ್ಪ್ಯ ಏತಯೋಃ' ಎಂಬಲ್ಲಿ ಹೇಗೆ ವಿರೋಧವಿಲ್ಲವೋ, ಆ ರೀತಿಯಾಗಿ ಎರಡು ಶ್ರುತಿವಾಕ್ಯಗಳಿಗೆ ಅರ್ಥವನ್ನು ಕಲ್ಪನೆ ಮಾಡಬೇಕು ಎಂದು . ಇನ್ನೂ ಸ್ಪಷ್ಟವಾಗಿ ಭಾಷ್ಯಕಾರರು ಹೀಗೆ ಹೇಳುತ್ತಾರೆ-

ಪ್ರತ್ಯಕ್ಷಯೋರಾಗಮಯೋರ್ವಿರೋಧೇ ನಿಶ್ಚಯಾಯ ತು ।
ಅನುಮಾದ್ಯಾ ನ ಸ್ವತಂತ್ರಾಃ ಪ್ರಾಮಾಣ್ಯಪದವೀಂ ಯಯುಃ ॥

ಪ್ರತ್ಯಕ್ಷ ಮತ್ತು ಆಗಮಗಳಿಗೆ ಪರಸ್ಪರ ವಿರೋಧ ಬಂದರೆ ಅದರ ನಿರ್ಣಯಕ್ಕಾಗಿ ಅನುಮಾನಗಳು ಪ್ರವೃತ್ತವಾಗುತ್ತವೆ. ಸ್ವತಂತ್ರವಾಗಿ ಈ ಅನುಮಾನಗಳು ಪ್ರಾಮಾಣ್ಯಸ್ಥಾನವನ್ನು ಹೊಂದಲಾರವು.

### ತತ್ವಪ್ರಕಾಶಿಕಾ

### ಈಶ್ವರನೇ ಇಲ್ಲವೆಂದು ಪೂರ್ವಪಕ್ಷ

**तत्वप्रकाशिका – न जीवस्येऽश्वराधीनकर्तृत्वं वाच्यम् । तस्यैवाभावात्। न च श्रुत्या तत्सिद्धिः। तस्यानुपलब्धिबाधितत्वात् । अथ च कल्पने गौरवं स्यात् । अतो जीव एव लाघवाज्जगत्कर्तेत्याशङ्कां परिहरत्सूत्रमुपन्यस्य व्याचष्टे – देवेति ।।**

ಜೀವನು ಭಗವದಧೀನವಾದ ಕರ್ತೃತ್ವವುಳ್ಳವನೆಂದು ಹೇಳಬಾರದು. ಏಕೆಂದರೆ ಭಗವಂತನೇ ಇರುವುದಿಲ್ಲ. ಶ್ರುತಿಯಿಂದ ಭಗವಂತನು ಸಿದ್ಧನಾಗುತ್ತಾನೆಂದು ಹೇಳಲಾಗದು. ಎಲ್ಲೂ ಕೂಡ ಅವನು ಕಾಣುಸುತ್ತಿಲ್ಲವಾದ್ದರಿಂದ ಅನುಪಲಬ್ಧವೆಂಬ ಬಾಧಕವಿರುವುದರಿಂದ ಶ್ರುತಿಯು ಬಾಧಿತವಾಗುತ್ತದೆ. ಇಲ್ಲದ ವಸ್ತುವನ್ನು ಕಲ್ಪನೆ ಮಾಡುವುದರಿಂದ ಕಲ್ಪನಾಗೌರವ-ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಲಾಘವವಿರುವುದರಿಂದ ಜೀವನೇ ಜಗತ್ತಿಗೆ ಕರ್ತೃ ಆಗಿದ್ದಾನೆಂದು ಒಪ್ಪಬೇಕು.

ಈ ಆಕ್ಷೇಪವನ್ನು ಪರಿಹರಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡಲು 'ದೇವಾದಿವತ್' ಇತ್ಯಾದಿ ಸೂತ್ರವು ಹೊರಟಿದೆ.

### ಈಶ್ವರನಲ್ಲಿ ಅನುಪಲಬ್ಧಿವಿರೋಧವಿಲ್ಲ

**ತತ್वಪ्रकाशिका – नेश्वरस्य कर्तृत्वाङ्गीकारे गौरवम् । स हि कर्तेत्यादि श्रुतिसिद्धत्वात् । नाप्यनुपलब्धिविरोधः । अदृष्टानामपि देवादीनां विद्यमानत्वात् तच्च प्रतिपादितम् ।**

ಈಶ್ವರನಲ್ಲಿ ಕರ್ತೃತ್ವವನ್ನು ಒಪ್ಪುವುದರಿಂದ ಗೌರವದೋಷವು ಬರುವುದಿಲ್ಲ. ಏಕೆಂದರೆ 'ಸ ಹಿ ಸರ್ವಸ್ಯ ಕರ್ತಾ' ಇತ್ಯಾದಿಯಾಗಿ ಶ್ರುತಿಗಳಿಂದ ಈಶ್ವರಲ್ಲಿ ಕರ್ತೃತ್ವವು ಸಿದ್ಧವಾಗಿದೆ.

ಕಣ್ಣಿಗೆ ಈಶ್ವರನು ಕಾಣುಸುತ್ತಿಲ್ಲವೆಂಬ ಅನುಪಲಬ್ಧಿವಿರೋಧವಿದೆಯಲ್ಲವೆ? ಎಂಬ ಪ್ರಶ್ನೆಗೆ ಉತ್ತರವಿಲ್ಲ. ಏಕೆಂದರೆ ದೇವತೆಗಳು ಅನುಪಲಬ್ಧರಾಗಿದ್ದರೂ ಕೂಡ ಇದ್ದಾರೆಂಬುದಾಗಿ ಅಭಿಮಾನ್ಯಧಿಕರಣದಲ್ಲಿ ಪ್ರತಿಪಾದಿಸಲಾಗಿದೆ.

ವಿವರಣೆ - ಈಶ್ವರನು ಅನುಪಲಬ್ಧನಾದ್ದರಿಂದ ಇಲ್ಲವೆಂದು ಪೂರ್ವಪಕ್ಷಿಗಳು ಆಕ್ಷೇಪ ಮಾಡಿದರು. ಅದಕ್ಕೆ ಇಲ್ಲಿ ಪರಿಹಾರವನ್ನು ಹೇಳುತ್ತಿದ್ದಾರೆ. ಅಭಿಮಾನ್ಯಧಿಕರಣದಲ್ಲಿ ಅನುಪಲಬ್ಧರಾಗಿದ್ದರೂ ಕೂಡ ದೇವತೆಗಳನ್ನು ಅಂಗೀಕಾರ ಮಾಡಬೇಕೆಂದು ಸಮರ್ಥನೆ ಮಾಡಲಾಗಿದೆ. ಅದೇ ನ್ಯಾಯವನ್ನು ಇಲ್ಲಿ ವಿವಕ್ಷಿಸಿ ಈಶ್ವರನು ಕೆಲವರಿಂದ ಉಪಲಬ್ಧನಾಗಿದ್ದಾನೆಂಬ ಕಾರಣದಿಂದ ಅವನನ್ನೇ ಅಲ್ಲಗಳೆಯಬಾರದು. 'ಯನ್ನೋಪಲಭ್ಯತೇ ತನ್ನಾಸ್ತಿ' ಎಂಬ ವ್ಯಾಪ್ತಿಗೆ 'ಅದೃಷ್ಟಾನಾಮಪಿ' ಎಂಬ ವಾಕ್ಯದಿಂದ ವ್ಯಭಿಚಾರವನ್ನು ಹೇಳುತ್ತಿದ್ದಾರೆ. (ವಾಕ್ಯಾರ್ಥವಿವರಣೆ)

ಅದೃಶ್ಯತ್ವ ಶಕ್ತಿಯು ಈಶ್ವರನಲ್ಲಿ ಸುತರಾಂ ಸಿದ್ಧವಾಗುತ್ತದೆ

**तत्वप्रकाशिका – देवादीनामदृश्यत्वशक्तिमत्त्वाद्युक्तानुपलब्धिरिति चेत् सममीश्वरस्यापि । तादृशशक्तित्वात् । कुतः । लोके पिशाचादीनामनीश्वराणां तादृशशक्तिमत्वे सर्वेश्वरस्य सुतरां तत्सिद्धेः । अतो नेश्वरस्य कर्तृत्वाङ्गीकारे गौरवं किं त्वश्रौतजीवकर्तृत्वाङ्गीकार एव तद्भवति । तदभावात् सिद्धान्ते लाघवमेवेति भावः ।**

ದೇವತೆಗಳಿಗೆ ಅದಶ್ಯತ್ವಶಕ್ತಿಯಿರುವುದರಿಂದ ಅವರು ಅನುಪಲಬ್ಧರಾಗುವುದು ಬಾಧಕವಲ್ಲವೆಂದು ಹೇಳಿದರೆ ಈಶ್ವರ ವಿಷಯದಲ್ಲೂ ಕೂಡ ಹೀಗೆಯೇ ಉತ್ತರಿಸುತ್ತೇವೆ. ದೇವತೆಗಳಿಗೆ ಅದೃಶ್ಯತ್ವ ಶಕ್ತಿಯಿರುವಂತೆ ಪರಮಾತ್ಮನಲ್ಲೂ ಕೂಡ ಅಂಥ ಶಕ್ತಿ ಇರುತ್ತದೆ. ಏಕೆಂದರೆ ಲೋಕದಲ್ಲಿ ಯಾವುದೇ ಪ್ರಭುತ್ವವಿಲ್ಲದ ಪಿಶಾಚಾದಿಗಳಲ್ಲೇ ಅದೃಶ್ಯತ್ವಶಕ್ತಿಯು ಕಂಡಿದೆ. ಹೀಗಿರುವಾಗ ಸರ್ವೇಶ್ವರನಾದ ಈಶ್ವರನಲ್ಲಿ ಅಂಥ ಅದೃಶ್ಯತ್ವಶಕ್ತಿಯು ಸುತರಾಂ ಸಿದ್ಧವಾಗುತ್ತದೆ. ಆದ್ದರಿಂದ ಈಶ್ವರನಲ್ಲಿ ಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಗೌರವದೋಷವು ಬರುವುದಿಲ್ಲ. ಮತ್ತೇನೆಂದರೆ ಯಾವುದೇ ಶ್ರುತಿಯಲ್ಲಿ ಕೇಳಿಸದ ಜೀವಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಮಾತ್ರ ಗೌರವದೋಷವು ಬರುತ್ತದೆ. ಸಿದ್ಧಾಂತದಲ್ಲಿ ಅಶ್ರುತವಾದ ಜೀವಕಕರ್ತೃತ್ವವನ್ನು ಒಪ್ಪದ ಕಾರಣ ಲಾಘವ ದೋಷವೇ ಇದೆ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಸೂತ್ರದಲ್ಲಿರುವ ಅಪಿಶಬ್ದದ ಅರ್ಥವನ್ನು ಟೀಕೆಯಲ್ಲಿ 'ಅನೀಶ್ವರಾಣಾಮ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ ಪಿಶಾಚಾದಿಗಳಿಗೇನೇ ಅದೃಶ್ಯತ್ವ ಶಕ್ತಿಯಿದ್ದಾಗ ಪರಮಾತ್ಮನ ವಿಷಯದಲ್ಲಿ ಕಿಮುತ? ಎಂಬುದು ಇದರ ಅಭಿಪ್ರಾಯ. ಭಾಷ್ಯಕ್ಕೆ ಅಭಿಪ್ರೇತವಾದ ಶ್ರುತಿಗಳಲ್ಲಿ ಜೀವಕರ್ತೃತ್ವ ಸಾಧಕವಾದ ಯಾವುದೇ ಆಧಾರಗಳಿರುವುದಿಲ್ಲ. ವಿಪರೀತವಾಗಿ ಬಾಧಕವೇ ಇರುತ್ತದೆ. ಆದ್ದರಿಂದ ಪೂರ್ವಪಕ್ಷದಲ್ಲೇ ಕಲ್ಪನಾಗೌರವ ದೋಷವಿದೆ ಎಂಬುದಾಗಿ ನ್ಯಾಯವಿವರಣದಲ್ಲಿ ಇದೆ. ಅದನ್ನು ಪ್ರಕೃತ ಟೀಕೆಯಲ್ಲಿ ಸಮರ್ಥನೆ ಮಾಡುತ್ತಿದ್ದಾರೆ. (ವಾಕ್ಯಾರ್ಥಮುಕ್ತಾವಳಿ-ಭಾವದೀಪ)

### ಯುಕ್ತಿಗಳು ಯಾವಾಗ ವಿರೋಧಗಳಾಗುತ್ತವೆ?

**तत्वप्रकाशिका – यदभिप्रेतं श्रुतिसिद्धः परमेश्वरो नानुपलब्धियुक्त्या निराकार्य इति तत्र स्मृतिं चाह – नेति ।। युक्तियोगाद्युक्त्युपायात् । वाक्यानां विरोधे युक्तीनां जाते सति ता एव युक्तयो न युक्तयः किंत्वाभासा इत्यर्थः । वाक्यानां परस्परविरोधे युक्तयोऽर्थसाधिका न तु केवलयुक्तय इति वा ।।**

ಶ್ರುತಿಸಿದ್ಧನಾಗಿರುವುದರಿಂದ ಈಶ್ವರನು ಅನುಪಲಬ್ಧಿಯುಕ್ತಿಯಿಂದ ನಿರಾಕರಣೆಗೆ ಅರ್ಹನಾಗಿರುವುದಿಲ್ಲ ಎಂಬ ವಿಷಯದಲ್ಲಿ ಸ್ಮೃತಿ ಪ್ರಮಾಣವನ್ನು 'ನಯುಕ್ತಿಯೋಗಾತ್' ಇತ್ಯಾದಿಯಾಗಿ ಭಾಷ್ಯದಲ್ಲಿ ಹೇಳಿದ್ದಾರೆ.

'ಯುಕ್ತಿಯೋಗಾತ್' ಎಂಬುದಕ್ಕೆ ಯುಕ್ತಿರೂಪವಾದ ಉಪಾಯ ಇರುವುದರಿಂದ ಎಂದರ್ಥ. ವಾಕ್ಯಗಳ ವಿರೋಧವು ಯುಕ್ತಿಗಳಿಗೆ ಬಂದಾಗ ಅವುಗಳು ಯುಕ್ತಿಯೆಂದೇ ಕರೆಸಿಕೊಳ್ಳಲು ಅರ್ಹವಾಗಲಾರವು. 'ಯುಕ್ತ್ಯಾಭಾಸ' ಎಂದೇ ಕರೆಸಿಕೊಳ್ಳಲು ಅರ್ಹವಾಗುತ್ತವೆ. ಅಥವಾ ವಾಕ್ಯಗಳಿಗೆ ಪರಸ್ಪರ ವಿರೋಧ ಬಂದರೆ ಮಾತ್ರ ಯುಕ್ತಿಗಳು ಅರ್ಥಸಾಧಕವಾಗುತ್ತವೆ. ಕೇವಲ ಯುಕ್ತಿಗಳು ಅರ್ಥಸಾಧಕ ಆಗುವುದಿಲ್ಲ.

ವಿವರಣೆ - ವಾಕ್ಯಗಳ ವಿರೋಧ ಇರುವುದರಿಂದ ಅನುಪಲಬ್ಧಿ ಎಂಬ ಯುಕ್ತಿಗೆ ಆಭಾಸತ್ವವನ್ನು ಹೇಳುವುದಾದರೆ ಬ್ರಹ್ಮಮೀಮಾಂಸಶಾಸ್ತ್ರವೇ ಅನಾರಂಭಣೀಯವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ 'ವಾಕ್ಯನಾಮ್' ಇತ್ಯಾದಿ ಟೀಕೆಯಿಂದ ಉತ್ತರಿಸುತ್ತಿದ್ದಾರೆ (ವಾಕ್ಯಾರ್ಥಮುಕ್ತಾವಳಿ)

ಶ್ರುತಿವಿರೋಧ ಬಂದಾಗ ಯುಕ್ತಿಗಳನ್ನು ಕೈಬಿಡಬೇಕು. ಶ್ರುತಿಗಳಲ್ಲೇ ಪರಸ್ಪರ ವಿರೋಧ ಬಂದಾಗ ಯುಕ್ತಿಯಿಂದ ಆ ವಿರೋಧವನ್ನು ಪರಿಹರಿಸಬೇಕು. ಇದಕ್ಕಾಗಿ ಬ್ರಹ್ಮಮೀಮಾಂಸಾಶಾಸ್ತ್ರವು ಹೊರಡಲೇಬೇಕು.

ಭಾವದೀಪ

ಈಶ್ವರನಿಲ್ಲವೆಂಬ ಆಕ್ಷೇಪ ಯುಕ್ತವಾಗಿದೆ.

**भावदीपः** –॥ देवादिवदपि लोके ॥ २६॥ नन्वाद्ये सर्ववेदसमन्वयोक्त्या ईश्वरस्य सिद्धत्वादत्र पुनस्तदभावशङ्का न युक्तेति भावेनाशङ्क्यं कर्तृरीश्वरस्यादृष्टिविरोध इति भाष्योक्तं हेतुमाह – **न च श्रुत्येति** ।। **बाधितत्वादिति** ।। प्रागुक्तरीत्या तदभावनिश्चयादिति तात्पर्यं बोध्यम्। तथा च प्रागुक्तस्यैवात्राक्षेप इति भावः।

ಪ್ರಥಮಾಧ್ಯಾಯದಲ್ಲಿ ಸಕಲವೇದ ಸಮನ್ವಯಗಳನ್ನು ಮಹಾವಿಷ್ಣುವಿನಲ್ಲಿ ಸಾಧಿಸಿದ್ದಾಗಿದೆ. ಹೀಗಿರುವಾಗ ಪ್ರಕೃತ ಆ ಮಹಾವಿಷ್ಣುವೇ ಇರುವುದಿಲ್ಲ ಎಂಬ ಪೂರ್ವಪಕ್ಷವು ಅಯುಕ್ತವಾಗುತ್ತದಲ್ಲವೇ? ಎಂಬ ಆಶಂಕೆಗೆ ಕರ್ತೃವಾದ ಈಶ್ವರನು ಕಣ್ಣಿಗೆ ಕಾಣಿಸುತ್ತಿಲ್ಲ. ಆದ್ದರಿಂದ ಇಲ್ಲವೆಂದು ಆಕ್ಷೇಪ ಮಾಡುತ್ತಿದ್ದೇವೆ. ಮತ್ತು ಪ್ರಥಮಾಧ್ಯಾಯದಿಂದ ವಿರೋಧವು ಕೂಡ ಬರುವುದಿಲ್ಲ. ಹೀಗೆ ಭಾಷ್ಯದಲ್ಲಿ ಹೇಳಲ್ಪಟ್ಟ ಹೇತುವನ್ನು ಟೀಕೆಯಲ್ಲಿ 'ನಚ ಶ್ರುತ್ಯಾ ತತ್ಸಿದ್ಧಿಃ' ಇತ್ಯಾದಿಯಾಗಿ ಉಪಪಾದನೆ ಮಾಡುತ್ತಿದ್ದಾರೆ.

'ಬಾಧಿತತ್ವಾತ್' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಹಿಂದೆ ಹೇಳಿದಂತೆ ಈಶ್ವರನು ಎಲ್ಲೂ ಕೂಡ ಕಾಣಿಸುತ್ತಿಲ್ಲವಾದ್ದರಿಂದ ಅವನನ್ನು ಇಲ್ಲವೆಂದು ನಿಶ್ಚಯ ಮಾಡುತ್ತೇವೆ ಎಂಬ ತಾತ್ಪರ್ಯವನ್ನು ಇಲ್ಲಿ ತಿಳಿಯತಕ್ಕದ್ದು. ಹಾಗಾಗಿ ಹಿಂದೆ ಈಶ್ವರನಲ್ಲಿ ಯಾವ ಸಮಸ್ತ ವೇದಸಮನ್ವಯವನ್ನು ಮಾಡಲಾಯಿತೋ ಅದನ್ನೇ ಪ್ರಕೃತ ಆಕ್ಷೇಪ ಮಾಡಲಾಗುತ್ತಿದೆ ಎಂಬುದು ಪೂರ್ವಪಕ್ಷದ ಅಭಿಪ್ರಾಯ.

ನ್ಯಾಯವಿವರಣದ ವ್ಯಾಖ್ಯಾನ

**भावदीपः** – न चेत्यादिभाष्यात्पूर्वश्रुतिसिद्धत्वेनाकल्पनादिति न्यायविवरणं साध्योक्तिपूर्वं योजयति ॥ **नेश्वरस्येति** ।। न्यायविवरणे नान्यः कर्तेत्यादेरिव साक्षात्कर्तृश्रुतेरनुक्तेः स्वयमाह– **स हि कर्तेति** ।। न च कर्तुरित्यादिभाष्यं व्याचष्टे– **नापीति** ।। **प्रतिपादितमिति** ।। अभिमानिनय इति भावः।

'ನಚ' ಇತ್ಯಾದಿಯಾದ ಭಾಷ್ಯದಿಂದ 'ಪೂರ್ವಶ್ರುತಿಸಿದ್ಧತ್ವೇನ ಅಕಲ್ಪನಾತ್' ಎಂಬ ನ್ಯಾಯವಿವರಣವನ್ನು ಸಾಧ್ಯವನ್ನು ಹೇಳುವ ಮೂಲಕ ಯೋಜನೆ ಮಾಡುವುದಕ್ಕಾಗಿ 'ನ ಈಶ್ವರಸ್ಯ'

ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ನ್ಯಾಯವಿವರಣದಲ್ಲಿ 'ನಾನ್ಯಃ ಕರ್ತಾ' ಇತ್ಯಾದಿಯಾಗಿ ಹೇಳಿದಂತೆ ಸಾಕ್ಷಾತ್ತಾಗಿ ಕರ್ತೃತ್ವಶ್ರುತಿಯು ಹೇಳಿರುವುದಿಲ್ಲ. ಆದ್ದರಿಂದ ಪ್ರಕೃತ ಟೀಕೆಯಲ್ಲಿ 'ಸ ಹಿ ಕರ್ತಾ' ಇತ್ಯಾದಿಯಾಗಿ ಈಶ್ವರನಲ್ಲಿ ಕರ್ತೃತ್ವಹೇಳುವ ಶ್ರುತಿಯನ್ನು ಉಲ್ಲೇಖ ಮಾಡುತ್ತಿದ್ದಾರೆ. 'ನ ಚ ಕರ್ತುಃ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನಾಪಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಪ್ರತಿಪಾದಿತಮ್' ಎಂದರೆ ಅಭಿಮಾನ್ಯಧಿಕರಣದಲ್ಲಿ ಪ್ರತಿಪಾದನೆ ಮಾಡಲಾಗಿದೆ ಎಂದಭಿಪ್ರಾಯ.

ವಿವರಣೆ – ಪ್ರಕೃತ ಟೀಕೆಯಲ್ಲಿ ನ್ಯಾಯವಿವರಣವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಪೂರ್ವಶ್ರುತಿಸಿದ್ಧತ್ವೇನ ಆಕಲನಾತ್' ಎಂದಷ್ಟೇ ನ್ಯಾಯವಿವರಣದಲ್ಲಿದೆ. ಇಲ್ಲಿ ಸಾಧ್ಯನಿರ್ದೇಶವನ್ನೇ ಮಾಡಿರುವುದಿಲ್ಲ. ಆದರಿಂದ ಟೀಕೆಯಲ್ಲಿ 'ನ ಈಶ್ವರಸ್ಯ ಕರ್ತೃತ್ವಾಂಗೀಕಾರೇ ಗೌರವಮ್' ಎಂದು ಹೇಳುವ ಮೂಲಕ ನ್ಯಾಯವಿವರಣದಲ್ಲಿ ಹೇಳಿದ ಹೇತುವಿನ ಜೊತೆ ಅನ್ವಯಕ್ರಮವನ್ನು ತಿಳಿಸಿದ್ದಾರೆ. ಮತ್ತು ನ್ಯಾಯವಿವರಣದಲ್ಲಿ ಈಶ್ವರನಲ್ಲಿ ಕರ್ತೃತ್ವವನ್ನು ಸಾಧಿಸುವ ಶ್ರುತಿಯನ್ನು ಸ್ಪಷ್ಟವಾಗಿ ಉಲ್ಲೇಖ ಮಾಡಿಲ್ಲ. ಈ ದೃಷ್ಟಿಯಿಂದ 'ಸ ಹಿ ಸರ್ವಸ್ಯ ಕರ್ತಾ' ಎಂಬ ಶ್ರುತಿಯನ್ನು ಕೂಡ ಉಲ್ಲೇಖ ಮಾಡಿದ್ದಾರೆ. ಹೀಗೆ ನ್ಯಾಯವಿವರಣವನ್ನು ವ್ಯಾಖ್ಯಾನ ಮಾಡಿದ ಮೇಲೆ 'ನಾಪಿ' ಇತ್ಯಾದಿ ಗ್ರಂಥದಿಂದ 'ನಚ ಕರ್ತುಃ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು ಹೊರಟಿದ್ದಾರೆ.

### ಟೀಕೆಯ ಕಠಿಣ ಪದಾರ್ಥ

**भावदीपः** – अपिशब्दार्थमाह – **अनीश्वराणामिति ।। अत इति ।।** श्रुतिसिद्धत्वादित्यर्थः। अश्रौतजीवकर्तृत्वाङ्गीकारे गौरवमेव। तदभावादेव सिद्धान्ते लघुतेति न्यायविवरणं योजयति– **किं त्विति ।।** प्रकृतोपयोगि-तयार्थमाह– **युक्तीनां जाते सतीति ।।** एवकारो युक्तय एवेत्यन्वेतीति भावेनाह– **ता एवेति ।।** तर्हि मीमांसाव्याघात इत्यत आह– **वाक्यानामिति ।। परस्परेति ।।** वाक्यान्तरविरोधे वा एकवाक्येऽपि पूर्वोत्तरविरोधे वा इत्यर्थः। अर्थसाधिकेति शेषोक्तिः ॥ २६ ॥

'ಲೋಕೇಽಪಿ' ಎಂಬಲ್ಲಿರುವ 'ಅಪಿ'ಶಬ್ದಕ್ಕೆ 'ಅನೀಶ್ವರಾಣಾಂ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಅತಃ' ಎಂಬ ಪದಕ್ಕೆ ಶ್ರುತಿಸಿದ್ಧವಾಗಿರುವುದರಿಂದ ಎಂದರ್ಥ. ಶ್ರುತಿಸಿದ್ಧವಾಗದ ಜೀವಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಗೌರವದೋಷ ಬರುತ್ತದೆಂದು ತಿಳಿಯಬೇಕು. ಸಿದ್ಧಾಂತದಲ್ಲಿ ಶ್ರುತಿಸಿದ್ಧವಾಗದ

ಕರ್ತೃತ್ವವನ್ನು ಈಶ್ವರನಲ್ಲಿ ಒಪ್ಪದೇ ಇರುವುದರಿಂದ ಕಲ್ಪನಾಗೌರವದೋಷ ಬರುವುದಿಲ್ಲ, ಲಾಘವವೇ ಇದೆ. ಎಂಬುದಾಗಿ ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಇದನ್ನು ಪ್ರಕೃತ 'ಕಿಂತು' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡಿದ್ದಾರೆ. ಪ್ರಕೃತ ಉಪಯೋಗಿಯಾಗುವ ಅರ್ಥವನ್ನು 'ಯುಕ್ತೀನಾಂ ಜಾತೇ ಸತಿ' ಎಂಬುದರಿಂದ ತೋರಿಸಿದ್ದಾರೆ. 'ಏವ'ಕಾರವು ಯುಕ್ತಯಃ ಏವ ಎಂಬುದಾಗಿ ಅನ್ವಯವನ್ನು ಹೊಂದುತ್ತದೆ. ಆದ್ದರಿಂದ 'ತಾ ಏವ' ಎಂದು ಟೀಕೆಯಲ್ಲಿ ವ್ಯಾಖ್ಯಾನಿಸಿದ್ದಾರೆ.

ಯುಕ್ತಿಗಳು ಅಸಾಧಕವಾಗುವುದಾದರೆ ಮೀಮಾಂಸಾ ಗ್ರಂಥದಿಂದ ವ್ಯಾಘಾತ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ವಾಕ್ಯಾನಾಂ' ಎಂಬುದಾಗಿ ಉತ್ತರಿಸಿದ್ದಾರೆ. 'ಪರಸ್ಪರವಿರೋಧೇ' ಎಂದರೆ ಒಂದು ವಾಕ್ಯಕ್ಕೆ ಮತ್ತೊಂದು ವಾಕ್ಯದಿಂದ ವಿರೋಧವು ಪ್ರಾಪ್ತವಾದಾಗ ಅಥವಾ ಒಂದೇ ವಾಕ್ಯದಲ್ಲಿ ಪೂರ್ವೋತ್ತರ-ವಿರೋಧಗಳು ಬಂದಾಗ ಎಂದರ್ಥ. 'ಅರ್ಥಸಾಧಿಕಾ' ಎಂಬುದನ್ನು ಭಾಷ್ಯವಾಕ್ಯದಲ್ಲಿ ಶೇಷಪೂರಣೆ ಮಾಡಿಕೊಳ್ಳಬೇಕು.

ವಿವರಣೆ - ಭಾಷ್ಯದಲ್ಲಿ 'ಲೋಕೇಪಿ ಪಿಶಾಚಾದೀನಾಂ' ಎಂದು ಹೇಳಿದ್ದಾರೆ. ಇಲ್ಲಿರುವ 'ಅಪಿ' ಶಬ್ದದ ಸ್ವಾರಸ್ಯವನ್ನು ಟೀಕೆಯಲ್ಲಿ 'ಅನೀಶ್ವರಾಣಾಂ' ಎಂಬ ಪದದಿಂದ ಸ್ಪಷ್ಟಪಡಿಸಿದ್ದಾರೆ. ಅನೀಶ್ವರರಿಗೆ ಇಂತಹ ಅದೃಶ್ಯತ್ವಶಕ್ತಿ ಇರುವಾಗ ಸರ್ವೇಶ್ವರನಿಗೆ ಅದೃಶ್ಯತ್ವಶಕ್ತಿ ಇಲ್ಲದೇ ಇರುತ್ತದೇನು? ಎಂಬುದು ಇದರ ಅರ್ಥ.

ಪೂರ್ವಪಕ್ಷಿಗಳು ಈಶ್ವರನಿಗೆ ಕರ್ತೃತ್ವವನ್ನು ಒಪ್ಪಿದರೆ ಕಲ್ಪನಾಗೌರವ ಬರುತ್ತದೆಂದು ಹೇಳಿದ್ದರು. ಪ್ರಕೃತ ಸಿದ್ಧಾಂತದಲ್ಲಿ ಸಿದ್ಧಾಂತಿಗಳಿಗೆ ಕಲ್ಪನಾಗೌರವ ಬರುವುದಿಲ್ಲ; ಪೂರ್ವಪಕ್ಷಿಗಳಿಗೆ ಕಲ್ಪನಾಗೌರವ ಬರುತ್ತದೆ. ಸಿದ್ಧಾಂತಿಗಳಿಗೆ ಲಾಘವ ಇದೆ ಎಂಬುದನ್ನು 'ಕಿಂತು' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

'ವಾಕ್ಯಾನಾಂ ಪರಸ್ಪರವಿರೋಧೇ ಯುಕ್ತಯಃ ಅರ್ಥಸಾಧಿಕಾ' ಎಂಬ ಟೀಕಾವಾಕ್ಯವನ್ನು ನೋಡಿದಾಗ ಎರಡು ವಾಕ್ಯಗಳಿಗೆ ಪರಸ್ಪರವಿರೋಧ ಬಂದಾಗ ಮಾತ್ರ ಯುಕ್ತಿಗಳು ಸಾಧಕವಾಗುತ್ತವೆ ಎಂಬರ್ಥವು ತೋರುತ್ತದೆ. ಆದರೆ ಏಕವಾಕ್ಯದಲ್ಲೂ ಕೂಡ ಪೂರ್ವೋತ್ತರವಿರೋಧ ಬಂದಾಗ ಯುಕ್ತಿಗಳು ಅರ್ಥಸಾಧಕವಾಗುತ್ತವೆಂಬ ಅರ್ಥವನ್ನು ತಿಳಿಯಬೇಕು.

## ಭಾವದೀಪದ ವೈಶಿಷ್ಟ್ಯ

* ಈ ಅಧಿಕರಣದಲ್ಲಿ ಈಶ್ವರನೇ ಇಲ್ಲವೆಂದು ಪೂರ್ವಪಕ್ಷಿಗಳು ಒಪ್ಪಿರುತ್ತಾರೆ ಎಂದಿದ್ದೀರಿ. ಆದರೆ ಪ್ರಥಮಾಧ್ಯಾಯದಲ್ಲಿ ಸಕಲವೇದಸಮನ್ವಯವನ್ನು ಅವನಲ್ಲಿ ಮಾಡಿ ಸಮರ್ಥಿಸಲಾಗಿದೆಯಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಉತ್ತರವನ್ನು ಭಾವದೀಪದಲ್ಲಿ ನೀಡಿದ್ದಾರೆ. ಎಷ್ಟೇ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಿದರೂ ಕೂಡ ಅವನು ಕಣ್ಣಿಗೆ ಕಾಣಿಸುತ್ತಿಲ್ಲವಾದ್ದರಿಂದ ಒಪ್ಪಲು ಸಾಧ್ಯವಿಲ್ಲ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

* ಅಲ್ಲಲ್ಲಿ ಭಾಷ್ಯದ ವಾಕ್ಯಗಳಿಗೆ ವ್ಯಾಖ್ಯಾನಮಾಡುವ ಟೀಕಾರಾಯರು ಪ್ರಕೃತ ಮೊದಲು ನ್ಯಾಯವಿವರಣದ ವಾಕ್ಯವನ್ನೇ ವ್ಯಾಖ್ಯಾನಮಾಡಿದ್ದಾರೆ. ಅನಂತರ ಭಾಷ್ಯದ ವಾಕ್ಯವನ್ನು ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ನ್ಯಾಯವಿವರಣದ ಪ್ರತಿಪಂಕ್ತಿಯ ವ್ಯಾಖ್ಯಾನವನ್ನು ಟೀಕೆಯಲ್ಲಿ ಕಾಣಬೇಕೆಂದರೆ ಭಾವದೀಪವನ್ನು ಅಧ್ಯಯನ ಮಾಡಬೇಕು.

* 'ಲೋಕೇಽಪಿ' ಎಂಬಲ್ಲಿರುವ ಅಪಿಶಬ್ದಕ್ಕೆ ವ್ಯಾಖ್ಯಾನ ಮಾಡುವಾಗ ಕೈಮುತ್ಯನ್ಯಾಯವನ್ನು ಸೂಚಿಸಿದ್ದಾರೆಂದು ವ್ಯಾಖ್ಯಾನ ಮಾಡಲಾಗಿದೆ. ಅದರಂತೆ 'ವಿರೋಧ ಏವ ವಾಕ್ಯಾನಾಂ ಯುಕ್ತಯಃ' ಎಂಬಲ್ಲಿ ಏವಕಾರವನ್ನು ಯುಕ್ತಯಃ ಎಂಬಲ್ಲಿ ಅನ್ವಯ ಮಾಡಿಕೊಳ್ಳಬೇಕೆಂದು ತಿಳಿಸಿದ್ದಾರೆ.

* ಯುಕ್ತಿಗಳು ಅಸಾಧಕವಾಗುವುದಾದರೆ ಮೀಮಾಂಸಾಗ್ರಂಥವೇ ವ್ಯರ್ಥವಾಗುತ್ತದೆಂಬ ಆಕ್ಷೇಪಕ್ಕೆ ಉತ್ತರವನ್ನು ನೀಡುವಾಗ ವಾಕ್ಯಗಳಿಗೆ ಪರಸ್ಪರವಿರೋಧ ಬಂದಾಗ ಅಥವಾ ಒಂದೇ ವಾಕ್ಯದಲ್ಲಿ ಪೂರ್ವೋತ್ತರಗಳಲ್ಲಿ ವಿರೋಧ ಬಂದಾಗ ಯುಕ್ತಿಗಳು ಸಾಧಕವಾಗುತ್ತವೆಂಬ ಅಪೂರ್ವಪ್ರಮೇಯವನ್ನು ತಿಳಿಸಲಾಗಿದೆ.

### ಬ್ರಹ್ಮಸೂತ್ರ

'ಕೃತ್ಸ್ನಪ್ರಸಕ್ತಿಃ' ಇತ್ಯಾದಿ ಸೂತ್ರದ ವ್ಯಾಖ್ಯಾನ

**ब्रह्मसूत्रम् – कृत्स्नप्रसक्तिर्निरवयवत्वशब्दकोपो वा ॥**

ಜೀವನು ಸ್ವತಂತ್ರಕರ್ತೃವಲ್ಲ. ಏಕೆಂದರೆ ಸಣ್ಣ ಪುಟ್ಟ ಕೆಲಸಗಳಲ್ಲಿ ತಾನು ಸಂಪೂರ್ಣ ಶಕ್ತಿಯನ್ನು ವಿನಿಯೋಗಿಸಲಾರ. ಕೇವಲ ಶಕ್ತಿಯ ಒಂದಂಶವನ್ನಷ್ಟೆ ವಿನಿಯೋಗಿಸುತ್ತಾನೆ. ಆದ್ದರಿಂದ ಜೀವನು ಜಗತ್ಕರ್ತೃವಾಗಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ನಿರವಯವಶ್ರುತಿಗೆ ವಿರೋಧ ಮಾಡಿದಂತಾಗುತ್ತದೆ. ಆದ್ದರಿಂದ ಜೀವನಿಗೆ ಅಂಶವನ್ನು ಒಪ್ಪಬಾರದು.

ಅರ್ಥ -- ವಾ ಎಂಬ ಶಬ್ದವು ಪಕ್ಷಭೇದದಿಂದ ದೋಷಾಪಾದನೆಯನ್ನು ಸೂಚಿಸುತ್ತಿದೆ. ಜೀವನೇ ಸ್ವತಃ ಕರ್ತೃವಾಗುವುದಾದರೆ, ಕೃತ್ಸ್ನಪ್ರಸಕ್ತಿಃ= ಹುಲ್ಲನ್ನು ಎತ್ತುವಾಗ ಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಬೇಕಾದೀತು. ಈ ಆಕ್ಷೇಪದ ಪರಿಹಾರಕ್ಕಾಗಿ ತನ್ನ ಶಕ್ತಿಯ ಏಕದೇಶವನ್ನಷ್ಟೆ ಉಪಯೋಗಿಸುತ್ತಾನೆಂದು ಹೇಳುವುದಾದರೆ, ನಿರವಯವತ್ವಶಬ್ದಕೋಪಃ = 'ನಿತ್ಯೋ ನಿರವಯವಃ' ಎಂಬ ಶ್ರುತಿ ವಿರೋಧವು ಪ್ರಾಪ್ತವಾಗುತ್ತದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಇತರವ್ಯಪದೇಶಾಧಿಕರಣವು ಸಮಾಪ್ತವಾಯಿತು ॥

### ಬ್ರಹ್ಮಸೂತ್ರಭಾಷ್ಯ

ಜೀವಕರ್ತೃತ್ವ ಒಪ್ಪಿದಲ್ಲಿ ಬಾಧಕ

**ब्रह्मसूत्रभाष्यम् –॥ कृत्स्नप्रसक्तिर्निरवयवत्वशब्दकोपो वा ॥६॥**

**अयं च दोषो जीवकर्तृत्वपक्षे । एकेनाङ्गुलिमात्रेण प्रवर्तमानोऽपि पूर्णप्रवृत्तिः स्यात् । न च तद् युज्यते, सामर्थ्यैकदेशदर्शनात् ।**

ಅನುವಾದ - ಜೀವನು ಕರ್ತೃವಾಗಿದ್ದಾನೆಂಬ ಪಕ್ಷದಲ್ಲಿ ಮತ್ತೊಂದು ದೋಷವಿದೆ. ಜೀವನು ಸ್ವತಂತ್ರಕರ್ತೃವಾದರೆ ಒಂದೇ ಬೆರಳಿನಿಂದ ಯಾವ ಹುಲ್ಲುಕಡ್ಡಿಯನ್ನು ಎತ್ತುತ್ತಾನೋ ಆ ಸಂದರ್ಭದಲ್ಲಿ ಸಂಪೂರ್ಣ ಸಾಮರ್ಥ್ಯ ಉಪಯೋಗಿಸಿ ಹುಲ್ಲನ್ನು ಎತ್ತಬೇಕಾದೀತು.

ಪ್ರತಿಪದಾರ್ಥ -- ಮತ್ತೊಂದು ಯುಕ್ತಿಯಿಂದ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ನಿರಾಕರಣೆ ಮಾಡಲು ಸೂತ್ರ ಹೊರಟಿದೆ. ಜೀವಕರ್ತೃತ್ವಪಕ್ಷೇ = ಜೀವನು ಸ್ವತಂತ್ರನಾಗಿದ್ದಾನೆ ಎಂಬ ಪಕ್ಷದಲ್ಲಿ, ಅಯಂ ದೋಷಃ = ಮುಂದೆ ಹೇಳುವ ಇನ್ನೊಂದು ದೋಷವು ಬರುತ್ತದೆ. ಏತೇನ = ಒಂದೇ, ಅಂಗುಲೀಮಾತ್ರೇಣ = ಕೇವಲ ಬೆರಳಿನಿಂದ, ಪ್ರವರ್ತಮಾನೋಽಪಿ = ಹುಲ್ಲುಕಡ್ಡಿಯನ್ನು ಎತ್ತಲು ಪ್ರಯತ್ನಿಸಿದಾಗಲೂ, ಪೂರ್ಣಪ್ರವೃತ್ತಿಃ = ಸಂಪೂರ್ಣವಾದ ಪ್ರಯತ್ನವನ್ನು, ಸ್ಯಾತ್ = ಮಾಡಬೇಕಾದೀತು. ತದ್ = ಅಂಥ ಸಂಪೂರ್ಣಸಾಮರ್ಥ್ಯವು, ನ ಚ ಯುಜ್ಯತೇ = ಯುಕ್ತವಾಗುವುದಿಲ್ಲ. ಏಕೆಂದರೆ, ಸಾಮರ್ಥ್ಯೈಕದೇಶದರ್ಶನಾತ್ = ಸ್ವಲ್ಪಮಾತ್ರ ಪ್ರಯತ್ನ ಪಡುವುದು ಕಾಣಸುತ್ತಿದೆ.

ನಿರವಯವನಿಗೆ ಏಕದೇಶ ಸಾಮರ್ಥ್ಯ ಹೇಗೆ ?

**ब्रह्मसूत्रभाष्यम् – न चैकदेशेन, निरवयवत्वात् । 'अथ यस्य जीवः स नित्यो निरवयवो ज्ञाताऽज्ञाता सुखी दुःखी शरीरेन्द्रियस्थः' इति भाल्लवेयश्रुतिः।**

ಅನುವಾದ - ಜೀವನು ಸಾಮರ್ಥ್ಯದ ಏಕದೇಶವನ್ನೇ ಉಪಯೋಗಿಸಿ ಹುಲ್ಲುಕಡ್ಡಿಯನ್ನು ಎತ್ತುತ್ತಾನೆಂದು ಹೇಳಬಹುದಲ್ಲವೆ? ಎನ್ನಲು ಸಾಧ್ಯವಿಲ್ಲ. ಏಕೆಂದರೆ ಜೀವನು ನಿರವಯವನಾಗಿದ್ದಾನೆಂದು ಭಾಲ್ಲವೇಯ ಶ್ರುತಿಯು ಹೇಳುತ್ತಿದೆ. ಯಾವ ಜೀವನಿದ್ದಾನೋ ಅವನು ನಿತ್ಯನೂ ಅವಯವ ರಹಿತನೂ, ಜ್ಞಾತೃವೂ, ಸರ್ವಜ್ಞನೂ, ಸುಖಿಯೂ, ದುಃಖಿಯೂ ಶರೀರ ಇಂದ್ರಿಯವುಳ್ಳವನೂ ಆಗಿರುತ್ತಾನೆ.

ಪ್ರತಿಪದಾರ್ಥ -- 'ಏಕದೇಶೇನ' ಸಾಮರ್ಥ್ಯದ ಏಕದೇಶದಿಂದ ಪ್ರಯತ್ನಪಡುತ್ತಾನೆಂಬುದು, ನಚ = ಯುಕ್ತವಾಗುವುದಿಲ್ಲ. ನಿರವಯತ್ವಾತ್= ನಿರವಯವನಾದ್ದರಿಂದ, ಯಃ = ಯಾವ, ಜೀವಃ = ಜೀವನಿದ್ದಾನೋ ಅವನು, ನಿತ್ಯಃ = ನಾಶರಹಿತನು, ನಿರವಯವಃ = ಅಂಶವಿಲ್ಲದನು. ಜ್ಞಾತಾ = ತಿಳುವಳಿಕೆ ಇರುವವನು, ಅಜ್ಞಾತಾ =

ಅಸರ್ವಜ್ಞನು, ಸುಖೀ = ಸುಖವುಳ್ಳವನು, ದುಃಖೀ = ದುಃಖವುಳ್ಳವನು, ಶರೀರೇಂದ್ರಿಯಸ್ಥಃ = ಶರೀರ ಇಂದ್ರಿಯಗಳನ್ನು ಹೊಂದಿರುವವನು, ಇತಿ = ಹೀಗೆ, ಭಾಲ್ಲವೇಯಶ್ರುತಿಃ = ಭಾಲ್ಲವೇಯ ಶ್ರುತಿಯು ಹೇಳುತ್ತಿದೆ.

### ಔಪಾಧಿಕಾಂಶವೂ ಕೂಡ ಇಲ್ಲ

**ब्रह्मसूत्रभाष्यम् – न च उपाधिकृतांशः स एवांश उपहित इति, द्वित्वापेक्षत्वात्।**

ಅನುವಾದ - ಜೀವನಿಗೆ ಸ್ವಾಭಾವಿಕವಾದ ಅಂಶಗಳಿಲ್ಲದಿರಬಹುದು. ಆದರೆ ಔಪಾಧಿಕವಾದ ಅಂಶಗಳನ್ನು ಒಪ್ಪಬಹುದಲ್ಲವೆ? ಇದು ತಪ್ಪು. ಔಪಾಧಿಕವಾದ ಅಂಶಭೇದವನ್ನು ಒಪ್ಪಲು ಸಾಧ್ಯವಿಲ್ಲ. ಜೀವನ ಏಕದೇಶಕ್ಕೆ ಉಪಾಧಿಯ ಸಂಬಂಧವನ್ನು ಹೇಳಬೇಕೆಂದರೆ ಮೊದಲೇ ಅಂಶವಿದೆ ಎಂದು ಒಪ್ಪಬೇಕು. ಸಮಗ್ರ ಜೀವನನ್ನು ಉಪಾಧಿಯು ಸಂಬಂಧಪಡುವುದಾದರೆ ಅಂಶಭೇದವಿರಲು ಸಾಧ್ಯವೇ ಇಲ್ಲ. ಆದ್ದರಿಂದ ಔಪಾಧಿಕಭೇದವನ್ನು ಹೇಳಲಾಗದು.

ಪ್ರತಿಪದಾರ್ಥ -- ಉಪಾಧಿಕೃತಾಂಶಃ = ಔಪಾಧಿಕವಾದ ಅಂಶವನ್ನು, ನ ಚ = ಹೇಳಬಾರದು, ಸ ಏವ ಅಂಶಃ = ಆ ಜೀವನ ಅಂಶವೇ, ಉಪಹಿತಃ = ಉಪಾಧಿಯಿಂದ ಕೂಡಿರುತ್ತದೆ. ಇತಿ = ಹೀಗೆ, ದ್ವಿತ್ವಾಪೇಕ್ಷತ್ವಾತ್ = ಉಪಹಿತಜೀವ ಅನುಪಹಿತಜೀವ ಎಂಬ ಭೇದವನ್ನು ಒಪ್ಪಬೇಕಾಗುತ್ತದೆ.

### ಜೀವಕರ್ತೃತ್ವವು ಯುಕ್ತಿವಿರುದ್ಧ

**ब्रह्मसूत्रभाष्यम् – न चान्यत् कल्प्यम् । 'यद्धि युक्त्या विरुद्ध्येत तदीशकृतमेव हि' इति गत्यन्तरोक्तेः ।।६।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये इतरव्यपदेशाधिकरणम् ।। ७ ।।**

ಅನುವಾದ - ಜೀವನಿಗೆ ಕರ್ತೃತ್ವವು ಯುಕ್ತಿವಿರುದ್ಧವಾಗಿದೆ. ಯುಕ್ತಿಗೆ ವಿರುದ್ಧವಾದ ಅವಿದ್ಯಾಪ್ರಯುಕ್ತವಾದ ಕರ್ತೃತ್ವ ಮೊದಲಾದವನ್ನು ಜೀವನಲ್ಲಿ ಕಲ್ಪಿಸಬಾರದು. ಯಾವುದು ಯುಕ್ತಿಗೆ ವಿರುದ್ಧವಾಗಿರುತ್ತದೊ ಅದು ಭಗವಂತನ ಅಚಿಂತ್ಯಶಕ್ತಿಯಿಂದ ಯುಕ್ತವಾಗುತ್ತದೆ. ಹೀಗೆ

ಪ್ರಮಾಣವಿರುವುದರಿಂದ ಜೀವನಲ್ಲಿ ಈಶದತ್ತವಾದ ಕರ್ತೃತ್ವವನ್ನು ಒಪ್ಪಬೇಕು. ಇದರಿಂದ ಯಾವುದೇ ಬಾಧಕಗಳಿರುವುದಿಲ್ಲ.

> ಪ್ರತಿಪದಾರ್ಥ -- ಜೀವನಲ್ಲಿ ಕರ್ತೃತ್ವವು ಯುಕ್ತಿವಿರುದ್ಧವಾದ್ದರಿಂದ ಆವಿದ್ಯಕವಾದ ಕರ್ತೃವನ್ನು ಒಪ್ಪಬಹುದಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅನ್ಯತ್ = ಅವಿದ್ಯಾಪ್ರಯುಕ್ತವಾದ ಕರ್ತೃತ್ವವನ್ನು, ನಚ ಕಲ್ಪ್ಯಮ್ = ಜೀವನಲ್ಲಿ ಕಲ್ಪನೆ ಮಾಡಬಾರದು. ಯದ್ಧಿ = ಯಾವ ಕರ್ತೃತ್ವವಿದೆಯೋ, ಯುಕ್ತ್ಯಾ = ಯುಕ್ತಿಯಿಂದ, ವಿರುದ್ಧ್ಯೇತ = ವಿರುದ್ಧವಾಗಿರುತ್ತದೋ, ತತ್ = ಅದು, ಈಶಕೃತಮೇವ ಹಿ = ಭಗವಂತನ ಅಚಿಂತ್ಯಶಕ್ತಿಗೆ ಒಳಪಟ್ಟಿರುತ್ತದೆಯಷ್ಟೆ. ಇತಿ = ಹೀಗೆ, ಗತ್ಯಂತರೋಕ್ತೇಃ = ಬೇರೆ ಮಾರ್ಗವನ್ನು ಹೇಳಲಾಗಿದೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಇತರವ್ಯಪದೇಶಾಧಿಕರಣವು ಸಮಾಪ್ತವಾಯಿತು ॥

## ಸತ್ತರ್ಕದೀಪಾವಳಿ

### ಜೀವರು ಅನಂಶಿಗಳು

**सत्तर्कदीपावळिः** – हिताकरणादिदोषैः जीवस्य अपरप्रेरितकर्तृत्वं दूषितम्। तदेव प्रकारान्तरेण दूषयति – कृत्स्नेत्यादिना ।। कार्येषु प्रवर्तमानो जीवो न तावत् सर्वशक्त्या प्रवर्तते । एकाङ्गुल्या तृणोत्थापने सर्वशक्त्यदर्शनात्। न च तत्र शक्त्येकदेशेन प्रवर्तत इति वक्तुं शक्यते स्वगतभेदरहितत्वेन जीवस्य।

अथ यः स जीवः स नित्यो निरवयव इति निरवयवत्वश्रवणात् । तदुक्तम् –

**अंशिनो हि घटाद्या ये भिन्नैरेव परस्परम् ।**
**अंशैरंशिन उच्यन्ते नैवमेव हि चेतनाः ।**
**अतोऽनंशिन इत्येव श्रुतिरेतेषु वर्तते ।।' इति ।**

ಹಿತಾಕರಣಾದಿ ದೋಷಗಳಿಂದ ಜೀವನು ಮತ್ತೊಬ್ಬರಿಂದ ಪ್ರೇರಿತವಾಗದ ಕರ್ತೃತ್ವವನ್ನು ಹೊಂದಿದ್ದಾನೆ ಎಂಬುದನ್ನು ಇಲ್ಲಿಯತನಕ ದೂಷಿಸಿದ್ದು ಆಯಿತು. ಇದನ್ನೇ ಮತ್ತೊಂದು ಪ್ರಕಾರದಿಂದ ದೂಷಣೆ ಮಾಡಲು 'ಕೃತ್ಸ್ನ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

ಯಾವುದೇ ಕಾರ್ಯದಲ್ಲಿ ಪ್ರವೃತ್ತಿಯನ್ನು ಮಾಡುವ ಜೀವನು ಸಂಪೂರ್ಣಶಕ್ತಿಯನ್ನು ಉಪಯೋಗಿಸಲಾರ. ಒಂದೇ ಬೆಟ್ಟಿನಿಂದ ಹುಲ್ಲನ್ನು ಎತ್ತುವ ಸಂದರ್ಭದಲ್ಲಿ ಸರ್ವಶಕ್ತಿಯನ್ನು ಉಪಯೋಗಿಸುವುದು ಯಾರ ಅನುಭವದಿಂದಲೂ ಸಿದ್ಧವಾಗಿರುವುದಿಲ್ಲ. ಇನ್ನು ತನ್ನಲ್ಲಿರುವ ಶಕ್ತಿಯಲ್ಲಿ ಏಕದೇಶದಿಂದ ಪ್ರವೃತ್ತಿ ಮಾಡುತ್ತಾನೆ ಎಂದು ಹೇಳಬೇಕು. ಇದೂ ಕೂಡ ತಪ್ಪು. ಏಕೆಂದರೆ ಸ್ವಗತಭೇದರಹಿತನಾದ ಜೀವನಲ್ಲಿ ಶಕ್ತಿಯ ಏಕದೇಶದಿಂದ ಪ್ರವೃತ್ತಿಯು ಸರ್ವಥಾ ಕೂಡುವುದಿಲ್ಲ. ಏಕೆಂದರೆ 'ಅಥ ಯಃ ಸ ಜೀವಃ ಸ ನಿತ್ಯೋ ನಿರವಯವಃ' ಎಂಬ ಶ್ರುತಿಯು ಜೀವನನ್ನು ನಿರವಯವನೆಂದು ಹೇಳುತ್ತಿದೆ. ಇದನ್ನೇ -

ಅಂಶಿನೋ ಹಿ ಘಟಾದ್ಯಾ ಯೇ ಭಿನ್ನೈರೇವ ಪರಸ್ಪರಮ್ ।
ಅಂಶೈರಂಶಿನ ಉಚ್ಯಂತೇ ನೈವಮೇವ ಹಿ ಚೇತನಾಃ ।
ಅತೋಽನಂಶಿನ ಇತ್ಯೇವ ಶ್ರುತಿರೇತೇಷು ವರ್ತತೇ ॥

ಅಂಶಿಯಾದ ಘಟ ಮೊದಲಾದವುಗಳು ಪರಸ್ಪರ ಭಿನ್ನವಾದ ಅಂಶಗಳುಳ್ಳವುಗಳಾಗಿವೆ. ಆದ್ದರಿಂದಲೇ ಅಂಶಿಗಳೆಂದು ಕರೆಸಿಕೊಳ್ಳುತ್ತವೆ. ಇದರಂತೆ ಚೇತನರು ಅಂಶವುಳ್ಳವರಲ್ಲ. ಆದ್ದರಿಂದ ಶ್ರುತಿಗಳಲ್ಲಿ ಜೀವರನ್ನು ಅನಂಶಿಗಳೆಂದೇ ಕರೆಯಲಾಗಿದೆ.

ಜೀವನಿಗೆ ನಿರಂಶತ್ವ ಸಮರ್ಥನೆ

**सत्तर्कदीपावलिः – न च निरंशस्य जीवस्य उपाधिसम्बन्धकृतोऽंशोऽस्तीति वाच्यम् । अंशः उपाधिसम्बद्धस्यैव एकदेशवृत्तित्वेन उपाधिसम्बद्धांशासम्बद्धांशयोः अवश्यम्भावित्वेन निरवयवत्वव्याकोपात् ।**

ನಿರಂಶನಾದ ಜೀವನಿಗೆ ಉಪಾಧಿಸಂಬಂಧದಿಂದ ಅಂಶಗಳು ಇರಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಉಪಾಧಿಸಂಬಂಧವು ಏಕದೇಶದಲ್ಲೇ ಬರಬೇಕು. ಆಗ ಜೀವನಲ್ಲಿ ಅಂಶವನ್ನು ಒಪ್ಪಿದಂತಾಯಿತು. ಪುನಃ ನಿರಯವತ್ವ ಶ್ರುತಿಯ ವಿರೋಧವು ಪ್ರಾಪ್ತವಾಗುತ್ತದೆ.

### ಈಶ್ವರನ ಅಘಟಿತಘಟನಾ ಶಕ್ತಿಯಿಂದ ವಿರೋಧ ಪರಿಹಾರ

**सत्तर्कदीपावलिः – न च सर्वशक्त्येकदेशशक्तिविकल्पासहत्वात् न जीवप्रवृत्तिर्वाच्येति कल्प्यम् । 'यद्धि युक्त्या विरुद्ध्येत तदीशकृतमेव हि' इति गत्यन्तरोक्तेः । शून्यानिर्वाच्यस्य कल्पनस्यायुक्तत्वात् । अघटितघटकत्वं हीश्वरस्यैव युक्तं नान्यस्य । तदुक्तम् –**

**'अनंशस्यापि जीवस्य किञ्चित्सामर्थ्ययोजनाम् ।**
**कार्येषु यः करोत्यद्धा नमस्तस्मै स्वयम्भुवे ।**
**यदि भागेन कार्येषु जीवशक्तिं न योजयेत् ।**
**अतस्तदा हि सर्वत्र कृत्स्नयत्नोंशितापि च ।।' इति ।**

ಹೀಗೆ ಸರ್ವಶಕ್ತಿಯನ್ನು ಉಪಯೋಗಿಸುತ್ತಾನೋ, ಏಕದೇಶಶಕ್ತಿಯನ್ನು ಉಪಯೋಗಿಸುತ್ತಾನೋ ಎಂಬ ವಿಕಲ್ಪಕ್ಕೆ ಉತ್ತರಕೊಡಲು ಸಾಧ್ಯವಿಲ್ಲದ ಕಾರಣ ಜೀವನಿಗೆ ಪ್ರವೃತ್ತಿಯನ್ನು ಉಪಪಾದನೆ ಮಾಡಲು ಸಾಧ್ಯವಿಲ್ಲ ಎಂದು ಪ್ರಶ್ನಿಸಬಾರದು. ಯಾವುದು ಯುಕ್ತಿಯಿಂದ ವಿರುದ್ಧವಾಗುತ್ತದೋ, ಅದು ಈಶಕೃತವೆಂದು ಒಪ್ಪಬೇಕು. ಹೀಗೆ ಬೇರೆ ಗತಿಯನ್ನು ಶಾಸ್ತ್ರಗ್ರಂಥಗಳಲ್ಲಿ ಅಂಗೀಕರಿಸಲಾಗಿದೆ. ಇದನ್ನು ಬಿಟ್ಟು ಶೂನ್ಯವೆಂದು ಒಪ್ಪುವುದು, ಅನಿರ್ವಾಚ್ಯವೆಂದು ಒಪ್ಪುವುದು ಅಯುಕ್ತವಾಗಿದೆ. ಈ ಅಘಟಿತ ಘಟಕತ್ವಶಕ್ತಿಯನ್ನು ಈಶ್ವರನಿಗೆ ಅಂಗೀಕಾರ ಮಾಡಬೇಕು. ಬೇರೆಯವರಿಗಲ್ಲ. ಇದನ್ನೇ ಹೀಗೆ ಹೇಳಲಾಗಿದೆ -

ಅನಂಶಸ್ಯಾಪಿ ಜೀವಸ್ಯ ಕಿಂಚಿತ್ ಸಾಮರ್ಥ್ಯಯೋಜನಾಮ್ ।
ಕಾರ್ಯೇಷು ಯಃ ಕರೋತ್ಯದ್ಧಾ ನಮಸ್ತಸ್ಮೈ ಸ್ವಯಂಭುವೇ ।
ಯದಿ ಭಾಗೇನ ಕಾರ್ಯೇಷು ಜೀವಶಕ್ತಿಂ ನ ಯೋಜಯೇತ್ ।
ಅತಸ್ತದಾ ಹಿ ಸರ್ವತ್ರ ಕೃತ್ಸ್ನಯತ್ನೋಂಶಿತಾಪಿ ಚ ॥

ಜೀವನು ಅನಂಶನಾಗಿದ್ದರೂ ಕೂಡ ಅವನ ಸ್ವಲ್ಪ ಸಾಮರ್ಥ್ಯವನ್ನು ಕಾರ್ಯಗಳಲ್ಲಿ ಉಪಯೋಗಿಸಿಕೊಳ್ಳುವಂತೆ ಯಾರು ಮಾಡುತ್ತಾನೋ, ಅಂಥ ಪರಮಾತ್ಮನಿಗೆ ನಮಸ್ಕಾರ. ಒಂದು ವೇಳೆ ಕಾರ್ಯಗಳಲ್ಲಿ ಅಲ್ಪವಾದ ಜೀವಶಕ್ತಿಯನ್ನು ಯೋಜನೆ ಮಾಡದಿದ್ದರೆ ಎಲ್ಲೆಡೆಯೂ ಕೂಡ ಸಂಪೂರ್ಣ ಸಾಮರ್ಥ್ಯವನ್ನೇ ಉಪಯೋಗಿಸುತ್ತಾನೆಂದು ಹೇಳಬೇಕಾದೀತು.

ಈಶ್ವರನಲ್ಲಿ ವಿರೋಧ ಪರಿಹಾರ

**सत्तर्कदीपावलिः – कृत्स्नप्रयत्न आपद्येतांशिता वा आपद्येतेत्यर्थः ।**

**'कृत्स्नप्रसक्तिर्निरवयवत्वशब्दकोपो वा' इति विकल्पेन यज्जीवप्रवृत्तेः अघटनमुक्तं तत् ईश्वरप्रवृत्तेरपि समानम् इति न वाच्यम् । अचिन्त्यशक्तेरीश्वरस्य अन्यस्मिन्नघटितं घटयतः स्वस्मिन्नघटितघटने का शङ्का । अघटितघटकत्वं च ईशस्य 'योऽसौ विरुद्धः' इत्यादिश्रुतिसिद्धमिति न तर्केण धर्मिग्राहकप्रमाणविरुद्धेन बाध्यते ॥**

ಮೇಲೆ ಹೇಳಿದಂತೆ ಪರಮಾತ್ಮನ ಅಚಿಂತ್ಯಾದ್ಭುತಶಕ್ತಿಯಿಂದ ವಿರೋಧವನ್ನು ಪರಿಹಾರ ಮಾಡದಿದ್ದರೆ, ಜೀವನಿಗೆ ಕೃತ್ಸ್ನಪ್ರಯತ್ನವು ಪ್ರಾಪ್ತವಾಗುತ್ತದೆ. ಅಥವಾ ಅಂಶಿತ್ವವು ಪ್ರಾಪ್ತವಾಗುತ್ತದೆ. ಕೃತ್ಸ್ನಪ್ರಸಕ್ತಿ ಹಾಗೂ ನಿರಯವತ್ವ ಶ್ರುತಿಗಳ ವಿರೋಧವನ್ನು ವಿಕಲ್ಪಮುಖದಿಂದ ಆಕ್ಷೇಪಿಸಿ ಜೀವನ ಯಾವ ಪ್ರವೃತ್ತಿ ಇದೆಯೋ, ಅದು ಕೂಡುವುದಿಲ್ಲ ಎಂದು ಪೂರ್ವಪಕ್ಷದಲ್ಲಿ ಹೇಳಲಾಯಿತು. ಈ ದೋಷ ಈಶ್ವರನಲ್ಲೂ ಕೂಡ ಸಮಾನವಲ್ಲವೇ? ಎಂದು ಪ್ರಶ್ನಿಸಬಾರದು. ಅಚಿಂತ್ಯಶಕ್ತಿಯಿಂದ ಬೇರೆಯವರಲ್ಲಿ ಅಘಟಿತವಾದದ್ದನ್ನು ಘಟನ ಮಾಡುವ ಈಶ್ವರನು ತನ್ನಲ್ಲೂ ಕೂಡ ಅಘಟಿತವಾದದ್ದನ್ನು ಘಟನೆ ಮಾಡಿಕೊಳ್ಳದೇ ಇರುತ್ತಾನೇನು? ಈ ಶಂಕೆಯಾದರು ಹೇಗೆ ಬರಲು ಸಾಧ್ಯ? ಈಶ್ವರನಲ್ಲಿ ಇಂಥ ಅಘಟಿತಘಟಕತ್ವಶಕ್ತಿಯು ಇದೆಯೆಂಬುದು 'ಯೋऽಸೌ ವಿರುದ್ಧ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ಆದ್ದರಿಂದ ಕೇವಲ ತರ್ಕದಿಂದ ಅಥವಾ ಧರ್ಮಿಗ್ರಾಹಕಪ್ರಮಾಣವಿರುದ್ಧವಾದ ಬೇರೆ ಪ್ರಮಾಣದಿಂದ ಈಶ್ವರನ ಅಘಟಿತಘಟಕತ್ವವು ಬಾಧ್ಯವಾಗುವುದಿಲ್ಲ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಇತರವ್ಯಪದೇಶಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

### ತತ್ವಪ್ರದೀಪ

ಹುಲ್ಲುಕಡ್ಡಿಯನ್ನು ಎತ್ತುವಾಗ ಸಂಪೂರ್ಣಶಕ್ತಿಯನ್ನು ವಿನಿಯೋಗಿಸುವನು?

**तत्वप्रदीपः – कृत्स्नप्रसक्तिर्निरवयवत्वशब्दकोपो वा ।। एकेन अङ्गुलिमात्रेण प्रवर्तमानोऽपि कृत्स्नां प्रवृत्तिशक्तिं विनियुञ्जीत । एकदेशविनियोग एव च दृश्यते । न चैकदेशेन प्रवृत्तिरेकदेशेनाप्रवृत्तिरिति युक्तम् । निरवयवत्वात् । न चोपाधिकृतोंऽशः स एवांश उपहितः इति द्वित्वापेक्षत्वात्।**

ಒಂದೇ ಅಂಗುಲಿಯಿಂದ ಯಾವ ಹುಲ್ಲುಕಡ್ಡಿಯನ್ನು ಎತ್ತಲು ಪ್ರವೃತ್ತಿ ಮಾಡುವವನೂ ಕೂಡ ತನ್ನಲ್ಲಿರುವ ಸಂಪೂರ್ಣ ಶಕ್ತಿಯನ್ನು ವಿನಿಯೋಗ ಮಾಡಬೇಕಾದೀತು. ಆದರೆ ಯಾರೂ ಕೂಡ ಹಾಗೆ ಮಾಡುತ್ತಿಲ್ಲ. ಏಕದೇಶವನ್ನಷ್ಟೇ ವಿನಿಯೋಗ ಮಾಡುತ್ತಿದ್ದಾರೆ. ಇನ್ನು ಏಕದೇಶದಿಂದಲೇ ಪ್ರವೃತ್ತಿ ಮಾಡುತ್ತಾನೆ ಮತ್ತೊಂದು ಏಕದೇಶದಿಂದ ಪ್ರವೃತ್ತಿ ಮಾಡುವುದಿಲ್ಲ ಎಂದು ಹೇಳುವುದೂ ಕೂಡ ಯುಕ್ತವಲ್ಲ. ಏಕೆಂದರೆ ಜೀವನು ನಿರವಯವನಾಗಿದ್ದಾನೆ. ಔಪಾಧಿಕವಾದ ಅಂಶವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಆ ಅಂಶವೇ ಉಪಹಿತವಾದ್ದರಿಂದ ದ್ವಿತ್ವವನ್ನು ಅಪೇಕ್ಷಿಸುತ್ತದೆ.

ವಿವರಣೆ - 'ಉಪಾಧಿಕೃತಃ ಅಂಶಃ ಯಸ್ಯ ಸಃ ಉಪಾಧಿಕೃತೋಂಶಃ' ಎಂಬ ಬಹುವ್ರೀಹಿ ಸಮಾಸವನ್ನು ಇಟ್ಟುಕೊಂಡು 'ನ ಚ ಉಪಾಧಿಕೃತೋಂಶಃ' ಇತ್ಯಾದಿ ಭಾಷ್ಯಕ್ಕೆ ವ್ಯಾಖ್ಯಾನ ಮಾಡುತ್ತಿದ್ದಾರೆ. ಉಪಾಧಿಯಿಂದ ಉಂಟಾದ ಅಂಶ ಇರುವವನು ಎಂಬುದು ಇದರ ಅರ್ಥ.

ನಿರಂಶನಿಗೆ ಉಪಾಧಿಸಂಬಂಧವನ್ನು ಕಲ್ಪನೆ ಮಾಡಬಾರದು

**तत्वप्रदीपः – अयमर्थः न च निरंशस्य उपाधिकृतोंऽशः कल्प्यः । उपहितेऽपि स एवांशो भवति, नापर इत्युपाधिकृतांशसद्भावस्य पूर्वमेव द्वित्वापेक्षत्वात् । न हि उपाधिः निरंशस्य अंशमुत्पादयेत्, अभिन्नस्य वा भेदम् । विद्यमान एवांश एव आकाशेऽपि उपाधिना व्यज्यते ।**

ಭಾಷ್ಯವಾಕ್ಯದ ಅಭಿಪ್ರಾಯ ಹೀಗಿದೆ - ನಿರಂಶನಾದ ಜೀವನಿಗೆ ಔಪಾಧಿಕವಾದ ಅಂಶವನ್ನು ಕಲ್ಪನೆ ಮಾಡಬಾರದು. ಜೀವನು ಉಪಹಿತನಾದರೂ ಕೂಡ ಅವನೇ ಅಂಶನಾಗುತ್ತಾನೆ. ಮತ್ತೊಂದಲ್ಲ. ಹೀಗೆ ಉಪಾಧಿಕೃತವಾದ ಅಂಶವು ಮೊದಲೇ ಇರುವುದರಿಂದ, ಉಪಾಧಿ ಬರುವ ಮೊದಲೇ ಅವನಲ್ಲಿ ಅಂಶವಿದೆ ಎಂದು ಹೇಳಿದಂತಾಯಿತು. ಉಪಾಧಿಯು ನಿರಂಶನಾದವನಲ್ಲಿ ಅಂಶವನ್ನು ಹುಟ್ಟಿಸಲು ಸಾಧ್ಯವಿಲ್ಲ. ಅಭಿನ್ನನಾದವನಲ್ಲಿ ಭೇದವನ್ನು ಹುಟ್ಟಿಸಲು ಸಾಧ್ಯವಿಲ್ಲ. ಇರುವ ಅಂಶವನ್ನೇ ಅಭಿವ್ಯಕ್ತಿಗೊಳಿಸುತ್ತದೆ. ಇದು ಆಕಾಶಾದಿಗಳಲ್ಲಿ ಕಂಡಿದೆ.

### ಅನ್ಯೋನ್ಯಾಶ್ರಯದೋಷ

**तत्वप्रदीपः – यदि च कृत्स्न उपाधीयेत तर्हि उपहित एवास्तीति नोपाधिकृतोंऽशः । तत्सद्भावस्योपहितानुपहितविभागेन द्वित्वापेक्षत्वात् । एकदेशः चेत् पूर्वं विद्यमान एवांश उपहित इति नोपाधिकृतोंऽशः । द्वित्वमपेक्ष्यैव उपाधेः प्रवृत्तेः । द्वित्वस्य उपाध्यपेक्षायां परस्पराश्रयप्रसङ्गात् ।**

ಒಂದು ವೇಳೆ ಸಮಸ್ತ ಜೀವನನ್ನು ಉಪಾಧಿಯು ಸಂಬಂಧ ಹೊಂದುತ್ತದೆಂದು ಹೇಳಿದರೆ, ಆ ಜೀವನು ಉಪಹಿತನೇ ಆಗುತ್ತಾನೆ. ಉಪಾಧಿಕೃತವಾದ ಅಂಶ ಅವನಲ್ಲಿ ಬರಲು ಸಾಧ್ಯವಿಲ್ಲ. ಏಕೆಂದರೆ ಉಪಾಧಿಕೃತವಾದ ಅಂಶವು ಬರಬೇಕೆಂದರೆ ಉಪಹಿತ ಹಾಗೂ ಅನುಪಹಿತವೆಂಬ ವಿಭಾಗದ ಮೂಲಕ ದ್ವಿತ್ವವು ಅಪೇಕ್ಷಿತವಾಗುತ್ತದೆ. ಉಪಾಧಿಯು ಸಮಸ್ತಜೀವನನ್ನು ಸಂಬಂಧ ಹೊಂದುವುದಿಲ್ಲ. ಏಕದೇಶದ ಜೊತೆ ಸಂಬಂಧವನ್ನು ಹೊಂದುತ್ತದೆ ಎಂದು ಹೇಳಿದರೆ, ಆ ಅಂಶವು ಮೊದಲೇ ಇದೆ ಎಂದು ಹೇಳಿದಂತಾಯಿತು. ಆಗ ಆ ಅಂಶವು ಸ್ವಾಭಾವಿಕವಾಯಿತೇ ಹೊರತು, ಔಪಾಧಿಕವಾಗಲಿಲ್ಲ. ಉಪಾಧಿಯು ದ್ವಿತ್ವವನ್ನು ಅಪೇಕ್ಷಿಸಿಯೇ ಪ್ರವೃತ್ತಿಯನ್ನು ಮಾಡುತ್ತದೆ, ದ್ವಿತ್ವವು ಉಪಾಧಿಯನ್ನು ಅಪೇಕ್ಷೆ ಪಡುತ್ತದೆ ಎಂದು ಹೇಳಿದರೆ ಅನ್ಯೋನ್ಯಾಶ್ರಯದೋಷ ಪ್ರಾಪ್ತವಾಯಿತು.

### ಮಾಯೆಯಿಂದ ಅನ್ಯೋನ್ಯಾಶ್ರಯ ಪರಿಹಾರ

**तत्वप्रदीपः – अथ नोत्पद्यते नापि सन्नेव व्यज्यतेंऽशभेदः । मायामयोपाधिना प्रतीयत एव । न च मायायां परस्पराश्रयताद् अनुपपत्तिः। दुर्घटत्वस्य भूषणत्वात् इत्यत आह – नचान्यत् कल्प्यम् इत्यादि ।।**

ಅಂಶಭೇದವು ಉತ್ಪನ್ನವಾಗುವುದಿಲ್ಲ. ಇರುವುದು ಅಭಿವ್ಯಕ್ತವೂ ಆಗುವುದಿಲ್ಲ. ಮಾಯಾಮಯವಾದ ಉಪಾಧಿಯಿಂದ ಕೇವಲ ಪ್ರತೀತವಾಗುತ್ತಿದೆ. ಮಾಯೆಯಿಂದ ಅನ್ಯೋನ್ಯಾಶ್ರಯಾದಿ ದೋಷಗಳ ಮೂಲಕ ಅನುಪಪತ್ತಿಯನ್ನು ಕೂಡ ಹೇಳಲು ಸಾಧ್ಯವಿಲ್ಲ. ದುರ್ಘಟತ್ವವು ಮಾಯೆಗೆ ಭೂಷಣವೇ ಆಗಿದೆ. ಈ ಪ್ರಶ್ನೆಗೆ ಉತ್ತರವನ್ನು ಕೊಡಲು 'ನಚಾನ್ಯತ್ ಕಲ್ಪ್ಯಮ್' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ.

### ಯುಕ್ತಿವಿರುದ್ಧವಾದದ್ದು ಈಶಕೃತವಾಗಿದೆ

**तत्वप्रदीपः – यद्धि युक्त्या विरुद्ध्यते तत् नानिर्वाच्याऽविद्याशक्तिकृतम् इति कल्प्यम् । अनिर्वाच्ये मानाभावस्य असकृद्वर्णितत्वात् । 'यद्धि युक्त्या विरुद्ध्येत तदीशकृतमेव हि' इति गत्यन्तरोक्तेः । मानदृष्ट एवैतन्नामाने।**

ಯಾವುದು ಯುಕ್ತಿಯಿಂದ ವಿರುದ್ಧವಾಗುತ್ತದೋ, ಅಲ್ಲಿ ಅನಿರ್ವಾಚ್ಯತ್ವವನ್ನು ಅಥವಾ ಅಜ್ಞಾನಶಕ್ತಿಕೃತತ್ವವನ್ನು ಕಲ್ಪನೆ ಮಾಡಬಾರದು. ಅನಿರ್ವಾಚ್ಯವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲವೆಂದು ಈಗಾಗಲೇ ಅನೇಕಬಾರಿ ನಾವು ವರ್ಣಿಸಿದ್ದೇವೆ. ಮತ್ತು ಯಾವುದು ಯುಕ್ತಿಯಿಂದ ವಿರುದ್ಧವಾಗುತ್ತದೋ, ಅದು ಈಶಕೃತವೇ ಆಗಿರುತ್ತದೆಂದು ಬೇರೆ ಗತಿಯನ್ನೂ ಕೂಡ ಹೇಳಿದ್ದಾಗಿದೆ.

### ಅವಿದ್ಯೆಗೆ ದುರ್ಘಟತ್ವವು ಭೂಷಣವಲ್ಲ

**तत्वप्रदीपः – 'पराऽस्य शक्तिर्विविधैव श्रूयते स्वाभाविकी' इत्यादि च तच्छक्तौ प्रमाणं समीप एव पठिष्यति । अज्ञानं चाशक्त्यात्मकमेव । यदि च दुर्घटत्वं भूषणमविद्यायाः तर्हि सत्यत्वमनिवृत्तिर्ब्रह्मत्वं च स्यात् ।।**

**।। इति इतरव्यपदेशाधिकरणम् ।।**

'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ' ಇತ್ಯಾದಿ ಶ್ರುತಿಯು ಈಶ್ವರನ ಶಕ್ತಿವಿಷಯದಲ್ಲಿ ಪ್ರಮಾಣವಾಗಿದೆ ಎಂಬುದನ್ನು ಸದ್ಯದಲ್ಲಿಯೇ ಉಲ್ಲೇಖಿಸುತ್ತಾರೆ. ಅಜ್ಞಾನವು

ಅಶಕ್ತಿರೂಪವಾಗಿದೆ. ಒಂದು ವೇಳೆ ಅಜ್ಞಾನಕ್ಕೆ ದುರ್ಘಟತ್ವವು ಭೂಷಣವಾಗುವುದಾದರೆ ಸತ್ಯತ್ವ, ಅನಿವೃತ್ತಿಬ್ರಹ್ಮತ್ವಗಳೂ ಕೂಡ ಬರಬೇಕಾದೀತು. ಆದ್ದರಿಂದ ಅದ್ವೈತಮತವು ಅಯುಕ್ತವಾಗಿದೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ ಇತರವ್ಯಪದೇಶಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ತತ್ವಪ್ರಕಾಶಿಕಾ

### ಜೀವನು ಸ್ವತಂತ್ರಕರ್ತೃವೆಂದರೆ ಮತ್ತೊಂದು ದೋಷ

**तत्वप्रकाशिका –**

**युक्त्यन्तरेण जीवस्य स्वतःकर्तृत्वं निराकुर्वत् सूत्रमुपन्यस्य व्याचष्टे ॥ कृत्स्नेति॥ न केवलं हिताक्रियादिदोषो जीवस्य स्वतः कर्तृत्वे किं त्वयं वक्ष्यमाणश्च । तथा हि । किं जीवः सर्वकार्येषु सर्वसामर्थ्येन प्रवर्ततेऽशेन वा । नाद्यः । एकेनाङ्गुलिमात्रेण तृणादानादावपि पूर्णशक्त्या प्रवृत्तिप्रसक्तेः । न च स्यादेवमिति वाच्यम् । अनुभवविरोधात् । न द्वितीयः । अंशाभावात्। न च सांशत्वमङ्गीकर्तुं शक्यम् । अथेति निरवयवत्वश्रुतिव्याकोपात् ।**

ಮತ್ತೊಂದು ಯುಕ್ತಿಯಿಂದ ಜೀವನಲ್ಲಿ ಸ್ವತಂತ್ರಕರ್ತೃತ್ವ ಇಲ್ಲವೆಂದು ನಿರಾಕರಣೆ ಮಾಡುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡಲು 'ಕೃತ್ಸ್ನಪ್ರಸಕ್ತಿಃ' ಇತ್ಯಾದಿ ಭಾಷ್ಯವಾಕ್ಯವು ಹೊರಟಿದೆ. ಜೀವನು ಸ್ವತಂತ್ರಕರ್ತೃವೆಂದು ಹೇಳಿದಾಗ ಹಿತಾಕರಣ - ಅಹಿತಕರಣ ಎಂಬೆರಡು ದೋಷಗಳು ಮಾತ್ರವಲ್ಲ ಮುಂದೆ ಹೇಳುವ ದೋಷವು ಕೂಡ ಬರುತ್ತದೆ. ಅದು ಹೀಗೆ -

ಜೀವನು ಸಕಲ ಕಾರ್ಯಗಳಲ್ಲಿ ಒಂದೇ ರೀತಿಯಾಗಿ ತನ್ನ ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ ಅಥವಾ ತನ್ನ ಸಾಮರ್ಥ್ಯದ ಏಕದೇಶವನ್ನಷ್ಟೇ ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ?

ಮೊದಲನೆಯ ಪಕ್ಷ ತಪ್ಪು. ಒಂದೇ ಬೆರಳಿನಿಂದ ಎತ್ತಬಹುದಾದ ಹುಲ್ಲು ಮೊದಲಾದವುಗಳು ಪೂರ್ಣಶಕ್ತಿಯಿಂದ ಪ್ರವೃತ್ತಿ ಮಾಡಬೇಕಾದ ಪ್ರಸಂಗ ಬರುತ್ತದೆ. ಹೌದು ಎಂದು ಹೇಳುವಂತಿಲ್ಲ. ಹುಲ್ಲನ್ನು ಎತ್ತಲು ಸಂಪೂರ್ಣ ಸಾಮರ್ಥ್ಯವನ್ನು ಪ್ರಯೋಗಿಸುವುದಿಲ್ಲವೆಂಬುದು ಅನುಭವಕ್ಕೆ ವಿರುದ್ಧವಾಗಿದೆ.

ಎರಡನೆಯ ಪಕ್ಷವು ತಪ್ಪು. ಜೀವನಿಗೆ ಅಂಶವೇ ಇರುವುದಿಲ್ಲ. ಜೀವನನ್ನು ಸಾಂಶನೆಂದು ಅಂಗೀಕರಿಸಲಾಗದು. 'ಅಥ ಯಃ ಸ ಜೀವಃ' ಎಂಬ ನಿರವಯತ್ವವನ್ನು ಹೇಳುವ ಶ್ರುತಿಯ ವಿರೋಧವು ಬರುತ್ತದೆ.

ವಿವರಣೆ - ಒಂದು ಬಂಡೆಗಲ್ಲನ್ನು ಎತ್ತುವಾಗ ಎಷ್ಟು ಶಕ್ತಿಯನ್ನು ಉಪಯೋಗಿಸುತ್ತೇವೋ ಅಷ್ಟು ಶಕ್ತಿಯನ್ನು ಹುಲ್ಲು ಕಡ್ಡಿ ಎತ್ತುವಾಗ ಉಪಯೋಗಿಸುವುದಿಲ್ಲ. ಆದ್ದರಿಂದ ಯಾವುದೇ ಕಾರ್ಯವನ್ನು ಮಾಡುವ ಜೀವಿಯು ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸುತ್ತಾನೆಂಬುದು ತಪ್ಪಾಗುತ್ತದೆ. ಸಾಮರ್ಥ್ಯದ ಏಕದೇಶವನ್ನು ಉಪಯೋಗಿಸುತ್ತಾನೆಂದು ಹೇಳಿದರೆ ಜೀವನಿಗೆ ಅಂಶವೇ ಇಲ್ಲದ್ದರಿಂದ ಇದೂ ಕೂಡ ಅಯುಕ್ತವಾಗುತ್ತದೆ ಎಂದು ಟೀಕೆಯಲ್ಲಿ ಹೇಳಿದ್ದಾರೆ.

ಸಾಮರ್ಥ್ಯವು ಜೀವಸ್ವರೂಪವಾದ್ದರಿಂದ ಸಾಮರ್ಥ್ಯದ ಏಕದೇಶವನ್ನು ಉಪಯೋಗಿಸುತ್ತಾನೆಂದು ಹೇಳಲು ಬರುವುದಿಲ್ಲ ಎಂಬುದು ಇದರ ಅಭಿಪ್ರಾಯ. ನಮ್ಮ ಸಿದ್ಧಾಂತದಲ್ಲಿ ವಿಶೇಷವನ್ನು ಒಪ್ಪುವುದರಿಂದ ಸಾಮರ್ಥ್ಯವು ಜೀವನ ಸ್ವರೂಪವಾಗಿದ್ದರೂ ಏಕದೇಶದ ಉಪಯೋಗವನ್ನು ಮಾಡುತ್ತಾನೆಂದು ಹೇಳಬಹುದು. ದೇವತೆಗಳು ಸಾಂಶರಾಗಿದ್ದರೂ ಕೂಡ ಮನುಷ್ಯರು ನಿರಂಶರಾಗಿರುತ್ತಾರೆ ಎಂದು ಶಾಸ್ತ್ರಗಳು ಹೇಳುತ್ತವೆ. ಅಂಥ ಮನುಷ್ಯರನ್ನು ವಿವಕ್ಷಿಸಿ ಇಲ್ಲಿ ಪ್ರಶ್ನೋತ್ತರಗಳನ್ನು ತಿಳಿಯಬೇಕು. ವಾಸ್ತುವಿಕವಾಗಿ ಮನುಷ್ಯರೂ ಕೂಡ ಸಾಂಶರೇ ಆಗಿದ್ದಾರೆ. ಏಕೆಂದರೆ ಹತ್ತು ದಿಕ್ಕುಗಳ ಸಂಬಂಧ ಜೀವನಿಗೆ ಇರುವುದರಿಂದ ಅಂಶಗಳಿವೆಯೆಂದು ಇದ್ದೇ ಇರುತ್ತದೆ. ಆದರೆ ದೇವತೆಗಳ ಅಂಶವು ಪ್ರತ್ಯೇಕವಾಗಿ ಇದ್ದು ಹೇಗೆ ಕಾರ್ಯವನ್ನು ಮಾಡುತ್ತದೋ ಅಂಥ ಕಾರ್ಯವನ್ನು ಮಾಡುವ ಶಕ್ತಿ ಮನುಷ್ಯರಿಗಿರುವುದಿಲ್ಲ ಎಂಬ ಸೂಕ್ಷ್ಮವನ್ನು ತಿಳಿಯಬೇಕು. (ವಾಕ್ಯಾರ್ಥಮುಕ್ತಾವಳಿ)

## ಔಪಾಧಿಕ ಅಂಶಭೇದವು ಜೀವನಲ್ಲಿ ಇಲ್ಲ

**तत्वप्रकाशिका – एतेन कार्यानुसारेण प्रवृत्तिरित्यापि निरस्तमिति भावः। न जीवस्य स्वतःकर्तृत्वेऽपि दोषावकाशः । तस्योपाधिकृतांशवत्त्वेन कृत्स्नप्रसक्त्ययोगात् । स्वाभाविकांशाभावेन श्रुतिविरोघाभावादिति चेत् तत्र प्रष्टव्यम् । किं जीवः सर्वोऽप्युपहितस्तदशो वा । आद्यं निराह – न चेति ।।**

ಹೀಗೆ ಹೇಳಿದ್ದರಿಂದ ಕಾರ್ಯಕ್ಕೆ ಅನುಸಾರಿಯಾದ ಪ್ರವೃತ್ತಿಯನ್ನು ಮಾಡಬೇಕೆಂಬ ಪಕ್ಷವನ್ನು ನಿರಾಕರಣೆ ಮಾಡಿದಂತಾಯಿತು. ಜೀವನು ಸ್ವತಂತ್ರಕರ್ತೃ ಎಂದು ಹೇಳಿದರೂ ಕೂಡ ದೋಷಕ್ಕೆ ಅವಕಾಶವಿಲ್ಲ. ಏಕೆಂದರೆ ಉಪಾಧಿಯಿಂದ ಅಂಶವನ್ನು ಹೇಳಬಹುದಾದ್ದರಿಂದ ಕೃತ್ಸ್ನಪ್ರಸಕ್ತಿದೋಷಕ್ಕೆ ಅವಕಾಶವಿಲ್ಲ. ಸ್ವಾಭಾವಿಕವಾದ ಅಂಶವಿಲ್ಲವಾದ್ದರಿಂದ 'ಅಥ ಯಃ ಸಃ' ಎಂಬ ಶ್ರುತಿಯ ವಿರೋಧ ಬರುವುದಿಲ್ಲ. ಹೀಗೆ ಆಕ್ಷೇಪ ಮಾಡಿದರೆ ನಾವು ಪ್ರಶ್ನಿಸುತ್ತೇವೆ. ಆ ಪೂರ್ಣಜೀವಿಗೆ ಉಪಾಧಿಯ ಸಂಬಂಧವಿದೆಯೋ ಅಥವಾ ಜೀವನ ಏಕದೇಶಕ್ಕೆ ಉಪಾಧಿಯ ಸಂಬಧವಿದೆಯೋ ? ಎಂದು ಮೊದಲನೆಯ ಪಕ್ಷವನ್ನು 'ನ ಚ' ಇತ್ಯಾದಿ ಭಾಷ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ.

**ವಿವರಣೆ** - 'ಅಥಃ ಯಃ ಸಃ ನಿತ್ಯಃ ನಿರವಯವಃ' ಎಂಬ ಶ್ರುತಿಯು ಜೀವನು ನಿತ್ಯನಾಗಿದ್ದಾನೆ ಹಾಗೂ ನಿರಂಶನಾಗಿದ್ದಾನೆ ಎಂದು ಹೇಳುತ್ತಿದೆ. ಒಂದು ವೇಳೆ ಜೀವನಿಗೆ ಅಂಶವನ್ನು ಒಪ್ಪಿದರೆ ಈ ಶ್ರುತಿಯ ವಿರೋಧ ಬರುತ್ತದೆ.

ಹಾಗಾದರೆ ಕಾರ್ಯಕ್ಕೆ ಅನುಸಾರಿಯಾಗಿ ಕೆಲವೊಮ್ಮೆ ಪೂರ್ಣಸಾಮರ್ಥ್ಯವನ್ನು ಉಪಯೋಗಿಸಿ ಕಾರ್ಯಪ್ರವೃತ್ತಿ ಮಾಡುತ್ತಾನೆ. ಕೆಲವೊಮ್ಮೆ ಪೂರ್ಣಸಾಮರ್ಥ್ಯ ಉಪಯೋಗಿಸದೆ ಪ್ರವೃತ್ತಿ ಮಾಡುತ್ತಾನೆಂದು ಹೇಳಬಹುದಲ್ಲವೆ? ಈ ಪೂರ್ವಪಕ್ಷವು ನಿರಾಕೃತವಾಯಿತು. ಏಕೆಂದರೆ 'ಅಥಃ ಯಃ' ಎಂಬ ಶ್ರುತಿಯ ವಿರೋಧವು ಇದ್ದೇ ಇದೆ.

ಜೀವನು ಸ್ವತಂತ್ರಕರ್ತೃ ಹೇಳಿದರೂ ಕೂಡ ಮತ್ತು ಸ್ವಾಭಾವಿಕ ಅಂಶಭೇದವಿದ್ದರೂ ಕೂಡ ಔಪಾಧಿಕ ಅಂಶಭೇದವನ್ನು ಒಪ್ಪಿ ಎಲ್ಲಾ ಸಮಸ್ಯೆಗಳನ್ನು ಪರಿಹರಿಸಬೇಕೆಂದು ಪೂರ್ವಪಕ್ಷಿಗಳು ತಮ್ಮನ್ನು ಪುನಃ ಸಮರ್ಥಿಸಿಕೊಳ್ಳುತ್ತಾರೆ. ಆದರೆ ಇಂಥ ಪೂರ್ವಪಕ್ಷಿಗಳಿಗೆ ಔಪಾಧಿಕಸಂಬಂಧವನ್ನು ಜೀವನಲ್ಲಿ ಪೂರ್ಣವಾಗಿ ಹೇಳಬೇಕೋ? ಅಥವಾ ಏಕದೇಶದಲ್ಲಿ ಹೇಳಬೇಕೋ? ಎಂಬ ಪ್ರಶ್ನೆಗೆ ಉತ್ತರಿಸಲು ಆಗುವುದಿಲ್ಲ.

ಔಪಾಧಿಕ ಅಂಶಕ್ಕಾಗಿ ಸ್ವಾಭಾವಿಕ ಅಂಶವನ್ನು ಒಪ್ಪಲೇ ಬೇಕು

**तत्त्वप्रकाशिका – स एव समस्तो जीव उपहितश्चेत् तर्हि उपाधिकृतांशो न भवति । सर्वस्य ग्रस्तत्वादिति भावः । द्वितीयं पराह – अंश इति ।। अंश उपहित इति च न युक्तम् । उपाधिसम्बन्धार्थं स्वाभाविकद्वित्वापेक्षत्वात् । तथा च श्रुतिविरोधः । तस्याप्यौपाधिकत्वेऽनवस्थेति भावः ।**

ಪೂರ್ಣನಾದ ಜೀವನು ಉಪಾಧಿಸಂಬಂಧವನ್ನು ಹೊಂದುತ್ತಾನೆ. ಆದರಿಂದ ಅವನ ಒಂದಂಶವು ಔಪಾಧಿಕವೆಂದು ಹೇಳಿದಂತಾಗುವುದಿಲ್ಲ. ಏಕೆಂದರೆ ಸಮಸ್ತ ಜೀವನೇ ಉಪಾಧಿಯಿಂದ ಘಟಿತನಾಗಿದ್ದಾನೆ ಎಂಬುದು 'ನ ಚ ಉಪಾಧಿಕೃತ' ಎಂಬ ಭಾಷ್ಯವಾಕ್ಯದ ಅಭಿಪ್ರಾಯ. ಜೀವನ ಏಕದೇಶವು ಉಪಾಧಿಸಂಬಂಧವನ್ನು ಹೊಂದಿದೆ ಎಂಬ ಎರಡನೆಯ ಪಕ್ಷವನ್ನು 'ಅಂಶಃ ಉಪಹಿತಃ' ಇತ್ಯಾದಿ ಭಾಷ್ಯದಿಂದ ನಿರಾಕರಣೆ ಮಾಡುತ್ತಿದ್ದಾರೆ. ಜೀವನ ಒಂದು ಅಂಶವು ಉಪಾಧಿಯಿಂದ ಕೂಡಿದೆ ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ ಉಪಾಧಿಸಂಬಂಧವು ಬರಬೇಕೆಂದರೆ ಸ್ವಾಭಾವಿಕವಾಗಿ ಎರಡು ಅಂಶಗಳನ್ನು ಒಪ್ಪಬೇಕಾಗುತ್ತದೆ. ಆದರೆ ಶ್ರುತಿಯು ಸ್ಪಷ್ಟವಾಗಿ ಸ್ವಾಭಾವಿಕ ಅಂಶದ್ವಯವನ್ನು ನಿರಾಕರಣೆ ಮಾಡುತ್ತಿರುವುದರಿಂದ ಶ್ರುತಿವಿರೋಧ ಪ್ರಾಪ್ತವಾಗುತ್ತದೆ. ಸ್ವಾಭಾವಿಕ ಅಂಶವನ್ನು ಒಪ್ಪದೆ ಔಪಾಧಿಕ ಸಂಬಂಧವನ್ನು ಒಪ್ಪುತ್ತೇವೆ ಎಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆ.

ವಿವರಣೆ - ಒಂದು ಔಪಾಧಿಕ ಅಂಶಕ್ಕಾಗಿ ಎರಡು ಸ್ವಾಭಾವಿಕ ಅಂಶಗಳನ್ನು ಒಪ್ಪುವುದು ಅನಿವಾರ್ಯ. ಹೀಗೆ ಒಪ್ಪದೆ ಒಂದು ಔಪಾಧಿಕಸಂಬಂಧಕ್ಕಾಗಿ ಪುನಃ ಎರಡು ಔಪಾಧಿಕ ಸಂಬಂಧಗಳನ್ನೇ ಒಪ್ಪುವುದಾದರೆ ಅನವಸ್ಥಾ ಬರುತ್ತದೆ. ಒಂದು ಅಂಶವು ಔಪಾಧಿಕವಾಗಬೇಕಾದರೆ ಮೊದಲು ಉಪಾಧಿ ಇರಬೇಕು. ಮತ್ತು ಆತ್ಮನಿಗೆ ಅಂಶವನ್ನು ಕೂಡ ಒಪ್ಪಿರಬೇಕು. ಆ ಆತ್ಮನ ಅಂಶವು ಸ್ವಾಭಾವಿಕವೋ ಔಪಾಧಿಕವೋ? ಎಂಬ ಪ್ರಶ್ನೆಯು ಬಂದರೆ ಔಪಾಧಿಕವೆಂದೇ ಉತ್ತರಿಸಬೇಕು. ಇದು ಔಪಾಧಿಕವಾಗಬೇಕಾದರೆ, ಪುನಃ ಉಪಾಧಿ ಮತ್ತು ಆತ್ಮನ ಅಂಶ ಎಂಬುವುದನ್ನು ಮೊದಲೇ ಒಪ್ಪಿರಬೇಕು. ಪುನಃ ಈ ಅಂಶವು ಸ್ವಾಭಾವಿಕವೋ ? ಔಪಾಧಿಕವೋ ? ಎಂಬ ಪ್ರಶ್ನೆ ಬಂದಾಗ ಔಪಾಧಿಕವೆಂದೇ ಉತ್ತರಿಸುತ್ತಾ ಹೋದರೆ ಅನವಸ್ಥಾದೋಷವು ಬರುತ್ತದೆ.

ಅಂಶಭೇದವು ಆವಿದ್ಯಕವೆಂದರೆ ದೋಷ

**तत्वप्रकाशिका – तर्ह्येतज्जीवस्य कर्तृत्वं युक्तिविरुद्धत्वादविचारित-रमणीयाविद्यानिमित्तमस्त्वित्यत आह – न चेति ।। यत्प्रतीतमपि युक्तिविरुद्धं तदीश्वरकृतमिति न्यायेन जीवकर्तृत्वमयुक्तं चेत् तस्येश्वराधीनत्वेनोपपत्तेस्तदेव प्रामाणिकं ग्राह्यं न त्वाप्रमाणिकमविद्यानिमित्तं नापि तेनोपपत्तिरिति भावः ।**

ಹಾಗಾದರೆ ಈ ಜೀವನಲ್ಲಿ ಕರ್ತೃತ್ವವನ್ನು ಒಪ್ಪುವುದು ಯುಕ್ತಿವಿರುದ್ಧ ಎಂದಂತಾಯಿತು. ಆದ್ದರಿಂದ ವಿಚಾರ ಮಾಡದಿದ್ದಾಗ ಸುಂದರವಾಗಿ ಕಾಣಿಸುವ ಅಜ್ಞಾನ ಕಲ್ಪಿತತ್ವವನ್ನು ಒಪ್ಪಬಹುದಲ್ಲವೆ? ಎಂಬ ಪ್ರಶ್ನೆಗೆ 'ನ ಚ ಅನ್ಯತ್ ಕಲ್ಪ್ಯಂ' ಇತ್ಯಾದಿ ಭಾಷ್ಯವಾಕ್ಯವು ಉತ್ತರಿಸುತ್ತಿದೆ.

'ಯತ್ ಪ್ರತೀತಮಪಿ ಯುಕ್ತಿವಿರುದ್ಧಂ ತದೀಶ್ವರಕೃತಮ್' 'ಯಾವುದು ಪ್ರತೀತವಾಗಿದ್ದರೂ ಕೂಡ ಯುಕ್ತಿ ವಿರುದ್ಧವಾಗಿರುತ್ತದೋ ಅದು ಈಶ್ವರಕೃತವಾಗಿರುತ್ತದೆ' ಎಂಬ ನ್ಯಾಯದಂತೆ ಜೀವನಿಗೆ ಸ್ವತಂತ್ರಕರ್ತೃತ್ವವು ಯುಕ್ತವಾಗುತ್ತದೆ. ಹಾಗಾಗಿ ಜೀವನಲ್ಲಿ ಈಶ್ವಾರಾಧೀನ-ಕರ್ತೃತ್ವವನ್ನು ಒಪ್ಪಬೇಕು. ಪ್ರಾಮಾಣಿಕವಾದ ಇದನ್ನು ಬಿಟ್ಟು ಅಪ್ರಾಮಾಣಿಕವಾದ ಅವಿದ್ಯಾನಿಮಿತ್ತಕವಾದ ಕರ್ತೃತ್ವವನ್ನು ಒಪ್ಪಬಾರದು. ಹೀಗೆ ಒಪ್ಪುವುದರಿಂದ ಯಾವುದೇ ಸಮಸ್ಯೆಗಳು ಪರಿಹಾರವಾಗುವುದಿಲ್ಲ. ಇಷ್ಟು ಭಾಷ್ಯದ ಅಭಿಪ್ರಾಯವಾಗಿದೆ.

ವಿವರಣೆ - 'ಜೀವನು ಸ್ವತಂತ್ರಕರ್ತೃ' ಎಂಬುದು ಯುಕ್ತಿಗೆ ವಿರುದ್ಧವಾಗಿದೆ. ಇದು ಕೇವಲ ಆಪಾತತಃ ಸುಂದರವಾದ ಸಿದ್ಧಾಂತವಾಗಿದೆ. ಆದ್ದರಿಂದ ಜೀವಕರ್ತೃತ್ವವನ್ನು ಅಜ್ಞಾನ ಕಲ್ಪಿತವೆಂದು ಹೇಳಬೇಕೆಂಬುದು ಇವರ ಅಭಿಪ್ರಾಯ. ಆದ್ದರಿಂದ 'ಅವಿಚಾರಿತರಮಣೀಯಾ' ಎಂಬುದಕ್ಕೆ 'ಅವಿಚಾರಿತೇ ಸತಿ ರಮಣೀಯಾ' ಎಂಬ ಅಭಿಪ್ರಾಯವನ್ನು ವಿವಕ್ಷಿಸಬೇಕು. (ಗುರ್ವರ್ಥದೀಪಿಕಾ)

ವಿಷ್ಣುವೇ ಸಕಲ ಜಗತ್ಕಾರಣ

**तत्वप्रकाशिका – यद्वा महदादिकार्यकारणत्वमीश्वस्याङ्गीकृत्य घटादिविषय एव पूर्वः पक्षः सिद्धान्तश्च प्रवृत्त इति ज्ञातव्यम् । तस्माज्जीवस्य स्वतःकर्तृत्वानुपपत्तेर्युक्तं हरेर्जन्मादिकारणत्वलक्षणमिति सिद्धम् ।।**

ಅಥವಾ ಮಹತ್ತತ್ವ, ಅಹಂಕಾರತತ್ವ ಇವುಗಳಿಗೆಲ್ಲ ವಿಷ್ಣುವೇ ಕಾರಣನಾಗಿದ್ದಾನೆ ಎಂದು ಒಪ್ಪಿ ಕಣ್ಣಿಗೆ ಕಾಣಿಸುವ ಘಟಪಟಾದಿ ಕಾರ್ಯಗಳಿಗೆ ಜೀವನು ಕಾರಣನಾಗಿದ್ದಾನೆಂಬ ಪೂರ್ವಪಕ್ಷವನ್ನು ತಿಳಿಯಬೇಕು. ಘಟಪಟಾದಿಗಳಿಗೂ ಕೂಡ ವಿಷ್ಣುವೇ ಕಾರಣ ಎಂಬ ಸಿದ್ಧಾಂತವನ್ನು ತಿಳಿಯಬೇಕು. ಇಷ್ಟು ಭಾಷ್ಯದ ಅಭಿಪ್ರಾಯ. ಹಾಗಾಗಿ ಜೀವನಲ್ಲಿ ಸ್ವತಂತ್ರಕರ್ತೃತ್ವ ಅನುಪಪನ್ನವಾದ್ದರಿಂದ ಶ್ರೀಹರಿಗೆ ಜನ್ಮಾದಿಕಾರಣತ್ವಲಕ್ಷಣವನ್ನು ಹೇಳಿದ್ದು ಯುಕ್ತವಾಯಿತು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ
ಇತರವ್ಯಪದೇಶಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

ಭಾವದೀಪ

ಭಾಷ್ಯದ ಚಕಾರದ ವ್ಯಾಖ್ಯಾನ

**भावदीपः –** ॥ कृत्स्नप्रसक्तिं ॥ २७ ॥ अयं चेति भाष्योक्तेराह– युक्त्यन्तरेणेति ॥ भाष्योक्तचशब्दसमुच्चेयमाह – **न केवलमिति** ।। सौत्रवाशब्दसूचितपक्षभेदं व्यञ्जयन् भाष्यं व्याचष्टे – **किं जीव इति** ।। न चैकदेशेनेत्यादि व्याचष्टे – **न द्वितीय इति** ।।

'ಅಯಂ ಚ' ಎಂಬ ಭಾಷ್ಯಕ್ಕೆ ವ್ಯಾಖ್ಯಾನಮಾಡುವುದಕ್ಕಾಗಿ 'ಯುಕ್ತ್ಯಂತರೇಣ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಭಾಷ್ಯದಲ್ಲಿ ಹೇಳಲ್ಪಟ್ಟ ಚಶಬ್ದದಿಂದ ಯಾವುದನ್ನು ಸಮುಚ್ಚಯಮಾಡಬೇಕೋ ಅದನ್ನು

ಟೀಕೆಯಲ್ಲಿ ನ ಕೇವಲಂ ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. ಸೂತ್ರದಲ್ಲಿರುವ 'ವಾ'ಶಬ್ದದಿಂದ ಸೂಚಿತವಾದ ಪಕ್ಷಭೇದವನ್ನು ಸ್ಪಷ್ಟಪಡಿಸುತ್ತಾ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಕಿಂ ಜೀವಃ' ಇತ್ಯಾದಿ ಟೀಕಾವಾಕ್ಯ ಹೊರಟಿದೆ. ನ ಚ ಏಕದೇಶೇನ ಇತ್ಯಾದಿ ಭಾಷ್ಯವನ್ನು 'ನ ದ್ವಿತೀಯಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

ವಿವರಣೆ – ಭಾಷ್ಯದಲ್ಲಿ 'ಅಯಂ ಚ ದೋಷಃ ಜೀವಕರ್ತೃತ್ವಪಕ್ಷೇ' ಮತ್ತೊಂದು ದೋಷವು ಜೀವಕರ್ತೃತ್ವಪಕ್ಷದಲ್ಲಿದೆ ಎಂದಷ್ಟೇ ಹೇಳಿದ್ದಾರೆ. ಅದಕ್ಕೆ ಟೀಕೆಯಲ್ಲಿ ಜೀವಕರ್ತೃತ್ವವನ್ನು ನಿರಾಕರಣೆ ಮಾಡಲು ಮತ್ತೊಂದು ಯುಕ್ತಿಯನ್ನು ಸೂತ್ರದಲ್ಲಿ ಹೇಳುತ್ತಿದ್ದಾರೆಂದು ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದಲ್ಲಿ 'ಅಯಂ ಚ' ಎಂಬುದಾಗಿ ಚಶಬ್ದದಿಂದ ಸಮುಚ್ಚಯಮಾಡಿದ್ದಾರೆ. ಆ ಸಮುಚ್ಚಯವನ್ನು 'ನ ಕೇವಲಂ' ಎಂಬ ಟೀಕಾವಾಕ್ಯದಿಂದ ತೋರಿಸಿದ್ದಾರೆ. ಕೇವಲ ಹಿತಾಕರಣ-ಅಹಿತಕರಣದೋಷಗಳಷ್ಟೇ ಅಲ್ಲ ನಿರವಯವತ್ವಶ್ರುತಿಯ ವಿರೋಧವು ಕೂಡ ಬರುತ್ತದೆ ಎಂಬ ದೋಷವನ್ನು ಸಮುಚ್ಚಯ ಮಾಡಬೇಕು.

### ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನ

**भावदीपः** – न चोपाधिकृतोंशः स एवोपहित इत्येतद् व्याचष्टे – **स एवेति** ।। तस्यार्थः समस्तो जीव इति – **इति च न युक्तमिति** ।। न चेत्यस्यावृत्तिरितिभावः– **स्वाभाविकेति** ।। विवृतमेतदुपाधिखण्डनतट्टीकादाविति भावः। एतेनोपाधेः कृत्स्नप्रसक्तिः सर्वजीवसम्बन्धः स्यात्। अंशसंबन्धे निरवयवत्वशब्दकोपोवेति सूत्रस्य वृत्त्यन्तरं दर्शितम् ।।

'ನ ಚ ಉಪಾಧಿಕೃತೋಂಶಃ' ಎಂಬ ಭಾಷ್ಯವನ್ನು 'ಸ ಏವ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ. 'ಸ ಏವ' ಎಂಬುದರ ಅರ್ಥವನ್ನೇ 'ಸಮಸ್ತ ಜೀವಃ' ಎಂದು ಹೇಳಿದ್ದಾರೆ. 'ಇತಿ ಚ ನ ಯುಕ್ತಮ್' ಎಂದು ಟೀಕೆಯಲ್ಲಿದೆ. 'ನ ಚ' ಎಂಬುದನ್ನು ಮೇಲಿನ ಭಾಷ್ಯದಲ್ಲೂ ಕೂಡ ಆವೃತ್ತಿ ಮಾಡಿಕೊಳ್ಳಬೇಕು ಎಂಬುದು ಇದರ ಅಭಿಪ್ರಾಯ. 'ಸ್ವಾಭಾವಿಕದ್ವಿತ್ವಾಪೇಕ್ಷತ್ವಾತ್' ಎಂದು ಟೀಕೆಯಲ್ಲಿದೆ. ಒಂದೇ ಅಂಶಕ್ಕೆ ಉಪಾಧಿಯ ಸಂಬಂಧ ಆಗಬೇಕಾದರೆ ಸ್ವಾಭಾವಿಕವಾಗಿ ಎರಡು ಅಂಶಗಳಿರಬೇಕು ಎಂಬುದು ಇದರ ಅರ್ಥ. ಇದರ ಬಗ್ಗೆ ಹೆಚ್ಚಿನ ವಿವರಣೆಯನ್ನು ಉಪಾಧಿಖಂಡನದಲ್ಲಿ ಮತ್ತು ಅದರ ಟೀಕೆಯಲ್ಲಿ

ಮಾಡಲಾಗಿದೆ. ಹೀಗೆ ಹೇಳಿದ್ದರಿಂದ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವನ್ನು ಹೇಳಿದಂತಾಯಿತು. ಉಪಾಧಿಗೆ ಕೃತ್ಸ್ನಪ್ರಸಕ್ತಿಯನ್ನು ಹೇಳಿದರೆ ಸರ್ವಜೀವಸಂಬಂಧವನ್ನು ಹೇಳಿದಂತಾಗುತ್ತದೆ. ಅಂಶಸಂಬಂಧವನ್ನು ಹೇಳಿದರೆ ನಿರವಯವತ್ವಶ್ರುತಿಯ ವಿರೋಧ ಬರುತ್ತದೆ ಎಂದು.

### ಇಲ್ಲಿಯವರೆಗೆ ಮಾಡಿದ ಅಧಿಕರಣದ ರಚನೆ

**भावदीपः – ईश्वराधीनत्वेनेति** ।। ईश्वरस्य वक्ष्यमाणदिशाऽघटितघतकाचिन्त्यानेकशक्तित्वादिति भावः। पूर्वं परिदृश्यमानकार्याणां स्वतन्त्रजीवकर्तृत्वे समस्तजगतोऽपि तथात्वं सिध्यतीत्यनेन घटादौ महदादौ च सर्वत्र जीव एव कर्ता नत्वीश्वरः। तस्यैवानुपलब्ध्या अभावादिति पूर्वपक्षं कृत्वा अनुपलब्धस्यापि देवादिवच्छ्रुतिप्रमितत्वात् स एव सर्वजगतः कर्तेति सिद्धान्तः कृतः।

'ಈಶ್ವರಾಧೀನತ್ವೇನ' ಎಂದು ಟೀಕೆಯಲ್ಲಿದೆ. ಈಶ್ವರಾಧೀನವಾಗಿ ಸಕಲಕರ್ತೃತ್ವವನ್ನು ಉಪಪಾದನೆ ಮಾಡಬೇಕು. ಈಶ್ವರನಿಗೆ ಅಘಟಿತಘಟನಾಶಕ್ತಿಯು ಅಚಿಂತ್ಯವಾದ ಶಕ್ತಿಯು ಇರುವುದರಿಂದ ಅನುಭವದಲ್ಲಿ ವಿರುದ್ಧವಾಗಿ ಕಂಡಿದ್ದರೂ ಈಶ್ವರನ ವಿಷಯದಲ್ಲಿ ಅದು ವಿರುದ್ಧವಾಗುವುದಿಲ್ಲ ಎಂದಭಿಪ್ರಾಯ.

ಇಲ್ಲಿಯ ತನಕ ಮಾಡಿದ ಅಧಿಕರಣ ರಚನೆ ಹೀಗಿದೆ – ಕಣ್ಣಿಗೆ ಕಾಣಸುತ್ತಿರುವ ಘಟಪಟಾದಿ ಕಾರಣಗಳಿಗೆ ಸ್ವತಂತ್ರನಾದ ಜೀವನೇ ಕಾರಣ ಎಂದು ಸಿದ್ಧವಾಗುತ್ತದೆ. ಈ ದೃಷ್ಟಾಂತದಿಂದ ಸಮಸ್ತ ಜಗತ್ತಿಗೂ ಕೂಡ ಜೀವನೇ ಕಾರಣನಾಗಿದ್ದಾನೆ ಎಂಬ ಪ್ರಕಾರದಿಂದ ಘಟಾದಿಗಳಲ್ಲಿ ಹಾಗೂ ಮಹದಾದಿಗಳಲ್ಲಿ ಎಲ್ಲೆಡೆಯೂ ಜೀವನೇ ಕರ್ತೃವಾಗಿದ್ದಾನೆ ಹೊರತು ಈಶ್ವರನಲ್ಲ. ಏಕೆಂದರೆ ಆ ಈಶ್ವರನು ಅನುಪಲಬ್ಧನಾಗಿದ್ದಾನೆ ಎಂಬುದಾಗಿ ಅಧಿಕರಣದ ಪೂರ್ವಪಕ್ಷವನ್ನು ಮಾಡಲಾಯಿತು.

ಈಶ್ವರನು ಅನುಪಲಬ್ಧನಾಗಿದ್ದರೂ ಕೂಡ ದೇವತೆಗಳು ಹೇಗೆ ಅಂತರ್ಧಾನಶಕ್ತಿಯುಳ್ಳವರಾಗಿದ್ದಾರೋ ಅದರಂತೆ ಅಂತರ್ಧಾನಶಕ್ತಿಯುಳ್ಳವನಾಗಿದ್ದಾನೆ. ಮತ್ತು ಶ್ರುತಿಯಿಂದಲೂ ಪ್ರಮಿತನಾಗಿದ್ದಾನೆ. ಅಂತಹ ಈಶ್ವರನೇ ಸಮಸ್ತಜಗತ್ತಿಗೆ ಕಾರಣನಾಗುತ್ತಾನೆ. ಸ್ವತಂತ್ರಕರ್ತೃತ್ವವು ಈಶ್ವರನಲ್ಲಿ ಮಾತ್ರ ಬರುತ್ತದೆ. ಜೀವನಲ್ಲಿ ಬರುವುದಿಲ್ಲ ಎಂಬುದಾಗಿ ಸಿದ್ಧಾಂತ ಮಾಡಲಾಯಿತು.

ಈಗ ಮಾಡುತ್ತಿರುವ ಅಧಿಕರಣದ ರಚನೆ.

**भावदीपः** – अधुना महदादावस्त्वीश्वरः कर्ता घटादौ जीव एव न त्वीश्वरोऽपि कर्ता। तस्य तत्र कर्तृत्वेनानुपलब्धिबाधितस्य कर्तृत्वेन कल्पने कल्पनागौरवात् जीवमात्रकर्तृत्वस्यानुभवसिद्धस्य कल्पने लाघवादिति पूर्वपक्षे अनुपलब्धोपि स हि सर्वस्य कर्ता नान्यःकर्तेत्यादिश्रुतिसिद्धत्वाद्घटादावपीश्वर एव स्वतन्त्रकर्ता न जीव इति महदादावीशकर्तृत्वमुपेत्य घटादावेवेशकर्तृत्वाक्षेपसमाधिपरत्वेनाधिकरणं योज्यमित्याह – **यद्वेति** ।।

ಪ್ರಕೃತ ಮಹದಾದಿತತ್ತ್ವಗಳಿಗೆ ಈಶ್ವರನು ಕರ್ತೃವಾಗಲಿ. ಆದರೆ ಘಟಪಟಾದಿಗಳಿಗೆ ಜೀವನೇ ಕರ್ತೃವಾಗಲಿ ಹೊರತು ಈಶ್ವರನೂ ಕೂಡ ಘಟಪಟಾದಿಗಳಿಗೆ ಕರ್ತೃವಾಗುತ್ತಾನೆ ಎಂದು ಒಪ್ಪುವ ಅವಶ್ಯಕತೆ ಇಲ್ಲ. ಏಕೆಂದರೆ ಘಟಪಟಾದಿಗಳಿಗೆ ಈಶ್ವರನು ಕರ್ತೃವಾಗಿದ್ದಾನೆಂದು ಒಪ್ಪಿದರೆ ಅನುಪಲಂಭಬಾಧದೋಷವು ಬರುತ್ತದೆ. ಕಣ್ಣಿಗೆ ಕಾಣದ ಈಶ್ವರನು ಘಟಪಟಾದಿಗಳಿಗೆ ಕರ್ತೃವೆಂದು ಒಪ್ಪಿದರೆ ಕಲ್ಪನಾಗೌರವದೋಷವು ಕೂಡ ಪ್ರಾಪ್ತವಾಗುತ್ತದೆ. ಕೇವಲ ಜೀವನೇ ಘಟಪಟಾದಿಗಳಿಗೆ ಕರ್ತೃವಾಗಿದ್ದಾನೆಂಬುದು ಅನುಭವಸಿದ್ಧವಾಗಿದೆ. ಅನುಭವಸಿದ್ಧವಾದುದ್ದನ್ನು ಒಪ್ಪುವುದರಿಂದ ಕಲ್ಪನಾಲಾಘವವಿದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಈಶ್ವರನು ಅನುಪಲಬ್ಧನಾಗಿದ್ದರೂ ಕೂಡ 'ಸಹಿ ಸರ್ವಸ್ಯ ಕರ್ತಾ' 'ನಾನ್ಯಃ ಕರ್ತಾ' ಇವೇ ಮೊದಲಾದ ಶ್ರುತಿಗಳಿಂದ ಈಶ್ವರನು ಸಿದ್ಧನಾಗಿದ್ದಾನೆ. ಆದ್ದರಿಂದ ಮಹದಾದಿ ತತ್ತ್ವಗಳಿಗೆ ಹೇಗೆ ಈಶ್ವರನು ಕಾರಣನಾಗಿದ್ದಾನೋ ಅದರಂತೆ ಘಟಪಟಾದಿಗಳಿಗೂ ಕೂಡ ಕಾರಣನಾಗಿದ್ದಾನೆ. ಹೀಗೆ ಪ್ರತಿಯೊಂದು ಕಾರ್ಯಗಳ ಹಿಂದೆ ಸ್ವತಂತ್ರಕರ್ತೃವಾಗಿರುವವನು ಈಶ್ವರನೇ ಹೊರತು ಜೀವನಲ್ಲ ಎಂಬುದು ಅಧಿಕರಣದ ಸಿದ್ಧಾಂತ. ಹೀಗೆ ಮಹದಾದಿ ತತ್ತ್ವಗಳಲ್ಲಿ ಈಶಕರ್ತೃತ್ವವನ್ನು ಒಪ್ಪಿ ಘಟಾದಿಗಳಲ್ಲಿ ಮಾತ್ರ ಈಶಕರ್ತೃತ್ವವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವುದಕ್ಕಾಗಿ ಈ ಅಧಿಕರಣ ಹೊರಟದೆ ಎಂಬುದಾಗಿ 'ಯದ್ವಾ' ಇತ್ಯಾದಿ ಗ್ರಂಥದಿಂದ ಪ್ರಕೃತ ವ್ಯಾಖ್ಯಾನ ಮಾಡುತ್ತಿದ್ದಾರೆ.

ಮತ್ತೊಂದು ಪಕ್ಷವನ್ನು ಉಲ್ಲೇಖ ಮಾಡಲು ಕಾರಣವೇನು?

**भावदीपः** – ईश्वरत्यागेन जीवस्यैव कर्तृत्वाङ्गीकारे कल्पनालाघवमिति न्यायविवरणस्य जीवकर्तृत्वेत्यादिभाष्यस्य च पक्षद्वयेपि साम्यादिति भावः। अत्र प्राचीनपक्षे जीवस्य महदादिकर्तृत्वेऽनुभवविरोधः। अस्मिन्पक्षे तु नेत्येतत्पक्षोत्थापनमिति

बोध्यम् – **तस्मादिति ।।** हिताक्रियादिकृत्स्नप्रसक्त्यादिबाधकभावात्। अनुभवादेराभासत्वेन साधकाभावाच्चेत्यर्थः ॥ २७ ॥

ಈಶ್ವರನನ್ನು ಪರಿತ್ಯಾಗ ಮಾಡಿ ಜೀವನಿಗೆ ಮಾತ್ರ ಸ್ವತಂತ್ರಕರ್ತೃತ್ವವನ್ನು ಅಂಗೀಕಾರ ಮಾಡಿದರೆ ಕಲ್ಪನಾಲಾಘವವು ಬರುತ್ತದೆ ಎಂಬುದಾಗಿ ನ್ಯಾಯವಿವರಣದಲ್ಲಿ ಹಾಗೂ ಜೀವಕರ್ತೃತ್ವ ಇತ್ಯಾದಿ ಭಾಷ್ಯದಲ್ಲಿ ಹೇಳಲಾಗಿದೆ. ಇದು ಎರಡೂ ಪಕ್ಷಗಳಲ್ಲೂ ಕೂಡ ಸಮಾನವಾಗಿದೆ ಎಂಬುದು ಗಮನಿಸಬೇಕು. ಒಂದು ಮಾತ್ರ ವ್ಯತ್ಯಾಸವಿದೆ. ಹಿಂದಿನ ಪಕ್ಷದಲ್ಲಿ ಜೀವನು ಮಹದಾದಿಗಳಿಗೆ ಕರ್ತೃವಾಗಿದ್ದನೆ ಎಂದು ಒಪ್ಪಿದಲ್ಲಿ ಅನುಭವವಿರೋಧ ಬರುತ್ತದೆ. ಈ ಪಕ್ಷದಲ್ಲಿ ಆ ಅನುಭವವಿರೋಧಕ್ಕೆ ಅವಕಾಶವಿಲ್ಲ. ಹಾಗಾಗಿ ಮತ್ತೊಂದು ಪಕ್ಷವನ್ನು ಟೀಕೆಯಲ್ಲಿ ಉಲ್ಲೇಖ ಮಾಡಿದ್ದು ಸಂಗತವಾಗುತ್ತದೆ.

'ತಸ್ಮಾತ್' ಎಂಬ ಪದಕ್ಕೆ ಹಿತಾಕರಣ ಅಹಿತಕರಣ ಕೃತ್ಸ್ನಪ್ರಸಕ್ತಿ ಮೊದಲಾದ ಬಾಧಕಗಳು ಇರುವುದರಿಂದ ಎಂದರ್ಥ. ಮತ್ತು ಅನುಭವಾದಿಗಳೆಲ್ಲವೂ ಆಭಾಸವಾಗಿರುವುದರಿಂದ ಜೀವನು ಸ್ವತಂತ್ರಕರ್ತೃವೆನ್ನಲು ಯಾವುದೇ ಸಾಧಕಪ್ರಮಾಣಗಳು ಇಲ್ಲದಿರುವುದರಿಂದ ಎಂದರ್ಥ.

## ಭಾವದೀಪದ ವೈಶಿಷ್ಟ್ಯ

* ಉಪಾಧಿಯ ಸಂಬಂಧ ಬರಬೇಕೆಂದರೆ ಮೊದಲೇ ಅಂಶಗಳಲ್ಲಿ ಭೇದವಿರಬೇಕು ಎಂಬ ವಿಚಾರವನ್ನು ತಿಳಿಯಬೇಕೆಂದರೆ ಉಪಾಧಿಖಂಡನ ಟೀಕೆಯನ್ನು ಓದಿರಿ ಎಂದು ಸೂಚಿಸಿದ್ದಾರೆ.
* 'ಉಪಾಧೇಃ ಕೃತ್ಸ್ನಪ್ರಸಕ್ತಿಃ ಸರ್ವಜೀವಸಂಬಂಧಃ ಸ್ಯಾತ್ ಅಂಶಸಂಬಂಧೇ ನಿರವಯವತ್ವಶಬ್ದಕೋಪೋ ವಾ' - ಎಂಬುದಾಗಿ 'ಕೃತ್ಸ್ನಪ್ರಸಕ್ತಿಃ' ಇತ್ಯಾದಿ ಸೂತ್ರಕ್ಕೆ ಮತ್ತೊಂದು ವ್ಯಾಖ್ಯಾನವನ್ನು ಮಾಡಿರುವುದು ಅಪೂರ್ವವಾಗಿದೆ.
* ಎರಡು ಕ್ರಮದಲ್ಲಿ ಪೂರ್ವಪಕ್ಷಗಳಿವೆ; ಎರಡು ಕ್ರಮದಲ್ಲಿ ಸಿದ್ಧಾಂತವಿದೆ. ಇವುಗಳನ್ನು ನಿಖರವಾಗಿ ತೋರಿಸಿದ್ದಾರೆ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ
ಇತರವ್ಯಪದೇಶಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## इतरव्यपदेशाधिकरणम् (२-१-७)

ಸೂತ್ರದಲ್ಲಿ ವಿವಕ್ಷಿಸಬೇಕಾದ ಪದಗಳು

।। इतरव्यपदेशाद्धिताकरणादिदोषप्रसक्तिः ।।२-१-२२।।

अत्र श्रुत्यनुभवसंवादियुक्तिविरोधो निरस्यते । असद्व्यपदेशादित्यतश्चेदित्यस्ति। स च यद्यर्थे । यदितर्ह्योश्च नित्यान्वयः ।

ಈ ಅಧಿಕರಣದಲ್ಲಿ ಶ್ರುತಿ ಮತ್ತು ಅನುಭವಗಳ ಸಂವಾದವಿರುವುದರಿಂದ ಯುಕ್ತಿಯು ಬಲಿಷ್ಠವಾಗುತ್ತದೆ. ಅಂಥ ಯುಕ್ತಿಯ ವಿರೋಧವನ್ನು ಪರಿಹರಿಸುತ್ತಾರೆ. 'ಅಸದ್ವ್ಯಪದೇಶಾತ್' ಎಂಬ ಸೂತ್ರದಿಂದ. 'ಚೇತ್' ಎಂಬ ಪದವನ್ನು ಇಲ್ಲಿ ಅನುವೃತ್ತಿ ಮಾಡಬೇಕು. 'ಚೇತ್' ಎಂಬ ಪದವು 'ಯದಿ' ಎಂಬರ್ಥದಲ್ಲಿ ವಿವಕ್ಷಿತವಾಗಿದೆ. 'ಯದಿ' ಮತ್ತು 'ತರ್ಹಿ' ಎಂಬೆರಡು ಪದಗಳಿಗೆ ನಿತ್ಯವಾದ ಸಂಬಂಧವಿದೆ. ಆದ್ದರಿಂದ 'ತರ್ಹಿ' ಎಂಬುದೂ ಕೂಡ ಅರ್ಥಾತ್ ಪ್ರಾಪ್ತವಾಗುತ್ತದೆ.

### ಸೂತ್ರದ ಅರ್ಥ

इतरस्य प्रस्तुतब्रह्मकर्तृत्वादितरस्य जीवकर्तृत्वस्य ''जीवाद्भवन्ति भूतानि'' इति श्रुतौ व्यपदेशात्, यदि जीवः स्वतन्त्रकर्तेति शेषः, तर्हि हिताकरणस्यादिपदोक्ताहितकरणस्य च दोषस्य प्रसक्तिः । तौ दोषौ प्रसज्येयातामिति यावत् । ते न स्याताम् । न हि स्वतन्त्रस्य तद्द्वयं युज्यत इति यावत् । श्रुतिस्तु ब्रह्मपरेत्याकूतम् ।

ಸೂತ್ರಾರ್ಥ ಹೀಗಿದೆ - 'ಇತರವ್ಯಪದೇಶಾತ್', ಇತರಸ್ಯ = ಪ್ರಸಕ್ತನಾದ ಬ್ರಹ್ಮಕರ್ತೃತ್ವಕ್ಕಿಂತ ಬೇರೆಯಾದ ಜೀವಕರ್ತೃತ್ವವು, ವ್ಯಪದೇಶಾತ್ = 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದ, ಯದಿ = ಒಂದು ವೇಳೆ ಜೀವನು 'ಸ್ವತಂತ್ರಕರ್ತಾ' ಎಂಬುದಾಗಿ ಸೂತ್ರದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕು. ಒಂದು ವೇಳೆ ಜೀವನು ಸ್ವತಂತ್ರಕರ್ತೃವಾದಲ್ಲಿ, ತರ್ಹಿ = ಹಿತವಾದದ್ದನ್ನು ಮಾಡದಿರುವುದು, ಆದಿಪದದಿಂದ ತನಗೆ ಅಹಿತವಾದದ್ದನ್ನು ಮಾಡುವಿಕೆ ಎಂಬ ದೋಷವು ಪ್ರಾಪ್ತವಾಗುತ್ತದೆ. ಇವೆರಡೂ ದೋಷಗಳು ಬರಬೇಕಾದೀತು ಎಂಬುದು ಅಭಿಪ್ರಾಯ. ಆದರೆ ಈ ಎರಡು ದೋಷಗಳು ಬರಬಾರದು. ಏಕೆಂದರೆ ಸ್ವತಂತ್ರನಾದವನಿಗೆ ಈ ಎರಡು ದೋಷಗಳು ಅಯುಕ್ತವಾಗುತ್ತವೆ. ಹಾಗಾದರೆ 'ಜೀವಾದ್ಭವಂತಿ ಭೂತಾನಿ' ಎಂಬ ಶ್ರುತಿಗೆ ಏನರ್ಥ ? ಎಂದು ಪ್ರಶ್ನಿಸುವಂತಿಲ್ಲ. ಇದು ಬ್ರಹ್ಮಪರವೇ ಆಗಿದೆ.

### ಸೂತ್ರಕ್ಕೆ ತತ್ವಪ್ರದೀಪಕಾರರು ಹೇಳಿದ ಅರ್ಥ

तत्त्वप्रदीपे तु इतरस्य जीवस्य स्वतन्त्रकर्तृत्वव्यपदेशादित्युक्तम् । व्यपदेशादित्युक्तिश्चेतनत्वयुक्तेः श्रुतिसंवादोक्त्यर्था । एतेन शिष्टेत्यस्य प्रपञ्चत्वान्न पौनरुक्त्यम् ।।

ತತ್ವಪ್ರದೀಪದ ಪ್ರಕಾರ ಸೂತ್ರಾರ್ಥ ಹೀಗೆ - 'ಇತರವ್ಯಪದೇಶಾತ್' ಇತರಸ್ಯ = ಬ್ರಹ್ಮಭಿನ್ನನಾದ ಜೀವನಿಗೆ, ವ್ಯಪದೇಶಾತ್ = ಸ್ವತಂತ್ರಕರ್ತೃತ್ವವನ್ನು ಹೇಳುವುದರಿಂದ ಎಂದು. ವ್ಯಪದೇಶಾತ್ ಎಂದು ಹೇಳಿರುವುದು ಚೇತನತ್ವಯುಕ್ತಿಗೆ ಶ್ರುತಿಯ ಸಂವಾದವನ್ನು

ತಿಳಿಸುವುದಕ್ಕಾಗಿ. 'ಏತೇನಾ ಶಿಷ್ಟಾ' ಎಂಬ ಸೂತ್ರದ ವಿವರಣೆಗಾಗಿ ಈ ಸೂತ್ರ ಹೊರಟಿರುವುದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲ.

(ಹಿಂದಿನ ಪಕ್ಷದಲ್ಲಿ ಬ್ರಹ್ಮಕರ್ತೃತ್ವಕ್ಕಿಂತ ಭಿನ್ನವಾದ ಜೀವಕರ್ತೃತ್ವವು ಶ್ರುತಿಪ್ರತಿಪಾದ್ಯವಾದಲ್ಲಿ, ಹಿತಾಕರಣ, ಅಹಿತಕರಣ ದೋಷಗಳನ್ನು ಹೇಳಲಾಯಿತು. ತತ್ವಪ್ರದೀಪಕಾರರ ಪಕ್ಷದಲ್ಲಿ ಬ್ರಹ್ಮಭಿನ್ನನಾದ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಹೇಳಿದರೆ ಹಿತಾಕರಣ, ಅಹಿತಕರಣ ದೋಷಗಳು ಪ್ರಾಪ್ತವಾಗುತ್ತವೆ. ವಿಷಯವು ಒಂದೇ ಆಗಿದ್ದರೂ ಸೂತ್ರಾರ್ಥದಲ್ಲಿ ಮಾತ್ರ ವ್ಯತ್ಯಾಸ.

ಅಸದಧಿಕರಣದಲ್ಲಿ 'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬ ಸೂತ್ರವಿದೆ. ಅಭಾವಕರ್ತೃತ್ವವಾದವನ್ನು ನಿರಾಕರಣೆ ಮಾಡಿದ್ದರಿಂದ ಜೀವಕರ್ತೃತ್ವವಾದಗಳೇ ಮೊದಲಾದವುಗಳೂ ಕೂಡ ವೇದವಿರುದ್ಧವಾದ್ದರಿಂದ ನಿರಾಕೃತವಾಗುತ್ತವೆಂದು ಆ ಸೂತ್ರದಲ್ಲಿ ಹೇಳಿದ್ದಾರೆ. ಇದೇ ವಿಷಯದ ವಿವರಣೆಗಾಗಿ 'ಇತರವ್ಯಪದೇಶಾತ್' ಇತ್ಯಾದಿ ಸೂತ್ರವು ಹೊರಟಿದೆ. ಆದ್ದರಿಂದ ಪುನರುಕ್ತಿ ಇಲ್ಲ ಎಂದಭಿಪ್ರಾಯ.)

### ಈಶ್ವರಪಕ್ಷದಲ್ಲೂ ಬಾಧಕವಿದೆಯಲ್ಲವೇ?

**यदि बाधकाज्जीवस्य स्वतन्त्रकर्तृत्वस्यागस्तर्हीशस्यापि कर्तृत्वे श्रमचिन्तादिदोषापत्तिबाधकसाम्येन तन्न स्यादित्यत आह -**

**।। अधिकं तु भेदनिर्देशात् ।।२-१-१३।।**

ಒಂದುವೇಳೆ ಬಾಧಕವಿರುವ ಕಾರಣದಿಂದ ಜೀವನು ಸ್ವತಂತ್ರಕರ್ತೃ ಆಗುವುದಿಲ್ಲ ಎಂದು ಹೇಳುವುದಾದರೆ, ಈಶ್ವರನಲ್ಲಿ ಸ್ವತಂತ್ರಕರ್ತೃತ್ವವನ್ನು ಒಪ್ಪಿದಾಗಲೂ ಕೂಡ ಶ್ರಮ, ಚಿಂತೆ ಮೊದಲಾದ ದೋಷಗಳು ಪ್ರಾಪ್ತವಾಗುತ್ತವೆ. ಹೀಗೆ ಎರಡೂ ಪಕ್ಷದಲ್ಲಿ ಬಾಧಕಗಳು ಸಮಾನವಾಗಿರುವುದರಿಂದ ಜೀವಕರ್ತೃತ್ವದಂತೆ ಈಶ್ವರಕರ್ತೃತ್ವವೂ ಕೂಡ ಸಿದ್ಧವಾಗದೇ ಇರಬೇಕಾದೀತು. ಈಪ್ರಶ್ನೆಗೆ ಉತ್ತರಿಸಲು 'ಅಧಿಕಂ ತು ಭೇದನಿರ್ದೇಶಾತ್' ಎಂಬ ಸೂತ್ರವು ಹೊರಟಿದೆ.

ಸೂತ್ರದ ವ್ಯಾಖ್ಯಾನ

तुः साम्यव्यवर्तकः । भेदशब्दोऽतिशयाख्यविशेषावाची । तदनन्यत्वमित्यस्तदित्यस्ति । तद्ब्रह्म त्वधिकशक्त्यादिमत्त्वेनोत्कृष्टम् । ''श्रोता मन्ता'' इत्यादिना सर्वेभ्योऽखिलश्रोतृत्वानन्तर्यामित्वादिविशेषस्य निर्देशादित्यर्थः । एवंविधस्य ते दोषा न शङ्क्या इति भावः ।

ಸೂತ್ರದಲ್ಲಿರುವ 'ತು' ಶಬ್ದವು ಜೀವಕರ್ತೃತ್ವದಂತೆ ಈಶ್ವರಕರ್ತೃತ್ವದಲ್ಲಿ ಬಾಧಕವು ಸಮಾನವಲ್ಲ ಎಂದು ಹೇಳುತ್ತಿದೆ. ಭೇದಶಬ್ದವು ಅತಿಶಯರೂಪವಾದ ವಿಶೇಷವನ್ನು ಹೇಳುತ್ತಿದೆ. 'ತದನನ್ಯತ್ವಂ' ಎಂಬ ಪದದಿಂದ 'ತತ್' ಎಂಬ ಶಬ್ದವು ಅನುವೃತ್ತವಾಗುತ್ತದೆ.

ಸೂತ್ರಾರ್ಥ ಹೀಗೆ - ತತ್ = ಆ ಬ್ರಹ್ಮನು, ಅಧಿಕಂ ತು = ಅಧಿಕವಾದ ಶಕ್ತಿಯನ್ನು ಹೊಂದಿರುವುದರಿಂದ ಉತ್ಕೃಷ್ಟನಾಗಿದ್ದಾನೆ. ಭೇದನಿರ್ದೇಶಾತ್ = 'ಶ್ರೋತಾಮಂತಾ' ಇತ್ಯಾದಿ ಶ್ರುತಿಯಿಂದ ಯಾರಲ್ಲೂ ಇಲ್ಲದ ಅಖಿಲಶ್ರೋತೃತ್ವ, ಅಂತರ್ಯಾಮಿತ್ವ ಮೊದಲಾದ ಅಸಾಧಾರಣಧರ್ಮಗಳನ್ನು ಹೇಳುತ್ತಿದೆ. ಇಂಥ ಅಸಾಧಾರಣಧರ್ಮವನ್ನು ಹೊಂದಿರುವ ಈಶ್ವರನಿಗೆ ಶ್ರಮ, ಚಿಂತೆ ಮೊದಲಾದ ದೋಷಗಳನ್ನು ಶಂಕಿಸಲು ಸಾಧ್ಯವಿಲ್ಲ ಎಂದಭಿಪ್ರಾಯ.

ಜೀವನೇಕೆ ಸ್ವತಂತ್ರನಲ್ಲ

यद्येवं तर्हि चेतनत्वादीशवज्जीवोऽपि स्वतन्त्रकर्ता स्यादित्यत आह -

।। अश्मादिवच्च तदनुपपत्तिः ।।२-१-१४।।

ಹಾಗಾದರೆ ಚೇತನತ್ವವೆಂಬ ಧರ್ಮವು ಈಶ್ವರನಂತೆ ಜೀವನಲ್ಲೂ ಸಮಾನವಾಗಿದೆ. ಈಶ್ವರನಂತೆ ಜೀವನೂ ಕೂಡ ಸ್ವತಂತ್ರಕರ್ತೃವಾಗಲಿ? ಈ ಪ್ರಶ್ನೆಗೆ ಉತ್ತರಿಸಲು 'ಅಶ್ಮಾದಿವಚ್ಚ ತದನುಪಪತ್ತಿಃ' ಎಂಬ ಸೂತ್ರವು ಹೊರಟಿದೆ.

ಸೂತ್ರಾರ್ಥ

चोऽप्यर्थः । चेतनत्वेऽपि जीवस्याश्मादेरिवास्वतन्त्रत्वात् स्वतः कर्तृत्वानुपपत्तिः । आदिपदेन स्तम्भाद्यनेकदृष्टान्तोक्तिरस्वातन्त्र्यहेतोरव्यभिचारदर्शनाय । एवमग्रेऽपि ।

ಸೂತ್ರದಲ್ಲಿರುವ 'ಚ' ಶಬ್ದವು 'ಅಪಿ' ಎಂಬುದರ ಅರ್ಥವುಳ್ಳದ್ದಾಗಿದೆ. ಜೀವನು ಚೇತನನೇ ಆಗಿದ್ದಾನೆ. ಆದರೂ ಕೂಡ ಕಲ್ಲು ಮೊದಲಾದವುಗಳಂತೆ ಅಸ್ವತಂತ್ರನಾಗಿದ್ದಾನೆ. ಸ್ವತಂತ್ರಕರ್ತೃತ್ವವು ಇವನಲ್ಲಿ ಅನುಪಪನ್ನವಾಗುತ್ತದೆ. ಆದಿಪದದಿಂದ ಸ್ತಂಭ ಮೊದಲಾದ ಅನೇಕ ದೃಷ್ಟಾಂತಗಳನ್ನು ವಿವಕ್ಷಿಸಬೇಕು. ಜೀವರಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಸಮರ್ಥಿಸಲು ಯಾವ ಅಸ್ವಾತಂತ್ರ್ಯಹೇತುವನ್ನು ಹೇಳಲಾಗಿದೆಯೋ, ಅದು ವ್ಯಭಿಚರಿತವಲ್ಲ ಎಂಬುದನ್ನು ತಿಳಿಸಲು 'ಅಶ್ಮಾದಿವತ್' ಎನ್ನಲಾಗಿದೆ. ಇಲ್ಲಿರುವ ಆದಿಪದದಿಂದ ಬ್ರಹ್ಮ ಮೊದಲಾದ ಅನೇಕ ದೃಷ್ಟಾಂತಗಳನ್ನು ವಿವಕ್ಷಿಸಿದ್ದಾರೆ. ಇದರಂತೆ ಮುಂದೆಯೂ ಕೂಡ ತಿಳಿಯಬೇಕು.

ಚೇತನತ್ವಯುಕ್ತಿಯು ಅಪ್ರಯೋಜಕವಾಗಿದೆ

तत एव योग्यहेतुलाभोऽपि अस्वातन्त्र्यं च । हिताक्रियादिना मृतिसुप्त्यादौ सार्वजनीनानुभवेन सिद्धमिति भावः । चेतनत्वयुक्तिश्चाप्रयोजिकेत्याशयः ।

ಸೂತ್ರದಲ್ಲಿ ಅನೇಕ ದೃಷ್ಟಾಂತಗಳನ್ನು ಹೇಳಿದಂತಾಯಿತು. ಇದರಿಂದಲೇ ಜೀವರಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಸಾಧಿಸಲು ಯೋಗ್ಯವಾದ ಹೇತುವೂ ಕೂಡ ಅರ್ಥಾತ್ ಪ್ರಾಪ್ತವಾಗುತ್ತದೆ. ಮತ್ತು ಜೀವರುಗಳಿಗೆ ಅಸ್ವಾತಂತ್ರ್ಯವಿದೆ ಎಂಬುದೂ ಕೂಡ ತಿಳಿಯಲ್ಪಡುತ್ತದೆ. ತನಗೆ ಹಿತವಾದದ್ದನ್ನು ಪಡೆಯಲು ಸಾಧ್ಯವಾಗದೇ ಇರುವುದು ಮತ್ತು ಮರಣ, ಸುಷುಪ್ತ್ಯವಸ್ಥೆ ಇವುಗಳಿಂದ ಸ್ವಾತಂತ್ರ್ಯವು ಇಲ್ಲವೆಂಬುದು ಪ್ರತಿಯೊಬ್ಬರ ಅನುಭವದಿಂದ ಸಿದ್ಧವಾಗಿದೆ. ಆದ್ದರಿಂದ ಜೀವರುಗಳಿಗೆ ಅಸ್ವಾತಂತ್ರ್ಯವಿದೆ ಎನ್ನಲು ಹಿತಾಕರಣಾದಿಗಳು ಹೇತುಗಳಾಗುತ್ತವೆ.

ಆದ್ದರಿಂದ ಜೀವನು ಸ್ವತಂತ್ರಕರ್ತೃವಾಗಿದ್ದಾನೆನ್ನಲು ಹೇಳಲ್ಪಟ್ಟ ಚೇತನತ್ವಯುಕ್ತಿಯು ಅಪ್ರಯೋಜಕವಾಯಿತು.

### 'ಉಪಸಂಹಾರದರ್ಶನಾತ್' ಎಂಬ ಸೂತ್ರಕ್ಕೆ ಅರ್ಥ

उक्तमनुभवविरोधेनाक्षिप्य तस्य गतिमाह -

।। उपसंहारदर्शनान्नेति चेत् क्षीरवद्धि ।।२-१-१५।।

तदनुपपत्तिरित्यस्ति । नञ् आवर्तते । जीव उपसंहारस्यारब्धकार्य-समापनस्यानुभवान्न स्वतन्त्रकर्तृत्वानुपपत्तिरिति चेत् ।

ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಹೇಳಿದ್ದು ಅನುಭವವಿರುದ್ಧವಾಗಿದೆ ಎಂಬುದು ಆಕ್ಷೇಪ. ಸ್ವತಂತ್ರಕರ್ತೃತ್ವವಿಲ್ಲವೆಂಬ ಅನುಭವಕ್ಕೆ ಬೇರೆ ಗತಿಯನ್ನು ನಿರೂಪಣೆ ಮಾಡಲು 'ಉಪಸಂಹಾರದರ್ಶನಾನ್ನೇತಿ ಚೇತ್ ಕ್ಷೀರವದ್ಧಿ' ಎಂಬ ಸೂತ್ರವು ಹೊರಟಿದೆ.

ಹಿಂದಿನ ಸೂತ್ರದಿಂದ 'ತದನುಪಪತ್ತಿಃ' ಎಂಬುದು ಅನುವೃತ್ತವಾಗುತ್ತದೆ. 'ನಞ್' ಎಂಬುದು ಆವೃತ್ತವಾಗುತ್ತದೆ. ಜೀವನು ಯಾವ ಕಾರ್ಯವನ್ನು ಮಾಡಲು ಪ್ರಾರಂಭಿಸುತ್ತಾನೋ, ಅದನ್ನು ಸಮಾಪ್ತಿಗೊಳಿಸುತ್ತಾನೆ. ಹೀಗೆ ಅನುಭವವಿರುವುದರಿಂದ ಸ್ವತಂತ್ರಕರ್ತೃತ್ವವು ಅಯುಕ್ತವಾಗುವುದಿಲ್ಲ. ಇಷ್ಟು 'ಉಪಸಂಹಾರದರ್ಶನಾತ್' ಎಂಬ ಸೂತ್ರಭಾಗಕ್ಕೆ ಅರ್ಥ.

### ಎಲ್ಲವೂ ಅಂತರ್ಯಾಮಿಯದ್ದೇ ವ್ಯಾಪಾರ

न क्षीरवत् । यथा गोषु दृश्यमानं क्षीरं गोभिन्नकर्त्रधीनं तथा जीवे दृश्यमानमपि कार्यावसानं जीवभिन्नेशाख्यकर्त्रधीनम् । ''य आत्मानम्'' इति श्रुतेरित्यर्थः ।

ಇದು ಸರಿಯಲ್ಲ. ಕ್ಷೀರವತ್ = ಹೇಗೆ ಹಸುಗಳಲ್ಲಿ ಕಾಣಸುತ್ತಿರುವ ಹಾಲು ಹಸುವಿಗಿಂತ ಭಿನ್ನವಾದ ಕರ್ತೃಧೀನವಾಗಿದೆಯೋ, ಅದರಂತೆ ಜೀವನಲ್ಲಿ ಕಾಣಸುತ್ತಿರುವ ಕಾರ್ಯಸಮಾಪ್ತಿಯೂ

ಕೂಡ ಜೀವಭಿನ್ನನಾದ ಈಶ್ವರಕರ್ತೃಕವಾಗಿದೆ ಎಂದು ಒಪ್ಪಬೇಕು. ಏಕೆಂದರೆ 'ಯ ಆತ್ಮಾನಮ್' ಎಂಬ ಶ್ರುತಿಯು ಪರಮಾತ್ಮನೇ ಅಂತರ್ಯಾಮಿಯಾಗಿದ್ದು, ಎಲ್ಲವನ್ನು ಮಾಡಿಸುತ್ತಾನೆ ಎಂದು ಪ್ರತಿಪಾದನೆ ಮಾಡುತ್ತಿದೆ. ಇಷ್ಟು ಸೂತ್ರಾರ್ಥ.

### ಸ್ವತಂತ್ರಕರ್ತೃವೆಂಬ ಅನುಭವವು ಭ್ರಮ ಮೂಲಕ

**''अन्नं रसादिरूपेण प्राणः परिणयत्यसौ'' इति वचनात् क्षीरस्यान्याधीनत्वप्रसिद्धिं हिशब्देनाह । अनुभवादिसिद्धास्वातन्त्र्यस्य जीवस्य स्वतन्त्रकर्तृत्वानुपपत्तेरेव बाधकादनुभवो भ्रम इति भावः । दर्शनादित्युक्तिर्युक्तेः प्रत्यक्षसंवादोक्त्यर्था ।।**

'ಅನ್ನಂ ರಸಾದಿರೂಪೇಣ ಪ್ರಾಣಃ ಪರಿಣಯತ್ಯಸೌ' ತಿಂದ ಅನ್ನವನ್ನು ರಸಾದಿರೂಪದಿಂದ ಪ್ರಾಣನು ಪರಿಣಾಮ ಮಾಡುತ್ತಾನೆ ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಕ್ಷೀರವು ಹಸುವಿಗಿಂತ ಭಿನ್ನವಾದ ಕರ್ತ್ರಧೀನವಾಗಿದೆ ಎಂಬುದು ಪ್ರಮಾಣಪ್ರಸಿದ್ಧವಾಯಿತು. ಇದನ್ನು 'ಹಿ'ಶಬ್ದವು ಹೇಳುತ್ತಿದೆ. ಅನುಭವ ಮೊದಲಾದ ಪ್ರಮಾಣಗಳಿಂದ ಜೀವನಿಗೆ ಅಸ್ವಾತಂತ್ರ್ಯವು ಸಿದ್ಧವಾಗಿದೆ. ಈ ಕಾರಣದಿಂದಲೂ ಸ್ವತಂತ್ರಕರ್ತೃತ್ವವು ಅನುಪಪನ್ನವಾಗುತ್ತದೆ. ಆದ್ದರಿಂದ ನಾನು ಸ್ವತಂತ್ರಕರ್ತೃ ಆಗಿದ್ದೇನೆ ಎಂಬ ಅನುಭವವು ಭ್ರಮಮೂಲಕವೆಂದು ಸಿದ್ಧವಾಯಿತು. ಪೂರ್ವಪಕ್ಷಿ ಹೇಳಲ್ಪಟ್ಟ ಯುಕ್ತಿಗೆ ಪ್ರತ್ಯಕ್ಷಸಂವಾದವನ್ನು ತೋರಿಸುವುದಕ್ಕಾಗಿ 'ದರ್ಶನಾತ' ಎಂದು ಸೂತ್ರದಲ್ಲಿ ಹೇಳಿದ್ದಾರೆ.

### ಕಣ್ಣಿಗೆ ಕಾಣದ್ದು ಇಲ್ಲ ಎನ್ನಬಾರದು

नन्वीश एवानुपलम्भान्नास्ति । कुतस्तदधीनतेत्यत आह -

।। देवादिवदपि लोके ।।२-१-२६।।

देवादीनामिव सतोऽपीशस्यानुपलम्भो युक्तः । तेषां प्रागुक्तदिशा अदृश्यत्वशक्तिमत्त्वे ईशस्यापि तथात्वात् ।

ಕಣ್ಣಿಗೆ ಕಾಣಿಸುತ್ತಿಲ್ಲವಾದ್ದರಿಂದ ಈಶ್ವರನೇ ಇಲ್ಲ. ಹೀಗಿರುವಾಗ ಸಮಸ್ತ ಜಗತ್ತು ಅವನ ಅಧೀನವಾಗಿದೆ ಎಂದು ಹೇಳುವುದು ಹೇಗೆ ಸರಿ ? ಈ ಆಕ್ಷೇಪಕ್ಕೆ ಉತ್ತರಿಸಲು 'ದೇವಾದಿವದಪಿ ಲೋಕೇ' ಎಂಬ ಸೂತ್ರ ಹೊರಟಿದೆ.

ದೇವತೆಗಳಂತೆ ಈಶ್ವರನೂ ಕೂಡ ಕಣ್ಣಿಗೆ ಕಾಣಿಸದೇ ಇರುವುದು ಯುಕ್ತವಾಗಿದೆ. ಹಿಂದೆ ಹೇಳಿದಂತೆ ದೇವತೆಗಳಲ್ಲಿ ಹೇಗೆ ಅದೃಶ್ಯತ್ವಶಕ್ತಿಯಿದೆಯೋ, ಅದರಂತೆ ಈಶ್ವರನಲ್ಲೂ ಕೂಡ ಅದೃಶ್ಯತ್ವಶಕ್ತಿಯಿದೆ. ಇಷ್ಟು 'ದೇವಾದಿವತ್' ಎಂಬುದರ ಅರ್ಥ.

'ಅಪಿ ಲೋಕೇ' ಎಂಬುದರ ಅರ್ಥ

**तथात्वं कुत इत्यत उक्तम् - अपि लोक इति । लोके पिशाचादीनामनीशानामपि तादृशशक्तिरस्ति किम्वीशवरस्येत्यर्थः ।**

ಈಶ್ವರನಿಗೆ ಇಂಥ ಅದೃಶ್ಯತ್ವಶಕ್ತಿಯಿದೆ ಎನ್ನಲು ಏನು ಪ್ರಮಾಣ ? ಎಂಬ ಪ್ರಶ್ನೆಗೆ 'ಅಪಿ ಲೋಕೇ' ಎಂದು ಉತ್ತರಿಸಿದ್ದಾರೆ. ಲೋಕದಲ್ಲಿ ಪಿಶಾಚಾದಿಗಳಿಗೂ ಕೂಡ ಅಂಥ ಅದೃಶ್ಯತ್ವಶಕ್ತಿಯಿದೆ. ಹೀಗಿರುವಾಗ ಸರ್ವತಂತ್ರಸ್ವತಂತ್ರನಾದ ಈಶ್ವರನಿಗೆ ಇಂಥ ಅದೃಶ್ಯತ್ವಶಕ್ತಿಯಿದೆ ಎಂದು ಪ್ರತ್ಯೇಕ ಹೇಳಬೇಕೇನು? ಎಂಬುದು 'ಅಪಿ ಲೋಕೇ' ಎಂಬುದರ ಅರ್ಥ.

'ಅಪಿಲೋಕೇ' ಎಂಬುದರ ವ್ಯಾಖ್ಯಾನ

**अदृश्यस्यापि श्रुत्यादिना सद्भावे देवादिदृष्टान्तः । अदृश्यत्वशक्तिमत्त्वोपपादनायापि लोक इत्युक्तिरिति विवेकः । यद्वा देवादौ विप्रतिपन्नं प्रत्यपि लोक इत्येकार्थ एव दृष्टान्तद्वयम् । क्तं चैवमेव सुधायामभिमानिनये ।।**

ಈಶ್ವರನು ಅದೃಶ್ಯನಾಗಿದ್ದಾನೆ. ಆದರೂ ಕೂಡ ಶ್ರುತ್ಯಾದಿ ಪ್ರಮಾಣಗಳ ಆಧಾರದಿಂದ ಅವನ ಅಸ್ತಿತ್ವವನ್ನು ಒಪ್ಪಲೇ ಬೇಕು. ಈ ವಿಷಯದಲ್ಲಿ ದೇವತೆಗಳ ದೃಷ್ಟಾಂತವನ್ನು

ನೀಡಲಾಗಿದೆ. ಈಶ್ವರನಿಗೆ ಅದೃಶ್ಯತ್ವಶಕ್ತಿಯು ಇದೆ ಎಂಬುದರ ಸಮರ್ಥನೆಗಾಗಿ 'ಅಪಿಲೋಕೇ' ಎಂಬುದಾಗಿ ಹೇಳಿದ್ದಾರೆ. ಹೀಗೆ 'ದೇವಾದಿವತ್' ಮತ್ತು 'ಅಪಿಲೋಕೇ' ಎಂಬ ದೃಷ್ಟಾಂತದಲ್ಲಿ ವ್ಯತ್ಯಾಸವನ್ನು ಗಮನಿಸಬೇಕು.

ಅಥವಾ ದೇವತೆಗಳು ಇದ್ದಾರೆ ಎಂಬ ವಿಷಯದಲ್ಲೇ ಯಾರು ವಿವಾದ ಮಾಡುತ್ತಾರೋ, ಅವರನ್ನು ಕುರಿತು 'ಅಪಿಲೋಕೇ' ಎಂದು ಹೇಳಿದ್ದಾರೆ. ಹೀಗೆ ಒಂದೇ ವಿಷಯದಲ್ಲಿ ಎರಡು ದೃಷ್ಟಾಂತವನ್ನು ಹೇಳಿದ್ದಾರೆಂದು ತಿಳಿಯಬೇಕು. ಹೀಗೆಯೇ ನ್ಯಾಯಸುಧೆಯ ಅಭಿಮಾನ್ಯಧಿಕರಣದಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

### ಜೀವನು ಅಸ್ವತಂತ್ರಕರ್ತೃವೆನ್ನಲು ಯುಕ್ತ್ಯಂತರ

हिताक्रियादिना जीवस्य स्वतः कर्तृत्वं नेत्युक्तम् । युक्त्यन्तरेणापि नेत्याह -

।। कृत्स्नप्रसक्तिर्निरवयवत्वशब्दकोपो वा ।।२-१-२७।।

ಹಿತಾಕರಣ ಮೊದಲಾದ ಯುಕ್ತಿಗಳಿಂದ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಸಾಧನೆ ಮಾಡಿದ್ದಾಯಿತು. ಈಗ ಮತ್ತೊಂದು ಯುಕ್ತಿಯಿಂದ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂದು ಸಮರ್ಥನೆ ಮಾಡಲು 'ಕೃತ್ಸ್ನಪ್ರಸಕ್ತಿಃ ನಿರವಯವತ್ವಶಬ್ದಕೋಪೋ ವಾ' ಎಂಬ ಸೂತ್ರವು ಹೊರಟಿದೆ.

### 'ಕೃತ್ಸ್ನಪ್ರಸಕ್ತಿ' ಇತ್ಯಾದಿ ಸೂತ್ರದ ಅರ್ಥ

यदि जीवः स्वतन्त्रकर्ता तर्हीत्यस्ति । जीवः सर्वकार्येषु सर्वसामर्थ्येन प्रवर्ततेऽशेन वा नाद्यः । तृणादानादावपि कृत्स्नसामर्थ्यप्रसक्तिः । सा चानुभवविरुद्धा । नान्त्यः । अंशाभावात् । तदङ्गीकारे च '' अथ यः स जीवः स नित्यो निरवयवः'' इति निरवयवत्वश्रुतिव्याकोपः स्यादित्यर्थः ।

ಒಂದು ವೇಳೆ ಸ್ವತಂತ್ರಕರ್ತೃ ಆಗಿದ್ದಲ್ಲಿ ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಜೀವನು ಸಕಲ ಕಾರ್ಯಗಳಲ್ಲಿ ತನ್ನ ಎಲ್ಲಾ ಸಾಮರ್ಥ್ಯವನ್ನು ಉಪಯೋಗಿಸಿ ಪ್ರವೃತ್ತಿ

ಮಾಡುತ್ತಾನೋ, ಅಥವಾ ಒಂದಂಶದಿಂದಷ್ಟೇ ಪ್ರವೃತ್ತಿ ಮಾಡುತ್ತಾನೋ, ಮೊದಲನೆಯ ಪಕ್ಷ ತಪ್ಪು. ಕೃತ್ಸ್ನಪ್ರಸಕ್ತಿಃ = ಹುಲ್ಲುಕಡ್ಡಿಯನ್ನು ಎತ್ತುವಾಗಲೂ ಸಂಪೂರ್ಣ ಸಾಮರ್ಥ್ಯವನ್ನು ಉಪಯೋಗಿಸಬೇಕಾಗುತ್ತದೆ. ಇದು ಅನುಭವವಿರುದ್ಧ. ಒಂದಂಶದಿಂದ ಪ್ರವೃತ್ತಿ ಮಾಡುತ್ತಾನೆಂಬ ಎರಡನೆಯ ಪಕ್ಷವೂ ಕೂಡ ತಪ್ಪು. ನಿರವಯತ್ವಶಬ್ದಕೋಪೋ ವಾ = ಏಕೆಂದರೆ ಜೀವನಿಗೆ ಅಂಶವೇ ಇರುವುದಿಲ್ಲ. ಹಾಗೇನಾದರೂ ಅಂಶವನ್ನು ಅಂಗೀಕಾರ ಮಾಡಿದರೆ 'ಅಥ ಯಃ ಸ ಜೀವಃ ಸ ನಿತ್ಯೋ ನಿರವಯವಃ' ಎಂಬುದಾಗಿ ಜೀವನಿಗೆ ಅವಯವವಿಲ್ಲವೆಂದು ಹೇಳುವ ಶ್ರುತಿಯ ವಿರೋಧವು ಪ್ರಾಪ್ತವಾಗುತ್ತದ ಎಂದರ್ಥ.

### ಈಶ್ವರಾಧೀನವಾದ ಕರ್ತೃತ್ವವು ಜೀವನಿಗಿದೆ

**वा शब्दः पक्षभेदेनापादनसूचनार्थः । अतो न जीवः स्वतन्त्रकर्ता । किन्त्वीशाधीनकर्ता । यद्धि युक्त्या विरुद्ध्येत तदीशकृतमेव हीत्युक्तेरिति भावः ।**

ಸೂತ್ರದಲ್ಲಿರುವ 'ವಾ' ಎಂಬ ಶಬ್ದವು ಆಪಾದನೆಯು ಎರಡು ವಿಭಿನ್ನ ಪಕ್ಷಗಳಿಗೆ ಸಂಬಂಧಿಸಿದೆ ಎಂದು ಸೂಚನೆ ಮಾಡುತ್ತಿದೆ. ಆ ದೋಷಗಳಿರುವುದರಿಂದ ಜೀವನು ಸ್ವತಂತ್ರಕರ್ತೃವಲ್ಲ ಈಶಾಧೀನವಾದ ಕರ್ತೃವುಳ್ಳವನು ಎಂದು ತಿಳಿಯಬೇಕು. 'ಯದ್ಧಿ ಯುಕ್ತ್ಯಾ ವಿರುದ್ಧ್ಯೇತ ತದೀಶಕೃತಮೇವ' ಯಾವುದು ಯುಕ್ತಿಯಿಂದ ವಿರುದ್ಧವಾಗುತ್ತದೋ, ಅದು ಈಶಕೃತವೇ ಆಗಿದೆ ಎಂಬ ನ್ಯಾಯವು ಈ ವಿಷಯದಲ್ಲಿ ಆಧಾರವಾಗಿದೆ.

### ಜೀವನಿಗೆ ಭಿನ್ನಾಂಶಗಳಿಲ್ಲ

**व्यतिरेको गन्धवदिति जीवस्यानेकरूपतोक्त्या सांशत्वसिद्धावपीह निरवयवत्वशब्दकोपापादनं भिन्नांशशून्यत्वाद् युक्तिमित्यादि सुधोक्तं बोध्यम् ।।**

'ವ್ಯತಿರೇಕೋ ಗಂಧವತ್' ಎಂಬ ಸೂತ್ರದಲ್ಲಿ ಜೀವನಿಗೆ ಅನೇಕ ರೂಪಗಳಿವೆ ಎಂದು ಹೇಳಲಾಗಿದೆ. ಆದ್ದರಿಂದ ಜೀವನು ಸಾಂಶನೆಂದು ಸಿದ್ಧವಾಗುತ್ತದೆ. ಹೀಗಿರುವಾಗ ಜೀವನಿಗೆ ಅವಯವಗಳಿಲ್ಲವೆಂದು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು. 'ವ್ಯತಿರೇಕೋ ಗಂಧವತ್' ಎಂಬ ಸೂತ್ರದಲ್ಲಿ ಜೀವನಿಗೆ ಅಂಶಗಳಿವೆ ಎಂದು ಸಿದ್ಧವಾದರೂ ಕೂಡ ಭಿನ್ನಾಂಶಗಳಿವೆ ಎಂದು ಸಿದ್ಧವಾಗುವುದಿಲ್ಲ. ಅಭಿನ್ನಾಂಶವಷ್ಟೇ ಸಿದ್ಧವಾಗುತ್ತದೆ. ಪ್ರಕೃತ ನಿರವಯವತ್ವ ಶ್ರುತಿಯು ಭಿನ್ನಾಂಶಗಳಿಲ್ಲವೆಂದು ನಿಷೇಧ ಮಾಡುತ್ತಿದೆ ಇತ್ಯಾದಿ ವಿಷಯವು ನ್ಯಾಯಸುಧೆಯಲ್ಲಿ ಹೇಳಲ್ಪಟ್ಟಿದೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ಇತರವ್ಯಪದೇಶಾಧಿಕರಣವು ಮುಗಿಯಿತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಶ್ರುತೇಸ್ತು ಶಬ್ದಮೂಲತ್ವಾಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ,
ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಶ್ರುತೇಸ್ತುಶಬ್ದಮೂಲತ್ವಾಧಿಕರಣ

## ಬ್ರಹ್ಮಸೂತ್ರ

'ಶ್ರುತೇಸ್ತು ಶಬ್ದಮೂಲತ್ವಾತ್' ಎಂಬ ಸೂತ್ರದ ವ್ಯಾಖ್ಯಾನ

**ब्रह्मसूत्रम् – श्रुतेस्तु शब्दमूलत्वात् ॥**

ಜೀವ ಕರ್ತೃತ್ವ ಪಕ್ಷದಲ್ಲಿ ಇರುವ ದೋಷಗಳು ಈಶಕರ್ತೃತ್ವಪಕ್ಷದಲ್ಲಿ ಬರುವುದಿಲ್ಲ. ಏಕೆಂದರೆ, ನಿರಂಶನಾಗಿದ್ದರೂ ಶಕ್ತಿಯ ಒಂದಂಶವನ್ನು ಉಪಯೋಗಿಸಿ ಸೃಷ್ಟ್ಯಾದಿಗಳನ್ನು ಈಶ್ವರನು ಮಾಡುತ್ತಾನೆಂದು 'ಯೋಽಸೌವಿರುದ್ಧಃ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಈ ವಿಷಯದಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡಬಾರದು. ಏಕೆಂದರೆ ಈಶ್ವರನ ವಿಷಯದಲ್ಲಿ ವೇದಗಳು ಮಾತ್ರ ಪ್ರಮಾಣವಾಗಿರುತ್ತವೆ. ಆದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ. ಜೀವನಾದರೋ ಪ್ರಮಾಣಾಂತರಗಳಿಂದ ವೇದ್ಯನಾಗಿದ್ದಾನೆ.

ಅರ್ಥ -- 'ಕೃತ್ಸ್ನಪ್ರಸಕ್ತಿಃ' ಇತ್ಯಾದಿಯಾಗಿ ಜೀವಕರ್ತೃತ್ವ ಪಕ್ಷದಲ್ಲಿ ಹೇಳಿದ ಯುಕ್ತಿವಿರೋಧವು ಈಶ್ವರನೇ ಜಗತ್ಕರ್ತೃ ಎಂಬ ಪಕ್ಷದಲ್ಲಿ ಬರುವುದಿಲ್ಲ. ತು = ಏಕೆಂದರೆ, ಶ್ರುತೇಃ = 'ಯೋಽಸೌ ವಿರುದ್ಧಃ' ಎಂಬ ಶ್ರುತಿಯು ನಿರಂಶನಾದ ಈಶ್ವರನು ತನ್ನ ಶಕ್ತಿಯ ಒಂದಂಶದ ಉಪಯೋಗದಿಂದ ಸೃಷ್ಟ್ಯಾದಿಗಳನ್ನು ಮಾಡುತ್ತಾನೆಂದು ಹೇಳುತ್ತಿದೆ. ಹೀಗೆ ಹೇಳಿದ ಮಾತ್ರಕ್ಕೆ ಯುಕ್ತಿವಿರೋಧವು ಹೇಗೆ ಪರಿಹಾರವಾಗುತ್ತದೆ ? ಎಂದು ಪ್ರಶ್ನಿಸಬಾರದು. ಶಬ್ದಮೂಲತ್ವಾತ್= ಈಶ್ವರ ಹಾಗೂ ಈಶ್ವರನ ಧರ್ಮಗಳಲ್ಲಿ ಕೇವಲ ಶಬ್ದಗಳಷ್ಟೆ ಪ್ರಮಾಣಗಳಾಗಿರುತ್ತವೆ. ಯುಕ್ತಿಗೆ ವಿಷಯನಾದ ಕಾರಣ ಯುಕ್ತಿವಿರೋಧಕ್ಕೆ ಅವಕಾಶವೇ ಇಲ್ಲ. ಆದರೆ ಜೀವವಿಷಯದಲ್ಲಿ ಹೀಗೆ ಹೇಳಲಾಗದು. ಅವನು ಬೇರೆ ಪ್ರಮಾಣಗಳಿಂದಲೂ ಗಮ್ಯನಾಗಿದ್ದಾನೆ.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಈಶ್ವರಕರ್ತೃತ್ವಪಕ್ಷದಲ್ಲಿ ಯಾವುದೇ ದೋಷವಿಲ್ಲ

**ब्रह्मसूत्रभाष्यम् – ॥ श्रुतेस्तु शब्दमूलत्वात् ॥१॥**

**न चेश्वरपक्षेऽयं विरोधः । 'योऽसौ विरुद्धोऽविरुद्धो मनुरमनुर्वाग्वागिन्द्रोऽनिन्द्रः प्रवृत्तिरप्रवृत्तिः स परः परमात्मा' इति पैङ्ग्यादिश्रुतेरेव।**

ಅನುವಾದ - ಜೀವಕರ್ತೃತ್ವಪಕ್ಷದಲ್ಲಿ ಬರುವ ದೋಷವು ಈಶ್ವರಕರ್ತೃತ್ವಪಕ್ಷದಲ್ಲಿಯೂ ಸಮಾನ. ಹೀಗೆ ಆಕ್ಷೇಪ ಮಾಡಬಾರದು. ಏಕೆಂದರೆ ಲೋಕವಿರುದ್ಧವಾಗಿ ಕಾಣುವ ಧರ್ಮಗಳು ಪರಮಾತ್ಮನಲ್ಲಿ ಅವಿರುದ್ಧವಾಗಿ ಯುಕ್ತವಾಗುತ್ತವೆ. ಆದ್ದರಿಂದ ಈಶ್ವರನು ಸೃಷ್ಟಿಕಾರ್ಯದಲ್ಲಿ ಒಂದು ಅಂಶದಿಂದ ತೊಡಗುತ್ತಾನೆ. ಈ ವಿಷಯದಲ್ಲಿ ಪೈಂಗಿಶ್ರುತಿಯು ಆಧಾರವಾಗಿದೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ವಿಷ್ಣುವಿನ ಸರ್ವಕರ್ತೃತ್ವವಿಷಯದಲ್ಲಿ ಪ್ರಬಲವಾದ ಯುಕ್ತಿವಿರೋಧವನ್ನು ಪರಿಹರಿಸುತ್ತಿದ್ದಾರೆ. ಜೀವಕರ್ತೃತ್ವಪಕ್ಷದಲ್ಲಿ ಕೃತ್ಸ್ನಪ್ರಸಕ್ತ್ಯಾದಿ ಯಾವ ದೋಷಗಳನ್ನು ಹಿಂದೆ ಹೇಳಲಾಯಿತೋ ಅವು ಈಶ್ವರ ಪಕ್ಷದಲ್ಲಿಯೂ ಕೂಡ ಸಮಾನವಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸಲು ಸೂತ್ರ ಹೊರಟಿದೆ - ಈಶ್ವರಪಕ್ಷೇऽಪಿ = ಪರಮಾತ್ಮನು ಜಗತ್ಕಾರಣವಾಗಿದ್ದಾನೆ ಎಂಬ ಪಕ್ಷದಲ್ಲಿ, ಅಯಂ = ಕೃತ್ಸ್ನಪ್ರಸಕ್ತಿಯೆಂಬ, ವಿರೋಧಃ = ವಿರೋಧವು, ನಚ = ಬರುವುದಿಲ್ಲ. ಏಕೆಂದರೆ ಯಃ = ಯಾವ ಶ್ರುತಿಪ್ರಸಿದ್ಧವಾದವನು, ಅಸೌ = ಈ ಪರಮಾತ್ಮನು, ವಿರುದ್ಧಃ = ಲೌಕಿಕವಾದ ಕರ್ತೃತ್ವಕ್ಕಿಂತಲೂ ವಿರುದ್ಧವಾದ ಕರ್ತೃತ್ವವುಳ್ಳವನು, ಅವಿರುದ್ಧಃ = ಪ್ರಮಾಣಗಳಿಂದ ಅವಿರುದ್ಧವಾದ ಕರ್ತೃತ್ವವುಳ್ಳವನು, ಮನುಃ = ಎಲ್ಲವನ್ನು ತಿಳಿದವನು, ಅಮನುಃ = ಮತ್ತೊಬ್ಬ ಸ್ವತಂತ್ರವಾದ ಜ್ಞಾನಿ ಇಲ್ಲದವನು. ಅವಾಕ್ = ಸ್ವತಂತ್ರವಾದ ಮತ್ತೊಬ್ಬ ವಕ್ತೃತ್ವವಿಲ್ಲದವನು, ವಾಕ್ = ವಾಗ್ಮಿಯು,

ಇಂದ್ರಃ = ಸಂಪತ್ ಭರಿತನು, ಅನಿಂದ್ರಃ = ಮತ್ತೊಬ್ಬ ಅಧಿಪತಿಯಿಲ್ಲದವನು, ಪ್ರವೃತಿಃ = ಸಕಲಪ್ರವರ್ತಕನು, ಅಪ್ರವೃತ್ತಿಃ = ಪ್ರವರ್ತಕನಿಲ್ಲದವನು, ಸಪರಃ = ಪರಾ ಎಂಬ ಲಕ್ಷ್ಮಿಯಿಂದ ಸಹಿತನು, ಪರಾತ್ಮಾ = ಇದು ಪರಮಾತ್ಮನ ಲಕ್ಷಣವಾಗಿದೆ.

### ಶಬ್ದೈಕಸಮಧಿಗಮ್ಯನಲ್ಲಿ ಯುಕ್ತಿವಿರೋಧವಿಲ್ಲ

**ब्रह्मसूत्रभाष्यम् – शब्दमूलत्वाच्च न युक्तिविरोधः ।**

ಅನುವಾದ - ಪರಮಾತ್ಮನು ಶಬ್ದೈಕಸಮಧಿಗಮ್ಯನಾದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ.

ಪ್ರತಿಪದಾರ್ಥ -- ನಿರವಯವನಾದ ಪರಮಾತ್ಮನಿಗೆ ಏಕದೇಶದಿಂದ ಪ್ರವೃತ್ತ್ಯಾದಿಗಳು ಕೂಡುವುದು ಯುಕ್ತಿವಿರುದ್ಧವಾಗಿದೆ. ಇದನ್ನು ಪರಮಾತ್ಮನಲ್ಲಿ ಹೇಗೆ ಒಪ್ಪುತ್ತೀರಿ? ಯುಕ್ತಿ ವಿರುದ್ಧವಾದರೂ ಪರಮಾತ್ಮನಲ್ಲಿ ಒಪ್ಪುವುದಾದರೆ ಜೀವನಲ್ಲಿಯೂ ಕೂಡ ಅದನ್ನು ಒಪ್ಪಬಹುದಲ್ಲವೆ ಎಂದು ಆಕ್ಷೇಪ ಮಾಡಬಾರದು. ಶಬ್ದಮೂಲತ್ವಾಚ್ಚ = ಪರಮಾತ್ಮನು ಶಬ್ದೈಕಸಮಧಿಗಮ್ಯನು, ಆದ್ದರಿಂದ ಯುಕ್ತಿವಿರೋಧಃ = ಯುಕ್ತಿವಿರೋಧವು, ನ = ಇರುವುದಿಲ್ಲ.

### ಈ ವಿಷಯದಲ್ಲಿ ಪುರುಷೋತ್ತಮತಂತ್ರವು ಆಧಾರ

**ब्रह्मसूत्रभाष्यम् –**

**'यद्वाक्योक्तं न तद् युक्तिर्विरोद्धुं शक्नुयात् क्वचित् ।**
**विरोधे वाक्ययोः क्वापि किञ्चित्साहाय्यकारणम् ।।'**
**इति पुरुषोत्तमतन्त्रे ।।१।।**

ಅನುವಾದ - ಯಾವುದು ಶ್ರುತಿಯಿಂದ ಸಿದ್ಧವಾಗಿದೆಯೋ ಆ ವಿಷಯದಲ್ಲಿ ಯುಕ್ತಿಯ ವಿರೋಧವನ್ನು ಹೇಳಲು ಸಾಧ್ಯವಿಲ್ಲ. ಎರಡು ವಾಕ್ಯಗಳಿಗೆ ಪರಸ್ಪರ ವಿರೋಧ ಬಂದಾಗ

ವಿರೋಧ ಪರಿಹಾರಕ್ಕಾಗಿ ಒಂದನ್ನು ನಿರ್ಣಯಿಸಲು ಯುಕ್ತಿಯು ಸಹಾಯವನ್ನು ಕೆಲವೊಮ್ಮೆ ಮಾಡುತ್ತದೆ. ಹೀಗೆ ಪುರುಷೋತ್ತಮತಂತ್ರವು ಹೇಳಿದೆ.

ಪ್ರತಿಪದಾರ್ಥ -- ಕೇವಲ ಪರಮಾತ್ಮನು ಶಬ್ದೈಕಸಮಧಿಗಮ್ಯನಷ್ಟೇ ಅಲ್ಲ. ಯುಕ್ತಿವಿರೋಧಕ್ಕೆ ಪರಮಾತ್ಮನ ವಿಷಯದಲ್ಲಿ ಅವಕಾಶವೇ ಇಲ್ಲ. ಈ ವಿಷಯದಲ್ಲಿ ಸ್ಮೃತಿಪ್ರಮಾಣವನ್ನು ಹೇಳುತ್ತಿದ್ದಾರೆ. ಯದ್ವಾಕ್ಯೋಕ್ತಂ = ಆಗಮದಿಂದ, ಸಿದ್ಧವಾದ ಯಾತ್ = ಯಾವ ಪ್ರಮೇಯವಿದೆಯೋ, ತತ್ = ಅದನ್ನು, ಯುಕ್ತಿಃ = ಯುಕ್ತಿಯು, ವಿರೋಧೇ = ವಿರೋಧ ಮಾಡಲು, ಕ್ವಚಿತ್ = ಯಾವಾಗಲೂ, ನ ಶಕ್ನುಯಾತ್ = ಸಮರ್ಥವಾಗುವುದಿಲ್ಲ. ಕ್ವಾಪಿ = ಕೆಲವೊಮ್ಮೆ, ವಾಕ್ಯಯೋಃ = ವಾಕ್ಯಗಳಲ್ಲಿ, ವಿರೋಧೇ = ವಿರೋಧವು ಪ್ರಾಪ್ತವಾಗುತ್ತಿರಲು, ಕಿಂಚಿತ್ = ಸ್ವಲ್ಪಮಾತ್ರ, ಸಾಹಾಯ್ಯಕಾರಣಮ್ = ಸಹಾಯ ಮಾಡಲು ಅನುಕೂಲವಾಗುತ್ತದೆ. ಇತಿ = ಹೀಗೆ, ಪುರುಷೋತ್ರಮತಂತ್ರೇ = ಪುರುಷೋತ್ತಮತಂತ್ರವೆಂಬ ಗ್ರಂಥದಲ್ಲಿ ಹೇಳಲಾಗಿದೆ.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

**सत्तर्कदीपावलिः – तर्को न्यायरूपः वाक्ययोः परस्परविरोधपरिहारेण विषयव्यवस्थापनाया उपयुक्तो न स्वतन्त्रः परवस्तुनि प्रवर्तते । तदेतदाह – श्रुतिरित्यादिना ॥**

ಯಾವ ಎರಡು ಶ್ರುತಿವಾಕ್ಯಗಳಿಗೆ ಪರಸ್ಪರ ವಿರೋಧವನ್ನು ಪರಿಹಾರ ಮಾಡುವ ಮೂಲಕ ತರ್ಕವು ವಿಷಯವ್ಯವಸ್ಥಾಪನೆಗೆ ಪ್ರಯುಕ್ತವಾಗುತ್ತದೆ. ಸ್ವತಂತ್ರವಾಗಿ ತರ್ಕವು ಏನನ್ನು ಸಾಧಿಸುವುದಿಲ್ಲ. ಅಂಥ ತರ್ಕವು ಪರಮಾತ್ಮನ ವಿಷಯದಲ್ಲಿ ವಿರೋಧವನ್ನು ಪರಿಹಾರ ಮಾಡುತ್ತದೆಂಬುದನ್ನು ಸಮರ್ಥಿಸಲು 'ಶ್ರುತೇಸ್ತು' ಇತ್ಯಾದಿ ಸೂತ್ರವು ಹೊರಟಿದೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

**तत्वप्रदीपः – न चेश्वरपक्षे कृत्स्नैकदेशविकल्पेन कर्तृत्वविरोधः । श्रुतेस्तु शब्दमूलत्वात् ।। विरुद्धः = लौकिककर्तृविरुद्धलक्षणः । अविरुद्धः प्रमाणतः । अस्यान्योमन्ता नास्तीत्यमनुः । अवाक् स्वतन्त्रवक्त्रन्तररहितः । अनिन्द्रः = अन्येश्वरवर्जितः । अप्रवृत्तिः = प्रवर्तकशून्यः । आदिशब्दः शाखान्तरद्योतकः।**

ಈಶ್ವರಪಕ್ಷದಲ್ಲಿ ಪೂರ್ಣಪ್ರವೃತ್ತಿಯು, ಆಂಶಿಕಪ್ರವೃತ್ತಿಯು ಎಂಬ ವಿಕಲ್ಪದ ಮೂಲಕ ಜೀವಕರ್ತೃತ್ವಪಕ್ಷದಲ್ಲಿ ಬಂದ ವಿರೋಧಕ್ಕೆ ಅವಕಾಶವಿಲ್ಲ ಎಂಬುದನ್ನು ಉಪಪಾದನೆ ಮಾಡಲು 'ಶ್ರುತೇಸ್ತು ಶಬ್ದಮೂಲತ್ವಾತ್' ಎಂಬ ಸೂತ್ರವು ಹೊರಟಿದೆ. ಪೈಂಗಿಶ್ರುತಿಯಲ್ಲಿರುವ ವಿರುದ್ಧಶಬ್ದಕ್ಕೆ ಲೌಕಿಕಕರ್ತೃವಿನಲ್ಲಿರುವ ವಿರುದ್ಧ ಧರ್ಮಗಳು ಎಂದರ್ಥ. ಅವಿರುದ್ಧಶಬ್ದಕ್ಕೆ ಪ್ರಮಾಣಗಳಿಂದ ವಿರೋಧವಿಲ್ಲದವು ಎಂದರ್ಥ. 'ಅಮನು' ಎಂಬ ಶಬ್ದಕ್ಕೆ ಇವನನ್ನು ತಿಳಿಯುವ ಮತ್ತೊಬ್ಬನು ಇರುವುದಿಲ್ಲ ಎಂದರ್ಥ. 'ಅವಾಕ್' ಎಂಬ ಶಬ್ದಕ್ಕೆ ಸ್ವತಂತ್ರವಾಗಿ ಹೇಳುವವನು ಯಾರು ಇಲ್ಲ ಎಂದರ್ಥ. 'ಅನಿಂದ್ರ' ಶಬ್ದಕ್ಕೆ ಮತ್ತೊಬ್ಬ ಈಶ್ವರನಿಲ್ಲ ಎಂದರ್ಥ. ಅಪ್ರವೃತ್ತಿ ಶಬ್ದಕ್ಕೆ ಮತ್ತೊಬ್ಬರು ಪ್ರೇರಕರಿಲ್ಲ ಎಂದರ್ಥ. ಆದಿಶಬ್ದವು ಬೇರೆ ಶಾಖೆಯನ್ನು ಉಲ್ಲೇಖಿಸುತ್ತಿದೆ.

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

ಸಂಗತಿ, ವಿಷಯ, ಸಂದೇಹಗಳು

**तत्वप्रकाशिका – अत्र विष्णो सर्वकर्तृत्वे कृत्स्नप्रसक्त्यादियुक्तिविरोध-परिहारादस्ति शास्त्रादिसङ्गतिः । सर्वकर्तृत्वं विष्णोरुक्तम् । तस्य च**

**युक्तिविरोधे लक्षणसूत्रानुपपत्तेरवश्यमसौ निराकर्तव्यः । तत्प्रवृत्त्वं विषयः । किं विष्णोर्युक्तमयुक्तं वेति सन्देहः । उक्तन्यायो दोषदर्शनं च सन्देहबीजम्।**

ಈ ಅಧಿಕರಣದಲ್ಲಿ ವಿಷ್ಣುವೇ ಸರ್ವಕರ್ತೃ ಎಂದು ಒಪ್ಪಿದರೆ ಕೃತ್ಸ್ನಪ್ರಸಕ್ತಿ ಮೊದಲಾದ ಯುಕ್ತಿವಿರೋಧಗಳನ್ನು ಪರಿಹರಿಸಲಾಗುತ್ತದೆ. ಆದ್ದರಿಂದ ಶಾಸ್ತ್ರಾದಿಸಂಗತಿಗಳಿರುತ್ತವೆ.

ಜನ್ಮಾಧಿಕರಣದಲ್ಲಿ ಸರ್ವಕರ್ತೃತ್ವವನ್ನು ವಿಷ್ಣುವಿನಲ್ಲಿ ಹೇಳಲಾಯಿತು. ಈ ಲಕ್ಷಣಕ್ಕೆ ಯುಕ್ತಿವಿರೋಧವನ್ನು ಹೇಳಿದರೆ ಜನ್ಮಾಧಿಕರಣದಲ್ಲಿ ಹೇಳಿದ ಪ್ರಮೇಯವೇ ಅನುಪಪನ್ನವಾಗುತ್ತದೆ. ಆದ್ದರಿಂದ ಅವಶ್ಯವಾಗಿ ಈ ಯುಕ್ತಿವಿರೋಧವನ್ನು ನಿರಾಕರಣೆ ಮಾಡಲೇಬೇಕು.

ಸರ್ವಕರ್ತೃತ್ವವು ಈ ಅಧಿಕರಣದ ವಿಷಯ. ವಿಷ್ಣುವಿಗೆ ಇದು ಯುಕ್ತವಾಗುತ್ತದೋ ಇಲ್ಲವೋ ? ಎಂಬುದೇ ಈ ಅಧಿಕರಣ ಸಂಶಯ.

ಹಿಂದಿನ ಅಧಿಕರಣಗಳಲ್ಲಿ ಸಮರ್ಥಿಸಲ್ಪಟ್ಟ ಈಶ್ವರಕರ್ತೃತ್ವ ವಿಷಯಕವಾದ ನ್ಯಾಯಗಳು ಹಾಗೂ ಕೃತ್ಸ್ನಪ್ರಸಕ್ತಿ ಮೊದಲಾದ ದೋಷಗಳ ದರ್ಶನಗಳು ಸಂದೇಹಕ್ಕೆ ಬೀಜವಾಗಿವೆ.

ವಿವರಣೆ - ಟೀಕೆಯಲ್ಲಿರುವ 'ಕೃತ್ಸ್ನಪ್ರಸಕ್ತ್ಯಾದಿ' ಎಂದಿದೆ. ಇಲ್ಲಿರುವ ಆದಿಪದದಿಂದ 'ನಿರವಯವಶಬ್ದ ವ್ಯಾಕೋಪ, ಶರೀರೇಂದ್ರಿಯಾದಿರಾಹಿತ್ಯ, ಅಧಿಷ್ಠಾನಾದಿರಾಹಿತ್ಯ, ಮೊದಲಾದ ವಿರೋಧಿ ಅನೇಕ ಯುಕ್ತಿಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕು. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ 'ಬಹುಯುಕ್ತಯಃ' ಎಂಬುದನ್ನು ಈ ಅಧಿಕರಣದ ಉಪಾಧಿಯನ್ನಾಗಿ ಹೇಳಿರುತ್ತಾರೆ.

ಪ್ರಶ್ನೆ - ಆರಂಭಣಾಧಿಕರಣದಲ್ಲಿಯೇ ಅನೇಕ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಗಿದೆ. ಪುನಃ ಈ ಅಧಿಕರಣ ಏಕೆ ?

ಉತ್ತರ - ಈ ಪ್ರಶ್ನೆ ತಪ್ಪು. ಅಖಂಡನಾದ ಬ್ರಹ್ಮನಲ್ಲಿ ಏಕದೇಶಿ-ಏಕದೇಶಭಾವವೇ ವ್ಯಾಹತವಾಗುತ್ತದೆ. ಹೀಗೆ ಅತ್ಯಂತ ಪ್ರಬಲವಾದಯುಕ್ತಿ ವಿರೋಧವನ್ನು ಇಲ್ಲಿ ಆಶಂಕಿಸಿ ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಜೀವಕರ್ತೃತ್ವಪಕ್ಷದಲ್ಲಿ ಹೇಳಿದ ಕೃತ್ಸ್ನಪ್ರಸಕ್ತ್ಯಾದಿ ದೋಷವು ಈಶ್ವರಪಕ್ಷದಲ್ಲಿ ಇಲ್ಲವೆಂದು ಸಮರ್ಥಿಸುತ್ತಿದ್ದಾರೆ. ಇದರಿಂದ ಹಿಂದಿನ ಅಧಿಕರಣದಿಂದ ಆನಂತರ್ಯಸಂಗತಿಯನ್ನು ಕೂಡ ಹೇಳಿದಂತಾಯಿತು. (ವಾಕ್ಯಾರ್ಥಮುಕ್ತಾವಳಿ)

ಜೀವನಲ್ಲಿ ಬಂದ ದೋಷ ಈಶ್ವರನಲ್ಲೂ ಸಮಾನವೆಂದು ಪೂರ್ವಪಕ್ಷ

**तत्वप्रकाशिका – न युक्तमिति पूर्वः पक्षः । जीवकर्तृत्वपक्षोक्तदोषस्यात्रापि सम्भवात् । तथा हि । किमीश्वरः कार्येषु सर्वशक्त्या प्रवर्तते तदेकदेशेन वा। नाद्यः । तृणादानादावपि कृत्स्नप्रसक्तेः । न द्वितीयः । नेह नानास्ति किञ्चन' इत्यादि श्रुतिव्याकोपात् । न हि वक्तुं युक्तमयं दोषो जीवपक्ष एव नेश्वरपक्ष इति। ईश्वरे तदस्पर्शानिमित्तस्य जीवादतिशयस्यादर्शनात् । विशेषमन्तरेणापि दोषास्पर्शे किं जीवेनापराद्धम् ।**

ಸರ್ವಕರ್ತೃತ್ವವು ವಿಷ್ಣುವಿನಲ್ಲಿ ಯುಕ್ತವಲ್ಲವೆಂಬುದು ಈ ಅಧಿಕರಣದ ಪೂರ್ವಪಕ್ಷ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಜೀವಕರ್ತೃತ್ವಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳೆಲ್ಲವೂ ವಿಷ್ಣುವಿನ ವಿಷಯದಲ್ಲೂ ಸಮಾನವಾಗಿವೆ. ಅದು ಹೀಗೆ - ಈಶ್ವರನು ಎಲ್ಲಾ ಕಾರ್ಯಗಳಲ್ಲಿ ಸಮಸ್ತ ಶಕ್ತಿಯನ್ನು ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ ಅಥವಾ ತನ್ನ ಶಕ್ತಿಯ ಏಕದೇಶವನ್ನಷ್ಟೇ ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ? ಪ್ರಥಮಪಕ್ಷವು ಅಯುಕ್ತವಾಗಿದೆ. ಹುಲ್ಲು ಮೊದಲಾದವುಗಳನ್ನು ಎತ್ತುವಾಗಲೂ ಈಶ್ವರನು ಸಮಸ್ತ ಶಕ್ತಿಯನ್ನು ಉಪಯೋಗಿಸುತ್ತಾನೆಂದು ಹೇಳಬೇಕಾಗುತ್ತದೆ.

ಎರಡನೆಯ ಪಕ್ಷವು ತಪ್ಪು. 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಯು ಈಶ್ವರನ ಗುಣ ಅವಯವ ಮೊದಲಾದವುಗಳಲ್ಲಿ ಭೇದವಿಲ್ಲವೆಂದು ಹೇಳುತ್ತಿದೆ. ಇದರ ವಿರೋಧವು ಬರುತ್ತದೆ.

ಜೀವಪಕ್ಷದಲ್ಲಿ ಬರುವ ದೋಷವು ಈಶ್ವರಪಕ್ಷದಲ್ಲಿ ಬರುವುದಿಲ್ಲವೆಂದು ಹೇಳಬೇಕು. ಆದರೆ ಈಶ್ವರನಲ್ಲಿ ಜೀವಪಕ್ಷದಲ್ಲಿ ಬರುವ ದೋಷಗಳ ಸ್ಪರ್ಶ ಇಲ್ಲ ಎಂಬುದಕ್ಕೆ ಯಾವುದೇ ನಿಮಿತ್ತವು ಕಾಣುವುದಿಲ್ಲ. ಮತ್ತು ಜೀವನಲ್ಲಿಲ್ಲದ ಯಾವುದೇ ಅತಿಶಯವೂ ಕೂಡ ಈಶ್ವರನಲ್ಲಿ ಕಾಣಸುತ್ತಿಲ್ಲ. ಹೀಗೆ ಯಾವುದೇ ವಿಶೇಷ ಇಲ್ಲದಿದ್ದರೂ ಈಶ್ವರನ ಪಕ್ಷದಲ್ಲಿ ದೋಷಗಳ ಸಂಪರ್ಕ ಆಗುವುದಿಲ್ಲ ಎಂದು ಹೇಳಿದರೆ ಆಗ ಜೀವನೇ ಸ್ವತಂತ್ರಕರ್ತೃ ಎಂದು ಹೇಳಿದಾಗ ಜೀವನೇನು ಅಪರಾಧ ಮಾಡಿದ್ದಾನೆ ?

ವಿವರಣೆ - ಪರಮಾತ್ಮನು ಸಮಸ್ತ ಬ್ರಹ್ಮಾಂಡವನ್ನು ನಿರ್ಮಾಣ ಮಾಡುವಾಗ ಎಷ್ಟು ಶಕ್ತಿಯನ್ನು ಉಪಯೋಗಿಸುತ್ತಾನೋ ಅಷ್ಟು ಶಕ್ತಿಯನ್ನು ಒಂದು ಹುಲ್ಲನ್ನು ನಿರ್ಮಾಣ ಮಾಡುವಾಗ ಉಪಯೋಗಿಸುವುದಿಲ್ಲ. ಆದ್ದರಿಂದ ಎಲ್ಲಾ ಕಾರ್ಯಗಳನ್ನು ಈಶ್ವರನು ಒಂದೇ ವಿಧವಾದ ಶಕ್ತಿಯನ್ನು ಉಪಯೋಗಿಸುತ್ತಾನೆಂಬುದು ತಪ್ಪು. ಶಕ್ತಿಯ ಏಕದೇಶವನ್ನು ಉಪಯೋಗಿಸುತ್ತಾನೆಂದು ಹೇಳಿದರೆ ಭಗವಂತನಲ್ಲಿರುವ ಯಾವುದೇ ಗುಣಕ್ರಿಯಾದಿಗಳಿಗೆ ಭೇದವಿಲ್ಲವೆಂಬ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯ ವಿರೋಧ ಬರುತ್ತದೆ.

'ಆತ್ಮನಿ ಚೈವಮ್' ಇತ್ಯಾದಿಯಾದ ಸೂತ್ರದಿಂದ ಪರಿಹಾರವಾಗುವ 'ವಿಶೇಷದರ್ಶನಂ' ಎಂಬ ಹಿಂದಿನ ಪೂರ್ವಪಕ್ಷವನ್ನು 'ನ ಹಿ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ.

ಹಿಂದಿನ ಅಧಿಕರಣದ ಪ್ರಮೇಯವು ಅಯುಕ್ತವೆಂದು ಪೂರ್ವಪಕ್ಷದ ಉಪಸಂಹಾರ

**तत्वप्रकाशिका – एतेन जीवस्येऽश्वराधीनकर्तृत्वाङ्गीकारेण कृत्स्नप्रसक्त्यादिदोषपरिहारः प्रागुक्तोऽप्ययुक्तः । अतो युक्तिविरोधान्न विष्णोर्जगत्कर्तृत्वलक्षणं युक्तमिति प्राप्ते सिद्धान्तयत्सूत्रमुपन्यस्य व्याचष्टे – श्रुतेरिति ।।**

ಹೀಗೆ ಹೇಳಿದ್ದರಿಂದ ಜೀವನು ಈಶ್ವರಾಧೀನಕರ್ತೃತ್ವವುಳ್ಳವನೆಂದು ಅಂಗೀಕರಿಸಿ ಕೃತ್ಸ್ನಪ್ರಸಕ್ತ್ಯಾದಿ ದೋಷಪರಿಹಾರವನ್ನು ಹಿಂದೆ ಮಾಡಿದ್ದು ಯುಕ್ತವಾಯಿತು. ಹೀಗೆ ಯುಕ್ತಿವಿರೋಧ ಇರುವುದರಿಂದ ವಿಷ್ಣುವಿಗೆ ಜಗತ್‌ಕರ್ತೃತ್ವಲಕ್ಷಣವು ಅಯುಕ್ತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತವನ್ನು ಸ್ಥಾಪನೆ ಮಾಡುವ ಮೂಲಕ ಸೂತ್ರವನ್ನು ಪಠಿಸಿ 'ಶ್ರುತೇಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಟೀಕೆಯಲ್ಲಿರುವ 'ಏತೇನ' ಎಂಬ ಪದಕ್ಕೆ ಜೀವನಲ್ಲಿ ಇಲ್ಲದೇ ಇರುವ ಯಾವುದೇ ವಿಶೇಷ ಈಶ್ವರನಲ್ಲೂ ಇಲ್ಲದೇ ಇರುವುದರಿಂದಲೇ ಎಂದರ್ಥ. ಇದರಿಂದ ಹಿಂದಿನ ಅಧಿಕರಣದ ಪ್ರಮೇಯವನ್ನು ನಿರಾಕರಣೆ ಮಾಡಿದಂತಾಯಿತು. ಜೀವ ಹಾಗೂ ಈಶ್ವರರಿಬ್ಬರೂ ಸಮಾನರಾಗಿರುವುದರಿಂದ ಈಶ್ವಾರಾಧೀನ್ಯವನ್ನು ಜೀವನಲ್ಲಿ ಅಂಗೀಕರಿಸಿ ಕೃತ್ಸ್ನಪ್ರಸಕ್ತ್ಯಾದಿ ದೋಷಗಳ ಪರಿಹಾರವನ್ನು ಮಾಡಲು ಸಾಧ್ಯವಿಲ್ಲವೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

ಜೀವನಲ್ಲಿ ಬಂದ ದೋಷ ಈಶ್ವರನಲ್ಲೂ ಸಮಾನವೆಂದು ಪೂರ್ವಪಕ್ಷ

**तत्वप्रकाशिका – न युक्तमिति पूर्वः पक्षः । जीवकर्तृत्वपक्षोक्तदोषस्यात्रापि सम्भवात् । तथा हि । किमीश्वरः कार्येषु सर्वशक्त्या प्रवर्तते तदेकदेशेन वा। नाद्यः । तृणादानादावपि कृत्स्नप्रसक्तेः । न द्वितीयः । नेह नानास्ति किञ्चन' इत्यादि श्रुतिव्याकोपात् । न हि वक्तुं युक्तमयं दोषो जीवपक्ष एव नेश्वरपक्ष इति। ईश्वरे तदस्पर्शानिमित्तस्य जीवादतिशयस्यादर्शनात् । विशेषमन्तरेणापि दोषास्पर्शे किं जीवेनापराद्धम् ।**

ಸರ್ವಕರ್ತೃತ್ವವು ವಿಷ್ಣುವಿನಲ್ಲಿ ಯುಕ್ತವಲ್ಲವೆಂಬುದು ಈ ಅಧಿಕರಣದ ಪೂರ್ವಪಕ್ಷ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಜೀವಕರ್ತೃತ್ವಪಕ್ಷದಲ್ಲಿ ಹೇಳಲ್ಪಟ್ಟ ದೋಷಗಳೆಲ್ಲವೂ ವಿಷ್ಣುವಿನ ವಿಷಯದಲ್ಲೂ ಸಮಾನವಾಗಿವೆ. ಅದು ಹೀಗೆ - ಈಶ್ವರನು ಎಲ್ಲಾ ಕಾರ್ಯಗಳಲ್ಲಿ ಸಮಸ್ತ ಶಕ್ತಿಯನ್ನು ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ ಅಥವಾ ತನ್ನ ಶಕ್ತಿಯ ಏಕದೇಶವನ್ನಷ್ಟೇ ಉಪಯೋಗಿಸಿ ಪ್ರವೃತ್ತಿ ಮಾಡುತ್ತಾನೋ? ಪ್ರಥಮಪಕ್ಷವು ಅಯುಕ್ತವಾಗಿದೆ. ಹುಲ್ಲು ಮೊದಲಾದವುಗಳನ್ನು ಎತ್ತುವಾಗಲೂ ಈಶ್ವರನು ಸಮಸ್ತ ಶಕ್ತಿಯನ್ನು ಉಪಯೋಗಿಸುತ್ತಾನೆಂದು ಹೇಳಬೇಕಾಗುತ್ತದೆ.

ಎರಡನೆಯ ಪಕ್ಷವು ತಪ್ಪು. 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಯು ಈಶ್ವರನ ಗುಣ ಅವಯವ ಮೊದಲಾದವುಗಳಲ್ಲಿ ಭೇದವಿಲ್ಲವೆಂದು ಹೇಳುತ್ತಿದೆ. ಇದರ ವಿರೋಧವು ಬರುತ್ತದೆ.

ಜೀವಪಕ್ಷದಲ್ಲಿ ಬರುವ ದೋಷವು ಈಶ್ವರಪಕ್ಷದಲ್ಲಿ ಬರುವುದಿಲ್ಲವೆಂದು ಹೇಳಬೇಕು. ಆದರೆ ಈಶ್ವರನಲ್ಲಿ ಜೀವಪಕ್ಷದಲ್ಲಿ ಬರುವ ದೋಷಗಳ ಸ್ಪರ್ಶ ಇಲ್ಲ ಎಂಬುದಕ್ಕೆ ಯಾವುದೇ ನಿಮಿತ್ತವು ಕಾಣುವುದಿಲ್ಲ. ಮತ್ತು ಜೀವನಲ್ಲಿಲ್ಲದ ಯಾವುದೇ ಅತಿಶಯವೂ ಕೂಡ ಈಶ್ವರನಲ್ಲಿ ಕಾಣಿಸುತ್ತಿಲ್ಲ. ಹೀಗೆ ಯಾವುದೇ ವಿಶೇಷ ಇಲ್ಲದಿದ್ದರೂ ಈಶ್ವರನ ಪಕ್ಷದಲ್ಲಿ ದೋಷಗಳ ಸಂಪರ್ಕ ಆಗುವುದಿಲ್ಲ ಎಂದು ಹೇಳಿದರೆ ಆಗ ಜೀವನೇ ಸ್ವತಂತ್ರಕರ್ತೃ ಎಂದು ಹೇಳಿದಾಗ ಜೀವನೇನು ಅಪರಾಧ ಮಾಡಿದ್ದಾನೆ ?

ವಿವರಣೆ - ಪರಮಾತ್ಮನು ಸಮಸ್ತ ಬ್ರಹ್ಮಾಂಡವನ್ನು ನಿರ್ಮಾಣ ಮಾಡುವಾಗ ಎಷ್ಟು ಶಕ್ತಿಯನ್ನು ಉಪಯೋಗಿಸುತ್ತಾನೋ ಅಷ್ಟು ಶಕ್ತಿಯನ್ನು ಒಂದು ಹುಲ್ಲನ್ನು ನಿರ್ಮಾಣ ಮಾಡುವಾಗ ಉಪಯೋಗಿಸುವುದಿಲ್ಲ. ಆದ್ದರಿಂದ ಎಲ್ಲಾ ಕಾರ್ಯಗಳನ್ನು ಈಶ್ವರನು ಒಂದೇ ವಿಧವಾದ ಶಕ್ತಿಯನ್ನು ಉಪಯೋಗಿಸುತ್ತಾನೆಂಬುದು ತಪ್ಪು. ಶಕ್ತಿಯ ಏಕದೇಶವನ್ನು ಉಪಯೋಗಿಸುತ್ತಾನೆಂದು ಹೇಳಿದರೆ ಭಗವಂತನಲ್ಲಿರುವ ಯಾವುದೇ ಗುಣಕ್ರಿಯಾದಿಗಳಿಗೆ ಭೇದವಿಲ್ಲವೆಂಬ 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯ ವಿರೋಧ ಬರುತ್ತದೆ.

'ಆತ್ಮನಿ ಚೈವಮ್' ಇತ್ಯಾದಿಯಾದ ಸೂತ್ರದಿಂದ ಪರಿಹಾರವಾಗುವ 'ವಿಶೇಷದರ್ಶನಂ' ಎಂಬ ಹಿಂದಿನ ಪೂರ್ವಪಕ್ಷವನ್ನು 'ನ ಹಿ' ಇತ್ಯಾದಿಯಾಗಿ ಸಮರ್ಥಿಸುತ್ತಿದ್ದಾರೆ.

**ಹಿಂದಿನ ಅಧಿಕರಣದ ಪ್ರಮೇಯವು ಅಯುಕ್ತವೆಂದು ಪೂರ್ವಪಕ್ಷದ ಉಪಸಂಹಾರ**

**तत्वप्रकाशिका – एतेन जीवस्येऽश्वराधीनकर्तृत्वाङ्गीकारेण कृत्स्नप्रसक्त्यादि-दोषपरिहारः प्रागुक्तोऽप्ययुक्तः । अतो युक्तिविरोधान्न विष्णोर्जगत्कर्तृत्वलक्षणं युक्तमिति प्राप्ते सिद्धान्तयत्सूत्रमुपन्यस्य व्याचष्टे – श्रुतेरिति ।।**

ಹೀಗೆ ಹೇಳಿದ್ದರಿಂದ ಜೀವನು ಈಶ್ವರಾಧೀನಕರ್ತೃತ್ವವುಳ್ಳವನೆಂದು ಅಂಗೀಕರಿಸಿ ಕೃತ್ಸ್ನಪ್ರಸಕ್ತ್ಯಾದಿ ದೋಷಪರಿಹಾರವನ್ನು ಹಿಂದೆ ಮಾಡಿದ್ದು ಯುಕ್ತವಾಯಿತು. ಹೀಗೆ ಯುಕ್ತಿವಿರೋಧ ಇರುವುದರಿಂದ ವಿಷ್ಣುವಿಗೆ ಜಗತ್‌ಕರ್ತೃತ್ವಲಕ್ಷಣವು ಅಯುಕ್ತವಾಗುತ್ತದೆ. ಇಷ್ಟು ಅಧಿಕರಣದ ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುವ ಸಿದ್ಧಾಂತವನ್ನು ಸ್ಥಾಪನೆ ಮಾಡುವ ಮೂಲಕ ಸೂತ್ರವನ್ನು ಪಠಿಸಿ 'ಶ್ರುತೇಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಟೀಕೆಯಲ್ಲಿರುವ 'ಏತೇನ' ಎಂಬ ಪದಕ್ಕೆ ಜೀವನಲ್ಲಿ ಇಲ್ಲದೇ ಇರುವ ಯಾವುದೇ ವಿಶೇಷ ಈಶ್ವರನಲ್ಲೂ ಇಲ್ಲದೇ ಇರುವುದರಿಂದಲೇ ಎಂದರ್ಥ. ಇದರಿಂದ ಹಿಂದಿನ ಅಧಿಕರಣದ ಪ್ರಮೇಯವನ್ನು ನಿರಾಕರಣೆ ಮಾಡಿದಂತಾಯಿತು. ಜೀವ ಹಾಗೂ ಈಶ್ವರರಿಬ್ಬರೂ ಸಮಾನರಾಗಿರುವುದರಿಂದ ಈಶ್ವಾರಾಧೀನ್ಯವನ್ನು ಜೀವನಲ್ಲಿ ಅಂಗೀಕರಿಸಿ ಕೃತ್ಸ್ನಪ್ರಸಕ್ತ್ಯಾದಿ ದೋಷಗಳ ಪರಿಹಾರವನ್ನು ಮಾಡಲು ಸಾಧ್ಯವಿಲ್ಲವೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

### ಲೋಕವಿರುದ್ಧವಾದದ್ದು ಈಶ್ವರನಲ್ಲಿ ಅವಿರುದ್ಧ

**तत्वप्रकाशिका – नेश्वरकर्तृत्वे युक्तिविरोधः । 'योऽसौ विरुद्धः' इत्यादि श्रुतो लोकविरुद्धधर्माणामीश्वरेऽविरुद्धतयाऽवस्थानोक्तेः ।**

ಈಶ್ವರನಿಗೆ ಕರ್ತೃತ್ವವನ್ನು ಒಪ್ಪದಿದ್ದರೆ ಕೃತ್ಸ್ನಪ್ರಸಕ್ತಿಗಳ ವಿರೋಧವು ಪ್ರಾಪ್ತವಾಗುತ್ತದೆಂದು ಹೇಳಿದ್ದು ಅಯುಕ್ತವಾಗಿದೆ. ಏಕೆಂದರೆ 'ಯೋऽಸೌ ವಿರುದ್ಧಃ' ಇತ್ಯಾದಿ ಶ್ರುತಿಯಲ್ಲಿ ಲೋಕವಿರುದ್ಧವಾದ ಧರ್ಮಗಳು ಈಶ್ವರನಲ್ಲಿ ಅವಿರುದ್ಧವಾಗಿರುತ್ತವೆಂದು ಹೇಳಲಾಗಿದೆ.

ವಿವರಣೆ - 'ಯೋऽಸೌ ವಿರುದ್ಧಃ' ಎಂಬ ಶ್ರುತಿಯು ಲೋಕದೃಷ್ಟಿಯಿಂದ ವಿರುದ್ಧವಾದದ್ದು ಪರಮಾತ್ಮನಲ್ಲಿ ಅವಿರುದ್ಧವಾಗಿರುತ್ತದೆಂದು ಹೇಳುತ್ತಿದೆ. ಆದ್ದರಿಂದ ಶ್ರುತಿಸಿದ್ಧವಾದ ವಿಷಯದಲ್ಲಿ ಯುಕ್ತಿವಿರೋಧವು ಅಪ್ರಯೋಜಕ ಎಂಬುದು ಸಿದ್ಧಾಂತದ ಅಭಿಪ್ರಾಯ.

### ಶಬ್ದೈಕಸಮಧಿಗಮ್ಯತ್ವ ಎಂಬ ಅಸಾಧಾರಣಧರ್ಮ ಪರಮಾತ್ಮನಲ್ಲಿ ಮಾತ್ರ

**तत्वप्रकाशिका – ननु श्रुत्युक्तत्वेऽपि युक्तिविरुद्धं कथमुपैतुं शक्यम् । अन्यथा जीवेऽपि प्रत्यक्षबलादभ्युपगन्तव्यमविशेषादिति चेत् । मैवम् । भवेज्जीवप्रतिबन्द्येश्वरे युक्तिविरोधा यदि विशेषाभावो भवेत् । न चैवं शब्दैकसमधिगम्यत्वस्य युक्तिविरोधपरिहारोपयोगिनः परमेश्वरे श्रुत्यादिसिद्धत्वाज्जीवे तदभावात् ।**

ಶ್ರುತಿಯಲ್ಲಿ ಹೇಳಿದ್ದರೂ ಕೂಡ ಯುಕ್ತಿವಿರುದ್ಧವಾದದ್ದನ್ನು ಸ್ವೀಕರಿಸಲು ಹೇಗೆ ಸಾಧ್ಯವಾಗುತ್ತದೆ? ಒಂದುವೇಳೆ ಯುಕ್ತಿವಿರುದ್ಧವಾದದ್ದನ್ನು ಸ್ವೀಕರಿಸುವುದಾದರೆ ಜೀವನಲ್ಲೂ ಕೂಡ ಪ್ರತ್ಯಕ್ಷ ಪ್ರಮಾಣದಿಂದ ಸ್ವತಂತ್ರಕರ್ತೃತ್ವವು ಸಿದ್ಧವಾಗಿದೆ. ಯಾವುದೇ ವೈಲಕ್ಷಣ್ಯ ಇಲ್ಲದ್ದರಿಂದ ಇದನ್ನು ಕೂಡ ಅಂಗೀಕರಿಸಬೇಕಾದೀತು.

ಈ ಆಕ್ಷೇಪ ತಪ್ಪು. ಜೀವಪ್ರತಿಬಂಧಿಯಿಂದ ಈಶ್ವರನಲ್ಲಿ ಯುಕ್ತಿವಿರೋಧವನ್ನು ಹೇಳಬಹುದಿತ್ತು. ಯಾವಾಗ ಎಂದರೆ ಈಶ್ವರನಲ್ಲಿ ಯಾವುದೇ ವಿಶೇಷ ಇಲ್ಲ ಎಂದಾಗಿದ್ದಲ್ಲಿ.

ಆದರೆ 'ಶಬ್ದೈಕಸಮಧಿಗಮ್ಯತ್ವ' ಎಂಬ ಅಸಾಧಾರಣಧರ್ಮ ಇರುವುದರಿಂದ ಯುಕ್ತಿವಿರೋಧದ ಪರಿಹಾರಕ್ಕೆ ಉಪಯೋಗಿಯಾದ ಧರ್ಮವು ಪರಮಾತ್ಮನಲ್ಲಿ ಶ್ರುತ್ಯಾದಿಗಳಿಂದಲೇ ಸಿದ್ಧವಾಗಿದೆ. ಇಂಥ 'ಶಬ್ದೈಕಸಮಧಿಗಮ್ಯತ್ವ' ಎಂಬ ಅಸಾಧಾರಣಧರ್ಮವು ಜೀವನಲ್ಲಿ ಸರ್ವಥಾ ಇರುವುದಿಲ್ಲ.

ವಿವರಣೆ - ಸೂತ್ರದಲ್ಲಿರುವ 'ತು' ಎಂಬ ಶಬ್ದವು ಜೀವನಲ್ಲಿಲ್ಲದ ಶಬ್ದೈಕಸಮಧಿಗಮ್ಯತ್ವ ಎಂಬ ಧರ್ಮ ಪರಮಾತ್ಮನಲ್ಲಿದೆ ಎಂಬ ವೈಶಿಷ್ಟ್ಯವನ್ನು ಹೇಳುತ್ತಿದೆ.

ಸೂತ್ರದಲ್ಲಿರುವ 'ಶ್ರುತೇಃ' ಎಂಬ ಪದವನ್ನು ಆವೃತ್ತಿ ಮಾಡಬೇಕು. ಮೊದಲ ಶಬ್ದಕ್ಕೆ 'ಶ್ರುತೇಃ' ಎಂಬುದಕ್ಕೆ ಲೋಕವಿರುದ್ಧವಾದ ಧರ್ಮಗಳು ಈಶ್ವರನಲ್ಲಿ ಅವಿರುದ್ಧವಾಗಿವೆ ಎಂಬುದು ಶ್ರುತಿಸಿದ್ಧವಾಗಿದೆ ಎಂದರ್ಥ. ಎರಡನೆಯ 'ಶ್ರುತೇಃ' ಎಂಬುದಕ್ಕೆ ಶಬ್ದೈಕಸಮಧಿಗಮ್ಯತ್ವವು ಶ್ರುತಿಸಿದ್ಧವಾಗಿದೆ ಎಂದರ್ಥ. (ವಾಕ್ಯಾರ್ಥಮುಕ್ತಾವಳಿ)

### ಶಬ್ದೈಕಸಮಧಿಗಮ್ಯನಾದವನಲ್ಲಿ ಯುಕ್ತಿವಿರೋಧವಿಲ್ಲ

**तत्वप्रकाशिका – न हि शब्दैकसमधिगम्यवस्तुनि युक्तिविरोधः । यथा प्रत्यक्षाविषये न प्रत्यक्षविरोध इति भावः । विरुद्धौ लोकदृष्ट्या । अविरुद्धः प्रमाणैः । न मन्ता वदता स्वामी प्रवर्तको यस्यासौ तथोक्तः । शब्दैकसमधिगम्ये न युक्तिविरोध इत्यत्र स्मृतिं चाह – यदिति ।।**

ಶಬ್ದದಿಂದ ಮಾತ್ರ ತಿಳಿಯಲು ಯೋಗ್ಯವಾದ ವಸ್ತುವಿನಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡಬಾರದು. ಹೇಗೆ ಪ್ರತ್ಯಕ್ಷಕ್ಕೆ ವಿಷಯವಾಗದೆ ಇರುವ ವಸ್ತುವಿನಲ್ಲಿ ಪ್ರತ್ಯಕ್ಷದ ವಿರೋಧವನ್ನು ಆಕ್ಷೇಪ ಮಾಡಬಾರದೋ, ಅದರಂತೆ - 'ಯೋಽಸೌ ವಿರುದ್ಧಃ' ಎಂದು ಭಾಷ್ಯದಲ್ಲಿ ಉದಾಹರಿಸಿದ ಪೈಂಗಿಶ್ರುತಿಯ ಅಭಿಪ್ರಾಯ ಹೀಗಿದೆ - ಲೋಕದೃಷ್ಟಿಯಿಂದ ವಿರುದ್ಧವಾದ ಧರ್ಮಗಳು ಪ್ರಮಾಣಗಳಿಂದ ಪರಮಾತ್ಮನಲ್ಲಿ ಅವಿರುದ್ಧವಾಗಿರುತ್ತದೆ ಎಂದು. ಈ ಶ್ರುತಿಯಲ್ಲಿ 'ಅಮನುಃ' ಎಂಬ ಪದಕ್ಕೆ ಪೂರ್ಣವಾಗಿ ಮನನ ಮಾಡಲು ಸಾಧ್ಯವಿಲ್ಲ ಎಂದರ್ಥ. 'ಅವಾಕ್' ಎಂಬ ಪದಕ್ಕೆ ಪೂರ್ಣವಾಗಿ ಹೇಳಲು ಸಾಧ್ಯವಿಲ್ಲದವನು ಎಂದರ್ಥ 'ಅನಿಂದ್ರಃ' ಎಂಬ ಪದಕ್ಕೆ ಮತ್ತೊಬ್ಬ ಸ್ವಾಮಿ ಇಲ್ಲದವನು ಎಂದರ್ಥ. 'ಅಪ್ರವೃತ್ತಿಃ' ಎಂಬ ಪದಕ್ಕೆ ಇವನಿಗೆ ಮತ್ತೊಬ್ಬ

ಪ್ರವರ್ತಕ ಇಲ್ಲ ಎಂದರ್ಥ. ಶಬ್ದೈಕಸಮಧಿಗಮ್ಯನಾದವನಲ್ಲಿ ಯುಕ್ತಿವಿರೋಧವಿಲ್ಲ ಎಂಬ ವಿಷಯಕ್ಕೆ ಸ್ಮೃತಿಸಮ್ಮತಿಯನ್ನು 'ಯತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**ವಿವರಣೆ** - 'ಯೋऽಸೌ' ಎಂಬ ಶ್ರುತಿಯಲ್ಲಿ 'ಅಮನುಃ' ಎಂಬುದಕ್ಕೆ 'ನ ವಿದ್ಯತೇ ಮಂತಾ ಯಸ್ಯ ಸಃ' ಎಂಬ ವ್ಯುತ್ಪತ್ತಿಯಿಂದ ಪೂರ್ಣವಾಗಿ ಮನನ ಮಾಡಲು ಸಾಧ್ಯವಿಲ್ಲದವನು ಎಂದರ್ಥ. 'ಅವಾಕ್' ಎಂಬ ಪದಕ್ಕೆ 'ನ ವಿದ್ಯತೇ ವಕ್ತಾ ಯಸ್ಯ ಸಃ ಅವಾಕ್' ಎಂಬ ವಿಗ್ರಹವನ್ನು 'ಅನಿಂದ್ರಃ' ಎಂಬ ಪದಕ್ಕೆ 'ನ ವಿಂದ್ಯತೇ ಇಂದ್ರಃ ಯಸ್ಯ ಸಃ' ಎಂಬ ವಿಗ್ರಹವನ್ನು, 'ಅಪ್ರವೃತ್ತಿಃ' ಎಂಬುದಕ್ಕೆ 'ನ ವಿದ್ಯತೇ ಪ್ರವೃತ್ತಿಃ, ಯಸ್ಯ ಸಃ' ಎಂಬ ವಿಗ್ರಹವನ್ನು ವಿವಕ್ಷಿಸಿ ಯಾರಿಂದಲೂ ಪೂರ್ಣವಾಗಿ ಹೇಳಿಸಿಕೊಳ್ಳಲು ಅನರ್ಹನಾದವನು, ಮತ್ತೊಬ್ಬ ಸ್ವಾಮಿ ಇಲ್ಲದವನು, ಮತ್ತೊಬ್ಬ ಪ್ರವರ್ತಕನಿಲ್ಲದವನು ಎಂಬರ್ಥವನ್ನು ವಿವಕ್ಷಿಸಬೇಕು. (ವಾಕ್ಯಾರ್ಥಮುಕ್ತಾವಳಿ)

ಅಣುತ್ವ ಮಹತ್ವಗಳು ಒಂದೇ ವಸ್ತುವಿನಲ್ಲಿ ಲೋಕದೃಷ್ಟಿಯಿಂದ ಸಿದ್ಧವಾಗಿವೆ. ಆದರೆ 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ವೇದವಾಕ್ಯವು ಹೇಳುವಂತೆ ಪರಮಾತ್ಮನಲ್ಲಿ ಅಣುತ್ವ ಮಹತ್ವಗಳೆರಡು ವಿರುದ್ಧವಾಗಿವೆ. ಹೀಗೆ ಉಳಿದದ್ದನ್ನು ಕೂಡ ತಿಳಿಯಬೇಕು. (ಗುರ್ವರ್ಥದೀಪಿಕಾ)

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

### ಜೀವನಿಗೆ ಬಂದ ದೋಷ ಬ್ರಹ್ಮನಿಗೆ ಬರುವುದಿಲ್ಲವೇ.

**भावदीपः** –॥ श्रुतेस्तु शब्दमूलत्वात् ॥ २८ ॥ नच ईश्वरपक्षेऽयं विरोध इति भाष्यानुरोधादाह – **कृत्स्नप्रसक्त्यादीति**॥ निरवयवत्वमादिपदार्थः॥ **युक्तीति**॥ व्याघातपर्यवसायियुक्तीत्यर्थः। एतच्चिन्तायाः सङ्गतिसाफल्ये वक्ति– **सर्वकर्तृत्वमिति**॥ न चेश्वरपक्षेऽयं विरोध इति भाष्यं नञ्परित्यागेन व्याचष्टे– **जीवकर्तृत्वेति**॥ **कृत्स्नप्रसक्तेरिति**॥ न चेष्टापत्तिः। प्रेक्षावत्त्वभङ्गप्रसङ्गादिति भावः।

'ಈಶ್ವರಪಕ್ಷೇ ಅಯಂ ವಿರೋಧಃ' - 'ಈಶ್ವರಪಕ್ಷದಲ್ಲಿ ಈ ವಿರೋಧವು ಬರುತ್ತದೆ' ಎಂಬ ಭಾಷ್ಯಕ್ಕೆ ಅನುಗುಣವಾಗಿ 'ಕೃತ್ಸ್ನಪ್ರಸಕ್ತ್ಯಾದಿ' ಇತ್ಯಾದಿ ಟೀಕೆ ಹೊರಟಿದೆ. ಇಲ್ಲಿರುವ 'ಆದಿ'ಪದದಿಂದ ನಿರವಯವತ್ವಶ್ರುತಿಯನ್ನು ಸ್ವೀಕರಿಸಬೇಕು. ಯುಕ್ತಿಯೆಂದರೆ ವ್ಯಾಘಾತಪರ್ಯವಸಾಯಿಯಾದ ಯುಕ್ತಿ ಎಂದರ್ಥ.

ಈ ಅಧಿಕರಣದಲ್ಲಿ ಮಾಡಲ್ಪಟ್ಟ ವಿಚಾರಕ್ಕೆ ಸಂಗತಿ ಮತ್ತು ಸಾಫಲ್ಯವನ್ನು ಹೇಳಲು ಸರ್ವಕರ್ತೃತ್ವಂ ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ನ ಚ ಈಶ್ವರಪಕ್ಷೇಽಯಂ ವಿರೋಧಃ' ಎಂಬ ಭಾಷ್ಯದ ವಾಕ್ಯದಲ್ಲಿರುವ ನಞ್ ಪರಿತ್ಯಾಗ ಮಾಡಿ ವ್ಯಾಖ್ಯಾನ ಮಾಡಲು 'ಜೀವಕರ್ತೃತ್ವ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಕೃತ್ಸ್ನಪ್ರಸಕ್ತಿದೋಷವು ಈಶ್ವರನಲ್ಲಿ ಬರಬೇಕೆಂದು ಹೇಳಿದ್ದಾರೆ. ಇದನ್ನು ಇಷ್ಟಾಪತ್ತಿ ಎನ್ನಲಾಗದು. ಹಾಗಾದಲ್ಲಿ ಪ್ರೇಕ್ಷಾವತ್ವವೇ ಭಂಗವಾಗುವ ಪ್ರಸಂಗ ಬರುತ್ತದೆ.

ವಿವರಣೆ - 'ಕೃತ್ಸ್ನಪ್ರಸಕ್ತ್ಯಾದಿಯುಕ್ತಿವಿರೋಧಪರಿಹಾರಾತ್' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಈ ಮಾತು 'ಈಶ್ವರಪಕ್ಷೇ ಅಯಂ ವಿರೋಧಃ' ಎಂಬ ಭಾಷ್ಯಕ್ಕೆ ವ್ಯಾಖ್ಯಾನರೂಪವಾಗಿದೆ. ವಿಷ್ಣುವು ಸರ್ವಕರ್ತೃವಾದರೆ ಹಿಂದಿನ ಅಧಿಕರಣದಲ್ಲಿ ಜೀವನಿಗೆ ಹೇಳಲ್ಪಟ್ಟ ಕೃತ್ಸ್ನಪ್ರಸಕ್ತಿದೋಷ ಹಾಗೂ ನಿರವಯತ್ವದೋಷವು ವಿಷ್ಣುವಿಗೂ ಕೂಡ ಸಮಾನವಾಗುತ್ತದೆಂದು ಈ ಅಧಿಕರಣದಲ್ಲಿ ಆಕ್ಷೇಪ ಮಾಡಲಾಗುತ್ತಿದೆ. ಇಂತಹ ಕೃತ್ಸ್ನಪ್ರಸಕ್ತಿ ಹಾಗೂ ನಿರವಯವತ್ವದೋಷಗಳು ವ್ಯಾಘಾತಪರ್ಯವಸಾಯಿಯಾಗಿವೆ. ಅದು ಹೀಗೆ – ಅಖಂಡನಾದ ಈಶ್ವರನಲ್ಲಿ ಏಕದೇಶಏಕದೇಶೀಭಾವವನ್ನು ಒಪ್ಪುವುದು ವ್ಯಾಹತವಾಗುತ್ತದೆ. ಹೀಗೆ ವ್ಯಾಘಾತಪರ್ಯವಸಾಯಿಯಾದ ಅತ್ಯಂತಪ್ರಬಲವಾದ ಯುಕ್ತಿಗಳ ವಿರೋಧ ಬರುತ್ತದೆಂದು ಇಲ್ಲಿ ಆಕ್ಷೇಪ ಮಾಡಲಾಗಿದೆ.

ಬ್ರಹ್ಮನಿಗೆ ಕರ್ತೃತ್ವವನ್ನು ಒಪ್ಪಿದರೆ ಕೃತ್ಸ್ನಪ್ರಸಕ್ತಿ ಹಾಗೂ ನಿರವಯತ್ವದೋಷಗಳು ಬರುತ್ತವೆ. ಎಂದು ಆಪಾದನೆ ಮಾಡಿದಾಗ ಇದು ನಮಗೆ ಇಷ್ಟಾಪಾದನವೇ ಆಗಿದೆ. ಏಕೆಂದರೆ, ಸಣ್ಣಕಾರ್ಯವನ್ನು ಮಾಡುವಾಗಲೂ ಈಶ್ವರನು ಪೂರ್ಣವಾದ ತನ್ನ ಶಕ್ತಿಯನ್ನು ಪ್ರಯೋಗಿಸುತ್ತಾನೆಂದು ಹೇಳುತ್ತೇವೆ.

ಹೀಗೆ ಹೇಳಲು ಸಾಧ್ಯವಿಲ್ಲ. ಏಕೆಂದರೆ ಯಾರೇ ಒಬ್ಬ ಪ್ರೇಕ್ಷಾವಂತನು ತೃಣಾದಿಗಳ ಉದ್ಧರಣಕ್ಕಾಗಿ ಸಮಸ್ತಶಕ್ತಿಯನ್ನು ವಿನಿಯೋಗ ಮಾಡುವುದಿಲ್ಲ. ಹಾಗೆ ಮಾಡಿದರೆ ಅವನು ಪ್ರೇಕ್ಷಾವಂತನೆಂದು ಕರೆಸಿಕೊಳ್ಳಲಾರ.

## ಪೂರ್ವಪಕ್ಷ ಹೇಗೆ ಹುಟ್ಟುತ್ತದೆ ಎಂಬುದರ ಸಮರ್ಥನೆ

**भावदीपः** – जीवाद्विशेषादर्शनं परमेश्वर इति न्यायविवरणं शब्दमूलत्वादित्यादि सूत्रव्यावर्त्यमत्र शङ्कापूर्वं योजयति– **न हीति**।। नन्वेवं यद्धि युक्त्या विरुध्येत तदीशकृतमेव हीति प्राचीननयभाष्येण कथं जीवकर्तृत्वोपपत्तिरुक्तेत्यत आह– **एतेनेति**।। ईश्वरे जीवाद्विशेषादर्शनेनेत्यर्थः। एतत्सिद्धान्तसिद्धमचिंत्यशक्तित्वं तस्योपेत्य तदीशकृतमेवेति समाधानस्य शिष्यहितार्थं तत्रोक्तावप्यत्र पूर्वपक्षे तस्यासम्मतेरिति भावः।।

'ಜೀವಾದ್ ವಿಶೇಷಾದರ್ಶನಂ ಪರಮೇಶ್ವರೇ' - ಜೀವನಲ್ಲಿ ಕಾಣದಿರುವ ಯಾವುದೇ ವಿಶೇಷ ಈಶ್ವರನಲ್ಲಿ ಕಾಣಿಸುತ್ತಿಲ್ಲ ಎಂಬ ನ್ಯಾಯವಿವರಣವು ಆಕ್ಷೇಪವನ್ನು ಮಾಡುತ್ತಿದೆ. ಇದು 'ಶಬ್ದಮೂಲತ್ವಾತ್' ಎಂಬ ಸೂತ್ರಭಾಗದಿಂದ ವ್ಯಾವರ್ತ್ಯವಾದ ಆಕ್ಷೇಪವಾಗಿದೆ. ಈ ಆಕ್ಷೇಪವನ್ನು ಪ್ರಕೃತ 'ನಹಿ' ಇತ್ಯಾದಿ ಗ್ರಂಥದಿಂದ ಯೋಜನೆ ಮಾಡುತ್ತಿದ್ದಾರೆ.

'ಯದ್ಧಿ ಯುಕ್ತ್ಯಾ ವಿರುಧ್ಯೇತ ತತ್ ಈಶಕೃತಮೇವ ಹಿ' - 'ಯಾವುದು ಯುಕ್ತಿಯಿಂದ ವಿರುದ್ಧವಾಗಿದೆಯೋ ಅದೆಲ್ಲವೂ ಭಗವಂತನಿಂದಲೇ ಆಗಿದೆ' ಎಂಬ ಹಿಂದಿನ ಅಧಿಕರಣದ ಭಾಷ್ಯದಲ್ಲಿ ಜೀವಕರ್ತೃತ್ವವಿಷಯದಲ್ಲಿ ಬರಬಹುದಾದ ಕೃತ್ಸ್ನಪ್ರಸಕ್ತ್ಯಾದಿ ದೋಷಗಳನ್ನು ಪರಿಹರಿಸಿದ್ದಾಗಿದೆ. ಹೀಗಿರುವಾಗ ಪುನಃ ಆಕ್ಷೇಪವು ಹೇಗೆ ಬರುತ್ತದೆ? ಎಂಬ ಪ್ರಶ್ನೆಗೆ 'ಏತೇನ' ಎಂಬುದರಿಂದ ಉತ್ತರಿಸಿದ್ದಾರೆ. 'ಏತೇನ' ಎಂದರೆ ಈಶ್ವರನಲ್ಲಿ ಜೀವನಿಗಿಂತ ಯಾವುದೇ ವಿಶೇಷ ಇಲ್ಲದ್ದರಿಂದ ಎಂದರ್ಥ. ಈ ಅಧಿಕರಣದ ಸಿದ್ಧಾಂತದಿಂದ ಯಾವ ಅಚಿಂತ್ಯಶಕ್ತಿತ್ವವು ಈಶ್ವರನಲ್ಲಿ ಸಿದ್ಧವಾಗುತ್ತದೋ ಅದನ್ನು ಅಂಗೀಕಾರ ಮಾಡಿ ಯುಕ್ತಿವಿರುದ್ಧವಾದದ್ದು ಈಶಕೃತವೇ ಆಗಿದೆ ಎಂಬ ಸಮಾಧಾನವನ್ನು ಶಿಷ್ಯರ ಹಿತಕ್ಕೋಸ್ಕರ ಹಿಂದಿನ ಅಧಿಕರಣದಲ್ಲಿ ಹೇಳಲಾಗಿದೆ. ಆದರೆ ಈ ಅಧಿಕರಣದ ಪೂರ್ವಪಕ್ಷದಲ್ಲಿ ಅದು ಸಮ್ಮತವಲ್ಲವೆಂದು ತಿಳಿಯಬೇಕು.

ವಿವರಣೆ – ನ್ಯಾಯವಿವರಣದಲ್ಲಿ ಜೀವನಲ್ಲಿ ಕಾಣದೇ ಇರುವ ಯಾವುದೇ ವಿಶೇಷ ಈಶ್ವರನಲ್ಲಿ ಕಾಣುತ್ತಿಲ್ಲ ಎಂದು ಹೇಳಿದ್ದಾರೆ. ಅದನ್ನು ಪ್ರಕೃತ ವಿವರಿಸುತ್ತಿದ್ದಾರೆ. ಇದರಿಂದ ನ್ಯಾಯವಿವರಣವನ್ನು 'ನಹಿ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆಂಬುದನ್ನು ಗಮನಿಸಬೇಕು.

ಪ್ರಶ್ನೆ - ಹಿಂದಿನ ಅಧಿಕರಣದ 'ಉಪಸಂಹಾರದರ್ಶನಾತ್ ನೇತಿ ಚೇನ್ನ ಕ್ಷೀರವದ್ಧಿ' ಎಂಬ ಸೂತ್ರದಲ್ಲಿ ಜೀವನು ಈಶ್ವರಾಧೀನವಾದ ಕರ್ತೃತ್ವವನ್ನು ಹೊಂದಿದ್ದಾನೆ ಎಂಬುದಾಗಿ ಸಾಧನೆ ಮಾಡಲಾಗಿದೆ. ಅನಂತರ 'ಕೃತ್ಸ್ನಪ್ರಸಕ್ತಿಃ ನಿರವಯವತ್ವಶಬ್ದಕೋಪೋ ವಾ' ಎಂಬ ಸೂತ್ರದಲ್ಲಿ ಯಾವುದು ಯುಕ್ತಿವಿರುದ್ಧವಾಗಿದೆಯೋ ಅದೆಲ್ಲವೂ ಭಗವಂತನಿಂದ ಪರಿಹಾರವಾಗುತ್ತದೆಂಬ ನ್ಯಾಯದಿಂದ ಜೀವಕರ್ತೃತ್ವವಿಷಯದಲ್ಲಿ ಬರುವ ಕೃತ್ಸ್ನಪ್ರಸಕ್ತ್ಯಾದಿ ದೋಷಗಳನ್ನು ಪರಿಹರಿಸಲಾಗಿದೆ. ಹೀಗಿರುವಾಗ ಜೀವಕರ್ತೃತ್ವಪಕ್ಷದಲ್ಲಿ ಬರುವ ದೋಷಗಳೇ ಈಶ್ವರಪಕ್ಷದಲ್ಲೂ ಬರುತ್ತವೆಂಬು ಪೂರ್ವಪಕ್ಷ ಮಾಡಲು ಹೇಗೆ ಸಾಧ್ಯ? ಪೂರ್ವಪಕ್ಷಿಗಳಿಗೆ ಹಿಂದಿನ ಅಧಿಕರಣದಲ್ಲಿ ಸಾಧನೆ ಮಾಡಿದ ಜೀವಕರ್ತೃತ್ವವು ಸಿದ್ಧವಾಗಿರುವುದಿಲ್ಲವೇ? ಎಂಬ ಮತ್ತೊಂದು ಪ್ರಶ್ನೆಯು ಬರುತ್ತದೆ. ಇದರ ಪರಿಹಾರಕ್ಕಾಗಿ 'ಏತೇನ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ಉತ್ತರ - ಜೀವನಲ್ಲಿಲ್ಲದ ಯಾವುದೇ ವಿಶೇಷಧರ್ಮವು ಈಶ್ವರನಲ್ಲಿ ಇಲ್ಲವೆಂದು ಹೇಳುತ್ತಿರುವುದರಿಂದ ಜೀವ ಮತ್ತು ಈಶ್ವರ ಇಬ್ಬರೂ ಕೂಡ ಸಮಾನರಾದರು. ಹೀಗಿರುವಾಗ ಜೀವನಿಗೆ ಈಶ್ವರಾಧೀನವಾದ ಕರ್ತೃತ್ವವೂ ಕೂಡ ಹೇಗೆ ತಾನೇ ಸಿದ್ಧವಾಗುತ್ತದೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಯಾವ ಜೀವಕರ್ತೃತ್ವವನ್ನು ಸಾಧನೆ ಮಾಡಲಾಯಿತೋ ಅದೂ ಕೂಡ ಸಿದ್ಧವಾಗಿರುವುದಿಲ್ಲ ಎಂಬುದೇ ಈ ಅಧಿಕರಣದ ಪೂರ್ವಪಕ್ಷಿಗಳ ಅಭಿಪ್ರಾಯವಾಗಿದೆ. ಜೀವಕರ್ತೃತ್ವವು ಸಿದ್ಧವಾಗದೇ ಇರುವಾಗ ಆ ಪಕ್ಷದಲ್ಲಿ ಬರುವ ದೋಷಗಳು ಈಶ್ವರಪಕ್ಷದಲ್ಲೂ ಕೂಡ ಸಮಾನವಾಗುತ್ತವೆಂದು ತಿಳಿಯಬೇಕು. ಭಾಷ್ಯಕಾರರು ಈ ಅಧಿಕರಣದಲ್ಲಿ ಸಿದ್ಧವಾಗುವ ಅಚಿಂತ್ಯಶಕ್ತಿ ಎಂಬ ಪ್ರಮೇಯವನ್ನು ಈಶ್ವರನಲ್ಲಿ ಒಪ್ಪಿಕೊಂಡು ಹಿಂದಿನ ಅಧಿಕರಣದ ಸಿದ್ಧಾಂತದಲ್ಲಿ ಶಿಷ್ಯರಿಗೆ ಉತ್ತರವನ್ನು ನೀಡಿದ್ದಾರೆ. ವಾಸ್ತವಿಕವಾಗಿ ಅದು ಹೇಳಿರುವುದು ಕೇವಲ ಶಿಷ್ಯರ ಹಿತಕ್ಕೋಸ್ಕರ ಹೊರತು ಹಿಂದಿನ ಅಧಿಕರಣದ ಸಿದ್ಧಾಂತವಲ್ಲ. ಹಾಗಾಗಿ ಈ ಅಧಿಕರಣದ ಪೂರ್ವಪಕ್ಷ ಹುಟ್ಟಲು ಯಾವುದೇ ಬಾಧಕವಿಲ್ಲ.

### ಟೀಕೆಯಲ್ಲಿರುವ ಅತಃ ಎಂಬ ಪದಕ್ಕೆ ಅನೇಕಾರ್ಥಗಳು

**भावदीपः – अत इति ।।** कृत्स्नप्रसक्त्यादिदोषसंभवात्तदपवादकस्य विशेषस्य चादर्शनादित्यर्थः। यद्वा जीवाद्विशेषादर्शनेन कृत्स्नप्रसक्त्यादिदोषसंभवात्तदपवादकस्य

विशेषस्य चादर्शनादित्यर्थः । यद्वा जीवाद्विशेषादर्शनेन कृत्स्नप्रसक्त्यादि-युक्तिविरोधादित्यर्थः॥ छ ॥

'ಅತಃ' ಎಂಬ ಪದಕ್ಕೆ ಕೃತ್ಸ್ನಪ್ರಸಕ್ತ್ಯಾದಿ ದೋಷಗಳು ಬರುವುದರಿಂದ ತದಪವಾದಕವಾದ ಯಾವುದೇ ವಿಶೇಷಗಳು ಕಾಣಸದಿರುವುದರಿಂದ ಎಂದರ್ಥ. ಅಥವಾ ಜೀವನಿಗಿಂತ ಯಾವುದೇ ವಿಶೇಷವೂ ಪರಮಾತ್ಮನಲ್ಲಿ ಕಾಣಸದೇ ಇರುವುದರಿಂದ ಕೃತ್ಸ್ನಪ್ರಸಕ್ತ್ಯಾದಿ ದೋಷಗಳು ಪ್ರಾಪ್ತವಾಗುತ್ತವೆ ಆದ್ದರಿಂದ ಎಂದರ್ಥ. ಅಥವಾ ತದಪವಾದಕವಾದ ಯಾವುದೇ ವಿಶೇಷಗಳು ಕಾಣಸದೇ ಇರುವುದರಿಂದ ಎಂದರ್ಥ. ಅಥವಾ ಜೀವನಿಗಿಂತ ಯಾವುದೇ ವಿಶೇಷವೂ ಪರಮಾತ್ಮನಲ್ಲಿ ಕಾಣಸದೇ ಇರುವುದರಿಂದ ಕೃತ್ಸ್ನಪ್ರಸಕ್ತ್ಯಾದಿ ಯುಕ್ತಿವಿರೋಧ ಬರುವುದರಿಂದ ಎಂದರ್ಥ.

### ನ್ಯಾಯವಿವರಣದ ಮೂಲಕ ಮತ್ತೊಂದು ರೀತಿಯಲ್ಲಿ ಸೂತ್ರದ ವ್ಯಾಖ್ಯಾನ.

**भावदीपः** – पूर्ववदत्रापि तुशब्दो जीवसाम्यव्यावर्तक इति भावेन न चेश्वरेत्यादिभाष्यं तस्य प्रागेव विवृतत्वात्तद्भावविवरणफलं न युक्तिविरोध इत्येतदेवानुवदन् भाष्यं व्यनक्ति – **नेश्वरेति**।। शब्दैकसमधिगम्यत्वसर्वशक्तित्वादीनां विशेषाणामदर्शनं जीवे। न जीवाद्विशेषादर्शनं परमेश्वरे विशेषश्रुतेरेवेति न्यायविवरणरीत्या शब्दमूलत्वाच्चेत्येतच्छङ्कापूर्वं व्यनक्ति– **नन्विति** ।।

ಹಿಂದಿನಂತೆ ಈ ಸೂತ್ರದಲ್ಲಿರುವ 'ತು'ಶಬ್ದವೂ ಕೂಡ ಜೀವಸಾಮ್ಯವನ್ನು ವ್ಯಾವೃತ್ತಿ ಮಾಡುತ್ತಿದೆ. 'ನಚ ಈಶ್ವರ' ಇತ್ಯಾದಿ ಭಾಷ್ಯವು ಈಗಾಗಲೇ ವ್ಯಾಖ್ಯಾನ ಮಾಡಿದಂತಾಗಿದೆ. ಆದ್ದರಿಂದ ಪ್ರಕೃತ ಕೇವಲಭಾಷ್ಯದ ಅಭಿಪ್ರಾಯವನ್ನಷ್ಟೇ ವಿವರಿಸುತ್ತಿದ್ದಾರೆ. ಅದರ ಫಲವೇ 'ನ ಯುಕ್ತಿವಿರೋಧಃ' ಎಂದು ಹೇಳಿದ್ದಾರೆ. ಈ ಎಲ್ಲಾ ಅಭಿಪ್ರಾಯದಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಈಶ್ವರ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಶಬ್ದೈಕಸಮಧಿಗಮ್ಯತ್ವ, ಸರ್ವಶಕ್ತಿತ್ವ ಮೊದಲಾದ ವಿಶೇಷಣಗಳು ಜೀವನಲ್ಲಿ ಕಾಣಸುತ್ತಿಲ್ಲ. 'ನ ಜೀವಾದ್ ವಿಶೇಷಾದರ್ಶನಂ ಪರಮೇಶ್ವರೇ ವಿಶೇಷಶ್ರುತೇಃ' - ವಿಶೇಷಶ್ರುತಿಯಿರುವುದರಿಂದ ಜೀವನಿಗಿಂತ ಯಾವುದೇ ವಿಶೇಷವು ಪರಮಾತ್ಮನಲ್ಲಿ ಕಾಣಸುತ್ತಿಲ್ಲವೆಂದು ಹೇಳಬಾರದು ಎಂದು ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಅದರ ಪ್ರಕಾರ 'ಶಬ್ದಮೂಲತ್ವಾಚ್ಚ' ಎಂಬ ಸೂತ್ರವನ್ನು ಆಕ್ಷೇಪಪೂರ್ವಕವಾಗಿ ವ್ಯಾಖ್ಯಾನಮಾಡಲು 'ನನು' ಇತ್ಯಾದಿ ಗ್ರಂಥವು ಹೊರಟಿದೆ.

ವಿವರಣೆ - ಜೀವನಲ್ಲಿಲ್ಲದ 'ಶಬ್ದೈಕಸಮಧಿಗಮ್ಯತ್ವ' ಎಂಬ ವಿಶೇಷವು ಭಗವಂತನಲ್ಲಿ ಮಾತ್ರ ಇದೆ. ಇದನ್ನು ತುಶಬ್ದವು ಹೇಳುತ್ತಿದೆ. ಶ್ರುತಿಸ್ಮೃತಿಗಳು ಪರಮಾತ್ಮನನ್ನು ಪ್ರತಿಪಾದನೆಮಾಡಿದ ಮಾತ್ರಕ್ಕೆ ಯುಕ್ತಿವಿರುದ್ಧವಾದುದನ್ನು ಸ್ವೀಕರಿಸಲು ಹೇಗೆ ಸಾಧ್ಯವಾಗುತ್ತದೆ. ಎಂದು ಪ್ರಶ್ನಿಸುವಂತಿಲ್ಲ. ಏಕೆಂದರೆ, ಈಶ್ವರನಲ್ಲಿ ಶಬ್ದೈಕಸಮಧಿಗಮ್ಯತ್ವ, ಸರ್ವಶಕ್ತಿತ್ವ ಮೊದಲಾದ ಧರ್ಮಗಳಿವೆ. ಆದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ. ಇಂತಹ ಧರ್ಮಗಳು ಜೀವನಲ್ಲಿ ಇಲ್ಲವಾದ ಕಾರಣ ಅವನಲ್ಲಿ ಯುಕ್ತಿವಿರೋಧವು ಪ್ರಾಪ್ತವಾಗುತ್ತದೆ.

ಭಾಷ್ಯೋಕ್ತ ಶ್ರುತ್ಯರ್ಥ ಟೀಕೆಯಲ್ಲಿ

**भावदीपः – श्रुत्यादीति** ।। नावेदविन्मनुते तमित्यादि श्रुतिस्मृतिसिद्धत्वादित्यर्थः। एतेन विशेषश्रुतेरेवेति श्रुतिपदमुपलक्षणमिति दर्शितम्। भाष्योक्तश्रुत्यर्थमाह– **विरुद्ध इति** ।। **तथोक्त इति** ।। अमनुरवागनिन्द्रोऽप्रवृत्तिरित्युक्त इत्यर्थः।। २८ ।।

ಶ್ರುತ್ಯಾದಿ ಸಿದ್ಧತ್ವಾತ್ ಎಂದು ಟೀಕೆಯಲ್ಲಿ ಹೇಳಿದೆ. 'ನಾವೇದವಿನ್ಮನುತೇ ತಮ್' ಎಂಬ ಶ್ರುತಿಸ್ಮೃತಿಗಳಿಂದ ಸಿದ್ಧವಾಗಿರುವುದರಿಂದ ಎಂಬುದು ಇದರ ಅರ್ಥ. ಹೀಗೆ ಹೇಳಿದ್ದರಿಂದ ವಿಶೇಷಶ್ರುತೇರೇವ ಎಂಬ ನ್ಯಾಯವಿವರಣದಲ್ಲಿರುವ ಶ್ರುತಿಶಬ್ದವು ಉಪಲಕ್ಷಣವಾಗಿದೆಯೆಂದು ಹೇಳಿದಂತಾಯಿತು. ಭಾಷ್ಯದಲ್ಲಿ ಹೇಳಿದ ಶ್ರುತ್ಯರ್ಥವನ್ನು 'ವಿರುದ್ಧಃ' ಇತ್ಯಾದಿಯಾಗಿ ಹೇಳಿದ್ದಾರೆ. 'ತಥೋಕ್ತಃ' ಎಂದರೆ 'ಅಮನುರವಾಗ್ ಅನಿಂದ್ರೋಽಪ್ರವೃತ್ತಿಃ' ಎಂಬುದಾಗಿ ಹೇಳಲಾಗಿದೆ ಎಂದರ್ಥ.

ವಿವರಣೆ – 'ಇತ್ಯಾದಿ ಶ್ರುತೇರೇವ' ಎಂದರೆ 'ನಾವೇದವಿನ್ಮನುತೇ' ಎಂಬ ಶ್ರುತಿಯನ್ನೂ 'ಆದಿ'ಶಬ್ದದಿಂದ 'ನೇಂದ್ರಿಯಾಣಿ ನಾನುಮಾನಮ್' ಎಂಬ ಶ್ರುತಿಯನ್ನೂ ಸ್ವೀಕರಿಸಬೇಕು. ನ್ಯಾಯವಿವರಣದಲ್ಲಿರುವ 'ತಥಾ ಚ ವಿಶೇಷಶ್ರುತೇರೇವ' ಎಂಬಲ್ಲಿರುವ ಶ್ರುತಿಶಬ್ದಕ್ಕೆ ಉಪಲಕ್ಷಣಮಾಡಿದಾಗ ಸ್ಮೃತಿಯೂ ಕೂಡ ಸಂಗ್ರಾಹ್ಯವಾಗುತ್ತದೆ. ಶ್ರುತಿಸ್ಮೃತಿಗಳಿಂದ ಯುಕ್ತಿವಿರೋಧದ ಪರಿಹಾರಕ್ಕೆ ಉಪಯೋಗಿಯಾದ ಧರ್ಮಗಳು ಪರಮಾತ್ಮನಲ್ಲಿರುವುದರಿಂದ ಯಾವುದೇ ದೋಷಕ್ಕೆ ಅವಕಾಶವಿಲ್ಲ.

'ವಿರುದ್ಧಃ ಲೋಕದೃಷ್ಟ್ಯಾ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಲೋಕದೃಷ್ಟಿಯಿಂದ ವಿರುದ್ಧವಾಗಿರುವ ಧರ್ಮಗಳು ಪರಮಾತ್ಮನಲ್ಲಿ ಅವಿರುದ್ಧವಾಗಿದೆ ಎಂಬುದು ಇದರ

ಅರ್ಥ. ಇದು ಭಾಷ್ಯದಲ್ಲಿ ಉಲ್ಲೇಖಿಸಿದ 'ಯೋಽಸೌ ವಿರುದ್ಧಃ' ಎಂಬ ಪೈಂಗಿಶ್ರುತಿಯ ವ್ಯಾಖ್ಯಾನವಾಗಿದೆ. 'ತಥೋಕ್ತಃ' ಎಂದರೆ 'ಅಮನು' ಇತ್ಯಾದಿಯಾಗಿ ಹೇಳಲ್ಪಟ್ಟಿದ್ದಾನೆ ಎಂದರ್ಥ. 'ನ ವಿದ್ಯತೇ ಮಂತಾ ಯಸ್ಯ ಸಃ' ಎಂಬ ನಿಷ್ಪತ್ತಿಯಿಂದ ಪೂರ್ಣವಾಗಿ ಮನನಕ್ಕೆ ಅಯೋಗ್ಯನಾಗಿರುವುದರಿಂದ 'ಅಮನು' ಎಂದೂ, ಪೂರ್ಣವಾಗಿ ಇವನನ್ನು ಹೇಳಲು ಸಾಧ್ಯವಿಲ್ಲದ ಕಾರಣ 'ಅವಾಕ್' ಎಂದೂ, ಇವನಿಗೆ ಮತ್ತೊಬ್ಬ ಸ್ವಾಮಿಯು ಇಲ್ಲದ ಕಾರಣ ಅನಿಂದ್ರನೆಂದೂ, ಇವನಿಗೆ ಪ್ರವರ್ತಕನು ಯಾರೂ ಇಲ್ಲದ ಕಾರಣ ಅಪ್ರವೃತ್ತಿ ಎಂದು ಜ್ಞಾನಿಗಳು ಕರೆದಿದ್ದಾರೆ.

## ಭಾವದೀಪದ ವೈಶಿಷ್ಟ್ಯ

* ಅಖಂಡನಾದ ಈಶ್ವರನಿಗೆ ಏಕದೇಶೇನ ಪ್ರವೃತ್ತಿ ಹೇಳಿದರೆ ವ್ಯಾಘಾತ ಬರುತ್ತದೆಂದು ಯುಕ್ತಿಗೆ ವ್ಯಾಘಾತಪರ್ಯವಸಾಯಿತ್ವವನ್ನು ಸಮರ್ಥಿಸಿದ್ದು ಅಪೂರ್ವವಾಗಿದೆ.

* ಸಣ್ಣಕೆಲಸದಲ್ಲಿ ಪೂರ್ಣಶಕ್ತಿಯನ್ನು ಈಶ್ವರನು ಉಪಯೋಗಿಸುತ್ತಾನೆಂದರೆ ಪ್ರೇಕ್ಷಾವತ್ತ್ವವೇ ಭಂಗವಾಗುತ್ತದೆಂದು ಹೇಳಿದ್ದಾರೆ.

* 'ಜಗದ್ವಿಶೇಷಾದರ್ಶನಂ ಪರಮೇಶ್ವರೇ' ಎಂಬ ನ್ಯಾಯವಿವರಣಕ್ಕೆ ವ್ಯಾಖ್ಯಾನ ಮಾಡಿದ್ದಾರೆ.

* ಹಿಂದಿನ ಅಧಿಕರಣದಲ್ಲಿ ಈಶ್ವರನಿಗೆ ಹೇಳಿದ ಅಚಿಂತ್ಯಶಕ್ತಿತ್ವವು ಈ ಅಧಿಕರಣದ ಸಿದ್ಧಾಂತವಾಗಿದೆ. ಕೇವಲ ಶಿಷ್ಯರ ಹಿತಕ್ಕೋಸ್ಕರ ಹಿಂದಿನ ಅಧಿಕರಣದಲ್ಲಿ ಅದನ್ನು ಭಾಷ್ಯಕಾರರು ನೆನಪಿಸಿದ್ದಾರೆ. ಹೀಗೆ ಹೇಳುವ ಮೂಲಕ ಈ ಅಧಿಕರಣದ ಪೂರ್ವಪಕ್ಷವನ್ನು ಪುಷ್ಟಿಗೊಳಿಸಿದ್ದಾರೆ. ಈ ಅಧಿಕರಣಕ್ಕೆ ಗತಾರ್ಥತಾವನ್ನು ಕೂಡ ಪರಿಹರಿಸಿದ್ದಾರೆ.

* ಟೀಕೆಯಲ್ಲಿರುವ 'ಅತಃ' ಎಂಬ ಪದಕ್ಕೆ ಐದಾರು ರೀತಿಯಲ್ಲಿ ವ್ಯಾಖ್ಯಾನ ಮಾಡುವ ಮೂಲಕ ಸಮಗ್ರಪೂರ್ವಪಕ್ಷದ ಪ್ರಮೇಯವನ್ನು ಸಂಗ್ರಹಿಸಿದ್ದಾರೆ.

* ಸೂತ್ರದಲ್ಲಿರುವ 'ತು'ಶಬ್ದಕ್ಕೆ ವ್ಯಾಖ್ಯಾನ ಮಾಡುವ ಮೂಲಕ ಭಾಷ್ಯ ಹಾಗೂ ನ್ಯಾಯವಿವರಣಗಳ ಸಂಯೋಜನೆಯನ್ನು ಮಾಡಿ ಸಿದ್ಧಾಂತಸ್ಥಾಪನೆಯನ್ನು ಸ್ಪಷ್ಟವಾಗಿ ನಿರೂಪಣೆ ಮಾಡಿದ್ದಾರೆ. ಮತ್ತು ನ್ಯಾಯವಿವರಣದ ಪ್ರಕಾರ ಸೂತ್ರಕ್ಕೆ ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ಭಾವದೀಪವು ನ್ಯಾಯವಿವರಣವನ್ನು ಹೆಜ್ಜೆ ಹೆಜ್ಜೆಗೆ ಕೂಡ ವ್ಯಾಖ್ಯಾನ ಮಾಡುವುದನ್ನು ಗಮನಿಸಬೇಕು.

## ಬ್ರಹ್ಮಸೂತ್ರ

### 'ಆತ್ಮನಿ ಚೈವಂ ವಿಚಿತ್ರಾಶ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – आत्मनि चैवं विचित्राश्च हि ।।**

**ಈಶ್ವರನಲ್ಲಿ 'ಅಘಟಿತಘಟನಾ' ಎಂಬ ಶಕ್ತಿ ಇರುವುದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ. 'ವಿಚಿತ್ರಶಕ್ತಿಃ ಪುರುಷಃ ಪುರಾಣೋ' ಇತ್ಯಾದಿ ಶ್ರುತಿಗಳು ವಿಚಿತ್ರವಾದ ಶಕ್ತಿಯನ್ನು ಈಶ್ವರನಲ್ಲಿ ಹೇಳುತ್ತಿವೆ.**

ಅರ್ಥ -- ಮೊದಲನೆಯ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಎರಡನೆಯ 'ಚ' ಶಬ್ದವು ಸಮುಚ್ಚಯಾರ್ಥದಲ್ಲಿದೆ. 'ಹಿ' ಶಬ್ದಕ್ಕೆ ಪ್ರಸಿದ್ಧಿ ಎಂದರ್ಥ. ಆತ್ಮನಿ ಚ = ಈಶ್ವರನಲ್ಲೇ, ಏವಂ = ಸಕಲ ಯುಕ್ತಿಗಳ ವಿರೋಧಕ್ಕೆ ಪರಿಹಾರಕವಾದ ವಿಚಿತ್ರಾಶ್ಚ ಹಿ = ಅಚಿಂತ್ಯವಾದ ಅಘಟಿತಘಟನಾ ಶಕ್ತಿಯನ್ನು ಹೇಳುವ 'ವಿಚಿತ್ರ ಶಕ್ತಿಃ ಪುರುಷಃ ಪುರಾಣೋ' ಎಂಬ ಶ್ರುತಿಪ್ರಸಿದ್ಧಿ ಇರುತ್ತದೆ. ಜೀವನಲ್ಲಿ ಇಂತಹ ಪುರುಷ ಪ್ರಸಿದ್ಧಿಯನ್ನು ಹೇಳಲಾಗದು. ಆದ್ದರಿಂದ ಜೀವ ಕರ್ತೃತ್ವಪಕ್ಷದಲ್ಲೇ ಯುಕ್ತಿವಿರೋಧ ಬರುತ್ತದೆ ಹೊರತು ಈಶ್ವರಕರ್ತೃತ್ವ ಪಕ್ಷದಲ್ಲಿ ಯುಕ್ತಿವಿರೋಧ ಬರುವುದಿಲ್ಲ.

ಬ್ರಹ್ಮಸೂತ್ರಭಾಷ್ಯ

ಬೇರೆಯವರಲ್ಲಿ ವಿಚಿತ್ರಶಕ್ತಿ ಇಲ್ಲ

**ब्रह्मसूत्रभाष्यम् –।। आत्मनि चैवं विचित्राश्च हि ।।२।।**

**परमात्मनो विचित्राश्च शक्तयस्सन्ति नान्येषाम् ।**

ಅನುವಾದ - ಪರಮಾತ್ಮನಲ್ಲಿ ವಿಚಿತ್ರವಾದ ಶಕ್ತಿಯಿದೆ ಬೇರೆಯವರಲ್ಲಿ ಇಂಥ ಶಕ್ತಿ ಇರುವುದಿಲ್ಲ.

ಪ್ರತಿಪದಾರ್ಥ -- ಜೀವಪಕ್ಷದಲ್ಲಿ ಮಾತ್ರ ಯುಕ್ತಿವಿರೋಧಕ್ಕೆ ಅವಕಾಶ. ಪರಮಾತ್ಮನ ಕರ್ತೃತ್ವಪಕ್ಷದಲ್ಲಿ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ ಎಂಬುದನ್ನು ಪ್ರತಿಪಾದನೆ ಮಾಡಲು ಮತ್ತೊಂದು ಯುಕ್ತಿಯನ್ನು ಹೇಳಲು ಮುಂದಿನ ಸೂತ್ರ ಹೊರಟಿದೆ. ಪರಮಾತ್ಮನಃ ಶಕ್ತಯಃ = ಪರಮಾತ್ಮನ ಕರ್ತೃತ್ವಾದಿ ಶಕ್ತಿಗಳು, ವಿಚಿತ್ರಾಶ್ಚ = ಅತ್ಯಾಶ್ಚರ್ಯಕರವಾಗಿ ಸಂತಿ = ಇರುತ್ತವೆ. ಅನ್ಯೇಷಾಮ್ = ಬೇರೆಯವರಲ್ಲಿ, ನ = ಇರುವುದಿಲ್ಲ.

'ಅತ್ಯಾಶ್ಚರ್ಯ' ಎಂದರೆ ಪರಮಾತ್ಮನೊಬ್ಬನೇ

**ब्रह्मसूत्रभाष्यम् –**

**'विचित्रशक्तिः पुरुषः पुराणो न चान्येषां शक्तयस्तादृशाः स्युः ।**
**एको वशी सर्वभूतान्तरात्मा सर्वान् देवानेक एवानुविष्टः ।।'**
**इति श्वेताश्वतरश्रुतिः ।।२।।**

ಅನುವಾದ - ಅನಾದಿನಿತ್ಯನಾದ ಪರಮಾತ್ಮನಲ್ಲಿ ಅತ್ಯಾಶ್ಚರ್ಯಕರವಾದ ಶಕ್ತಿಯಿದೆ. ಬೇರೆ ಯಾರಲ್ಲಿಯೂ ಸಹ ಇಂಥ ಶಕ್ತಿ ಇರುವುದಿಲ್ಲ. ಪ್ರತಿಯೊಬ್ಬರನ್ನು ತನ್ನ ವಶದಲ್ಲಿ ಇಟ್ಟು ಕೊಂಡಿರುತ್ತಾನೆ. ಎಲ್ಲ ಚೇತನರ ಅಂತರ್ಯಾಮಿಯಾಗಿದ್ದಾನೆ. ಸಕಲದೇವತೆಗಳಲ್ಲಿಯೂ ತಾನೊಬ್ಬನೇ ಪ್ರವೇಶ ಮಾಡಿದ್ದಾನೆ. ಹೀಗೆ ಶ್ವೇತಾಶ್ವತರ ಶ್ರುತಿಯು ಹೇಳುತ್ತಿದೆ.

ಪ್ರತಿಪದಾರ್ಥ -- ಈಶ್ವರನಲ್ಲಿ ಮಾತ್ರ ವಿಚಿತ್ರಶಕ್ತಿಯಿರುತ್ತದೆ ಬೇರೆಯವರಲ್ಲಿ ಇರುವುದಿಲ್ಲ. ಈ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳುತ್ತಿದ್ದಾರೆ - ಪುರಾಣಃ = ಅನಾದಿನಿತ್ಯನಾದ, ಪುರುಷಃ = ಪುರುಷನಾಮಕನಾದ ಪರಮಾತ್ಮನು, ವಿಚಿತ್ರಶಕ್ತಿಃ = ಆಶ್ಚರ್ಯ-ಶಕ್ತಿಯುಳ್ಳವನ್ನು, ಅನ್ಯೇಷಾಂ = ಬೇರೆಯವರಲ್ಲಿ, ತಾದೃಶಾಃ = ಅಂಥ, ಶಕ್ತಯಃ = ಶಕ್ತಿಗಳು, ನಸ್ಯುಃ = ಇರುವುದಿಲ್ಲ. ಸರ್ವಭೂತಾಂತರಾತ್ಮಾ = ಸಕಲ ಜೀವ ಜಡಪದಾರ್ಥಗಳಲ್ಲಿ ಅಂತರ್ಯಾಮಿಯಾಗಿ ಇರುವ, ಏಕಃ = ತಾನೊಬ್ಬನೇ, ವಶೀ = ಎಲ್ಲವನ್ನು ವಶದಲ್ಲಿ ಇಟ್ಟುಕೊಂಡಿದ್ದಾನೆ. ಸರ್ವಾನ್ ದೇವಾನ್ = ಎಲ್ಲಾ ದೇವತೆಗಳಲ್ಲಿ, ಏಕಏವ = ತಾನೊಬ್ಬನೇ, ಅನುವಿಷ್ಟಃ = ಪ್ರವೇಶವನ್ನು ಮಾಡಿರುತ್ತಾನೆ. ಇತಿ = ಹೀಗೆ, ಶ್ವೇತಾಶ್ವತರಶ್ರುತಿಃ = ಶ್ವೇತಾಶ್ವತರಶ್ರುತಿಯು ಹೇಳುತ್ತಿದೆ.

### ಸತ್ತರ್ಕದೀಪಾವಳಿ

**सत्तर्कदीपावळिः – यदुक्तम् अघटितघटकत्वमीश्वरस्यैव तद् दृढीकरोति – आत्मनि चेत्यादिना ।।**

ಹಿಂದಿನ ಅಧಿಕರಣದಲ್ಲಿ ಅಘಟಿತಘಟಕತ್ವ ಎಂಬ ಶಕ್ತಿಯನ್ನು ಈಶ್ವರನಲ್ಲಿ ಹೇಳಲಾಯಿತು. ಅದನ್ನೇ ಪ್ರಮಾಣದಿಂದ ದೃಢಪಡಿಸಲು 'ಆತ್ಮನಿ ಚ' ಎಂಬ ಸೂತ್ರ ಹೊರಟಿದೆ.

### ತತ್ತ್ವಪ್ರದೀಪ

### ಪರಮಾತ್ಮನಲ್ಲಿರುವ ಸಾಮರ್ಥ್ಯ ಬಲು ವಿಚಿತ್ರ

**तत्वप्रदीपः – आत्मनि चैवं विचित्राश्च हि ।। श्रमचिन्तायाशङ्का-निवृत्त्यर्थम् अधिकशक्तित्वमुक्तम् । न च तावदेव । परमात्मनो विचित्राश्च शक्तयः सन्ति । सर्वस्रष्टृत्वादिकं भिन्नावयवशून्यानां जीवानाम् एकदेशेन प्रवृत्तिप्रदत्वं स्वस्य तु तादृशस्य अन्यनिरपेक्षा प्रवृत्तिः कर्त्रन्तरवैलक्षण्यम्**

**इत्यादिकमुक्तं यथा युज्यते । एवंविधा एवमेवानुक्तविषयाश्च न चान्येषां सन्ति, परमात्मन्येव । तथाहि श्रुतिः – विचित्रशक्तिरित्यादिका ।।**

ಪರಮಾತ್ಮನಿಗೆ ಶ್ರಮ, ಚಿಂತೆ ಮೊದಲಾದ ದೋಷಗಳು ಇರಬಹುದೇ? ಎಂಬ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ ಅಧಿಕಶಕ್ತಿಯನ್ನು ಈ ಹಿಂದೆ ಹೇಳಲಾಯಿತು. ಕೇವಲ ಅವನಲ್ಲಿ ಅಧಿಕಶಕ್ತಿಯಿರುವುದಲ್ಲ. ಬಗೆಬಗೆಯ ವಿಚಿತ್ರವಾದ ಶಕ್ತಿಗಳೂ ಕೂಡ ಇವೆ. ಎಂಬುದನ್ನು ಪ್ರತಿಪಾದನೆ ಮಾಡಲು ಈ ಸೂತ್ರ ಹೊರಟಿದೆ. ಪರಮಾತ್ಮನಲ್ಲಿ ಸರ್ವಸ್ರಷ್ಟೃತ್ವವಿದೆ. ಮತ್ತು ಭಿನ್ನವಾದ ಅವಯವಗಳಿಲ್ಲದ ಜೀವರಿಗೆ ಏಕದೇಶೇನ ಪ್ರವೃತ್ತಿ ಮಾಡುವ ಶಕ್ತಿಯನ್ನು ನೀಡುವ ಸಾಮರ್ಥ್ಯವಿದೆ. ತನ್ನಲ್ಲೂ ಕೂಡ ಅಂಥ ಸಾಮರ್ಥ್ಯವಿದೆ. ಆದರೆ ತನ್ನ ಈ ಸಾಮರ್ಥ್ಯವು ಮತ್ತೊಬ್ಬರ ಅಧೀನವಲ್ಲ. ಹೀಗೆ ಜೀವನಲ್ಲಿರುವ ಕರ್ತೃತ್ವಕ್ಕಿಂತ ವಿಲಕ್ಷಣವಾಗಿರುವ ಕರ್ತೃತ್ವ ಪರಮಾತ್ಮನಲ್ಲಿದೆ. ಹಿಂದೆ ಹೇಳಿದ ಎಲ್ಲಾ ವಿಷಯಗಳೂ ಕೂಡ ಪರಮಾತ್ಮನಲ್ಲಿ ಯುಕ್ತವಾಗುತ್ತವೆ. ಇಷ್ಟೇ ಅಲ್ಲದೇ ಇನ್ನೂ ಹೇಳದ ಅನೇಕ ಇಂಥ ಶಕ್ತಿಗಳು ಪರಮಾತ್ಮನಲ್ಲೇ ಇವೆ. ಬೇರೆಯವರಲ್ಲಿ ಸರ್ವಥಾ ಇರುವುದಿಲ್ಲ. ಇದನ್ನು 'ವಿಚಿತ್ರಶಕ್ತಿಃ' ಎಂಬ ಶ್ವೇತಾಶ್ವತರೋಪನಿಷತ್ತಿನ ಶ್ರುತಿಯು ಉಪಪಾದನೆ ಮಾಡುತ್ತಿದೆ.

ತತ್ವಪ್ರಕಾಶಿಕಾ

ಕೃತ್ಸ್ನಪ್ರಸಕ್ತ್ಯಾದಿ ಯುಕ್ತಿವಿರೋಧಗಳ ಪರಿಹಾರ

**तत्वप्रकाशिका –**

**जीव एव युक्तिविरोधो नेश्वर इत्येतमर्थं युक्त्यन्तरेण प्रतिपादयत्सूत्रमुपन्यस्य व्याचष्टे – आत्मनीति । युक्तिविराधनिरासक-विचित्रशक्तिसद्भावादीश्वरे न युक्तिविरोधः । तदभावज्जीव एव चासावित्यर्थः।**

ಜೀವನಲ್ಲಿ ಮಾತ್ರ ಯುಕ್ತಿವಿರೋಧವು ಬರುತ್ತದೆ. ಈಶ್ವರನಲ್ಲಿ ಯುಕ್ತಿವಿರೋಧವು ಬರುವುದಿಲ್ಲ ಎಂಬುದನ್ನು ಮತ್ತೊಂದು ಯುಕ್ತಿಯಿಂದ ಪ್ರತಿಪಾದನೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡಲು 'ಆತ್ಮನಿ' ಇತ್ಯಾದಿ ಭಾಷ್ಯ ವಾಕ್ಯವು ಹೊರಟಿದೆ.

ಯುಕ್ತಿವಿರೋಧ ಪರಿಹಾರಕವಾದ ವಿಚಿತ್ರಶಕ್ತಿಯು ಇರುವುದರಿಂದ ಕೃತ್ಸ್ನಪ್ರಸಕ್ತಿ ಇತ್ಯಾದಿ ಯುಕ್ತಿವಿರೋಧವನ್ನು ಹೇಳಬಾರದು. ಜೀವನಲ್ಲಿ ಇಂಥ ವಿಚಿತ್ರಶಕ್ತಿ ಇಲ್ಲದ ಕಾರಣ ಕೃತ್ಸ್ನಪ್ರಸಕ್ತ್ಯಾದಿ ವಿರೋಧಗಳು ಪ್ರಾಪ್ತವಾಗುತ್ತವೆ ಎಂಬುದು ಸೂತ್ರದ ಅಭಿಪ್ರಾಯ.

ವಿವರಣೆ - ಹಿಂದಿನ ಸೂತ್ರದಲ್ಲಿ ಪ್ರಮಾಣದ ಮೂಲಕ ವಿರೋಧ ಬರುವುದಿಲ್ಲ ಎಂದು ಸಮರ್ಥನೆ ಮಾಡಿದರು. ಇದು ಕೇವಲ ಜ್ಞಾಪಕವಾಗುತ್ತದೆ ಹೊರತು ಅವಿರೋಧಕ್ಕೆ ಕಾರಕವಲ್ಲ. ಆದ್ದರಿಂದ ಈ ಸೂತ್ರದಲ್ಲಿ ವಿರೋಧಪರಿಹಾರಕವಾದ ಅಘಟಿತಘಟನಾ-ಶಕ್ತಿಯನ್ನು ಸಮರ್ಥನೆ ಮಾಡುತ್ತಿದ್ದಾರೆ. (ವಾಕ್ಯಾರ್ಥಮುಕ್ತಾವಳಿ)

### ಅಚಿಂತ್ಯದ ಬಗ್ಗೆ ತರ್ಕ ಮಾಡಬಾರದು

**तत्वप्रकाशिका – आद्यश्चशब्द एवार्थः । तेन नान्येषामिति सिद्ध्यति । तदुक्तम् । 'अचिन्त्याः खलु ये भावा न तांस्तर्केण योजयेत्' । इति ईवरस्यैव विचित्रशक्तित्वं नान्येषामित्येतत्कुत इत्यतो हीति सूचितां श्रुतिं दर्शयति – विचित्रेति ।। २९ ।।**

ಸೂತ್ರದಲ್ಲಿರುವ ಮೊದಲನೆಯ 'ಚ' ಶಬ್ದಕ್ಕೆ ಏವ ಎಂದರ್ಥ. ಇದರಿಂದ ಪರಮಾತ್ಮನನ್ನು ಬಿಟ್ಟು ಬೇರೆಯವರಲ್ಲಿ ಇಂಥ ವಿಚಿತ್ರಶಕ್ತಿಯು ಇರುವುದಿಲ್ಲ ಎಂದು ತಿಳಿಯುತ್ತದೆ. ಇದನ್ನು 'ಅಚಿಂತ್ಯಾ ಖಲು ಯೇ ಭಾವಾಃ ನ ತಾಂ ತರ್ಕೇಣ ಯೋಜಯೇತ್' 'ಚಿಂತನೆಗೆ ಅನರ್ಹವಾದ ಪದಾರ್ಥಗಳನ್ನು ಶುಷ್ಕತರ್ಕದಿಂದ ಯೋಜನೆ ಮಾಡಬಾರದು' ಎಂದು ಪುರಾಣದ ವಚನವು ತಿಳಿಸುತ್ತಿದೆ. ಹೀಗೆ ಈಶ್ವರನಲ್ಲಿಯೇ ವಿಚಿತ್ರಶಕ್ತಿಯು ಸಿದ್ಧವಾಗುತ್ತದೆ. ಉಳಿದವರಲ್ಲಿ ಸಿದ್ಧವಾಗುವುದಿಲ್ಲ ಎಂಬುದನ್ನು ಹೇಗೆ ನಿರ್ಣಯಿಸುತ್ತೀರಿ? ಎಂಬ ಪ್ರಶ್ನೆಗೆ ಉತ್ತರಿಸಲು ಸೂತ್ರದಲ್ಲಿ 'ಹಿ' ಎಂಬ ಶಬ್ದವನ್ನು ಹೇಳಿದ್ದಾರೆ. ಶ್ವೇತಾಶ್ವತರೋಪನಿಷತ್ತನ್ನು 'ಹಿ' ಶಬ್ದವು ಉಲ್ಲೇಖ ಮಾಡುತ್ತಿದೆ. ಇದನ್ನು ಭಾಷ್ಯದಲ್ಲಿ 'ವಿಚಿತ್ರ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ - 'ವಿಚಿತ್ರಾಶ್ಚ ಹಿ' ಎಂಬಲ್ಲಿರುವ 'ಚ' ಶಬ್ದದ ಅರ್ಥವನ್ನು 'ಯುಕ್ತ್ಯಂತರೇಣ' ಎಂಬುದರಿಂದ ಹೇಳಿದ್ದಾರೆ. 'ಚೈವಂ' ಎಂಬಲ್ಲಿರುವ 'ಏವಂ' ಎಂಬ ಶಬ್ದದ ಅರ್ಥವನ್ನು 'ಯುಕ್ತಿವಿರೋಧನಿರಾಸಕ' ಇತ್ಯಾದಿಯಾಗಿ ಹೇಳಿದ್ದಾರೆ. 'ಆತ್ಮನಿ ಚ' ಎಂಬಲ್ಲಿರುವ ಚ ಶಬ್ದದ ಅರ್ಥವನ್ನು 'ಆದ್ಯಶ್ಚ ಶಬ್ದಃ' ಎಂಬುದರಿಂದ ಹೇಳಿದ್ದಾರೆ. ಎರಡನೆಯ 'ಚ' ಶಬ್ದವು

ಸಮುಚ್ಚಯಾರ್ಥದಲ್ಲಿದೆ. ಮೊದಲನೆಯ ಚ ಶಬ್ದವು ಪರಮಾತ್ಮನಲ್ಲಿ ಮಾತ್ರ ವಿಚಿತ್ರಶಕ್ತಿಯಿದೆ ಎಂಬ ಏವಕಾರಾರ್ಥದಲ್ಲಿದೆ. ಹೀಗೆ ಸೂತ್ರದ ಅರ್ಥವನ್ನು ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದನ್ನು ಗಮನಿಸಬೇಕು.

## ಭಾವದೀಪ

### ಹಿಂದಿನ ಸೂತ್ರಭಾಷ್ಯದ ಸಾಧ್ಯಕ್ಕೆ ಈ ಸೂತ್ರಭಾಷ್ಯದಿಂದ ಹೇತುಸಮರ್ಪಣೆ

**भावदीपः** – ॥ आत्मनि चैवंवि० ॥ २९ ॥ विचित्राश्चेति चशब्दादाह– **युक्त्यन्तरेणेति** ॥ न केवलं शब्दमूलत्वादित्यर्थः। सौत्रैवंशब्दार्थमाह– **युक्तिविरोधनिरासकेति** ॥ न युक्तिविरोध इति पूर्वभाष्योक्तसाध्ये परमात्मन इत्यादिभाष्यं हेतुत्वेन व्याचष्टे – **विचित्रेत्यादिना** ॥ नान्येषामित्येतत्सूत्रारूढं करोति – **आद्य इति** ॥ उक्तहेत्वोरप्रयोजकत्वशङ्कानिरासाय नियामकमाह– **तदुक्तमिति** ॥ एकादशगीताभाष्योक्तविष्णुपुराणवाक्य इत्यर्थः॥ **श्रुतिं दर्शयतीति** ॥ एतेन विशेषश्रुतेरेवेत्येतद्विवृतं ध्येयम्।

ಸೂತ್ರದಲ್ಲಿ 'ವಿಚಿತ್ರಾಶ್ಚ' ಎಂದು ಹೇಳಿದ್ದಾರೆ. ಇಲ್ಲಿರುವ ಚಶಬ್ದದ ಅರ್ಥವನ್ನು 'ಯುಕ್ತ್ಯಂತರೇಣ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಶಬ್ದಮೂಲಕವಾದ ಮಾತ್ರದಿಂದಲ್ಲ. ಮತ್ತೊಂದು ಯುಕ್ತಿಯಿಂದಲೂ ಎಂದಿದರ ಅರ್ಥ. ಸೂತ್ರದಲ್ಲಿರುವ 'ಏವ'ಶಬ್ದದ ಅರ್ಥವನ್ನು 'ಯುಕ್ತಿವಿರೋಧನಿರಾಸಕ' ಎಂಬುದಾಗಿ ಹೇಳಿದ್ದಾರೆ. 'ನ ಯುಕ್ತಿವಿರೋಧಃ' ಎಂಬ ಹಿಂದಿನ ಭಾಷ್ಯದಲ್ಲಿ ಹೇಳಲ್ಪಟ್ಟ ಸಾಧ್ಯದಲ್ಲಿ 'ಪರಮಾತ್ಮನಃ' ಇತ್ಯಾದಿ ಭಾಷ್ಯವು ಹೇತುಸಮರ್ಪಕವಾಗಿದೆ ಎಂಬುದಾಗಿ ವ್ಯಾಖ್ಯಾನ ಮಾಡಲು 'ವಿಚಿತ್ರಶಕ್ತಿಸದ್ಭಾವಾತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇಂತಹ ವಿಚಿತ್ರಶಕ್ತಿಯು ಪರಮಾತ್ಮನಲ್ಲಿ ಮಾತ್ರವಿದೆ ಬೇರೆಯವರಲ್ಲಿ ಇಲ್ಲವೆಂಬುದನ್ನು ಸೂತ್ರಾರೂಢ ಮಾಡಲು 'ಆದ್ಯಃ' ಇತ್ಯಾದಿ ವಾಕ್ಯವು ಹೊರಟಿದೆ. ಹಿಂದೆ ಹೇಳಿದ ಹೇತುವಿಗೆ ಅಪ್ರಯೋಜಕತ್ವಶಂಕಾ ಪರಿಹಾರಮಾಡಲು ನಿಯಾಮಕಪ್ರಮಾಣವನ್ನು 'ತದುಕ್ತಂ' ಎಂಬುದಾಗಿ ಹೇಳಿದ್ದಾರೆ. ಈ ಪ್ರಮಾಣವಾಕ್ಯವು ಹನ್ನೊಂದನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ

ಉಲ್ಲೇಖಿಸಿದ ವಿಷ್ಣುಪುರಾಣದ ವಚನವಾಗಿದೆ. 'ಶ್ರುತಿಂ ದರ್ಶಯತಿ' ಎಂದು ಹೇಳಿದ್ದರಿಂದ 'ವಿಶೇಷಶ್ರುತೇರೇವ' ಎಂಬುದನ್ನು ವಿವರಣೆ ಮಾಡಿದಂತಾಯಿತು.

ವಿವರಣೆ – ಕೇವಲ ಶ್ರುತಿಸ್ಮೃತಿಗಳ ಆಧಾರದಿಂದಷ್ಟೇ ಈಶ್ವರನಲ್ಲಿ ಯುಕ್ತಿವಿರೋಧವು ಪರಿಹಾರವಾಗುವುದಲ್ಲ. ಯುಕ್ತಿಯ ಆಧಾರವೂ ಕೂಡ ಇದೆ ಎಂಬುದನ್ನು ತಿಳಿಸಲು ಸೂತ್ರದಲ್ಲಿ ಚಶಬ್ದವನ್ನು ಹೇಳಿದ್ದಾರೆ.

ಹಿಂದಿನ ಸೂತ್ರಭಾಷ್ಯದಲ್ಲಿ ಪರಮಾತ್ಮನಲ್ಲಿ ಯುಕ್ತಿವಿರೋಧವು ಬರುವುದಿಲ್ಲ ಎಂದಷ್ಟೇ ಹೇಳಿದರು. ಇದಕ್ಕೆ ಏನು ಕಾರಣ ಎಂಬುದನ್ನು ಈ ಸೂತ್ರದ ಭಾಷ್ಯದಲ್ಲಿ 'ಪರಮಾತ್ಮನಃ ವಿಚಿತ್ರಾಶ್ಚ ಶಕ್ತಯಃ ಸಂತಿ' ಎಂದು ಕಾರಣವನ್ನು ಹೇಳುತ್ತಿದ್ದಾರೆ. ಪರಮಾತ್ಮನಲ್ಲಿ ಮಾತ್ರ ವಿಚಿತ್ರಶಕ್ತಿಗಳಿವೆ. ಆದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿಲ್ಲ. ಬೇರೆಯವರಲ್ಲಿ ಇಂತಹ ವಿಚಿತ್ರಶಕ್ತಿಗಳು ಇರುವುದಿಲ್ಲ ಎಂಬುದಾಗಿ 'ನಾನ್ಯೇಷಾಂ' ಎಂಬ ಪದದಿಂದ ಭಾಷ್ಯಕಾರರು ತಿಳಿಸಿದ್ದಾರೆ. ಈ 'ನಾನ್ಯೇಷಾಂ' ಎಂಬುದು ಸೂತ್ರದಲ್ಲಿ ಹೇಳಿಲ್ಲವಲ್ಲ ಎಂಬ ಪ್ರಶ್ನೆ ಬಂದರೆ ಟೀಕೆಯಲ್ಲಿ ಅದನ್ನು ಸೂತ್ರಾರೂಢ ಮಾಡುವುದಕ್ಕಾಗಿ ಚಶಬ್ದವು ಏವಕಾರಾರ್ಥದಲ್ಲಿದೆ ಎಂಬುದಾಗಿ ಅರ್ಥವನ್ನು ಹೇಳಿದ್ದಾರೆ. ಸೂತ್ರದಲ್ಲಿರುವ ಚಶಬ್ದವು ಏವಾರ್ಥದಲ್ಲಿರುವುದರಿಂದ ನಾನ್ಯೇಷಾಂ ಎಂಬರ್ಥವು ನೇರವಾಗಿಯೇ ಸೂತ್ರದಿಂದ ತಿಳಿಯುತ್ತದೆಂಬುದು ಅಭಿಪ್ರಾಯ.

## ಬ್ರಹ್ಮಸೂತ್ರ

### 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – स्वपक्षदोषाच ॥**

ಜೀವಕರ್ತೃತ್ವಪಕ್ಷದಲ್ಲಿ ಕೃತ್ಸ್ನಪ್ರಸಕ್ತ್ಯಾದಿ ದೋಷಗಳು ಬಂದೇ ಬರುತ್ತವೆ. ಏಕೆಂದರೆ ಅವನಲ್ಲಿ ಯಾವುದೇ ಅಚಿಂತ್ಯವಾದ ಶಕ್ತಿಗಳು ಇರುವುದಿಲ್ಲ.

ಅರ್ಥ -- 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಆದ್ದರಿಂದ 'ಯೇ ದೋಷಾಃ ಇತರತ್ರಾಪಿ ತೇ ಗುಣಾಃ ಪರಮೇ ಮತಃ। ನ ದೋಷಃ ಪರಮೇ ಕಶ್ಚಿದ್ಗುಣಾ ಏವ ನಿರಂತರಾಃ॥' ಎಂಬ ಶ್ರುತಿಯಲ್ಲಿ ಸ್ವಪಕ್ಷದೋಷಾತ್ = ಯುಕ್ತಿವಿರೋಧ ದೋಷವನ್ನು ಜೀವಕರ್ತೃತ್ವ ಪಕ್ಷದಲ್ಲಿ ಹೇಳಲಾಗಿದೆ. ಆದ್ದರಿಂದ ಈಶ್ವರಕರ್ತೃತ್ವ ಪಕ್ಷದಂತೆ ದೋಷವಿಲ್ಲವೆಂದು ಹೇಳಬಾರದು.

## ಬ್ರಹ್ಮಸೂತ್ರಭಾಷ್ಯ

### ಜೀವರಲ್ಲಿ ಯಾವುದು ದೋಷವೋ, ಅದು ಶ್ರೀಹರಿಯಲ್ಲಿ ಗುಣ

**ब्रह्मसूत्रभाष्यम् –।। स्वपक्षदोषाच्च ।।२।।**

**ये दोषा इतरत्रापि ते गुणाः परमे मताः ।**

**न दोषः परमे कश्चिद् गुणा एव निरन्तराः ।।**

**इति वचनाज्जीवपक्ष एव दोषो न परपक्षे ।**

ಅನುವಾದ - ಜೀವರ ವಿಷಯದಲ್ಲಿ ಯಾವುದು ದೋಷವಾಗುತ್ತದೋ ಅದು ಪರಮಾತ್ಮನ ವಿಷಯದಲ್ಲಿ ಗುಣವೇ ಆಗುತ್ತದೆ. ಪರಮಾತ್ಮನಲ್ಲಿ ಯಾವುದು ಕೂಡ ದೋಷವೇ ಇಲ್ಲ. ಗುಣಗಳು ಮಾತ್ರ ಇವೆ. ಮತ್ತು ಆ ಗುಣಗಳೆಲ್ಲವೂ ಅವನಿಂದ ಅಭಿನ್ನವಾಗಿವೆ. ಹೀಗೆ ಶ್ರುತಿಯು ಹೇಳುತ್ತಿರುವುದರಿಂದ ಜೀವಪಕ್ಷದಲ್ಲಿ ಮಾತ್ರ ದೋಷವನ್ನು ತಿಳಿಯಬೇಕು. ಪರಮಾತ್ಮನ ಪಕ್ಷದಲ್ಲಿ ಯಾವುದೇ ದೋಷವನ್ನು ತಿಳಿಯಬಾರದು.

ಪ್ರತಿಪದಾರ್ಥ -- ಪರಮಾತ್ಮನಲ್ಲಿ ಶಬ್ದೈಕಸಮಧಿಗಮ್ಯತ್ವವು ಇರುವುದರಿಂದ ಅತ್ಯಾಶ್ಚರ್ಯಕರಶಕ್ತಿಗೆ ಯುಕ್ತಿವಿರೋಧವನ್ನು ಹೇಳಬಾರದೆಂದು ಸಮರ್ಥನೆ ಮಾಡಿದಿರಿ. ಇದರಂತೆ ಜೀವನಲ್ಲಿಯೂ ಏಕೆ ಹೇಳಬಾರದು? ಚೇತನತ್ವಲಿಂಗವು ಸಮಾನವಾಗಿರುವುದರಿಂದ ಯುಕ್ತಿವಿರೋಧಕ್ಕೆ ಅಲ್ಲಿಯೂ ಅವಕಾಶವಿಲ್ಲವಷ್ಟೆ ? ಈ ಆಶಂಕೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ. ಇತರತ್ರ = ಜೀವರಲ್ಲಿ, ಯೇ ದೋಷಾಃ = ಯಾವ ದೋಷಗಳು ಇವೆಯೋ, ಪರಮೇ = ಪರಮಾತ್ಮನಲ್ಲಿ, ತೇ = ಅದೇ ದೋಷಗಳು ಗುಣಾಃ = ಗುಣಗಳೆಂದು, ಮತಾಃ = ಶ್ರುತಿಸಮ್ಮತವಾಗಿವೆ. ಕಶ್ಚಿತ್ = ಯಾವುದೇ ದೋಷವು, ನ = ಇರುವುದಿಲ್ಲ. ನಿರಂತರಾಃ = ಅವಿಚ್ಛಿನ್ನವಾಗಿ, ಗುಣಾ ಏವ = ಗುಣಗಳೇ ಇರುತ್ತವೆ. ಇತಿ ವಚನಾತ್ = ಹೀಗೆ ಶ್ರುತಿಪ್ರಮಾಣವಿರುವುದರಿಂದ, ಜೀವಪಕ್ಷೇ ಏವ = ಜೀವನ ಕರ್ತೃತ್ವಪಕ್ಷದಲ್ಲಿ ಮಾತ್ರ, ದೋಷಃ = ದೋಷವು ಪ್ರಾಪ್ತವಾಗುತ್ತದೆ.

ಪರಪಕ್ಷೇ = ಪರಮಾತ್ಮನು ಕರ್ತೃವಾಗಿದ್ದಾನೆಂಬ ಪಕ್ಷದಲ್ಲಿ, ನ = ಯಾವುದೇ ದೋಷಗಳು ಇರುವುದಿಲ್ಲ.

### ದೇವರಲ್ಲಿ ಇರುವುದೆಲ್ಲ ಗುಣಗಳೇ

**ब्रह्मसूत्रभाष्यम् – 'अथ यस्सदोषः साञ्जनः सजनिः स जीवो यः स निर्दोषो निष्फलः सगुणः परः परमात्मा' इति काषायणश्रुतिः ।।३।।**

ಅನುವಾದ - ಯಾವ ವ್ಯಕ್ತಿಯಲ್ಲಿ ದೋಷಗಳಿವೆಯೋ ಮತ್ತು ಪುಣ್ಯಪಾಪಗಳ ಅನುಭವ ಎದೆಯೋ ಅವನೇ ಜೀವನೆಂದು ಕರೆಸಿಕೊಳ್ಳುತ್ತಾನೆ. ಯಾರು ನಿರ್ದೋಷನೋ ಭಿನ್ನವಾದ ಅಂಶಗಳಿಲ್ಲದವನೋ ಗುಣಪರಿಪೂರ್ಣನೋ ಅವನೇ ಸರ್ವೋತ್ತಮನಾದ ಪರಮಾತ್ಮನೆಂದು ಕರೆಸಿಕೊಳ್ಳುತ್ತಾನೆ.

ಪ್ರತಿಪದಾರ್ಥ -- ಈಶ್ವರನಂತೆ ಜೀವನಲ್ಲಿಯೂ ನಿರ್ದೋಷತ್ವ ಇರುವುದರಿಂದ ಜೀವನಲ್ಲಿ ಕಾಣಸುತ್ತಿರುವ ದೋಷವನ್ನು ಗುಣರೂಪದಲ್ಲಿಯೇ ಏಕೆ ವ್ಯಾಖ್ಯಾನ ಮಾಡಬಾರದು ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಥ = ಪ್ರಕರಣದ ಅನಂತರ, ಯಃ = ಯಾವನು, ಸದೋಷಃ = ದೋಷವಿಶಿಷ್ಟನೋ, ಸಾಂಜನಃ = ಪುಣ್ಯಪಾಪಗಳ ಲೇಪವುಳ್ಳವನೋ ಅಜ್ಞಾನವುಳ್ಳವನೋ, ಸಜನಿಃ = ಹುಟ್ಟುವಿಕೆ-ಯುಳ್ಳವನೋ, ಸಃ = ಅವನು, ಜೀವಃ = ಜೀವಪದವಾಚ್ಯನು, ಯಃ = ಯಾವನು, ನಿರ್ದೋಷಃ = ದೋಷದೂರನು, ನಿಷ್ಕಲಃ = ಭಿನ್ನವಾದ ಅಂಶದಿಂದ ರಹಿತನೂ, ಸಗುಣಃ = ಜ್ಞಾನಾನಂದಾದಿಗುಣಗಳಿಂದ ಪರಿಪೂರ್ಣನೂ ಆಗಿರುವನೋ, ಸಃ = ಅವನೇ ಪರಮಾತ್ಮನೆಂದು ಕರೆಸಿಕೊಳ್ಳುವನು, ಇತಿ = ಹೀಗೆ, ಕಾಷಾಯಣಶ್ರುತಿಃ = ಕಾಷಾಯಣಶ್ರುತಿಯು ಹೇಳುತ್ತಿದೆ.

## ಸತ್ತರ್ಕದೀಪಾವಳಿ

### ಶ್ರುತಿ-ಸ್ಮೃತಿಗಳಿಂದ ವಿಚಿತ್ರಶಕ್ತಿತ್ವದ ಉಪಪಾದನೆ

**सत्तर्कदीपावळिः – अत्र यद् विचित्रशक्तित्वमुक्तं विष्णोः तत् 'विश्वतश्चक्षुः' इत्यादि श्रुत्या 'सर्वतः पाणिपादं तत्' इति भगवद्वाक्येन चावगम्यते । अतः 'बहुभुक्त्वं यथा दोषो नृषु नैव हरौ क्वचित्' इत्ययमेव न्यायः साधीयानित्याह – स्वपक्षेत्यादिना ।।**

ವಿಷ್ಣುವಿಗೆ ವಿಚಿತ್ರವಾದ ಶಕ್ತಿಯಿದೆ ಎಂಬುದನ್ನು ಹಿಂದಿನ ಸೂತ್ರದಲ್ಲಿ ಹೇಳಲಾಗಿತ್ತು. ಇದು 'ವಿಶ್ವತಶ್ಚಕ್ಷುಃ' ಎಂಬ ಶ್ರುತಿಯಿಂದಲೂ ಶ್ರುತವಾಗಿದೆ. 'ಸರ್ವತಃ ಪಾಣಿಪಾದಂ ತತ್' ಎಂಬ ಕೃಷ್ಣನ ವಚನದಿಂದಲೂ ಕೂಡ ಸಿದ್ಧವಾಗಿದೆ. ಬಹುಭುಕ್ತ್ವವು ಮನುಷ್ಯನಲ್ಲಿ ದೋಷವಾಗುತ್ತದೆ. ಶ್ರೀಹರಿಯಲ್ಲಿ ಗುಣವಾಗುತ್ತದೆ ಎಂಬ ನ್ಯಾಯವನ್ನೇ ಪ್ರಕೃತ ಈ ಸೂತ್ರದಲ್ಲಿ ಸಮರ್ಥನೆ ಮಾಡುತ್ತಿದ್ದಾರೆ.

## ತತ್ವಪ್ರದೀಪ

### ಜೀವನು ಸದೋಷಿ, ಈಶನು ನಿರ್ದೋಷಿ

**तत्वप्रदीपः – स्वपक्षदोषाच्च ।। स्वयमेव जीवः कर्ता न स्वस्मादन्य ईश्वर इति वादिनां स्वपक्षे दोषश्च भवति । न हि सर्वोत्पादकत्वं सर्वभुक्त्वं च जीवानां गुणो भवति । ये दोषा इतरत्र तेऽपि गुणाः परमेश्वरे भवन्ति । न हि तत्र दोषः । जीवेशयोः सदोषत्वनिर्दोषत्वश्रुतिविरोधदोषश्च तत्पक्षे । दुःखाल्पज्ञतादिना सदोषः साश्वनः पुण्यपापादिसङ्गी ।।**

ಜೀವನೇ ಕರ್ತೃವಾಗಿದ್ದಾನೆ. ಜೀವನಿಗಿಂತ ಅತಿರಿಕ್ತನಾದ ಈಶ್ವರನು ಕರ್ತೃವಾಗುವುದಿಲ್ಲ ಎಂದು ಹೇಳುವ ವಾದವು ಸ್ವಪಕ್ಷದಲ್ಲಿ ದೋಷವಿದೆ ಎಂಬುದು ಈ ಸೂತ್ರದ ಅರ್ಥ. ಸರ್ವೋತ್ಪಾದಕತ್ವ, ಸರ್ವಭುಕ್ತ್ವ ಎಂಬುದು ಜೀವರಿಗೆ ವರವಾಗುವುದಿಲ್ಲ. ದೋಷವೇ

ಆಗುತ್ತದೆ. ಹೀಗೆ ಬೇರೆ ಕಡೆ ಯಾವುದು ದೋಷವೆಂದು ಕಂಡಿದೆಯೋ, ಅದು ಪರಮಾತ್ಮನಲ್ಲಿ ಗುಣವಾಗುತ್ತದೆ. ಪರಮಾತ್ಮನನ್ನೂ ಕೂಡ ಈ ಸರ್ವೋತ್ಪಾದಕತ್ವ, ಸರ್ವಭುಕ್ತ್ವ ಮೊದಲಾದವುಗಳು ದೋಷವಾಗುವುದಿಲ್ಲ. ಜೀವನು ದೋಷವುಳ್ಳವನಾಗಿದ್ದಾನೆ. ಈಶನು ದೋಷ ಇಲ್ಲದವನಾಗಿದ್ದಾನೆ ಎಂಬುದಾಗಿ ಶ್ರುತಿಯು ಹೇಳುತ್ತಿದೆ. ಇಂಥ ಶ್ರುತಿವಿರೋಧ ದೋಷವು ಜೀವನೇ ಕರ್ತೃವಾಗಿದ್ದಾನೆ ಎಂಬುವರ ಪಕ್ಷದಲ್ಲಿ ಪ್ರಾಪ್ತವಾಗುತ್ತದೆ. ಶ್ರುತಿಯಲ್ಲಿರುವ ಸದೋಷಶಬ್ದಕ್ಕೆ ದುಃಖ, ಅಲ್ಪಜ್ಞತ್ವ ಮೊದಲಾದ ದೋಷಗಳುಳ್ಳವನು ಎಂದರ್ಥ. 'ಸಾಂಜನಃ' ಎಂಬ ಪದಕ್ಕೆ ಪುಣ್ಯ-ಪಾಪಾದಿಗಳ ಅನುಭವವುಳ್ಳವನು ಎಂದರ್ಥ.

### ತತ್ವಪ್ರಕಾಶಿಕಾ

### ಜೀವನಲ್ಲೇಕೆ ವಿರೋಧಪರಿಹಾರ ಮಾಡುವುದಿಲ್ಲ?

**तत्वप्रकाशिका – ननु यथा शब्दैकसमधिगम्यत्वादिना विष्णोर्युक्तिविरोधोऽप्यविरोधतां नीयते तथा चेतनत्वादिना जीवेऽपि किं न नीयते । अन्यथेश्वरेऽपि न नेतव्य इत्याशङ्कां परिहरत्सूत्रं पठित्वा व्याचष्टे – स्वपक्षेति।।**

ಯಾವ ರೀತಿಯಾಗಿ ಶಬ್ದೈಕಸಮಧಿಗಮ್ಯತ್ವವಿರುವುದರಿಂದ ವಿಷ್ಣುವಿನಲ್ಲಿ ವಿರುದ್ಧವಾದ ಯುಕ್ತಿಯು ಅವಿರುದ್ಧವಾಗುತ್ತದೋ, ಅದರಂತೆ ಜೀವನಲ್ಲೂ ಕೂಡ ಚೇತನತ್ವ ಇರುವುದರಿಂದ ವಿರುದ್ಧವಾದದ್ದು ಅವಿರುದ್ಧ ಏಕಾಗಬಾರದು? ಜೀವನಲ್ಲಿ ಹಾಗೆ ಒಪ್ಪದಿದ್ದರೆ ಈಶ್ವರನಲ್ಲಿಯೂ ಕೂಡ ವಿರುದ್ಧವಾದದ್ದನ್ನು ಅವಿರುದ್ಧವೆಂದು ಹೇಳುವುದು ಬೇಡ. ಈ ಆಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ 'ಸ್ವಪಕ್ಷದೋಷಾಚ್ಚ' ಇತ್ಯಾದಿಯಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಶಬ್ದೈಕಸಮಧಿಗಮ್ಯತ್ವಾದಿನಾ' ಎಂಬಲ್ಲಿರುವ ಆದಿಪದದಿಂದ ವಿಚಿತ್ರಶಕ್ತಿಮತ್ವವನ್ನು ವಿವಕ್ಷಿಸಬೇಕು. 'ಚೇತನತ್ವಾದಿನಾ' ಎಂಬಲ್ಲಿರುವ ಆದಿಪದದಿಂದ ಕರ್ತೃತ್ವ ಮೊದಲಾದ ಧರ್ಮಗಳನ್ನು ವಿವಕ್ಷಿಸಬೇಕು.

### ಯುಕ್ತಿವಿರೋಧವು ಜೀವಪಕ್ಷದಲ್ಲಿ ಮಾತ್ರ ದೋಷ

**तत्वप्रकाशिका – जीवपक्षे युक्तिविरोधो दोष एव न त्वदोषतां नेतव्यः किं तु परमेश्वरपक्ष एव । कुतः ? 'ये दोषाः' इति वचने सयुक्तिकमुक्तत्वादिति भावः ।**

ಜೀವಪಕ್ಷದಲ್ಲಿ ಯುಕ್ತಿವಿರೋಧವು ದೋಷವೇ ಆಗುತ್ತದೆ. ಅದೋಷವೆಂದು ಕೂಡಿಸಲು ಸಾಧ್ಯವಾಗುವುದಿಲ್ಲ. ಪರಮಾತ್ಮನ ಪಕ್ಷದಲ್ಲಿ ಮಾತ್ರ ಯುಕ್ತಿವಿರೋಧವು ಅದೋಷ ಎನಿಸುತ್ತದೆ. ಏಕೆಂದರೆ 'ಯೇ ದೋಷಾಃ' ಎಂಬ ಮಾತಿನಿಂದ ಯುಕ್ತಿಸಹಿತವಾಗಿ ಇದನ್ನು ಸಮರ್ಥನೆ ಮಾಡಲಾಗಿದೆಯೆಂಬುದು ಸೂತ್ರದ ಅಭಿಪ್ರಾಯ.

ವಿವರಣೆ - 'ಸ್ವಪಕ್ಷದೋಷಾಚ್ಚ' ಎಂಬ ಸೂತ್ರದಲ್ಲಿ ಸ್ವ ಶಬ್ದಕ್ಕೆ ಜೀವ ಎಂದರ್ಥ. 'ಚ' ಶಬ್ದಕ್ಕೆ ಸ್ವಪಕ್ಷ ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಆಗ ಜೀವಪಕ್ಷದಲ್ಲಿ ಮಾತ್ರ ಯುಕ್ತಿವಿರೋಧವು ದೋಷವಾಗುತ್ತದೆ ಎಂಬರ್ಥವು ದೊರೆಯುತ್ತದೆ. 'ಚ' ಶಬ್ದಕ್ಕೆ ಅವಧಾರಣಾರ್ಥವನ್ನು ವಿವಕ್ಷಿಸಬೇಕು. ಇದನ್ನು 'ಜೀವಪಕ್ಷೇ' ಇತ್ಯಾದಿ ಟೀಕಾವಾಕ್ಯದಿಂದ ತಿಳಿಸಿದ್ದಾರೆ.

### ಭಗವಂತನಲ್ಲಿ ಇರುವುದೆಲ್ಲವೂ ಗುಣವೇ

**तत्वप्रकाशिका – दोषा भगवदितरत्र प्रतीताश्चेत्तर्हि ते दोषा एव, न तु कयाचन विधया अदोषतां नेतव्याः । तत्र दोषाणां सम्भवेन कल्पकाभावात्। त एव चेद्विष्णौ प्रतीयन्ते तर्हि तेऽचिन्त्यशक्त्यादिना गुणा एव कल्पनीया न दोषाः ।**

ದೋಷಗಳು ಭಗವಂತನನ್ನು ಬಿಟ್ಟು ಬೇರೆ ವಸ್ತುಗಳಲ್ಲಿ ಪ್ರತೀತವಾದರೆ ಅದು ದೋಷವೆಂದೇ ಪರಿಗಣಿಸಬೇಕು. ಯಾವುದೇ ವಿಧದಿಂದಲೂ ಅವುಗಳನ್ನು ದೋಷವಲ್ಲವೆಂದು ಕೂಡಿಸಬಾರದು. ಏಕೆಂದರೆ ಭಗವಂತನನ್ನು ಬಿಟ್ಟು ಬೇರೆ ಕಡೆ ದೋಷಗಳು ಇರುವುದರಿಂದ ಅದೋಷವೆಂದು ಹೇಳಲು ಯಾವುದೇ ಕಲ್ಪಕಗಳು ಇರುವುದಿಲ್ಲ. ಆದರೆ ಅದೇ ದೋಷಗಳು

ವಿಷ್ಣುವಿನಲ್ಲಿ ಪ್ರತೀತವಾದರೆ ಅವುಗಳನ್ನು ಅಚಿಂತ್ಯಶಕ್ತಿ ಮೊದಲಾದ ಯುಕ್ತಿಗಳಿಂದ ಗುಣಗಳೆಂದೇ ಕಲ್ಪನೆ ಮಾಡಬೇಕು. ದೋಷವಲ್ಲವೆಂದು ಕಲ್ಪನೆ ಮಾಡಬಾರದು.

### ನಿರ್ದೋಷ ನಿರ್ಭೇದಗುಣವತ್ತ್ವವು ಈಶ್ವರನಲ್ಲಿ ಮಾತ್ರ

**तत्वप्रकाशिका – भगवतो निर्दोषनिर्भेदगुणतया श्रुतिसिद्धत्वेन कल्पकसद्भावादिति वचनार्थः । ईश्वरवज्जीवस्यापि निर्दोषत्वात्तत्र प्रतीतदोषोऽन्यथैव नेतव्य इत्यत आह – अथेति ।। साञ्जनः पुण्यपापादिलेपयुक्तः । चशब्द एवार्थोऽतो न परपक्ष इत्याह ।।**

ಭಗವಂತನು ನಿರ್ದುಷ್ಟನಾಗಿದ್ದಾನೆ. ಭೇದವಿಲ್ಲದ ಗುಣಗಳುಳ್ಳವನಾಗಿದ್ದಾನೆಂಬುದಾಗಿ ಶ್ರುತಿಗಳು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ನಿರ್ದೋಷ ಹಾಗೂ ನಿರ್ಭೇದಗುಣವತ್ತ್ವವು ದೋಷಗಳಿಲ್ಲವೆನ್ನಲು ಕಲ್ಪಕವಾಗಿವೆ. ಇದು ಭಾಷ್ಯದಲ್ಲಿ ಉದಾಹರಿಸಿದ ವಚನದ ಅಭಿಪ್ರಾಯ.

ಈಶ್ವರನಂತೆ ಜೀವನಲ್ಲೂ ಕೂಡ ನಿರ್ದೋಷತ್ವವಿದೆ. ಆದ್ದರಿಂದ ಜೀವನಲ್ಲಿ ಪ್ರತೀತವಾದ ದೋಷವನ್ನು ಈಶ್ವರನಂತೆ ಬೇರೆ ರೀತಿಯಲ್ಲೇ ಕೂಡಿಸಬೇಕಲ್ಲವೆ? ಎಂಬ ಪ್ರಶ್ನೆಗೆ 'ಅಥ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಶ್ರುತಿಯಲ್ಲಿರುವ ಸಾಂಜನಃ ಎಂಬ ಪದಕ್ಕೆ ಪುಣ್ಯಪಾಪಾದಿಲೇಪಗಳು ಇಲ್ಲದವನೆಂದು ಅರ್ಥ. ಸೂತ್ರದಲ್ಲಿರುವ 'ಚ' ಶಬ್ದವು ಏವಕಾರಾರ್ಥದಲ್ಲಿದೆ. ಆದ್ದರಿಂದ ಪರಮಾತ್ಮನ ಪಕ್ಷದಲ್ಲಿ ಪುಣ್ಯಪಾಪಾದಿದೋಷಗಳು ಇಲ್ಲವೆಂದು ತಿಳಿಯಬೇಕು.

### ಭಾವದೀಪ

### ಸೂತ್ರದ ಚಶಬ್ದಕ್ಕೆ ವ್ಯಾಖ್ಯಾನ

**भावदीपः** – ।। स्वपक्ष इति० ।। ३० ।। सौत्रचशब्दोऽवधारणे भाष्ये च भिन्नक्रम इति भावेन जीवपक्ष एवेत्यादिवाक्यं व्याचष्टे – **जीवपक्ष इति** ।। अप्रतीतेरुक्तार्थपरतया श्रुतिं योजयति – **दोषा इति** ।। निरन्तरा इत्यस्यार्थो – **निर्भेदेति** ।। ३० ।।

ಸೂತ್ರದಲ್ಲಿರುವ 'ಚ'ಶಬ್ದವು ಅವಧಾರಣಾರ್ಥದಲ್ಲಿದೆ. ಇದನ್ನು ಭಾಷ್ಯದಲ್ಲಿ ಭಿನ್ನಕ್ರಮದಿಂದ ಯೋಜನೆ ಮಾಡಲಾಗಿದೆ. ಈ ಅಭಿಪ್ರಾಯದಿಂದ 'ಜೀವಪಕ್ಷೇ ಏವ' ಇತ್ಯಾದಿ ವ್ಯಾಖ್ಯಾನಮಾಡಲು 'ಜೀವಪಕ್ಷ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಪರಮಾತ್ಮಪರವಾಗಿ ಶ್ರುತಿಯನ್ನು ಯೋಜನೆ ಮಾಡಲು 'ದೋಷಾಃ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ನಿರಂತರಾ' ಎಂಬ ಪದದ ಅರ್ಥವನ್ನು 'ನಿರ್ಭೇದ' ಎಂಬುದಾಗಿ ಹೇಳಿದ್ದಾರೆ.

## ಬ್ರಹ್ಮಸೂತ್ರ

### 'ಸರ್ವೋಪೇತಾ ಚ ತದ್ದರ್ಶನಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – सर्वोपेता च तद्दर्शनात् ।।**

ಪರಮಾತ್ಮನಿಗೆ ಸಾಮಾನ್ಯವಾಗಿ ವಿಚಿತ್ರಶಕ್ತಿಯಿದೆ ಎಂದಷ್ಟೆ ತಿಳಿಯಬಾರದು. ಸರ್ವವಿಷಯಕವಾದ, ಸಾರ್ವಕಾಲಿಕವಾದ ವಿಚಿತ್ರಶಕ್ತಿಯಿರುತ್ತದೆಂದು ತಿಳಿಯಬೇಕು.

ಅರ್ಥ -- ಪರಮಾತ್ಮನೆಂಬ ದೇವತೆಗೆ ಸಾಮಾನ್ಯವಾಗಿ ವಿಚಿತ್ರಶಕ್ತಿಯಿರುತ್ತದೆ ಎಂದಷ್ಟೇ ತಿಳಿಯಬಾರದು. ಸರ್ವೋಪೇತಾ = ಸರ್ವವಿಷಯಕವಾದ, ಸಾರ್ವಕಾಲಿಕವಾದ ವಿಚಿತ್ರಶಕ್ತಿಯಿರುತ್ತದೆಂದು ಚ = ಕೂಡ ತಿಳಿಯಬೇಕು. ಏಕೆಂದರೆ 'ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ ಪರೇತಿ ಯಾಂ ಪ್ರಾಹುರಜಸ್ರಶಕ್ತಿಂ। ನಿತ್ಯಾನಂದಾ ನಿತ್ಯರೂಪಾಜರಾ ಚ ಯಾ ಶಾಶ್ವತಾತ್ಮೇತಿ ಚ ಯಾಂ ವದಂತಿ॥' ಎಂಬ ಶ್ರುತಿಯು ಪರಮಾತ್ಮನಲ್ಲಿರುವ ಶಕ್ತಿಗಳನ್ನು ಶಾಶ್ವತವಾದವೆಂದು ಪ್ರತಿಪಾದನೆ ಮಾಡುತ್ತಿದೆ.

## ಬ್ರಹ್ಮಸೂತ್ರಭಾಷ್ಯ

### ಶ್ರೀಹರಿ ಸಕಲ ಶಕ್ತಿಗಳ ಆಕರ

**ब्रह्मसूत्रभाष्यम् – ।। सर्वोपेता च तद्दर्शनात् ।।४।।**

**'सर्वैर्युक्ता शक्तिभिर्देवता सा परेति यां प्राहुरजस्रशक्तिम् ।**
**नित्यानन्दा नित्यरूपाऽजरा च या शाश्वतात्मेति च यां वदन्ति ।।'**

**इति चतुर्वेदशिखायाम् । अतो न केवलं विचित्रशक्तिः, किन्तु सर्वशक्तिरेव ।।४।।**

ಅನುವಾದ - ಸಕಲವಿಧವಾದ ಶಕ್ತಿಗಳಿಂದ ಯುಕ್ತನಾದ ಶ್ರೇಷ್ಠದೇವತೆಯಾದ ವ್ಯಕ್ತಿಯನ್ನು ಜ್ಞಾನಿಗಳು ನಿತ್ಯ ಶಕ್ತಿಯುಳ್ಳವನೆಂದು, ನಿತ್ಯವಾದ ಆನಂದಪೂರ್ಣನೆಂದು, ನಿತ್ಯವಾದ ಸ್ವರೂಪವುಳ್ಳವನೆಂದು,ವಾರ್ಧಕ್ಯದಿಂದ ರಹಿನಾದವನು, ಶಾಶ್ವತವಾಗಿ ನಿಯಾಮಕನಾಗಿರುವನು ಎಂದು ಕರೆಯುತ್ತಾರೆ. ಹೀಗೆ ಚತುರ್ವೇದಶಿಖಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಆದ್ದರಿಂದ ಪರಮಾತ್ಮನಲ್ಲಿ ಕೇವಲ ವಿಚಿತ್ರಶಕ್ತಿಯಿರುವುದಷ್ಟೇ ಅಲ್ಲ, ಸಕಲವಿಧವಾದ ಶಕ್ತಿಗಳು ಇರುತ್ತವೆ. ಎಂದೂ ಯಾವ ಕ್ಷಣದಲ್ಲೂ ಅಂಥ ಆಶ್ಚರ್ಯಕರವಾದ ಶಕ್ತಿಯ ಲವಲೇಶವೂ ಕುಂದುವುದಿಲ್ಲ. ಆದ್ದರಿಂದ ಅವನು ಮಾತ್ರ ಜಗಜ್ಜನ್ಮಾದಿಕಾರಣನಾಗಲು ಸಾಧ್ಯ?

ಪ್ರತಿಪದಾರ್ಥ -- ಸಾದೇವತಾ = ಆ ಭಗವಂತನು, ಸರ್ವೈಃ ಶಕ್ತಿಭಿಃ = ಎಲ್ಲಾ ಬಗೆಯ ಶಕ್ತಿಗಳಿಂದ, ಯುಕ್ತಾ = ಕೂಡಿರುವನು. ಯಾಂ = ಯಾವ ಪರಮಾತ್ಮನನ್ನು, ಪರಾ = ಉತ್ತಮವನ್ನಾಗಿ, ಅಜಸ್ರಮ್ = ಅಚ್ಛಿನ್ನನಾಗಿ, ನಿತ್ಯಾನಂದಾ = ನಿರಂತರ ಆನಂದಮಯನನ್ನಾಗಿ, ನಿತ್ಯರೂಪಾ = ನಿತ್ಯವಾದ ಸ್ವರೂಪವುಳ್ಳವನನ್ನಾಗಿ, ಅಜರಾ = ವಾರ್ಧಕ್ಯರಹಿತನನ್ನಾಗಿ, ಶಾಶ್ವತಾ = ಶಶ್ವದೇಕಸ್ವಭಾವವನ್ನಾಗಿ, ಆತ್ಮಾ = ಸ್ವಾಮಿಯನ್ನಾಗಿ, ವದಂತಿ = ಹೇಳುತ್ತಾರೋ, ಪರಮಾತ್ಮನು. ಇತಿ = ಹೀಗೆ, ಚತುರ್ವೇದಶಿಖಾಯಾಮ್ = ಚತುರ್ವೇದಶಿಖಾವೆಂಬ ಗ್ರಂಥದಲ್ಲಿ ಹೇಳಲಾಗಿದೆ. ಅಥ = ಆದ್ದರಿಂದ ಪರಮಾತ್ಮನಲ್ಲಿ, ವಿಚಿತ್ರಶಕ್ತಿಃ ಕೇವಲಂ = ವಿಚಿತ್ರಶಕ್ತಿ ಇರುವುದಲ್ಲ, ಕಿಂತು = ಹೊರತಾಗಿ, ಸರ್ವಶಕ್ತಿರೇವ = ಸಕಲವಿಷಯಕವಾದ ಶಕ್ತಿಯು ಇರುತ್ತದೆ.

ಸತ್ತರ್ಕದೀಪಾವಳಿ

*ಸರ್ವಶಕ್ತಿತ್ವದ ಸಮರ್ಥನೆ*

**सत्तर्कदीपावलिः** – विचित्रशक्तिर्भगवान् इत्युक्तम् । न केवलं विचित्रशक्तिर्भगवान् किन्तु सर्वशशक्तिरेव इत्याह – सर्वोपेतेत्यादिना ।।

ಪರಮಾತ್ಮನು ವಿಚಿತ್ರಶಕ್ತಿವುಳ್ಳವನೆಂದು ಹೇಳಲಾಯಿತು. ಅಷ್ಟೇ ಅಲ್ಲ, ಸರ್ವಶಕ್ತಿಯುಳ್ಳವನೂ ಆಗಿದ್ದಾನೆಂಬುದನ್ನು ಉಪಪಾದನೆ ಮಾಡಲು 'ಸರ್ವೋಪೇತಾಚ' ಇತ್ಯಾದಿ ಸೂತ್ರವು ಹೊರಟಿದೆ.

### ತತ್ವಪ್ರದೀಪ

ಅದ್ಭುತಶಕ್ತಿಗಳಿರುವುದು ಶ್ರೀಹರಿಯಲ್ಲಿ ಮಾತ್ರ

**तत्वप्रदीपः – सर्वोपेता च तद्दर्शनात् ।। न च कतिपया विचित्राः शक्तय एव केवलं परस्य सर्वाः शक्तयः सन्त्येव नित्याश्च ता इत्यभिप्रायः ।**

ಪರಮಾತ್ಮನಿಗೆ ಕೆಲವೇ ಕೆಲವು ವಿಚಿತ್ರಶಕ್ತಿಗಳಿರುವುದಲ್ಲ. ಎಲ್ಲಾ ಬಗೆಯ ವಿಚಿತ್ರಶಕ್ತಿಗಳು ಅದ್ಭುತಶಕ್ತಿಗಳು ಇರುತ್ತವೆ. ಮತ್ತು ಅವುಗಳು ನಿತ್ಯವಾಗಿವೆ ಎಂಬುದು 'ಸರ್ವೋಪೇತಾ ಚ ತದ್ದರ್ಶನಾತ್' ಎಂಬ ಸೂತ್ರದ ಅಭಿಪ್ರಾಯ.

### ತತ್ವಪ್ರಕಾಶಿಕಾ

ಪರಮಾತ್ಮನಲ್ಲಿರುವ ವಿಚಿತ್ರಶಕ್ತಿಯು ನಾಶವಾದಾಗ ಏನು ಗತಿ? ಎಂದು ಆಕ್ಷೇಪ

**तत्वप्रकाशिका – यदुक्तं विचित्रशक्तित्वान्नेश्वरे विरोध इति तदसत् । सा विचित्रशक्तिर्यदाल्पविषया भवति यदा च नश्यति तदा तत्र विरोधनियमादित्याशङ्कां परिहरत्सूत्रमुपन्यस्य व्याचष्टे । सर्वेति ।।**

ವಿಚಿತ್ರಶಕ್ತಿ ಇರುವುದರಿಂದ ಈಶ್ವರನಲ್ಲಿ ಸ್ವತಂತ್ರಕರ್ತೃತ್ವವನ್ನು ಒಪ್ಪಿದರೆ ಯಾವುದೇ ಕೃತ್ಸ್ನಪ್ರಸಕ್ತ್ಯಾದಿ ವಿರೋಧಗಳು ಬರುವುದಿಲ್ಲವೆಂದು ಈ ಹಿಂದೆ ಏನು ಸಮರ್ಥನೆ ಮಾಡಿದರೋ ಇದು ತಪ್ಪು. ಏಕೆಂದರೆ ಈ ವಿಚಿತ್ರಶಕ್ತಿಯು ಒಂದು ವೇಳೆ ಅಲ್ಪವಸ್ತುವನ್ನು ವಿಷಯೀಕರಿಸುವುದಾದಲ್ಲಿ ಅಥವಾ ಸ್ವಲ್ಪ ಸಮಯದ ನಂತರ ನಾಶವಾಗುವುದಾದಲ್ಲಿ ಆಗ

ಪುನಃ ಅದೇ ಯುಕ್ತಿಗಳ ವಿರೋಧವು ನಿಯಮೇನ ಬರುತ್ತದಲ್ಲವೆ? ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು 'ಸರ್ವೋಪೇತಾ ಚ ತದ್ದರ್ಶನಾತ್' ಎಂಬುದಾಗಿ ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ನರ್ತನ, ಗಾನ ಮೊದಲಾದ ಕಲೆಗಳಲ್ಲಿ ವಿಚಿತ್ರಶಕ್ತಿ ಇರುವುದನ್ನು ನಟ ಮೊದಲಾದವರಲ್ಲಿ ನಾವು ಕಾಣುತ್ತೇವೆ. ಅದೇ ನಟರಿಗೆ ಶಾಸ್ತ್ರಾಭ್ಯಾಸದಲ್ಲಿ ಅಂತಹ ವಿಚಿತ್ರಶಕ್ತಿ ಇರುವುದಿಲ್ಲ. ಅಥವಾ ಶಾಸ್ತ್ರಾಭ್ಯಾಸದಲ್ಲಿ ವಿಚಿತ್ರಶಕ್ತಿ ಇರುವವನಿಗೆ ನರ್ತನ ಗಾನ ಮೊದಲಾದವುಗಳಲ್ಲಿ ವಿಚಿತ್ರಶಕ್ತಿ ಇರುವುದಿಲ್ಲ. ಈ ವಿಚಿತ್ರಶಕ್ತಿಯೂ ಕೂಡ ಸ್ವಲ್ಪ ಸಮಯದ ಅನಂತರ ವಾರ್ಧಕ್ಯವು ಪ್ರಾಪ್ತವಾದಾಗ ನಶಿಸುತ್ತದೆ. ಅದರಂತೆ ಪರಮಾತ್ಮನಲ್ಲಿಯೂ ಕೂಡ ಕೆಲವು ವಿಚಿತ್ರಶಕ್ತಿಗಳಷ್ಟೇ ಇರುತ್ತವೆ. ಅಥವಾ ಅವನ ವಾರ್ಧಕ್ಯದಲ್ಲಿ ನಾಶವನ್ನು ಹೊಂದುತ್ತವೆ ಎಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. (ಗುರ್ವರ್ಥದೀಪಿಕಾ)

### ಈಶ್ವರನಲ್ಲಿರುವ ವಿಶೇಷಶಕ್ತಿಯು ಸರ್ವವಿಷಯಕ ಹಾಗೂ ಅನಂತ

**ತत्वप्रकाशिका – न केवलं सामान्यतो विचित्रशक्तिरीश्वरः किन्तु सर्वविषये सर्वदा विद्यमानविचित्रशक्तिः । यतः 'सर्वैर्युक्ता' इति श्रुतौ तथोक्तमिति भावः । सर्वैः सर्वविषयाभिः । अजस्रशक्तिं नित्यशक्तिम् । श्रुत्यनुसारेण स्त्रीलिङ्गप्रयोगः ।।**

ಪರಮಾತ್ಮನಲ್ಲಿ ಸಾಮಾನ್ಯವಾದ ವಿಚಿತ್ರಶಕ್ತಿ ಇದೆ ಎಂದಷ್ಟೇ ಅಲ್ಲ, ಮತ್ತೇನೆಂದರೆ ಆ ವಿಚಿತ್ರಶಕ್ತಿಯು ಸರ್ವವಿಷಯಕವಾಗಿದೆ. ಹಾಗೂ ಸರ್ವದಾ ವಿದ್ಯಮಾನವಾಗಿದೆ ಎಂದೇ ಹೇಳುತ್ತೇವೆ. ಏಕೆಂದರೆ 'ಸರ್ವೈರ್ಯುಕ್ತಾ' ಇತ್ಯಾದಿ ಶ್ರುತಿಯು ಈಶ್ವರನ ವಿಚಿತ್ರ ಶಕ್ತಿಯನ್ನು ಸಕಲವಿಷಯಕವೆಂದು ಎಂದೂ ನಾಶವಿಲ್ಲವೆಂದು ಸಮರ್ಥನೆ ಮಾಡುತ್ತಿದೆ. ಈ ಶ್ರುತಿಯಲ್ಲಿರುವ 'ಸರ್ವೈಃ' ಎಂಬ ಪದಕ್ಕೆ ಸಕಲವಸ್ತುವಿಷಯಕವಾಗಿದೆ ಎಂದರ್ಥ. 'ಅಜಸ್ರಶಕ್ತಿಂ' ಎಂಬ ಶಬ್ದಕ್ಕೆ ನಿತ್ಯವಾದ ಶಕ್ತಿಯುಳ್ಳವನು ಎಂದರ್ಥ. ಶ್ರುತಿಗೆ ಅನುಸಾರಿಯಾಗಿ 'ಸರ್ವೋಪೇತಾ' ಎಂಬ ಸ್ತ್ರೀಲಿಂಗಪ್ರಯೋಗವನ್ನು ಸೂತ್ರಕಾರರು ಮಾಡಿದ್ದಾರೆ.

ವಿವರಣೆ - ಶ್ರುತಿಯಲ್ಲಿ 'ಸರ್ವೈಃ' ಎಂದು ಸ್ತ್ರೀಲಿಂಗಪ್ರಯೋಗವನ್ನು ಮಾಡಿರುವುದರಿಂದ ಟೀಕೆಯಲ್ಲಿ 'ಸರ್ವೈಃ ವಿಷಯಾಭಿಃ' ಎಂದು ಸ್ತ್ರೀಲಿಂಗವನ್ನು ಪ್ರಯೋಗಿಸುವ ಮೂಲಕ ವ್ಯಾಖ್ಯಾನ ಮಾಡಿದ್ದಾರೆ. ಹಿಂದಿನ ಸೂತ್ರದಲ್ಲಿ 'ಆತ್ಮನಿ' ಎಂಬ ಪದವನ್ನು ಪ್ರಯೋಗಿಸಿರುವುದರಿಂದ ಆತ್ಮಾಶಬ್ದವು ಪುಲ್ಲಿಂಗವಾದ್ದರಿಂದ ಇಲ್ಲಿಯೂ ಕೂಡ 'ಸರ್ವೋಪೇತಶ್ಚ' ಎಂಬುದಾಗಿ ಪುಲ್ಲಿಂಗವನ್ನೇ ಪ್ರಯೋಗ ಮಾಡಬೇಕಿತ್ತು. ಆದರೆ 'ಸರ್ವೈೕಯುಕ್ತಾ ಶಕ್ತಿಭಿರ್ದೇವತಾಸಾ' ಎಂಬ ಶ್ರುತಿಯಲ್ಲಿರುವ ಶಕ್ತಿಶಬ್ದವು ಸ್ತ್ರೀಲಿಂಗದಲ್ಲಿರುವುದರಿಂದ ಶ್ರುತಿಗೆ ಅನುಸಾರಿಯಾಗಿ 'ಸರ್ವೋಪೇತಾ' ಎಂಬುದಾಗಿ ಸ್ತ್ರೀಲಿಂಗವನ್ನು ಪ್ರಯೋಗಿಸಿದ್ದಾರೆ. (ಗುರ್ವರ್ಥದೀಪಿಕಾ)

ಭಾವದೀಪ

ವ್ಯುತ್ಕ್ರಮದಿಂದ ಭಾಷ್ಯದ ವ್ಯಾಖ್ಯಾನ

**भावदीपः** – ॥ सर्वोपेता च तद्दर्शनात् ॥ ३१ ॥ व्युत्क्रमेण भाष्यं व्याकुर्वन् सूत्रार्थमाह – **न केवलमिति** ।। चः समुच्चय इति भावः। प्रकृतोपयोगितां श्रुतेर्दर्शयितुं पदद्वयार्थमाह – **सर्वैरिति** ।। आत्मनीतिप्रकृतत्वात् कथं सर्वोपेतेति सूत्रे प्रयोग इत्यत आह– **श्रुतीति** ।।

ವ್ಯುತ್ಕ್ರಮದಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡಲು ಸೂತ್ರಾರ್ಥವನ್ನು 'ನ ಕೇವಲಂ' ಇತ್ಯಾದಿ ಟೀಕೆಯಲ್ಲಿ ಹೇಳಿದ್ದಾರೆ. ಸೂತ್ರದಲ್ಲಿರುವ ಚಶಬ್ದವು ಸಮುಚ್ಚಯಾರ್ಥದಲ್ಲಿದೆ ಎನ್ನುವ ಅಭಿಪ್ರಾಯದಿಂದ 'ನ ಕೇವಲಂ' ಎಂದು ಹೇಳಿದ್ದಾರೆ. ಶ್ರುತಿಗೆ ಪ್ರಕೃತೋಪಯೋಗಿತ್ವವನ್ನು ತೋರಿಸುವುದಕ್ಕಾಗಿ ಎರಡು ಪದಗಳ ಅರ್ಥವನ್ನು 'ಸರ್ವೈಃ' ಎಂದು ಹೇಳಿದ್ದಾರೆ. 'ಆತ್ಮನಿ' ಎಂಬುದು ಪ್ರಕೃತವಾಗಿರಬೇಕಾದರೆ 'ಸರ್ವೋಪೇತಾ' ಎಂಬುದಾಗಿ ಸೂತ್ರದಲ್ಲೇಕೆ ಪ್ರಯೋಗ ಮಾಡಿದ್ದಾರೆ? ಎಂಬುದಕ್ಕೆ ಶ್ರುತಿ ಎಂದು ಉತ್ತರಿಸಿದ್ದಾರೆ.

ವಿವರಣೆ – 'ಕರಣಾಭಾವಾತ್ ಅನುಪಪತ್ತಿಃ' ಎಂಬ ಭಾಷ್ಯವನ್ನು ವಿವರಿಸಲು 'ವಿಕರಣತ್ವಾತ್ ನ' ಎಂಬ ಸೂತ್ರಖಂಡವನ್ನು 'ನ ಈಶ್ವರಸ್ಯ' ಎಂಬುದಾಗಿ ವ್ಯಾಖ್ಯಾನ

ಮಾಡುತ್ತಿದ್ದಾರೆ. 'ಇತಿ ಶ್ರುತೇಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ತದ್ದರ್ಶನಾತ್' ಎಂಬುದು ಇಲ್ಲೂ ಕೂಡ ಅನುವೃತ್ತವಾಗುತ್ತದೆ. ಅಥವಾ ಅದರ ತಾತ್ಪರ್ಯವು ಲಬ್ಧವಾಗುತ್ತದೆಂಬ ದೃಷ್ಟಿಯಿಂದ 'ಇತಿ ಶ್ರುತೇಃ' ಎಂದಿದ್ದಾರೆ. ಮೃತನಾದವನಿಗೆ ಇದು ಯುಕ್ತವಾಗುವುದಿಲ್ಲ ಎಂಬರ್ಥವನ್ನು ತಿಳಿಯಬಾರದೆಂದು ಇದರಿಂದ ತಿಳಿಸಿದ್ದಾರೆ. ಸೂತ್ರದಲ್ಲಿರುವ ನಞ್ ಎಂಬುದು ಆವೃತ್ತವಾಗುತ್ತದೆ ಅಥವಾ ಅಧ್ಯಾಹೃತವಾಗುತ್ತದೆಂದು ತಿಳಿಯಬೇಕು. ಭಾಷ್ಯದಲ್ಲಿ ಉಲ್ಲೇಖ ಮಾಡಿದ ನಾಲ್ಕು ವಾಕ್ಯಗಳಿಗೂ ಉಪಯೋಗವನ್ನು ಹೇಳಲು 'ಅಪಾಣಿಪಾದಃ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ಪ್ರಮಾಣವಿಶೇಷೇ ಏವ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿ 'ಅಪಾಣಿಪಾದಃ' ಇತ್ಯಾದಿಯಾಗಿ ಹೇಳಿದಂತೆ ತಿಳಿಯಬೇಕೆಂದು ಅಭಿಪ್ರಾಯ. 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಪರಮಾತ್ಮನಿಗೆ ಅಪ್ರಾಕೃತ-ವಿಗ್ರಹತ್ವವನ್ನು ಹೇಳಿರುವುದರಿಂದ ಎರಡನೇ ಪಕ್ಷವನ್ನು ಇಲ್ಲಿ ವಿವಕ್ಷಿಸಿದ್ದಾರೆ. 'ಅತಃ' ಎಂಬ ಪದಕ್ಕೆ ಶ್ರೌತತ್ವ ಶಬ್ದಮೂಲತ್ವಾದಿಗಳು ಜೀವನಿಗಿಂತ ಅತಿಶಯವಾಗಿ ಪರಮಾತ್ಮನಲ್ಲಿ ಇರುತ್ತವೆ ಆದ್ದರಿಂದ ಎಂದರ್ಥ.

## ಬ್ರಹ್ಮಸೂತ್ರ

### 'ವಿಕರಣತ್ವಾತ್' ಇತ್ಯಾದಿ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – विकरणत्वान्नेति चेत् तदुक्तम् ।।**

ಈಶ್ವರನು ಜೀವನಂತೆ ಜಗತ್ಕರ್ತೃ ಆಗಲಾರ. ಏಕೆಂದರೆ ಶ್ರುತಿಯಲ್ಲಿ ಈಶ್ವರನಿಗೆ 'ಅಪಾಣಿಪಾದಃ' ಎಂಬುದಾಗಿ ಹಸ್ತಪಾದಾದಿ ಇಂದ್ರಿಯಗಳೇ ಇಲ್ಲವೆಂದು ಹೇಳಲಾಗಿದೆಯಲ್ಲವೇ? ಎಂದು ಆಕ್ಷೇಪ ಮಾಡಬಾರದು ಏಕೆಂದರೆ ನಮ್ಮಂತೆ ಜಡವಾದ ಇಂದ್ರಿಯಗಳು ಈಶ್ವರನಿಗೆ ಇಲ್ಲವೆಂದಷ್ಟೆ ಶ್ರುತಿಯ ಅಭಿಪ್ರಾಯ.

ಅರ್ಥ -- 'ನ' ಎಂಬ ಪದವನ್ನು ಆವೃತ್ತಿ ಮಾಡಿಕೊಳ್ಳಬೇಕು. ವಿಕರಣತ್ವಾತ್ = 'ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಸ್ಸ ಶೃಣೋತ್ಯಕರ್ಣಃ। ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಂ ॥' ಎಂಬ ಶ್ರುತಿಯಿಂದ ಈಶ್ವರನಿಗೆ ಹಸ್ತ, ಪಾದ ಮೊದಲಾದ ಇಂದ್ರಿಯಗಳು ಇರುವುದಿಲ್ಲವೆಂದು ಹೇಳಲಾಗಿದೆ. ಆದ್ದರಿಂದ ನ ಇತಿ ಚೇತ್= ಈಶ್ವರನಿಗೆ ಜಗತ್ಕರ್ತೃತ್ವವು ಯುಕ್ತವಾಗುವುದಿಲ್ಲ

ಎಂದು ಆಕ್ಷೇಪ ಮಾಡಬಾರದು ಏಕೆಂದರೆ ತದುಕ್ತಮ್ = 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬ ಶ್ರುತಿಯಲ್ಲಿ ಭಗವಂತನಿಗೆ ಇಂದ್ರಿಯಗಳಿರುವುದಿಲ್ಲ ಎಂಬುದಕ್ಕೆ ಪ್ರಾಕೃತವಾದ ಇಂದ್ರಿಯಗಳಿರುವುದಿಲ್ಲ ಎಂಬರ್ಥವನ್ನೇ ತಿಳಿಯಬೇಕು ಎಂದು ವ್ಯಾಖ್ಯಾನ ಮಾಡಲಾಗಿದೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಶಬ್ದಮೂಲತ್ವಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

### ಪರಮಾತ್ಮನಿಗೆ ಇಂದ್ರಿಯಗಳೇ ಇಲ್ಲವಲ್ಲ ?

**ब्रह्मसूत्रभाष्यम् –।। विकरणत्वान्नेति चेत् तदुक्तम् ।।९।।**

**न च करणाभावादनुपपत्तिरिति युक्तम् ।**

ಅನುವಾದ - ಪರಮಾತ್ಮನಿಗೆ ಕಣ್ಣು, ಕೈ, ಕಾಲು ಮೊದಲಾದ ಇಂದ್ರಿಯಗಳು ಇರುವುದಿಲ್ಲ. ಆದ್ದರಿಂದ ಅವನು ಜಗತ್ತನ್ನು ಸೃಷ್ಟಿ ಮಾಡಲಾರ ಎಂದು ಆಕ್ಷೇಪ ಮಾಡಬಾರದು.

ಪ್ರತಿಪದಾರ್ಥ -- ವಿಷ್ಣುವಿನ ಜಗತ್ಕಾರಣತ್ವವನ್ನು ಆಕ್ಷೇಪ ಮಾಡಿ ಸಮಾಧಾನ ಹೇಳುವ ಸೂತ್ರವನ್ನು ಪಠಿಸುತ್ತಿದ್ದಾರೆ. ಕರಣಾಭಾವಾತ್ = ಕೈ, ಕಾಲು, ಕಣ್ಣು, ಮೂಗು ಮೊದಲಾದ ಇಂದ್ರಿಯಗಳು ಇಲ್ಲದ ಕಾರಣ, ಅನುಪಪತ್ತಿಃ = ಜಗತ್ತನ್ನು ಸೃಷ್ಟಿಮಾಡುವುದು ಅನುಪಪನ್ನ-ವಾಗುತ್ತದೆ. ಇತಿ = ಹೀಗೆ, ನ ಚ ಯುಕ್ತಮ್ = ಆಕ್ಷೇಪ ಮಾಡಬಾರದು.

### ಇಂದ್ರಿಯಗಳಿಲ್ಲದಿದ್ದರೂ ಎಲ್ಲವನ್ನು ಮಾಡುತ್ತಾನೆ

**ब्रह्मसूत्रभाष्यम् –**

**'आपाणिपादो जवनो गृहीता पश्यत्यचक्षुस्स शृणोत्यकर्णः ।
स वेत्ति वेद्यं न च तस्यास्ति वेत्ता तमाहुरग्र्यं पुरुषं महान्तम् ।।'**
**(श्वे.३.१९)**

'न तस्य कार्यं करणं च विद्यते न तत्समश्चाभ्यधिकश्च दृश्यते ।
पराऽस्य शक्तिर्विविधैव श्रूयते स्वाभाविकी ज्ञानबलक्रिया च ।।'
(श्वे. ६.८.) इत्यादिश्रुतिभ्यः ।

ಅನುವಾದ - ಪರಮಾತ್ಮನು ಕೈ ಇಲ್ಲದೆ ಹಿಡಿಯುತ್ತಾನೆ. ಕಾಲಿಲ್ಲದೆ ನಡೆಯುತ್ತಾನೆ. ಕಣ್ಣಿಲ್ಲದೆ ನೋಡುತ್ತಾನೆ, ಕಿವಿಯಿಲ್ಲದೆ ಕೇಳುತ್ತಾನೆ. ಯಾವ ಇಂದ್ರಿಯವಿಲ್ಲದಿದ್ದರೂ ಎಲ್ಲವನ್ನೂ ತಿಳಿದಿದ್ದಾನೆ. ಅವನನ್ನು ಸಂಪೂರ್ಣವಾಗಿ ತಿಳಿದವರು ಯಾರೂ ಇಲ್ಲ. ಆದ್ದರಿಂದ ಅವನನ್ನು ಅತ್ಯಂತ ಶ್ರೇಷ್ಠನೆಂದು ಜ್ಞಾನಿಜನರು ಕರೆಯುತ್ತಾರೆ.

ಪರಮಾತ್ಮನಿಗೆ ಪ್ರಾಕೃತವಾದ ಕಾರ್ಯಗಳು ಇಂದ್ರಿಯಗಳು ಇರುವುದಿಲ್ಲ. ಆದ್ದರಿಂದ ಶ್ರುತಿಗಳಲ್ಲಿ ಇಂದ್ರಿಯಗಳಿಲ್ಲ ಎಂದು ಕರೆಯಲಾಗಿದೆ. ಮತ್ತು ಅವನಿಗೆ ಸಮರು ಅಧಿಕರು ಯಾರೂ ಇರುವುದಿಲ್ಲ. ಅವನ ಶಕ್ತಿಯು ಅತ್ಯಂತ ಉತ್ಕೃಷ್ಟವಾಗಿದೆ. ಅವನಲ್ಲಿರುವ ಜ್ಞಾನ ಬಲ ಕ್ರಿಯೆಗಳೆಲ್ಲವೂ ಸ್ವಾಭಾವಿಕವಾಗಿರುತ್ತವೆ. ಹೀಗೆ ಶ್ರುತಿಗಳಲ್ಲಿ ಪ್ರತಿಪಾದನೆ ಮಾಡಲಾಗಿದೆ.

ಪ್ರತಿಪದಾರ್ಥ -- ಅಪಾಣಿಪಾದಃ = ಕೈಗಳು ಕಾಲುಗಳು ಇಲ್ಲದಿದ್ದರೂ ಜವನೋ, ಗ್ರಹೀತಾ = ವೇಗವಾಗಿ ಓಡುತ್ತಾನೆ. ಮತ್ತು ಹಿಡಿಯುತ್ತಾನೆ. ಅಚಕ್ಷುಃ = ಕಣ್ಣುಗಳು ಇಲ್ಲದವನಾದರೂ, ಪಶ್ಯತಿ = ನೋಡುತ್ತಾನೆ. ಅಕರ್ಣಃ = ಕಿವಿಗಳಿಲ್ಲದಿದ್ದರೂ, ಸಃ = ಅವನು, ಶೃಣೋತಿ = ಕೇಳುತ್ತಾನೆ. ವೇದ್ಯಂ = ತಿಳಿಯಲು ಯೋಗ್ಯವಾದವುಗಳೆಲ್ಲವನ್ನು, ಸಃ = ಪರಮಾತ್ಮನು, ವೇತ್ತಿ = ತಿಳಿದಿರುತ್ತಾನೆ. ತಸ್ಯ = ಅವನನ್ನು, ವೇತ್ತಾ = ತಿಳಿದವನು, ನಚ ಅಸ್ತಿ = ಯಾರೂ ಇರುವುದಿಲ್ಲ. ತಂ = ಅವನನ್ನು, ಮಹಾಂತಂ = ಶ್ರೇಷ್ಠನಾದ, ಪುರುಷಂ = ಪುರುಷ ಶಬ್ದವಾಚ್ಯನಾದ, ಅಗ್ರ್ಯಂ ಪುರುಷಂ = ಶ್ರೇಷ್ಠಪುರುಷನೆಂದು, ಆಹುಃ = ಜ್ಞಾನಿ ಜನರು ಕರೆಯುತ್ತಾರೆ.

ತಸ್ಯ = ಅವನಿಗೆ, ಕಾರ್ಯಂ = ಪ್ರಾಕೃತವಾದ ಕ್ರಿಯೆಯು, ಕರಣಂ = ಇಂದ್ರಿಯಗಳು, ನಚ ವಿದ್ಯತೇ = ಇರುವುದಿಲ್ಲ. ತತ್ = ಅವನಿಗೆ, ಸಮಃ = ಸಮನಾದವರು, ಚ = ಮತ್ತು, ಅಭ್ಯಧಿಕಃ = ಅಧಿಕರಾದವರು, ನ ದೃಶ್ಯತೇ = ಕಾಣಸುವುದಿಲ್ಲ. ಅಸ್ಯ = ಇವನ, ಶಕ್ತಿಃ = ಶಕ್ತಿಯು, ವಿವಿಧಾ ಏವ = ಅನೇಕ ವಿಧವಾಗಿ, ಪರಾ = ಶ್ರೇಷ್ಠವಾಗಿ, ಶ್ರೂಯತೇ =

ವೇದಗಳಲ್ಲಿ ಕೇಳಿಬರುತ್ತದೆ. ಜ್ಞಾನಬಲಕ್ರಿಯಾ ಚ = ಇವನ ಜ್ಞಾನ, ಬಲ, ಕ್ರಿಯೇ ಇವುಗಳೆಲ್ಲವೂ, ಸ್ವಾಭಾವಿಕೀ = ಸ್ವರೂಪಾತ್ಮಕವಾಗಿವೆ. ಇತ್ಯಾದಿಶ್ರುತಿಭ್ಯಃ = ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ವಿರೋಧವು ಪರಿಹಾರವಾಗುತ್ತದೆ.

ವಿಶೇಷ ಯುಕ್ತಿಗಾಗಿ ಪುನಃ ಹೇಳಲಾಗಿದೆ

**ब्रह्मसूत्रभाष्यम् – 'सर्वोपेता च' इति सामान्यपरिहारेऽपि विशेयुक्त्यर्थं पुनराशङ्का ।।९।।**

**।। इति श्रीमदानन्दतीर्थभगवत्पादाचार्यविरचिते**

**ब्रह्मसूत्रभाष्ये श्रुतेस्तु शब्दमूलत्वाधिकरणम् ।। ८ ।।**

ಅನುವಾದ - 'ಸರ್ವೋಪೇತಾ' ಎಂಬುದಾಗಿ ಹಿಂದಿನ ಸೂತ್ರದಲ್ಲಿ ಪರಮಾತ್ಮನಿಗೆ ವಿಚಿತ್ರವಾದ ಶಕ್ತಿಯು ಇದೆ ಎಂದು ಸಮರ್ಥಿಸಲಾಗಿದೆ. ಪುನಃ ಅದೇ ವಿಷಯವನ್ನು ಇಲ್ಲಿ ಏಕೆ ಸಮರ್ಥಿಸುತ್ತಿದ್ದಾರೆ? ಎಂಬ ಪ್ರಶ್ನೆ ಬರುತ್ತದೆ. ಆದರೆ ಅವಯವಗಳು ಇಲ್ಲದಿದ್ದರೂ ಪರಮಾತ್ಮನಲ್ಲಿ ಕರ್ತೃತ್ವವು ಹೇಗೆ ಬರುತ್ತದೆ ಎಂಬ ವಿಶೇಷವಾದ ಪ್ರಶ್ನೆಯು ಪ್ರಾಪ್ತವಾದರೆ ಅದಕ್ಕೆ ವಿವರವಾಗಿ ಉತ್ತರಿಸಲು ಈ ಸೂತ್ರವು ಹೊರಟಿದೆ. ಆದ್ದರಿಂದ ವಿರೋಧಕ್ಕೆ ಅವಕಾಶವಿಲ್ಲ.

ಪ್ರತಿಪದಾರ್ಥ -- 'ಸರ್ವೋಪೇತಾ' ಎಂಬ ಸೂತ್ರದಲ್ಲೇ ವಿಚಿತ್ರವಾದ ಅಶೇಷಶಕ್ತಿಯು ಇದೆ ಎಂದು ತಿಳಿಯುತ್ತದೆ. ಪುನಃ 'ವಿಕರಣತ್ವಾತ್' ಇತ್ಯಾದಿ ಸೂತ್ರವು ವ್ಯರ್ಥವಲ್ಲವೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಸರ್ವೋಪೇತಾ ಚ = ಸರ್ವೋಪೇತಾಚ ತದ್‌ದರ್ಶನಾತ್ ಎಂಬ ಹಿಂದಿನ ಸೂತ್ರದಲ್ಲಿ, ಸಾಮಾನ್ಯಪರಿಹಾರೇಪಿ = ಸಾಮಾನ್ಯವಾಗಿ ವಿರೋಧವನ್ನು ಪರಿಹಾರ ಮಾಡಿದ್ದರೂ, ವಿಶೇಷಯುಕ್ತ್ಯರ್ಥಮ್ = ವಿಶೇಷವಾದ ಯುಕ್ತಿಯನ್ನು ತೋರಿಸಲು, ಪುನಃ = ಮತ್ತೆ, ಆಶಂಕಾ = ಆಶಂಕೆಯನ್ನು ಇಲ್ಲಿ ಮಾಡಿರುತ್ತಾರೆ.

॥ ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಶ್ರುತೇಸ್ತುಶಬ್ದಮೂಲತ್ವಾಧಿಕರಣವು ಸಮಾಪ್ತವಾಯಿತು ॥

### ಸತ್ತರ್ಕದೀಪಾವಳಿ

### ಪರಮಾತ್ಮನು ಕೈ ಇಲ್ಲದೆಯೂ ಹಿಡಿಯುತ್ತಾನೆ, ಕಾಲಿಲ್ಲದೆಯೂ ಓಡುತ್ತಾನೆ

**सत्तर्कदीपावलिः – प्राकृतदेहेन्द्रियकरणवतामेव कर्तृत्वदर्शनात् करणरहितस्य चेश्वरस्य कर्तृत्वं न युज्यत इति न वाच्यम् ।**

**'अपाणिपादो जवनो गृहीता पश्यत्यचक्षुः स श्रुणोत्यकर्णः ।**
**न तस्य कार्यं करणं च विद्यते न तत्समश्चाभ्यधिकश्च दृश्यते ।**
**परास्य शक्तिर्विविधैव श्रूयते स्वाभाविकी ज्ञानबलक्रिया च ।।'**

**इत्यादि श्रुत्या प्राकृतदेहेन्द्रियरहितस्य ईश्वरस्य अचिन्त्यशक्तित्वेन तद्व्यापरोक्तेः जगत्कर्तृत्वाविरोधात् ।**

ಪ್ರಾಕೃತವಾದ ದೇಹೇಂದ್ರಿಯಾದಿಗಳು ಯಾರಿಗೆ ಇರುತ್ತವೋ, ಅವನಲ್ಲಿ ಮಾತ್ರ ಕರ್ತೃತ್ವವಿರುವುದು ಲೋಕಸಿದ್ಧವಾಗಿದೆ. ಇಂದ್ರಿಯಾದಿಗಳಿಲ್ಲದ ಈಶ್ವರನಿಗೆ ಕರ್ತೃತ್ವವು ಹೇಗೆ ಯುಕ್ತವಾಗುತ್ತದೆ ? ಎಂಬುದಾಗಿ ಪ್ರಶ್ನಿಸಬಾರದು. ಏಕೆಂದರೆ ಶ್ವೇತಾಶ್ವತರೋಪನಿಷತ್ತಿನಲ್ಲಿ ಪರಮಾತ್ಮನಿಗೆ ಇಂದ್ರಿಯಗಳಿಲ್ಲದಿದ್ದರೂ ಕೂಡ ಆಯಾ ಕೆಲಸಗಳನ್ನು ಮಾಡುತ್ತಾನೆಂದು ಹೇಳಲಾಗಿದೆ.

ಅಪಾಣಿಪಾದೋ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶ್ರುಣೋತ್ಯಕರ್ಣಃ।

ಕೈಯಿಲ್ಲದಿದ್ದರೂ ಹಿಡಿಯುತ್ತಾನೆ, ಕಾಲಿಲ್ಲದಿದ್ದರೂ ವೇಗವಾಗಿ ಓಡುತ್ತಾನೆ.

ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ।

ಪರಮಾತ್ಮನಿಗೆ ಪ್ರಾಕೃತವಾದ ಕ್ರಿಯೆಗಳಾಗಲೀ, ಇಂದ್ರಿಯಗಳಾಗಲೀ ಇರುವುದಿಲ್ಲ. ಅವನಿಗೆ ಸಮಾನರು ಯಾರೂ ಇಲ್ಲ. ಅವನಿಂದ ಉತ್ತಮರಾದವರೂ ಕೂಡ ಯಾರೂ ಇಲ್ಲ.

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ ।।

ಪರಮಾತ್ಮನ ಶಕ್ತಿಯು ಬಹುಬಗೆಯಾಗಿವೆ. ಇವನ ಜ್ಞಾನ, ಬಲ ಕ್ರಿಯಾ ಮೊದಲಾದ ಶಕ್ತಿಗಳು ಸ್ವಾಭಾವಿಕವಾಗಿವೆ. ಇವೇ ಮೊದಲಾದ ಶ್ರುತಿಗಳಿಂದ ಪ್ರಾಕೃತವಾದ ದೇಹೇಂದ್ರಿಯಗಳು ಪರಮಾತ್ಮನಿಗಿಲ್ಲ ಎಂದು ತಿಳಿಯುತ್ತಿದೆ. ಅಚಿಂತ್ಯವಾದ ಶಕ್ತಿಗಳಿರುವುದರಿಂದ ಜಗದ್ವ್ಯಾಪಾರವನ್ನು ಮಾಡುತ್ತಾನೆ. ಇವುಗಳು ಜಗತ್‌ಕರ್ತೃತ್ವಕ್ಕೆ ವಿರುದ್ಧವೂ ಆಗಿರುವುದಿಲ್ಲ.

ವಿಶೇಷಯುಕ್ತಿಯ ಸಮರ್ಥನೆ

**सत्तर्कदीपावलिः – 'सर्वोपेता च' इत्यत्र सामान्यतः सर्वशक्त्युपेतत्वोक्त्या जवनग्रहणादिशक्तिसिद्धेः 'विकरणत्वात् नेति चेन्न' इत्येतद् चोद्यपरिहारो भवत्येव । तथापि विकरणस्यापीश्वरस्य विशेषतो जवनग्रहणादि शक्तिप्रतिपादकश्रुत्युद्भावनार्थं पुनराशङ्क्य परिहृतम् इत्यदोषः । पुनरुक्तिपरिहारश्च प्रमेयैक्ये प्रमाणोपन्यासात् प्रमाणैक्ये प्रमेयविशेषोपन्यासात् भवत्येव । तदुक्तं 'मानमेय विशेषेण पुनरुक्तिर्न जायते' इति । तदेतदाह – विकरणत्वादिति ।।**

'ಸರ್ವೋಪೇತಾ ಚ' ಎಂಬ ಸೂತ್ರದಲ್ಲಿ ಪರಮಾತ್ಮನಿಗೆ ಸಾಮಾನ್ಯವಾಗಿ ಸರ್ವಶಕ್ತಿಯಿದೆ ಎಂಬುದಾಗಿ ಪ್ರತಿಪಾದನೆ ಮಾಡಿದ್ದಾಗಿದೆ. ಆದ್ದರಿಂದಲೇ ಹಿಡಿಯುವಿಕೆ, ನಡೆಯುವಿಕೆ ಮೊದಲಾದ ಶಕ್ತಿಯು ಸಿದ್ಧವಾಗಿದೆ. ಇದರ ಮೇಲೆ ಪರಮಾತ್ಮನಿಗೆ ಇಂದ್ರಿಯಗಳೇ ಇಲ್ಲವೆಂಬ ಆಶಂಕೆಯು ಪ್ರಾಪ್ತವಾಗುತ್ತದೆ. ಇದರ ಪರಿಹಾರಕ್ಕಾಗಿ ಈ ಸೂತ್ರ ಹೊರಟಿದೆ. ಇಂದ್ರಿಯಗಳಿಲ್ಲದಿದ್ದರೂ ಕೂಡ ಜವನ, ಗ್ರಹಣ ಮೊದಲಾದ ಶಕ್ತಿಯು ಪರಮಾತ್ಮನಿಗೆ ಇರುತ್ತದೆಂದು ಶ್ವೇತಾಶ್ವತರೋಪನಿಷತ್ತು ಉಪಪಾದನೆ ಮಾಡುತ್ತಿದೆ. ಈ ಪ್ರಮೇಯವನ್ನು ತಿಳಿಸುವುದಕ್ಕಾಗಿ 'ಸರ್ವೋಪೇತಾ ಚ' ಎಂಬ ಸೂತ್ರದಲ್ಲಿ ಹೇಳಿರುವ ಪ್ರಮೇಯವನ್ನು ಪುನಃ ಆಶಂಕಿಸಿ ಇಲ್ಲಿ ಉತ್ತರವನ್ನು ನೀಡಿದ್ದಾರೆ. ಆದ್ದರಿಂದ ಪುನರುಕ್ತಿದೋಷಕ್ಕೆ ಅವಕಾಶವಿಲ್ಲ. ಪ್ರಮೇಯವು ಒಂದೇ ಆಗಿದ್ದರೂ ಪ್ರಮಾಣವಿಶೇಷವನ್ನು ಹೇಳುತ್ತಿರುವುದರಿಂದ ಪುನರುಕ್ತಿ ಪರಿಹಾರವಾಗುತ್ತದೆ. ಇದನ್ನೇ 'ಮಾನಮೇಯವಿಶೇಷೇಣ ಪುನರುಕ್ತಿರ್ನಜಾಯತೇ'

'ಪ್ರಮಾಣವಿಶೇಷ ಹಾಗೂ ಪ್ರಮೇಯವಿಶೇಷಗಳಿಂದ ಪುನರುಕ್ತಿ ಬರುವುದಿಲ್ಲ' ಎಂದು ಇದನ್ನೇ 'ವಿಕರಣತ್ವಾತ್' ಇತ್ಯಾದಿ ಸೂತ್ರದಲ್ಲಿ ಹೇಳುತ್ತಿದ್ದಾರೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಶ್ರುತೇಸ್ತುಶಬ್ದಮೂಲತ್ವಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

### ತತ್ವಪ್ರದೀಪ

### ಶ್ರೀಹರಿಗೆ ಪ್ರಾಕೃತ ಇಂದ್ರಿಯಗಳಿಲ್ಲದಿದ್ದರೂ ಅಪ್ರಾಕೃತವಾದದ್ದಿದೆ

**तत्वप्रदीपः – विकरणत्वान्नेति चेत्तदुक्तम् ।। न च चक्षुरादिकरणाभावात् दर्शनादिशक्त्यनुपपत्तिः इति युक्तम् । 'अपाणिपादः' इत्यादि श्रुतेः । अप्राकृतपाण्यादित्वात् अपाण्यादिर्भण्यते । 'जवनो गृहीता' इति इति तत्तदर्थक्रियावत्त्वकथनात् विलक्षणानाम् अभिन्नानां चिद्रूपाणां तेषां सद्भावोऽभ्युपेतः । सर्वशक्तित्वसाधनेनैव अकरणत्वादिविरोधोऽपि परिहृतः । तथाऽपि विशेषप्रमाणोपन्यासार्थं पुनराशङ्का ।।**

**इति शब्दमूलत्वाधिकरणम् ।**

ಚಕ್ಷುಸ್ಸು, ಶ್ರೋತ್ರ ಮೊದಲಾದ ಇಂದ್ರಿಯಗಳಿಲ್ಲದ ಕಾರಣ ಪರಮಾತ್ಮನಿಗೆ ದರ್ಶನಾದಿಶಕ್ತಿಗಳು ಅನುಪಪನ್ನವಾಗುತ್ತದೆ ಎಂಬ ಆಕ್ಷೇಪವು ತಪ್ಪು. 'ಅಪಾಣಿಪಾದಃ' ಎಂಬ ಶ್ರುತಿಯು ಪ್ರಾಕೃತವಾದ ಇಂದ್ರಿಯಗಳು ಪರಮಾತ್ಮನಿಗಿರುವುದಿಲ್ಲ. ಅಪ್ರಾಕೃತವಾದ ಕೈ ಮೊದಲಾದ ಇಂದ್ರಿಯಗಳಿವೆ ಎಂಬುದಾಗಿ ಪ್ರತಿಪಾದನೆ ಮಾಡುತ್ತಿದೆ. 'ಜವನೋ ಗೃಹೀತಾ' ಎಂಬುದಾಗಿ ನಡೆಯುವಿಕೆ, ಹಿಡಿಯುವಿಕೆ ಮೊದಲಾದ ಕ್ರಿಯೆಗಳನ್ನು ಹೇಳಿರುವುದರಿಂದ ಜೀವರುಗಳಲ್ಲಿರುವ ಇಂದ್ರಿಯಗಳಿಗಿಂತ ವಿಲಕ್ಷಣವಾದ ಇಂದ್ರಿಯಗಳು ಪರಮಾತ್ಮನಿಗಿವೆ. ಮತ್ತು ಆ ಇಂದ್ರಿಯಗಳು ಅವನ ಸ್ವರೂಪಕ್ಕಿಂತ ಅಭಿನ್ನವಾಗಿವೆ. ಚಿದ್ರೂಪವಾಗಿವೆ ಎಂಬುದು

ಶ್ರುತಿಯ ಅಭಿಪ್ರಾಯ. ಹೀಗೆ ಪರಮಾತ್ಮನಿಗೆ ಸರ್ವಶಕ್ತಿತ್ವವನ್ನು ಸಾಧನೆ ಮಾಡಿದ್ದರಿಂದ ಇಂದ್ರಿಯಗಳೇ ಇಲ್ಲವೆಂಬ ವಿರೋಧವನ್ನೂ ಕೂಡ ಪರಿಹರಿಸಿದಂತಾಯಿತು. 'ಸರ್ವೋಪೇತಾ ಚ' ಎಂಬ ಸೂತ್ರದಲ್ಲಿ ಈ ವಿಷಯವನ್ನು ಹೇಳಿದ್ದರೂ ಕೂಡ ಅದೇ ವಿಷಯದಲ್ಲಿ ವಿಶೇಷ ಪ್ರಮಾಣವನ್ನು ನೀಡುವುದಕ್ಕಾಗಿ ಪುನಃ ಇಲ್ಲಿ ಆಶಂಕಿಸಲಾಗಿದೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ವಪ್ರದೀಪದಲ್ಲಿ
ಶ್ರುತೇಸ್ತುಶಬ್ದಮೂಲತ್ವಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ತತ್ವಪ್ರಕಾಶಿಕಾ

ಕೈಕಾಲಿಲ್ಲದ ವಿಷ್ಣು ಹೇಗೆ ಕರ್ತೃವಾಗುತ್ತಾನೆ?

**तत्वप्रकाशिका –**

**विष्णोर्जगत्कर्तृत्वमाक्षिप्य समादधत्सूत्रमुपन्यस्य व्याचष्टे – विकरणत्वादिति।। नेश्वरस्य कर्तृत्वं युक्तम् । 'अचक्षुः श्रोत्रं तदपाणिपादम्' इति श्रुतेस्तस्य हस्तादिकरणशून्यत्वात् । न हि हस्तादिविरहिणो मृतस्य कर्तृत्वमिति न मन्तव्यम्।**

ವಿಷ್ಣುವಿನಲ್ಲಿರುವ ಜಗತ್‌ಕರ್ತೃತ್ವಲಕ್ಷಣವನ್ನು ಆಕ್ಷೇಪ ಮಾಡಿ ಸಮಾಧಾನ ಮಾಡುವ ಸೂತ್ರವನ್ನು 'ವಿಕರಣತ್ವಾತ್ ಇತಿ ಚೇತ್' ಇತ್ಯಾದಿಯಾಗಿ ಪಠಿಸಿ ಭಾಷ್ಯಕಾರರು ವ್ಯಾಖ್ಯಾನ ಮಾಡುತ್ತಿದ್ದಾರೆ.

ಈಶ್ವರನಿಗೆ ಕರ್ತೃತ್ವವೇ ಯುಕ್ತವಾಗುವುದಿಲ್ಲ. 'ಅಚಕ್ಷುಃ ಶ್ರೋತ್ರಂ ತದಪಾಣಿಪಾದಮ್' ಎಂಬ ಶ್ರುತಿಯು ಈಶ್ವರನಿಗೆ ಚಕ್ಷುಸ್ಸು, ಶ್ರೋತ್ರ, ಹಸ್ತ ಮೊದಲಾದ ಇಂದ್ರಿಯಗಳೇ ಇರುವುದಿಲ್ಲ ಎಂದು ಹೇಳುತ್ತಿದೆ. ಕೈ ಮೊದಲಾದ ಇಂದ್ರಿಯಗಳೇ ಇಲ್ಲದ ಮೃತನಾದ ವ್ಯಕ್ತಿಯಲ್ಲಿ ಕರ್ತೃತ್ವ ಇರುವುದಿಲ್ಲವೆಂಬುದನ್ನು ನಾವು ಕಂಡಿದ್ದೇವೆ. ಇಷ್ಟು ಆಕ್ಷೇಪ.

ವಿವರಣೆ - 'ವಿಕರಣತ್ವಾತ್' ಇತ್ಯಾದಿ ಸೂತ್ರದ ಆಕ್ಷೇಪಭಾಗವನ್ನು 'ನ ಈಶ್ವರಸ್ಯ' ಎಂಬ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಕೈ, ಕಾಲು ಮೊದಲಾದ ಇಂದ್ರಿಯಗಳು ಇಲ್ಲದಿದ್ದರೂ ಕರ್ತೃತ್ವವು ಬರಬಹುದಲ್ಲವೆ? ಎಂಬ ಪ್ರಶ್ನೆಗೆ 'ನಹಿ' ಇತ್ಯಾದಿ ಟೀಕಾವಾಕ್ಯದಿಂದ ಉತ್ತರಿಸುತ್ತಿದ್ದಾರೆ. (ತತ್ವಸುಬೋಧಿನೀ)

**ಪರಮಾತ್ಮನಿಗೆ ಪ್ರಾಕೃತವಾದ ಅವಯವಗಳಿಲ್ಲ ಎಂಬುದಷ್ಟೇ ಶ್ರುತಿಯ ಅಭಿಪ್ರಾಯ**

**तत्वप्रकाशिका – 'अपाणिपादम्' इति श्रुतौ पाण्यादिविरहिणोऽपि हरेर्ग्रहणादिकमुक्त्वा 'न तस्य कार्यम्' इति पाण्यादिरहितत्वस्य प्राकृतविषयत्वेन सर्वोत्तमत्वेन परमशक्तित्वेन चोपापादितत्वादिति भावः ।**

'ಅಪಾಣಿಪಾದಂ' ಎಂಬ ಶ್ರುತಿಯು ಭಗವಂತನಿಗೆ ಕೈ ಮೊದಲಾದ ಅವಯವಗಳು ಇಲ್ಲದಿದ್ದರೂ ಕೂಡ ಎಲ್ಲವನ್ನು ಸ್ವೀಕರಿಸುತ್ತಾನೆ ಎಂದು ಹೇಳುತ್ತಿದೆ. 'ನ ತಸ್ಯ ಕಾರ್ಯಂ' ಎಂಬ ಶ್ರುತಿಯು ಕೈ ಮೊದಲಾದ ಅವಯವಗಳಿಲ್ಲ ಎಂಬುದಕ್ಕೆ ಪ್ರಾಕೃತವಾದ ಅವಯವಗಳಿಲ್ಲ ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದೆ. ಪರಮಾತ್ಮನು ಸರ್ವೋತ್ತಮನಾಗಿರುವುದರಿಂದ ಪರಮಶಕ್ತಿಶಾಲಿಯಾಗಿರುವುದರಿಂದ ಪ್ರಾಕೃತವಾದ ಅವಯಗಳಿಲ್ಲದವನೆಂದೇ ಅರ್ಥೈಸಬೇಕೆಂದು ಉಪಪಾದನೆ ಮಾಡಲಾಗಿದೆ.

ವಿವರಣೆ - 'ಅಪಾಣಿಪಾದೋ ಜವನೋ ಗೃಹೀತಾ' ಎಂಬ ಶ್ವೇತಾಶ್ವತರ ಉಪನಿಷತ್ತು ವಿಷ್ಣುವಿಗೆ ಪಾಣಿ, ಪಾದ ಮೊದಲಾದ ಇಂದ್ರಿಯಗಳಿಲ್ಲವೆಂದು ಹೇಳಿದೆ. ಆದರೆ ಅದೇ ಉಪನಿಷತ್ತಿನಲ್ಲಿ ಮತ್ತೊಂದು ಕಡೆ ಪ್ರಾಕೃತವಾದ ಇಂದ್ರಿಯಗಳಿಲ್ಲವೆಂದು ಹೇಳಲಾಗಿದೆ. ಮತ್ತು ಪ್ರಾಕೃತವಾದ ಇಂದ್ರಿಯಗಳಿಲ್ಲ ಎನ್ನಲು ಸರ್ವೋತ್ತಮತ್ವ ಪರಮಶಕ್ತಿಮತ್ತ್ವವನ್ನು ಅಸಾಧಾರಣಧರ್ಮವನ್ನಾಗಿ ಆ ಶ್ರುತಿಯು ಸಮರ್ಥನೆ ಮಾಡುತ್ತಿದೆ.

ಹಿಂದಿನ ಸೂತ್ರದಿಂದ ಈ ಸೂತ್ರವು ಗತಾರ್ಥವಲ್ಲ

**तत्वप्रकाशिका – ननु पूर्वसूत्र एव विचित्राशेषशक्तिबलेन निखिलविरोधानां परिहृतत्वात् कथमेतच्छङ्कावकाश इत्यत आह – सर्वेति ।।**

ಹಿಂದಿನ ಸೂತ್ರದಲ್ಲಿಯೇ ವಿಚಿತ್ರವಾದ ಅನಂತಶಕ್ತಿಯು ಪರಮಾತ್ಮನಿಗಿದೆ. ಇದರ ಬಲದಿಂದ ಸಕಲ ವಿರೋಧಗಳನ್ನು ಪರಿಹಾರ ಮಾಡಿದ್ದಾಯಿತಲ್ಲವೆ? ಎಂಬ ಪ್ರಶ್ನೆಗೆ 'ಸರ್ವೋಪೇತಾ ಚ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ವಿವರಣೆ - ವಿಚಿತ್ರವಾದ ಅನಂತಶಕ್ತಿಯು ಪರಮಾತ್ಮನಿಗೆ ಇರುವುದರಿಂದ ಹಸ್ತಪಾದಾದಿ ಅವಯವಗಳು ಇಲ್ಲವೆಂಬ ವಿರೋಧವನ್ನು ಕೂಡ ಹಿಂದಿನ ಸೂತ್ರದಿಂದಲೇ ಪರಿಹರಿಸಿದ್ದಾಯಿತು. ಪುನಃ ಈ ಸೂತ್ರದಲ್ಲೂ ಅದೇ ಆಕ್ಷೇಪವನ್ನು ಏಕೆ ಮಾಡುತ್ತಿದ್ದೀರಿ? ಎಂಬುದು ಪೂರ್ವಪಕ್ಷಕಾರರ ಅಭಿಪ್ರಾಯ.

ವಿಶೇಷವಿರೋಧ ಪರಿಹಾರಕ್ಕಾಗಿ ಈ ಸೂತ್ರವು ಸಾರ್ಥಕ

**तत्वप्रकाशिका – सामान्यतः सर्वविरोधानां परिहृतत्वेऽपि विशेषतोऽस्यैव चोद्यस्य परिहाराय युक्तिबुभुत्सया पुनः शङ्केत्याशयः । विशेषयुक्तिस्तु प्राकृतशरीराभावेऽपि चिदानन्दाद्यात्मकविग्रहत्वादिः प्रमाणविशेष एव वा । अतो विष्णोर्जगत्कारणत्वे विरोधाभावाद्युक्तं लक्षणसूत्रमिति सिद्धम् ।। ३२ ।।**

ಹಿಂದಿನ ಸೂತ್ರದಲ್ಲಿ ಸಾಮಾನ್ಯವಾಗಿ ಸಕಲ ವಿರೋಧವನ್ನು ಪರಿಹರಿಸಿದ್ದಾಯಿತು. ಆದರೆ ವಿಶೇಷವಿರೋಧವನ್ನು ಆಕ್ಷೇಪ ಮಾಡಿ ಮತ್ತೊಂದು ಯುಕ್ತಿಯನ್ನು ತಿಳಿಸುವ ಅಪೇಕ್ಷೆಯಿಂದ ಪುನಃ ಈ ಸೂತ್ರದಲ್ಲಿ ಆಶಂಕೆ ಮಾಡುತ್ತಿದ್ದಾರೆಂಬುದು ಅಭಿಪ್ರಾಯ. ಆ ವಿಶೇಷಯುಕ್ತಿಯು 'ಪ್ರಾಕೃತ ಶರೀರ ಇಲ್ಲದಿದ್ದರೂ ಚಿದಾನಂದಾತ್ಮಕವಾದ ಶರೀರ ಇರುವಿಕೆಯು' ಅಥವಾ 'ಪ್ರಮಾಣವಿಶೇಷ ಇರುವುದು' ಆಗಿದೆ. ಆದ್ದರಿಂದ ವಿಷ್ಣುವಿಗೆ ಜಗತ್‌ಕಾರಣತ್ವವನ್ನು ಒಪ್ಪಿದರೆ ಯಾವುದೇ ವಿರೋಧವು ಬರುವುದಿಲ್ಲ. ಹಾಗಾಗಿ ಲಕ್ಷಣಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವವು ವಿಷ್ಣುವಿನ ಅಸಾಧಾರಣ ಲಕ್ಷಣವೆಂದು ಸಿದ್ಧವಾಗುತ್ತದೆ.

ವಿವರಣೆ - ಹಿಂದಿನ ಸೂತ್ರದಲ್ಲಿ ಸಾಮಾನ್ಯವಿಷಯಕವಾದ ಪ್ರಮಾಣಗಳನ್ನು ಆಶ್ರಯಿಸಿ ಸಾಮಾನ್ಯವಾಗಿಯೇ ಸಕಲ ಅನುಪಪತ್ತಿಪರಿಹಾರವನ್ನು ಹೇಳಲಾಯಿತು. ಈ

ಸೂತ್ರದಲ್ಲಿ ವಿಶೇಷವಿಷಯಕವಾದ ಅನುಪಪತ್ತಿಯನ್ನು ಪರಿಹಾರ ಮಾಡುತ್ತಿದ್ದಾರೆ. ಆದ್ದರಿಂದ ಪುನರುಕ್ತಿದೋಷವು ಬರುವುದಿಲ್ಲ. (ವಾಕ್ಯಾರ್ಥಮುಕ್ತಾವಳಿ)

ಪ್ರಥಮಸೂತ್ರವು ಕೃತ್ಸ್ನಪ್ರಸಕ್ತ್ಯಾದಿದೋಷಗಳನ್ನು ಪರಿಹರಿಸಲು ಲೋಕವಿರುದ್ಧವಾದ ಧರ್ಮಗಳು ವಿಷ್ಣುವಿನಲ್ಲಿ ಅವಿರುದ್ಧವಾಗಿವೆ ಎಂಬ ವಿಷಯದಲ್ಲಿ ಶ್ರುತಿ ಹಾಗೂ ಯುಕ್ತಿಗಳನ್ನು ಹೇಳಿತು. ದ್ವಿತೀಯಸೂತ್ರವು ಯುಕ್ತಿವಿರೋಧದ ಪರಿಹಾರಕ್ಕಾಗಿ ವಿಚಿತ್ರಶಕ್ತಿ ಎಂಬ ಮತ್ತೊಂದು ಯುಕ್ತಿಯನ್ನು ತಿಳಿಸಿತು. ತೃತೀಯಸೂತ್ರವು ವಿಚಿತ್ರಶಕ್ತಿಯಿಂದ ಯುಕ್ತಿವಿರೋಧವನ್ನು ಪರಿಹರಿಸಿದರೆ ಜೀವರಲ್ಲೂ ಕೂಡ ಯುಕ್ತಿವಿರೋಧವು ಪರಿಹಾರವಾಗಲಿ ? ಎಂಬ ಆಕ್ಷೇಪವನ್ನು ಪರಿಹರಿಸಿತು. ಚತುರ್ಥಸೂತ್ರವು ಶಕ್ತಿಗೆ ಸರ್ವವಿಷಯಕತ್ವವನ್ನು ಹಾಗೂ ನಿತ್ಯತ್ವವನ್ನು ಪ್ರಮಾಣಬದ್ಧವಾಗಿ ಸಮರ್ಥಿಸಿತು. ಐದನೆಯ ಸೂತ್ರವು ಅವಯವಗಳೇ ಇಲ್ಲದ ಪರಮಾತ್ಮನು ಹೇಗೆ ಜಗತ್ ಕರ್ತೃತ್ವವಾಗುತ್ತಾನೆ? ಎಂಬ ಆಕ್ಷೇಪವನ್ನು ಪರಿಹರಿಸಿತು. ಹೀಗೆ ಐದು ಸೂತ್ರಗಳು ಕ್ರಮಬದ್ಧವಾಗಿ ಈಶ್ವರನಿಗೆ ಜಗತ್ಕರ್ತೃತ್ವವನ್ನು ಸಮರ್ಥನೆ ಮಾಡಿವೆ. (ಭಾವಬೋಧ, ವಾಕ್ಯಾರ್ಥಮುಕ್ತಾವಳಿ, ತತ್ವಸುಬೋಧಿನೀ)

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ಶ್ರುತೇಸ್ತುಶಬ್ದಮೂಲತ್ವಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಭಾವದೀಪ

ತದ್ದರ್ಶನಾತ್ ಎಂಬುದು ಅನುವೃತ್ತವಾಗಿದೆ. ನಞ್ ಎಂಬುದು ಆವೃತ್ತವಾಗಿದೆ.

**भावदीपः** – ॥ विकरणत्वा० ॥ ३२॥ करणाभावादनुपपत्तिरिति भाष्यं विवृण्वन् विकरणत्वान्नेति सूत्रखण्डार्थमाह – **नेश्वरस्येति ॥ इति श्रुतेरिति ॥** तद्दर्शनादित्यनुवृत्तिं वा तात्पर्यलब्धतां वा मत्वैवमुक्तम्। मृतस्य त्यक्तदेहस्य न च युक्तमित्यस्यार्थो न मन्तव्यमिति। सूत्रे नञः आवृत्तिर्वा अध्याहारो वेति भावः।

'ಕರಣಾಭಾವಾದನುಪಪತ್ತಿಃ' ಎಂಬ ಭಾಷ್ಯವನ್ನು ವಿವರಿಸಲು 'ನ ಈಶ್ವರಸ್ಯ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಜೊತೆಯಲ್ಲಿ 'ವಿಕರಣತ್ವಾನ್ನ' ಎಂಬ ಸೂತ್ರಭಾಗಕ್ಕೆ ಕೂಡ ವ್ಯಾಖ್ಯಾನವನ್ನು ಮಾಡಿದ್ದಾರೆ. 'ಇತಿ ಶ್ರುತೇಃ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಇದು 'ತದ್ದರ್ಶನಾತ್' ಎಂಬ ಹಿಂದಿನ ಸೂತ್ರಭಾಗವನ್ನು ಅನುವೃತ್ತಿ ಮಾಡಿಕೊಂಡು ಅಥವಾ ಅದರ ತಾತ್ಪರ್ಯದಿಂದ ಲಬ್ಧವಾದ ಪ್ರಮೇಯವನ್ನು ವಿವಕ್ಷಿಸಿ ಹೀಗೆ ಹೇಳಿದ್ದಾರೆಂದು ತಿಳಿಯಬೇಕು. ಯಾರು ಮೃತನಾಗಿದ್ದಾನೋ ಅಥವಾ ದೇಹವನ್ನು ಪರಿತ್ಯಾಗ ಮಾಡಿದ್ದಾನೋ ಅಂತಹವನಲ್ಲಿ ಕರ್ತೃತ್ವವು ಯುಕ್ತವಾಗುವುದಿಲ್ಲ. ಎಂಬುದರ ಅರ್ಥವನ್ನು 'ನ ಮಂತವ್ಯಮ್' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಸೂತ್ರದಲ್ಲಿ ನಞ್ ಎಂಬುದನ್ನು ಆವೃತ್ತಿಮಾಡಬೇಕು. ಅಥವಾ ಅಧ್ಯಾಹಾರ ಮಾಡಬೇಕು ಎಂದು ಟೀಕೆಯ ಈ ಪಂಕ್ತಿಯಿಂದ ಸ್ಪಷ್ಟವಾಗುತ್ತದೆ.

ವಿವರಣೆ – 'ಸರ್ವೋಪೇತಾ ಚ ತದ್ದರ್ಶನಾತ್' ಎಂಬ ಹಿಂದಿನ ಸೂತ್ರದಲ್ಲಿ 'ತದ್ದರ್ಶನಾತ್' ಎಂಬ ಪದದಿಂದ ಅನೇಕ ಶ್ರುತಿಗಳ ಆಧಾರವನ್ನು ಹೇಳಿದ್ದಾರೆ. ಅದನ್ನೇ ಈ ಸೂತ್ರದ ಪೂರ್ವಪಕ್ಷಭಾಗದಲ್ಲಿ ಅನುವೃತ್ತಿ ಮಾಡಿಕೊಂಡಾಗ ಪರಮಾತ್ಮನಿಗೆ ಚಕ್ಷುರಾದಿ ಇಂದ್ರಿಯಗಳಿಲ್ಲ ಎಂಬ ವಿಷಯದಲ್ಲಿ ಶ್ರುತಿಪ್ರಮಾಣವಿದೆ ಎಂದು ಹೇಳಿದಂತಾಗುತ್ತದೆ. ಹೀಗೆ 'ವಿಕರಣತ್ವಾತ್' ಎಂಬ ಹೇತುವಿನ ಜೊತೆ 'ತದ್ದರ್ಶನಾತ್' ಎಂಬುದನ್ನೂ ಕೂಡ ವಿವಕ್ಷಿಸಿದಾಗ ಪೂರ್ವಪಕ್ಷ ಮತ್ತಷ್ಟು ಬಲಿಷ್ಠವಾಗುತ್ತದೆಂದು ಇಲ್ಲಿ ತಿಳಿಯಬೇಕು.

ಮತ್ತು 'ನ' ಎಂಬುದಾಗಿ ಒಂದೇ ನಞ್ ಸೂತ್ರದಲ್ಲಿ ಕಾಣಿಸುತ್ತದೆ. ಎರಡು ನಞ್ ಗಳನ್ನು ಇಟ್ಟುಕೊಳ್ಳಬೇಕು. ಆಗ ಇಂದ್ರಿಯಗಳಿಲ್ಲದ ವ್ಯಕ್ತಿಯಲ್ಲಿ ಕರ್ತೃತ್ವವಿರುವುದು

ಕಾಣಸುತ್ತಿಲ್ಲ; ಪರಮಾತ್ಮನಿಗೂ ಇಂದ್ರಿಯಗಳಿಲ್ಲದ ಕಾರಣ ಕರ್ತೃತ್ವವಿಲ್ಲ ಎಂಬ ಪೂರ್ವಪಕ್ಷವು ಸೂತ್ರದಿಂದ ಸ್ಪಷ್ಟವಾಗುತ್ತದೆ. ಮತ್ತೊಂದು ನಞ್ ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತದೆ.

**भावदीपः** – भाष्योक्तवाक्यचतुष्टयस्याप्युपयोगमाह– **अपाणिपाद इतीति ।। प्रमाणविशेष एवेति ।।** विशेषयुक्तिशब्दार्थ इति शेषः। अपाणिपाद इत्याद्युक्तरूप इति भावः। अन्यभावव्यावृत्तेश्चेत्यत्राप्राकृतविग्रहस्योक्तत्वाशयेन द्वितीयपक्षोक्तिः।। **अत इति ।।** श्रौतत्वशब्दमूलत्वादेर्जीवादतिशयस्य भावादित्यर्थः।। ३२ ।।

ಭಾಷ್ಯದಲ್ಲಿ 'ಅಪಾಣಿಪಾದಃ' ಇತ್ಯಾದಿಯಾಗಿ ನಾಕು ವಾಕ್ಯಗಳನ್ನು ಕೂಡ ಉಲ್ಲೇಖ ಮಾಡಿದ್ದಾರೆ. ಇದರ ಉಪಯೋಗವನ್ನು 'ಅಪಾಣಿಪಾದಂ' ಎಂಬುದಾಗಿ ಟೀಕೆಯಲ್ಲಿ ತೋರಿಸಿದ್ದಾರೆ. 'ಪ್ರಮಾಣವಿಶೇಷ ಏವ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇಲ್ಲಿ 'ವಿಶೇಷಯುಕ್ತಿಶಬ್ದಾರ್ಥಃ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಅಪಾಣಿಪಾದಃ' ಇತ್ಯಾದಿಯಾಗಿ ಹೇಳಿದಂತೆ ಎಂದು ಇದರ ಅಭಿಪ್ರಾಯ. 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲಿ ಅಪ್ರಾಕೃತಶರೀರವನ್ನು ಪರಮಾತ್ಮನಿಗೆ ಹೇಳಿರುವುದರಿಂದ ಎರಡನೇ ಪಕ್ಷವನ್ನು ಟೀಕೆಯಲ್ಲಿ ಉಲ್ಲೇಖ ಮಾಡಿದ್ದಾರೆ. ಅತಃ ಎಂಬ ಪದಕ್ಕೆ ಶ್ರುತಿಸಿದ್ಧತ್ವ, ಶಬ್ದಮೂಲತ್ವ, ಜೀವಾದತಿಶಯ ಮೊದಲಾದವುಗಳು ವಿಷ್ಣುವಿನಲ್ಲಿ ಉಪಪನ್ನವಾಗುವುದರಿಂದ ಎಂದರ್ಥ.

ವಿವರಣೆ - ಭಾಷ್ಯದಲ್ಲಿ ಶ್ವೇತಾಶ್ವತರೋಪನಿಷತ್ತನ್ನು ಉಲ್ಲೇಖ ಮಾಡುವಾಗ 'ಅಪಾಣಿಪಾದಃ ಜವನೋ ಗೃಹೀತಾ ಪಶ್ಯತ್ಯಚಕ್ಷುಃ ಸ ಶೃಣೋತ್ಯಕರ್ಣಃ ಸವೇತ್ಯವೇದ್ಯಂ ನ ಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹಾಂತಮ್' ಎಂಬುದಾಗಿ ನಾಲ್ಕು ಪಾದಗಳನ್ನೂ ಕೂಡ ಉಲ್ಲೇಖ ಮಾಡಿದ್ದಾರೆ. ವಾಸ್ತವಿಕವಾಗಿ ಪರಮಾತ್ಮನಿಗೆ ಇಂದ್ರಿಯಗಳಿಲ್ಲ ಎಂದು ತೋರಿಸಲು ಒಂದು ಪಾದ ಉಲ್ಲೇಖ ಮಾಡಿದ್ದರೆ ಸಾಕಿತ್ತು? ಈ ಪ್ರಶ್ನೆಗೆ 'ಅಪಾಣಿಪಾದಂ' ಎಂಬ ಟೀಕಾವಾಕ್ಯದಿಂದ ಉಲ್ಲೇಖಿಸಿದ್ದಾರೆ. ಕೇವಲ 'ಅಪಾಣಿಪಾದಃ ಜವನೋ ಗೃಹೀತಾ' ಎಂದಷ್ಟೇ ಶ್ರುತಿಯನ್ನು ಉಲ್ಲೇಖ ಮಾಡಿದ್ದಲ್ಲಿ ಇಂದ್ರಿಯಗಳಿಲ್ಲದಿದ್ದರೂ ಅವನು ಇಂದ್ರಿಯಗಳಿಂದಾಗಬೇಕಾದ ಕೆಲಸವನ್ನು ಮಾಡಿ ಪೂರೈಸುತ್ತಾನೆ ಎಂಬರ್ಥವೇ ತಿಳಿಯುತ್ತಿರಲಿಲ್ಲ. ಈ ಅರ್ಥವನ್ನು ತಿಳಿಸುವ ಉತ್ತರಾರ್ಧವನ್ನು ಉಲ್ಲೇಖ ಮಾಡಿದ್ದರಿಂದ

ಮುಂದೆ 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡಲು ಸುಲಭವಾಗುತ್ತದೆ. ಆದ್ದರಿಂದ ಭಾಷ್ಯದಲ್ಲಿ ಉಲ್ಲೇಖ ಮಾಡಿದ ಸಂಪೂರ್ಣಶ್ರುತಿಯು ಸಾರ್ಥಕವಾಗಿದೆ.

ಭಾಷ್ಯದಲ್ಲಿ 'ವಿಶೇಷಯುಕ್ತ್ಯರ್ಥಂ ಪುನರಾಶಂಕಾ' ಎಂದು ಹೇಳಿದ್ದಾರೆ. ವಿಶೇಷಆಕ್ಷೇಪ ಪರಿಹಾರಕ್ಕಾಗಿ ವಿಶೇಷಯುಕ್ತಿಗಳನ್ನು ತೋರಿಸಲು ಸೂತ್ರವು ಪುನಃ ಆಕ್ಷೇಪ ಮಾಡಿದೆ ಎಂದು ಇದರ ಅರ್ಥ. ಇದನ್ನು ಟೀಕೆಯಲ್ಲಿ 'ವಿಶೇಷಯುಕ್ತಿಸ್ತು' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಆದ್ದರಿಂದ 'ಪ್ರಮಾಣವಿಶೇಷ ಏವ ವಾ' ಎಂಬುದರ ಅನಂತರ 'ವಿಶೇಷಯುಕ್ತಿಶಬ್ದಾರ್ಥಃ' ಎಂಬುದನ್ನು ಶೇಷಪೂರಣೆ ಮಾಡಿಕೊಳ್ಳಬೇಕು. ಈಗಾಗಲೇ ಉಲ್ಲೇಖ ಮಾಡಿದ 'ಅಪಾಣಿಪಾದಃ ಜವನೋ ಗೃಹೀತಾ' ಎಂಬುದೇ ಆ ವಿಶೇಷಯುಕ್ತಿಯಾಗಿದೆ. ಇದರ ಸಮರ್ಥನೆಗಾಗಿ ಈ ಸೂತ್ರ ಹೊರಟದ್ದು ಸಾರ್ಥಕ.

ಟೀಕಾವಾಕ್ಯದಲ್ಲಿ 'ಅಪ್ರಾಕೃತವಿಗ್ರಹವುಳ್ಳವನಾಗಿದ್ದಾನೆ' ಎಂಬುದು ಮೊದಲನೆ ಯುಕ್ತಿಯನ್ನಾಗಿ ಹೇಳಿದ್ದಾರೆ. ಈ 'ಅಪಾಣಿಪಾದಃ' ಎಂಬ ಪ್ರಮಾಣವಿಶೇಷವನ್ನು ಉಲ್ಲೇಖ ಮಾಡುವುದು ಎರಡನೆ ಯುಕ್ತಿಯಾಗಿದೆಯೆಂದು ಹೇಳಿದ್ದಾರೆ. ವಾಸ್ತವಿಕವಾಗಿ 'ಅನ್ಯಭಾವವ್ಯಾವೃತ್ತೇಶ್ಚ' ಎಂಬ ಸೂತ್ರದಲ್ಲೇ ಅಪ್ರಾಕೃತವಿಗ್ರಹವುಳ್ಳವನಾಗಿದ್ದಾನೆಂದು ಹೇಳಿದ್ದರಿಂದ ಈ ಸೂತ್ರಕ್ಕೆ ಹೆಚ್ಚಿನ ಸಾರ್ಥಕ್ಯವು ಸಿದ್ಧಿಯಾಗಲು 'ಅಪಾಣಿಪಾದಃ ಜವನೋ ಗೃಹೀತಾ' ಎಂಬ ಪ್ರಮಾಣವಿಶೇಷದ ಉಲ್ಲೇಖವು ಕಾರಣವಾಗಿದೆ ಎಂದು ಟೀಕೆಯಲ್ಲಿ ಹೇಳಿರುತ್ತಾರೆ. ಸಂಪೂರ್ಣ ಅಧಿಕರಣದ ಪ್ರಮೇಯವನ್ನು 'ಅತಃ' ಎಂಬ ವಾಕ್ಯದಿಂದ ಟೀಕೆಯಲ್ಲಿ ಸಂಗ್ರಹಿಸಿದ್ದಾರೆ.

ಸತ್ತರ್ಕದೀಪಾವಳಿ

ವೈಷಮ್ಯನೈರ್ಘೃಣ್ಯದೋಷಗಳು ವೇದಾಪ್ರಾಮಾಣ್ಯಕ್ಕೆ ಕಾರಣಗಳು

सत्तर्कदीपावलिः – स्वाधीनविचित्रानादिकर्मपरम्परां लीलयैवानुसृजति जगद्वैचित्र्यं सृजतीश्वरः, न तु स्वतोऽसामर्थ्येन ।

'द्रव्यं कर्म च कालश्च स्वभावो जीव एव च ।
यदनुग्रहतः सन्ति न सन्ति यदुपेक्षया ।।'

इत्यादिवचनविरोधात् । पुण्यस्य शोभनमेव फलं पापस्याशोभनमेव फलम् इत्येतदन्यथाकर्तुं समर्थोऽपि न करोतीत्येतत् वैषम्यं नैर्घृण्यं च अस्तीश्वरस्य तदङ्गीकारे बाधकाभावात् । तदुक्तम् –

'वैषम्यं चैव नैर्घृण्यं वेदाप्रामाण्यकारणम् ।
नाङ्गीकार्यमतोन्यत्तु न वैषम्यादिनामकम् ।।' इति ।

तदाह – सर्वकर्तृत्व इत्यादिना ।।

ತನ್ನ ಅಧೀನವೇ ಆದ, ವಿಚಿತ್ರವಾದ, ಅನಾದಿಯಾದ ಯಾವ ಕರ್ಮಗಳ ಪರಂಪರೆಯಿದೆಯೋ, ಇದನ್ನು ಲೀಲೆಯಿಂದಲೇ ಪರಮಾತ್ಮನು ಈ ಕರ್ಮಗಳನ್ನು ಅನುಸರಿಸಿಯೇ ಕೆಲಸವನ್ನು ಮಾಡಿಸುತ್ತಾನೆ. ಸ್ವತಃ ತಾನು ಏನನ್ನೂ ಮಾಡಲಾರ. ಅಂದಮಾತ್ರಕ್ಕೆ ಇವನಲ್ಲಿ ಅಸಾಮರ್ಥ್ಯವಿದೆ ಎಂದಲ್ಲ. ಆ ಕರ್ಮಗಳೂ ಕೂಡ ಇವನ ಅಧೀನವೇ ಆಗಿವೆ. ಹೀಗೊಪ್ಪದಿದ್ದರೆ -

ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥

ದ್ರವ್ಯ, ಕರ್ಮ, ಕಾಲ, ಸ್ವಭಾವ, ಜೀವ ಇವುಗಳೆಲ್ಲವೂ ಯಾರ ಅನುಗ್ರಹದಿಂದ ಇವೆಯೋ, ಯಾರ ಉಪೇಕ್ಷೆಯಿಂದ ನಾಶವಾಗುತ್ತವೋ, ಇತ್ಯಾದಿ ಪ್ರಮಾಣಗಳ ವಿರೋಧವು ಪ್ರಾಪ್ತವಾಗುತ್ತದೆ.

ಪುಣ್ಯಕೆಲಸಕ್ಕೆ ಶುಭವಾದ ಫಲವೇ ದೊರಕುತ್ತದೆ. ಪಾಪದ ಕೆಲಸಕ್ಕೆ ಅಶುಭವಾದ ಫಲವೇ ದೊರಕುತ್ತದೆ. ಇದನ್ನು ವಿಪರೀತವಾಗಿಯೂ ಕೂಡ ಪರಮಾತ್ಮನು ಮಾಡಲು ಸಮರ್ಥನು. ಆದರೆ ಹಾಗೇ ಮಾಡುವುದಿಲ್ಲ. ಹಾಗೇ ಮಾಡಿದರೆ ಪರಮಾತ್ಮನಿಗೆ ವೈಷಮ್ಯನೈರ್ಘೃಣ್ಯ ದೋಷಗಳು ಪ್ರಾಪ್ತವಾಗುತ್ತವೆ. ಪುಣ್ಯಕೆಲಸಕ್ಕೆ ಶುಭವನ್ನು ನೀಡಿದರೆ, ಪಾಪಕೆಲಸಕ್ಕೆ ಅಶುಭವನ್ನು ನೀಡಿದರೆ ವೈಷಮ್ಯನೈರ್ಘೃಣ್ಯದೋಷಗಳು ಪ್ರಾಪ್ತವಾಗುವುದಿಲ್ಲ. ಹಾಗೇ ಒಪ್ಪುವುದರಿಂದ ಯಾವುದೇ ಬಾಧಕಗಳೂ ಕೂಡ ಬರುವುದಿಲ್ಲ. ಇದನ್ನೇ ಹೀಗೆ ಹೇಳಿದ್ದಾರೆ -

'ವೈಷಮ್ಯಂ ಚೈವ ನೈರ್ಘೃಣ್ಯಂ ವೇದಾಪ್ರಾಮಾಣ್ಯಕಾರಣಮ್ ।
ನಾಂಗೀಕಾರ್ಯಮತೋಽನ್ಯತ್ತು ನ ವೈಷಮ್ಯಾದಿನಾಮಕಮ್ ॥

ವೈಷಮ್ಯ ಹಾಗೂ ನೈರ್ಘೃಣ್ಯಗಳು ವೇದದ ಅಪ್ರಾಮಾಣ್ಯಕ್ಕೆ ಕಾರಣಗಳಾಗಿವೆ. ಆದ್ದರಿಂದ ಇದನ್ನು ಪರಮಾತ್ಮನಲ್ಲಿ ಸರ್ವಥಾ ಒಪ್ಪಬಾರದು. ಇದನ್ನೇ 'ಸರ್ವಕರ್ತೃತ್ವ' ಇತ್ಯಾದಿಯಾಗಿ ಹೇಳಿದ್ದಾರೆ.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ವೈಷಮ್ಯನೈರ್ಘೃಣ್ಯಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

### ತತ್ವಪ್ರದೀಪ

#### ಸರ್ವತಂತ್ರ ಸ್ವತಂತ್ರನಾದ ಪರಮಾತ್ಮನನ್ನು ಒಪ್ಪಲೇ ಬೇಕು

**तत्वप्रदीपः – कर्मापेक्षत्वे तस्य अस्वातन्त्र्याद् ईश्वरस्यानुपपत्तिरित्यत आह – उपपद्यते चाप्युपलभ्यते च । उपपद्यते च तस्य स्वातन्त्र्यम् ।**

**कारणभूतानां कर्मणां जडत्वात् । जीवस्य च अस्वातन्त्र्यस्य दर्शितत्वात् । ऋते च स्वतन्त्रादखिलव्यवहारानुपपत्तेः । कर्मादीनां सत्त्वस्यापि तदपेक्षत्वमुपलभ्यते च श्रुतिस्मृत्योः । अतः कुतोऽस्वातन्त्र्यम् । नित्यं च अनाशित्वं च यदनुग्रहादेव इत्यर्थः ।**

ಈಶ್ವರನು ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುವುದಾದರೆ, ಅಸ್ವಾತಂತ್ರ್ಯದೋಷವು ಪ್ರಾಪ್ತವಾಗುತ್ತದೆ. ಈ ಅನುಪಪತ್ತಿಯನ್ನು ಪರಿಹರಿಸಲು 'ಉಪಪದ್ಯತೇ ಚಾಪ್ಯುಪಲಭ್ಯತೇ ಚ' ಎಂಬ ಸೂತ್ರವು ಹೊರಟಿದೆ. ಪರಮಾತ್ಮನಿಗೆ ಸ್ವಾತಂತ್ರ್ಯವು ಉಪಪನ್ನವಾಗುತ್ತದೆ. ಏಕೆಂದರೆ ಯಾವ ಕರ್ಮವನ್ನು ಅಪೇಕ್ಷಿಸಿ ಜೀವರುಗಳಿಗೆ ಫಲವನ್ನು ನೀಡುತ್ತಾನೋ, ಅಂಥ ಕರ್ಮಗಳು ಜಡವಾಗಿವೆ. ಅನುಭವಿಸುವ ಜೀವನು ಅಸ್ವತಂತ್ರನಾಗಿದ್ದಾನೆ. ಸ್ವತಂತ್ರನಾದ ಒಬ್ಬ ವ್ಯಕ್ತಿಯನ್ನು ಒಪ್ಪದೇ ಈ ಎಲ್ಲ ವ್ಯವಹಾರವು ಉಪಪನ್ನವಾಗಲು ಸಾಧ್ಯವೇ ಇಲ್ಲ. ಮತ್ತು ಈ ಕರ್ಮಾದಿಗಳ ಇರುವಿಕೆಯೂ ಕೂಡ ಸ್ವತಂತ್ರನಾದ ಈಶ್ವರನ ಅಧೀನವೆಂದು ಶ್ರುತಿ-ಸ್ಮೃತಿಗಳು ಪ್ರತಿಪಾದನೆ ಮಾಡುತ್ತಿವೆ. ಹೀಗಿರುವಾಗ ಕರ್ಮವನ್ನು ಅನುಸರಿಸಿ ಫಲಕೊಡುವ ಈಶ್ವರನಲ್ಲಿ ಅಸ್ವಾತಂತ್ರ್ಯ ಬರಲು ಹೇಗೆ ಸಾಧ್ಯ ? 'ದ್ರವ್ಯಂ ಕರ್ಮ ಚ' ಎಂಬ ಪ್ರಮಾಣ ಶ್ಲೋಕದಲ್ಲಿ ನಿತ್ಯವಾದ ಪದಾರ್ಥಕ್ಕೆ ನಾಶವಿಲ್ಲದಿರುವಿಕೆಯು ಈಶನ ಅನುಗ್ರಹದಿಂದಷ್ಟೇ ಇರುತ್ತದೆ ಎಂಬ ಅಭಿಪ್ರಾಯವನ್ನು ವಿವಕ್ಷಿಸಬೇಕು.

### ಪ್ರಮಾಣಸಿದ್ಧವಾದದ್ದು ಅನುಪಪನ್ನವಲ್ಲ

**तत्वप्रदीपः – नच पुनः स्वोत्पादितकर्मानुकूल्येन कर्मान्तरं कारयति - इति वैषम्याद्यापातेन दोषः । उपपद्यत एव तादृशं वैषम्यादि, उपलभ्यत्वात् । न हि प्रमाणोपलभ्यमनुपपन्नं भवति ।**

ತನ್ನಿಂದಲೇ ಹುಟ್ಟಿದ ಕರ್ಮವನ್ನು ಅನುಸರಿಸಿ ಮತ್ತೊಂದು ಕರ್ಮವನ್ನು ಪರಮಾತ್ಮನು ನೀಡುತ್ತಾನೆಂದು ಹೇಳಿದಂತಾಯಿತು. ಹಾಗಾದರೆ ತನ್ನ ಮನಸ್ಸಿಗೆ ಬಂದಂತೆ ತನ್ನನ್ನು ಇವನು ಸೃಷ್ಟಿ ಮಾಡಿಕೊಳ್ಳುತ್ತಾನೆ. ಆದ್ದರಿಂದ ಪಕ್ಷಪಾತ ಹಾಗೂ ನಿಷ್ಕಾರುಣ್ಯದೋಷಗಳು ಪುನಃ ಪ್ರಾಪ್ತವಾಗುತ್ತವಲ್ಲವೇ? ಹೀಗೆ ಆಕ್ಷೇಪ ಮಾಡಬಾರದು. ತನ್ನ ಅಧೀನವೇ ಆದ ಕರ್ಮವನ್ನು

ಅನುಸರಿಸಿ, ಜೀವರುಗಳಿಗೆ ಪರಮಾತ್ಮನು ಫಲವನ್ನು ನೀಡುತ್ತಾನೆಂಬುದು ಸಿದ್ಧಾಂತಿಗಳ ಅಭಿಪ್ರಾಯ. ಹೀಗೆ ಹೇಳಿದ್ದರಿಂದ ಪರಮಾತ್ಮನಿಗೆ ವೈಷಮ್ಯಾದಿ ದೋಷಗಳು ಬರಲು ಸಾಧ್ಯವಿಲ್ಲ. ಇಂಥ ಕರ್ಮಸಾಪೇಕ್ಷವಾದ ವೈಷಮ್ಯನೈರ್ಘೃಣ್ಯಗಳು ದೋಷವಲ್ಲ ಎಂದೇ ಪ್ರಮಾಣಗಳಿಂದ ಸಿದ್ಧವಾಗಿದೆ. ಪ್ರಮಾಣದಿಂದ ಸಿದ್ಧವಾದದ್ದು ಅನುಪಪನ್ನವಾಗಲು ಸಾಧ್ಯವಿಲ್ಲ.

ವಿವರಣೆ - ಸೂತ್ರದಲ್ಲಿರುವ ಎರಡೂ ಶಬ್ದಗಳನ್ನು ಆವೃತ್ತಿ ಮಾಡಿಕೊಳ್ಳಬೇಕು. ಕರ್ಮವನ್ನು ಅವಲಂಬಿಸಿದರೂ ಕೂಡ ಪರಮಾತ್ಮನಿಗೆ ಸ್ವಾತಂತ್ರ್ಯವು ಕೂಡುತ್ತದೆ. ಏಕೆಂದರೆ ಆ ಕರ್ಮಗಳು ಈಶಾಧೀನವೆಂಬುದು ಪ್ರಮಾಣಗಳಿಂದ ಸಿದ್ಧವಾಗಿದೆ ಎಂಬುದು ಸೂತ್ರದ ಮೊದಲನೆಯ ಅರ್ಥ. ಸ್ವಾಧೀನವಾದ ಕರ್ಮವನ್ನು ಅವಲಂಬಿಸಿ ಜೀವನಿಂದ ವಿಭಿನ್ನ ಕ್ರಿಯೆಗಳನ್ನು ಮಾಡಿಸುತ್ತಾನೆ. ಇದು ವಿಷಮವಾದರೂ ಕೂಡ ಅಯುಕ್ತವಲ್ಲ. ಏಕೆಂದರೆ ಶ್ರುತಿ ಪ್ರಮಾಣಸಿದ್ಧವಾಗಿದೆ ಎಂಬುದು ಸೂತ್ರದ ಎರಡನೆಯ ಅರ್ಥ.

### 'ಸ ಕಾರಯೇತ್' ಎಂಬ ಶ್ರುತಿಗೆ ವ್ಯಾಖ್ಯಾನ

**तत्वप्रदीपः – अयं श्रुत्यर्थः – पुण्यं पुण्यं कारयेत्, पापं पापं, मिश्रकर्मणाम् अथापि मिश्रमेव । न चैवमेव कारयतीत्येतावता दोषवान् । अन्यथा कर्तुमीशिता सन्नपि दोषाद्यापादने तेषां दोषादित्वापादने च । परः स्वयमेवेश इति यतः । न चायं सकर्तृकः, येन पराधीनतया दोषसम्भवः । प्रजानां चायमेव सर्वकर्ता । न च कस्यापि स्वदोषेच्छा भवति । अतो न दोषवान् परमेश्वरः । सर्वस्वातन्त्र्यात् सर्वगुणपरिपूर्ण एव ।**

ಶ್ರುತ್ಯರ್ಥ ಹೀಗಿದೆ - ಪುಣ್ಯಕೆಲಸದಿಂದ ಪರಮಾತ್ಮನು ಪುಣ್ಯವನ್ನೇ ನೀಡುತ್ತಾನೆ. ಪಾಪಕೆಲಸದಿಂದ ಪಾಪವನ್ನು ನೀಡುತ್ತಾನೆ. ಮಿಶ್ರಕರ್ಮದಿಂದ ಮಿಶ್ರಫಲವನ್ನು ನೀಡುತ್ತಾನೆ. ಹೀಗೆ ನಿಯಮಿತವಾಗಿ ಮಾಡಿಸುವುದರಿಂದ ಅವನಿಗೆ ದೋಷವು ಬರುವುದಿಲ್ಲ. ಇದನ್ನು ಹೊರತಾಗಿ ಪರಮಾತ್ಮನು ವಿಪರೀತವಾಗಿಯೂ ಕೂಡ ಮಾಡಲು ಸಮರ್ಥನಾಗಿದ್ದಾನೆ. ಆದರೂ ಕೂಡ ಏಕೆ ಹಾಗೆ ಮಾಡಲಾರ ? ಹಾಗೇ ಮಾಡದ ಕಾರಣ ದೋಷಿಯಾಗುತ್ತಾನಲ್ಲವೇ? ಈ ಪರಮಾತ್ಮನು ಸ್ವತಃ ತಾನೇ ಈಶ್ವರನಾಗಿದ್ದಾನೆ. ಇವನಿಗೆ ಮತ್ತೊಬ್ಬ ಕರ್ತೃವಿರಲು ಸಾಧ್ಯವಿಲ್ಲ. ಹಾಗೇನಾದರೂ ಮತ್ತೊಬ್ಬ ಕರ್ತೃವಿದ್ದರೆ ಇವನು

ಪರಾಧೀನನಾಗಿ ದೋಷವು ಪ್ರಾಪ್ತವಾಗುತ್ತಿತ್ತು. ಸಕಲ ಜೀವರಾಶಿಗಳಿಗೆ ಇವನೇ ಕರ್ತೃವಾಗಿದ್ದಾನೆ. ಯಾರೊಬ್ಬನಿಗೂ ಕೂಡ ತಮ್ಮಲ್ಲಿ ದೋಷವಿರಬೇಕೆಂಬ ಇಚ್ಛೆಯು ಬರಲು ಸಾಧ್ಯವಿಲ್ಲ. ಆದ್ದರಿಂದ ಪರಮಾತ್ಮನು ದೋಷವುಳ್ಳವನೆಂದು ಹೇಳಲಾಗದು. ಏಕೆಂದರೆ ಇವನು ಸರ್ವತಂತ್ರಸ್ವತಂತ್ರನಾಗಿದ್ದಾನೆ. ಸರ್ವಗುಣಪರಿಪೂರ್ಣನಾಗಿದ್ದಾನೆ.

### ಸ್ವತಂತ್ರನಾದವನು ಕಟ್ಟುನಿಟ್ಟಾದ ನಿಯಮ ಪರಿಪಾಲಿಸುತ್ತಾನೆ

**तत्वप्रदीपः – एवं स्वाभाविकीं योग्यतामनपोह्य त्रिविधांस्त्रिधा कारयतीत्यभ्युपगमः श्रुत्याद्यनुग्राह्यश्चोपपद्यते । वक्ष्यन्ते च नियमातद्रूपाभावः । उपपद्यते चैवं नियमवत्त्वं स्वतन्त्रस्य । उपलभ्यते चैवं स्वभावत्वं 'देवस्यैष स्वभावोऽयम्' इति श्रुतौ ।**

**।। इति वैषम्यनैर्घृण्याधिकरणम् ।।**

ಸ್ವಾಭಾವಿಕವಾದ ಯೋಗ್ಯತೆಯನ್ನು ಅನುಸರಿಸಿಯೇ ವಿವಿಧ ಜೀವರಿಂದ ತ್ರಿವಿಧ ಕಾರ್ಯಗಳನ್ನು ಮಾಡಿಸುತ್ತಾನೆ. ಹೀಗೆ ಒಪ್ಪಿದ್ದರಿಂದ ಶ್ರುತ್ಯಾದಿಗಳನ್ನೂ ಕೂಡ ಅನುಸರಿಸಿದಂತಾಗುತ್ತದೆ. ಮುಂದೆಯೂ ಕೂಡ ಪರಮಾತ್ಮನು ಈ ನಿಯಮವನ್ನು ಅನುಸರಿಸುತ್ತಾನೆ. ಈ ನಿಯಮವನ್ನು ಮೀರುವ ಸ್ವಭಾವ ಅವನದ್ದಲ್ಲ ಎಂಬುದಾಗಿ ಸಮರ್ಥನೆ ಮಾಡಲಾಗುತ್ತದೆ. ಸ್ವತಂತ್ರನಾದವನಿಗೆ ಇಂಥ ನಿಯಮದ ಪರಿಪಾಲನೆಯು ಉಪಪನ್ನವೇ ಆಗುತ್ತದೆ. ಮತ್ತು ಇದು ಸ್ವಭಾವವೇ ಆಗಿದೆ ಎಂಬುದನ್ನು 'ದೇವಸ್ಯೈಷ ಸ್ವಭಾವೋऽಯಮ್' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ತ್ವಪ್ರದೀಪದಲ್ಲಿ

ವೈಷಮ್ಯನೈರ್ಘೃಣ್ಯಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

ತತ್ತ್ವಪ್ರಕಾಶಿಕಾ

ಅಸ್ವಾತಂತ್ರ್ಯದೋಷ ಪರಿಹಾರಕ್ಕಾಗಿ 'ಉಪಪದ್ಯತೇ' ಎಂಬ ಸೂತ್ರ

**तत्वप्रकाशिका – तथापि नियमेन कर्मापेक्षयैव फलदातुरीश्वरस्यास्वातन्त्र्यं प्रसज्जत इत्यादि शङ्कां परिहरत्सूत्रमुपन्यस्य व्याचष्टे – उपपद्यत इति ।।**

ವೈಷಮ್ಯಾದಿ ದೋಷಗಳು ಇಲ್ಲದಿದ್ದರೂ ಕೂಡ ನಿಯಮೇನ ಈಶ್ವರನು ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುತ್ತಾನೆ. ಆದ್ದರಿಂದ ಈಶ್ವರನಿಗೆ ಅಸ್ವಾತಂತ್ರ್ಯದೋಷವು ಬರುತ್ತದಲ್ಲವೆ? ಈ ಆಶಂಕೆಯನ್ನು ಪರಿಹರಿಸಲು 'ಉಪಪದ್ಯತೇ' ಎಂಬ ಪರಿಹಾರ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - ಹಿಂದಿನ ಎರಡು ಸೂತ್ರಗಳಲ್ಲಿ ವೈಷಮ್ಯನೈರ್ಘೃಣ್ಯದೋಷವನ್ನು ಭಗವಂತನಲ್ಲಿ ಪರಿಹರಿಸಲಾಯಿತು. ಈ ಸೂತ್ರದಲ್ಲಿ ಅಸ್ವಾತಂತ್ರ್ಯವೆಂಬ ದೋಷವನ್ನು ಪರಿಹರಿಸುತ್ತಿದ್ದಾರೆ. ಕರ್ಮವನ್ನು ಅಪೇಕ್ಷಿಸಿ ಭಗವಂತನು ಫಲವನ್ನು ನೀಡುವುದಾದರೆ ಅಸ್ವಾತಂತ್ರ್ಯದೋಷವು ಬರುತ್ತದೆಂದು ಇದರ ಅಭಿಪ್ರಾಯ. ಅಸ್ವಾತಂತ್ರ್ಯದೋಷಕ್ಕೆ ಹೆದರಿ ಕರ್ಮವನ್ನು ಅಪೇಕ್ಷಿಸದೆ ಫಲವನ್ನು ನೀಡುತ್ತಾನೆಂದು ಹೇಳಿದರೆ ಹಿಂದಿನ ಸೂತ್ರದಲ್ಲಿ ಆಕ್ಷೇಪ ಮಾಡಿದಂತೆ ವೈಷಮ್ಯನೈರ್ಘೃಣ್ಯದೋಷಗಳು ಬರುತ್ತವೆಂಬುದು ಆಕ್ಷೇಪದ ಅಭಿಪ್ರಾಯ.

ತನ್ನ ಅಧೀನವಾದದ್ದನ್ನೇ ಅಪೇಕ್ಷಿಸುವುದರಿಂದ ಅಸ್ವಾತಂತ್ರ್ಯವಿಲ್ಲ

**तत्वप्रकाशिका – नेश्वरस्य कर्मापेक्षयाऽस्वातन्त्र्यं किं तूपपद्यते च तत्। अपेक्ष्यकर्मसत्तादेरपि स्वाधीनत्वात् ।**

**नहि स्वाधीनसत्तादिमदपेक्षायामस्वातन्त्र्यं भवति । अपेक्षा तु वैषम्याद्यप्राप्तये स्वेच्छानिमित्तैव ।**

ಈಶ್ವರನು ಕರ್ಮವನ್ನು ಅಪೇಕ್ಷಿಸುತ್ತಾನೆಂದ ಮಾತ್ರಕ್ಕೆ ಅಸ್ವಾತಂತ್ರ್ಯದೋಷವು ಬರುವುದಿಲ್ಲ. ಯಾವ ಕರ್ಮವನ್ನು ಅಪೇಕ್ಷಿಸಿ ಈಶ್ವರನು ನೀಡುತ್ತಾನೋ ಆ ಕರ್ಮದ ಸತ್ತಾ, ಪ್ರತೀತಿ, ಪ್ರವೃತ್ತಿ ಮೊದಲಾದವುಗಳು ಕೂಡ ಈಶ್ವರನ ಅಧೀನವೇ ಆಗಿವೆ. ತನ್ನ ಅಧೀನವೇ ಆದ ಸತ್ತಾ ಮೊದಲಾದವುಗಳಿರುವ ವಸ್ತುವನ್ನು ಅಪೇಕ್ಷಿಸುವುದರಿಂದ ಅಸ್ವಾತಂತ್ರ್ಯವು ಬರುವುದಿಲ್ಲ. ಅಂಥ ಕರ್ಮಾದಿಗಳನ್ನು ಅಪೇಕ್ಷಿಸುವುದೂ ಕೂಡ ತನ್ನಲ್ಲಿ ವೈಷಮ್ಯಾದಿದೋಷಗಳು ಬರಬಾರದೆಂಬ ಸ್ವೇಚ್ಛಾನಿಮಿತ್ತದಿಂದಲೇ ಎಂದು ತಿಳಿಯಬೇಕು.

ವಿವರಣೆ - ದ್ರವ್ಯ, ಕರ್ಮ, ಕಾಲ, ಸ್ವಭಾವ, ಜೀವ ಇವುಗಳ ಸತ್ತಾ ಭಗವಂತನ ಅಧೀನವಾಗಿದೆ. ಭಗವಂತನು ಇವುಗಳನ್ನು ಉಪೇಕ್ಷಿಸಿದರೆ ಇವುಗಳ ಅಸ್ತಿತ್ವವೇ ಉಳಿಯುದಿಲ್ಲ. ಹೀಗೆ ತನ್ನ ಅಧೀನವೇ ಆದ ಸತ್ತಾದಿಗಳುಳ್ಳ ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುತ್ತಾನಾದ್ದರಿಂದ ಭಗವಂತನಲ್ಲಿ ಅಸ್ವಾತಂತ್ರ್ಯದೋಷವನ್ನು ಆಕ್ಷೇಪ ಮಾಡಬಾರದು.

ಸ್ವಾಧೀನಕರ್ಮವನ್ನು ಅಪೇಕ್ಷಿಸಿದರೆ ವೈಷಮ್ಯಾದಿ ದೋಷಗಳಿಲ್ಲ

**तत्वप्रकाशिका – यदि कर्मादि सत्तापि तदधीना तर्हि तदपेक्षा नामानपेक्षैवाथाद्भवति । तथा च पुनर्वैषम्याद्यापातः स्यात् । तेन च दोषित्वमिति चेन्न । स्वाधीनकर्मापेक्षया फलदानरूपवैषम्यादेरीश्वरेऽदोषतयैव श्रुतावुपलभ्यमानत्वादिति भावः । कासौ श्रुतिरिति तामुदाहरति – स इति ।।**

ಪ್ರಶ್ನೆ - ಒಂದುವೇಳೆ ಕರ್ಮಾದಿಗಳಲ್ಲಿರುವ ಸತ್ತಾದಿಗಳು ಈಶ್ವರಾಧೀನವೆಂದು ಒಪ್ಪಿದರೆ ಅವುಗಳನ್ನು ಅಪೇಕ್ಷಿಸಿದರೂ ಅಪೇಕ್ಷಿಸದಂತೆ ಆಗುತ್ತದೆ. ಆದ್ದರಿಂದ ಪುನಃ ವೈಷಮ್ಯಾದಿ-ದೋಷಗಳು ಬರುತ್ತವೆ? ಇದರಿಂದ ಈಶ್ವರನು ದೋಷಿ ಎಂದೇ ಹೇಳಿದಂತಾಯಿತು.

ಈ ಪ್ರಶ್ನೆ ತಪ್ಪು. ತನ್ನ ಅಧೀನವಾದ ಅನಾದಿಕರ್ಮಗಳನ್ನು ಅಪೇಕ್ಷಿಸಿ ಫಲವನ್ನು ನೀಡಿದಾಗ ಯಾವ ವೈಷಮ್ಯಾದಿದೋಷಗಳು ಬರುತ್ತವೋ ಅದು ಈಶ್ವರನಲ್ಲಿ ದೋಷರೂಪವಾಗಿ ಉಳಿಯುವುದೇ ಇಲ್ಲ. ಹೀಗೆಂದು ಶ್ರುತಿಯು ಹೇಳುತ್ತಿದೆ. ಆ ಶ್ರುತಿ ಯಾವುದು ಎಂದರೆ 'ಸಃ' ಇತ್ಯಾದಿಯಾಗಿ ಭಾಷ್ಯದಲ್ಲಿ ಉದಾಹರಿಸುತ್ತಿದ್ದಾರೆ.

ಕರ್ಮಾಪೇಕ್ಷೆಯು ಇಲ್ಲದೆ ಕೂಡಿಸಲಾಗದು

**तत्वप्रकाशिका – स स्वाधीनकर्मापेक्षया पुण्यादि कारयेत् । एवं तस्य कर्मण ईशितापि तावता न वैषम्यादिदोषवानित्यर्थः । एवं तर्हि कर्मापेक्षाऽपि निष्फला तदभावेऽपि दोषाभावसम्भवादिति ।**

ಈಶ್ವರನು ತನ್ನ ಅಧೀನವಾದ ಕರ್ಮವನ್ನು ಅಪೇಕ್ಷಿಸಿ ಪುಣ್ಯಪಾಪಾದಿಗಳನ್ನು ಜೀವರಿಗೆ ನೀಡುತ್ತಾನೆ. ಈ ರೀತಿಯಾಗಿ ಈಶ್ವರನು ಎಲ್ಲಾ ಕರ್ಮಗಳಿಗೆ ಪ್ರಭುವಾಗಿದ್ದರೂ ವೈಷಮ್ಯಾದಿದೋಷಗಳುಳ್ಳವನು ಆಗುವುದಿಲ್ಲ. ಹಾಗಾದರೆ ಅವನೇಕೆ ಕರ್ಮವನ್ನು ಅಪೇಕ್ಷಿಸಬೇಕು. ಹಾಗೆ ಕರ್ಮವನ್ನು ಅಪೇಕ್ಷಿಸುವುದು ನಿಷ್ಫಲ. ಕರ್ಮ ಇಲ್ಲದಿದ್ದರೂ ಕೂಡ ಈಶ್ವರನಲ್ಲಿ ದೋಷವು ಬರುವುದಿಲ್ಲವಲ್ಲವೇ?

ಕರ್ಮವನ್ನು ಅಪೇಕ್ಷಿಸದೆ ಫಲ ನೀಡಿದರೆ ವೇದಕ್ಕೆ ಅಪ್ರಾಮಾಣ್ಯದೋಷ

**तत्वप्रकाशिका – मैवम् । कर्मानपेक्षत्वे वेदाप्रामाण्यप्रसङ्गात् । तदुक्तम्। 'वैषम्यं विर्घृणत्वं च वेदाप्रामाण्यकारणम् । नाङ्गीकार्यमतोऽन्यत्तु न वैषम्यादिनामकम्' इति । अतो हरेः सर्वकर्तृत्वे विरोधाभावाद्युक्तं लक्षणमिति सिद्धम् ।। ३७ ।।**

ಈ ಆಕ್ಷೇಪ ತಪ್ಪು. ಕರ್ಮವನ್ನು ಅಪೇಕ್ಷಿಸದಿದ್ದರೆ ವೇದಕ್ಕೆ ಅಪ್ರಾಮಾಣ್ಯವು ಪ್ರಾಪ್ತವಾಗುತ್ತದೆ. ಇದನ್ನು ಅನುವ್ಯಾಖ್ಯಾನದಲ್ಲಿ

'ವೈಷಮ್ಯಂ ನಿರ್ಘೃಣತ್ವಂಚ ವೇದಾಪ್ರಾಮಾಣ್ಯಕಾರಣಮ್ ।
ನಾಂಗೀಕಾರ್ಯಮತೋ ಯತ್ತು ನತು ವೈಷಮ್ಯಾದಿನಾಮಕಮ್ ॥'

ವೈಷಮ್ಯ ಹಾಗೂ ನೈರ್ಘೃಣ್ಯಗಳು ವೇದಾಪ್ರಾಮಾಣ್ಯಕ್ಕೆ ಕಾರಣವಾಗಿದ್ದಾಗ ದೋಷ ಎನಿಸುತ್ತವೆ. ಆದರೆ ಪರಮಾತ್ಮನು ವೇದೋಕ್ತವಾದ ಅಶೇಷಕರ್ಮವನ್ನು ಅಪೇಕ್ಷಿಸಿ ಫಲಪ್ರದನಾಗಿರುವುದರಿಂದ ಇವನ್ನಲ್ಲಿರುವ ವೈಷಮ್ಯ ನೈರ್ಘೃಣ್ಯಗಳು ವೇದಾಪ್ರಾಮಾಣ್ಯಕ್ಕೆ ಕಾರಣವಲ್ಲ ಎಂದು.

ಆದ್ದರಿಂದ ಶ್ರೀಹರಿಯು ಸರ್ವಕರ್ತೃವೆಂದು ಹೇಳಿದರೆ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ. ಜನ್ಮಾದಿ ಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣವು ಭಗವಂತನ ಲಕ್ಷಣವೆಂಬುದು ಸಿದ್ಧವಾಯಿತು

ವಿವರಣೆ - ವೈಷಮ್ಯಾದಿಗಳು ಸ್ವಾಭಾವಿಕವಾಗಿ ದೋಷಗಳಲ್ಲ. ದೋಷಕ್ಕೆ ಕಾರಣವಾಗಿ ದೋಷಗಳೆನಿಸುತ್ತವೆ. ವೇದಾಪ್ರಾಮಾಣ್ಯವೆಂಬ ದೋಷಕ್ಕೆ ಕಾರಣವಾದ್ದರಿಂದ ಇವುಗಳು ದೋಷವೆನಿಸುತ್ತವೆ ಎಂದಭಿಪ್ರಾಯ. ವೇದಾಪ್ರಾಮಾಣ್ಯದೋಷ ಬರುತ್ತದೆಂಬ ದೃಷ್ಟಿಯಿಂದ ಅಶೇಷಕರ್ಮವನ್ನು ಅಪೇಕ್ಷಿಸಿಯೇ ಈಶ್ವರನು ಫಲವನ್ನು ನೀಡುತ್ತಾನೆಂದು ಒಪ್ಪಬೇಕು.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯಲ್ಲಿ ವೈಷಮ್ಯನೈರ್ಘೃಣ್ಯಾಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

## ಭಾವದೀಪ

### ಸೂತ್ರದಲ್ಲಿ ಯಾವುದನ್ನು ಶೇಷಪೂರಣೆ ಮಾಡಬೇಕು.

**भावदीपः** –॥ उपपद्यते चाप्युपलभ्यते च ॥ ३७ ॥ पूर्वोक्तचोद्यमाशङ्कते ॥ **तथापीति**॥ सापेक्षत्वाङ्गीकारेण वैषम्यादिदोषनिरासेऽपीत्यर्थः । भाष्यमनुवदन् तच्छेषतया सूत्रांशं योजयति– **नेश्वरस्येति**॥ भाष्यशेषं व्याचष्टे– **अपेक्ष्येति**॥

ಹಿಂದಿನ ಸೂತ್ರದ ಸಿದ್ಧಾಂತವನ್ನು ಆಕ್ಷೇಪ ಮಾಡಲು 'ತಥಾಪಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಕರ್ಮಾದಿಗಳನ್ನು ಅಪೇಕ್ಷಿಸುವುದರಿಂದ ವೈಷಮ್ಯನೈರ್ಘೃಣ್ಯಾದಿ ದೋಷಗಳು ಪರಿಹಾರವಾಗುತ್ತದೆ ಎಂಬುದನ್ನು ಹೇಳಿದರೂ ಕೂಡ ಎಂಬುದು 'ತಥಾಪಿ' ಎಂಬುದರ ಅರ್ಥ. ಭಾಷ್ಯವನ್ನು ಅನುವಾದ ಮಾಡುವ ಮೂಲಕ ಅದರಲ್ಲಿ ಶೇಷಪೂರಣ ಮಾಡಿಕೊಳ್ಳಬೇಕಾದದ್ದನ್ನು ಹೇಳುತ್ತಾ ಸೂತ್ರಾಂಶವನ್ನು ಯೋಜನೆ ಮಾಡಲು 'ನ ಈಶ್ವರಸ್ಯ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. ಉಳಿದ ಭಾಷ್ಯದ ಮಾತುಗಳಿಗೆ 'ಅಪೇಕ್ಷ್ಯ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

ವಿವರಣೆ - ಒಂದು ವೇಳೆ ಹಿಂದಿನ ಸೂತ್ರದಲ್ಲಿ ಹೇಳಿದಂತೆ ಕರ್ಮವನ್ನು ಅಪೇಕ್ಷಿಸಿ ಈಶ್ವರನು ಫಲವನ್ನು ಕೊಡುವುದಾದರೆ ಅಸ್ವಾತಂತ್ರ್ಯದೋಷವು ಪ್ರಾಪ್ತವಾಗುತ್ತದೆ. ಕರ್ಮವನ್ನು ಅಪೇಕ್ಷೆ ಪಡದೇ ಫಲವನ್ನು ಕೊಡುವುದಾದರೆ ವೇದಕ್ಕೆ ಅಪ್ರಾಮಾಣ್ಯವೆಂಬ ದೋಷವು ಬರುತ್ತದೆ. ಈ ಆಕ್ಷೇಪಕ್ಕೆ ಉತ್ತರಿಸಲು ಈ ಸೂತ್ರ ಹೊರಟಿದೆ.

ಸೂತ್ರದಲ್ಲಿ 'ಉಪಪದ್ಯತೇ' ಎಂಬ ಪದದ ನಂತರ 'ಈಶ್ವರಸ್ಯ ಸ್ವಾತಂತ್ರ್ಯಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅಥವಾ 'ಕರ್ಮಾಪೇಕ್ಷಯಾ ಅಸ್ವಾತಂತ್ರ್ಯಂ ನೋಪಪದ್ಯತೇ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಹೀಗೆ 'ನ ಈಶ್ವರಸ್ಯ' ಇತ್ಯಾದಿ ಟೀಕಾವಾಕ್ಯವು ಸೂತ್ರಕ್ಕೆ ವ್ಯಾಖ್ಯಾನ ಮಾಡಿದೆ. ಮತ್ತು ಸೂತ್ರಕ್ಕೆ ಹೇಗೆ ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದಾರೆಂಬುದನ್ನು ಕೂಡ ವಿವಕ್ಷಿಸಿದೆ.

ಕರ್ಮವನ್ನು ಅಪೇಕ್ಷಿಸಿದರೆ ಅಸ್ವಾತಂತ್ರ್ಯವಿಲ್ಲ.

**भावदीपः –** किमर्थं नियमेन तदपेक्षत इत्यत आह– **अपेक्षात्विति**।। न च पुनरित्यादिभाष्यं व्याचष्टे – **यदीति**।। कर्मणोऽपि तदधीनत्वं तथापि तदनुसारेण फलदानमित्यङ्गीकार एव श्रुतिप्रामाण्यसिद्धिरिति न्यायविवरणं शङ्कापूर्वं व्यतिरेकमुखेनोपपादयति– **एवं तर्हीति**।।

ಪರಮಾತ್ಮನು ಕರ್ಮಾದಿಗಳ ಅಪೇಕ್ಷೆಯನ್ನು ನಿಯಮೇನ ಏಕೆ ಹೊಂದಿದ್ದಾನೆ? ಎಂಬ ಪ್ರಶ್ನೆಗೆ 'ಅಪೇಕ್ಷಾ ತು' ಇತ್ಯಾದಿ ಟೀಕಾವಾಕ್ಯದಿಂದ ಉತ್ತರಿಸಿದ್ದಾರೆ. 'ನ ಚ ಪುನಃ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಯದಿ ಕರ್ಮಾದಿಸತ್ತಾಪಿ' ಇತ್ಯಾದಿ ವಾಕ್ಯವು ಹೊರಟಿದೆ. ಉಳಿದವುಗಳಂತೆ ಕರ್ಮವೂ ಕೂಡ ಈಶ್ವರನ ಅಧೀನವೇ ಆಗಿದೆ. ಆದರೂ ಕೂಡ ಆ ಕರ್ಮಕ್ಕೆ ಅನುಗುಣವಾಗಿಯೇ ಈಶ್ವರನು ಫಲವನ್ನು ನೀಡುತ್ತಾನೆ. ಆದ್ದರಿಂದ ಶ್ರುತಿಗೆ ಅಪ್ರಾಮಾಣ್ಯವು ಕೂಡ ಪ್ರಾಪ್ತವಾಗುವುದಿಲ್ಲ. ಹೀಗೆ ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಈ ಪ್ರಮೇಯವನ್ನು ಆಶಂಕಿಸಿ ಇದನ್ನೇ ವ್ಯತಿರೇಕಮುಖದಿಂದ ಉಪಪಾದನೆ ಮಾಡಲು 'ಏವಂ ತರ್ಹಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

ವೈಷಮ್ಯಾದಿಗಳು ದೋಷಗಳೇ ಅಲ್ಲ.

**भावदीपः – वेदेति**।। ज्योतिष्टोमेन स्वर्गकाम इत्यादिवेदेत्यर्थः। तदुक्तं

अनुव्याख्यान इत्यर्थः ॥ **अत इति** ।। स्वाधीनकर्मापेक्षयैवेश्वरस्य फलदातृत्वाङ्गीकारात् तन्निमित्तवैषम्यादेरदोषत्वाच्चेत्यर्थः ॥ ३७ ॥

'ವೇದ' ಎಂಬ ಶಬ್ದಕ್ಕೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ವೇದಗಳು ಎಂದರ್ಥ. ಇದನ್ನೇ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆಂದು ಅಭಿಪ್ರಾಯ. 'ಅತಃ' ಎಂಬ ಶಬ್ದಕ್ಕೆ ಸ್ವಾಧೀನವಾದ ಕರ್ಮಾಪೇಕ್ಷೆಯಿಂದ ಈಶ್ವರನು ಫಲದಾತೃವಾಗಿರುವುದರಿಂದ ಮತ್ತು ತನ್ನಿಮಿತ್ತವಾದ ವೈಷಮ್ಯಾದಿಗಳು ಅದೋಷವಾಗಿರುವುದರಿಂದ ಎಂದರ್ಥ.

ವಿವರಣೆ - ಕರ್ಮಾಪೇಕ್ಷವಾಗಿಯೇ ಈಶ್ವರನು ಫಲವನ್ನು ಕೊಡುತ್ತಾನೆ. ಹೀಗೆ ಹೇಳದಿದ್ದರೆ ವೇದವು ಅಪ್ರಮಾಣವಾಗಬೇಕಾಗುತ್ತದೆಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ – ವೈಷಮ್ಯಾದಿಗಳು ವೇದ ಅಪ್ರಾಮಾಣ್ಯವೆಂಬ ದೋಷಕ್ಕೆ ಆಪಾದಕವಾಗಿರುವುದರಿಂದ ದೋಷಗಳಾಗುತ್ತವೆ ಹೊರತು ಸಹಜವಾಗಿ ದೋಷಗಳಾಗುವುದಿಲ್ಲ. ಆದರೆ ವೇದಗಳು ಕರ್ಮವನ್ನು ಅಪೇಕ್ಷಿಸಿಯೇ ಈಶ್ವರನು ಫಲವನ್ನು ನೀಡುತ್ತಾನೆಂದು ಹೇಳುತ್ತಿವೆ. ಆದ್ದರಿಂದ ವೈಷಮ್ಯಾದಿಗಳು ದೋಷಗಳೇ ಆಗುವುದಿಲ್ಲ. ಮತ್ತು ಈಶ್ವರನು ತನ್ನ ಅಧೀನವೇ ಆದ ಕರ್ಮಾದಿಗಳನ್ನು ಅಪೇಕ್ಷಿಸಿ ಫಲಪ್ರದನಾಗಿರುವುದರಿಂದ ಅಸ್ವಾತಂತ್ರ್ಯದೋಷವು ಅವನಿಗೆ ಪ್ರಾಪ್ತವಾಗುವುದಿಲ್ಲ ಎಂಬುದು ಈ ಅಧಿಕರಣದಿಂದ ಸಿದ್ಧವಾಯಿತು. ಈ ಎಲ್ಲಾ ಪ್ರಮೇಯಗಳನ್ನು 'ಅತಃ' ಎಂಬುದರಿಂದ ಸಂಗ್ರಹಿಸಲಾಗಿದೆ.

॥ ಇಲ್ಲಿಗೆ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದಲ್ಲಿ ವೈಷಮ್ಯನೈರ್ಘೃಣ್ಯಾಧಿಕರಣದ ಕನ್ನಡ ಅನುವಾದವು ಮುಗಿಯಿತು ॥

॥ ಶ್ರೀ ಮಧ್ವೇಶಾರ್ಪಣಮಸ್ತು ॥

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।।

श्री राघवेन्द्रतीर्थविरचिता

# तन्त्रदीपिका

## वैषम्यनैर्घृण्याधिकरणम् (२।१।१०)

ಸುಖ-ದುಃಖಗಳಿಗೆ ಕರ್ಮವೇ ಕಾರಣ

।। वैषम्यनैर्घृण्ये न सापेक्षत्वात्तथा हि दर्शयति ।।२-१-३५।।

अत्र कर्मादिसापेक्षत्वेऽनपेक्षत्वे च दोष इति बहुमुखदृढयुक्त्यविरोध उच्यते । युक्तमीशकर्तृत्वमिति प्रकृतम् । तत्तत्कर्मानपेक्ष्य निर्निमित्तं प्राणिनां विभागेन सुखदुःखादिदानेनेशस्य प्राप्ते ये वैषम्यनैर्घृण्ये ते न स्तः । सापेक्षत्वात् । निर्निमित्तत्वाभावादित्यर्थः । तथा हि दर्शयति - हि यतस्तथा प्रस्तुतार्थं दर्शयति पुनः शब्दः । "प्रस्ततार्थे तथाशब्द उदीर्यते" इत्युक्तेः । "पुण्येन पुण्यं लोकं नयति पापेन पापम्" इति श्रुतिः ।

ಈಶ್ವರನು ಕರ್ಮಾದಿಗಳನ್ನು ಅಪೇಕ್ಷಿಸಿ ಸುಖ-ದುಃಖಗಳನ್ನು ಜೀವರುಗಳಿಗೆ ಕೊಡುತ್ತಾನೋ, ಅಥವಾ ಕರ್ಮಾದಿಗಳನ್ನು ಅಪೇಕ್ಷೆ ಪಡದೇ ಸುಖ-ದುಃಖಾದಿಗಳನ್ನು ಕೊಡುತ್ತಾನೋ ? ಎರಡು ಪಕ್ಷಗಳಲ್ಲೂ ಕೂಡ ಅನೇಕ ವಿಧವಾದ ದೃಢಯುಕ್ತಿಗಳ ವಿರೋಧವಿದೆ. ಅದನ್ನು ಪರಿಹರಿಸಲು ಈ ಅಧಿಕರಣ ಹೊರಟಿದೆ.

ಹಿಂದಿನ ಅಧಿಕರಣದಲ್ಲಿ ಪ್ರಸಕ್ತವಾದ ಈಶ್ವರಕರ್ತೃತ್ವವನ್ನು ಅಂಗೀಕರಿಸೋಣ. ಆದರೆ ಈಶ್ವರನು ಪ್ರತಿಯೊಬ್ಬ ಜೀವರುಗಳಿಗೆ ಸುಖ-ದುಃಖಗಳನ್ನು ನೀಡುತ್ತಿದ್ದಾನೆ. ಇವುಗಳನ್ನು ಅವರವರ ಕರ್ಮಗಳನ್ನು ಅಪೇಕ್ಷೆ ಪಡದೇ ನಿಷ್ಕಾರಣವಾಗಿ ಪಕ್ಷಪಾತ ಮಾಡುವ ಮೂಲಕ ಸುಖ-ದುಃಖಾದಿಗಳನ್ನು ನೀಡುತ್ತಿದ್ದಾನೆ. ಆದ್ದರಿಂದ ಪಕ್ಷಪಾತ ಮಾಡುವಿಕೆ ಹಾಗೂ ಕಾರುಣ್ಯ ಇಲ್ಲದಿರುವಿಕೆ ಎಂಬೆರಡು ದೋಷಗಳು ಪ್ರಾಪ್ತವಾಗುತ್ತವೆ.

ಈ ಆಕ್ಷೇಪ ತಪ್ಪು. ಈಶ್ವರನಿಗೆ ವೈಷಮ್ಯನೈರ್ಘೃಣ್ಯದೋಷಗಳು ಬರಲು ಸಾಧ್ಯವಿಲ್ಲ. ಏಕೆಂದರೆ 'ಸಾಪೇಕ್ಷತ್ವಾತ್' = ಮುಂದಿನ ಸೂತ್ರಕ್ಕೆ ಅನುಸಾರಿಯಾಗಿ ಕರ್ಮ ಎಂಬ ಪದವು ಪ್ರಾಪ್ತವಾಗುತ್ತದೆ. ಸುಖ-ದುಃಖ ಮೊದಲಾದ ಫಲಗಳನ್ನು ನೀಡುವಾಗ ಈಶ್ವರನು ಕರ್ಮಗಳನ್ನು ಅನುಸರಿಸಿಯೇ ಫಲವನ್ನು ನೀಡುತ್ತಾನೆ. ಯಾವುದೇ ಕಾರಣವಿಲ್ಲದೇ ಫಲವನ್ನು ನೀಡಲಾರ ಎಂಬುದು ಸೂತ್ರ ಅರ್ಥ.

'ತಥಾ ಹಿ ದರ್ಶಯತಿ' ಹೀಗೇಕೆಂದರೆ ತಥಾ = ಪ್ರಸಕ್ತವಾದ ವಿಷಯವನ್ನು, ದರ್ಶಯತಿ = ಶ್ರುತಿಯು ಹೇಳುತ್ತಿದೆ. 'ಪ್ರಸ್ತುತಾರ್ಥೇ ತಥಾಶಬ್ದ ಉದೀರ್ಯತೇ' ಎಂಬ ಕೋಶಕ್ಕೆ ಅನುಗುಣವಾಗಿ ತಥಾ ಶಬ್ದಕ್ಕೆ ಪ್ರಸಕ್ತವಾದ ಅರ್ಥ ಎಂದು ತಿಳಿಯಬೇಕು. 'ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮ್' ಎಂಬ ಶ್ರುತಿಯು ಆಯಾ ಜೀವರುಗಳು ಮಾಡಿದ ಕರ್ಮವೇ ತಮ್ಮ ಸುಖ-ದುಃಖಗಳಿಗೆ ಕಾರಣವೆಂದು ಹೇಳುತ್ತಿದೆ.

ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡಿದ್ದರೂ ದೋಷ ತಪ್ಪಿದ್ದಲ್ಲ

कर्मापेक्ष्य फलदातृत्वमाक्षिप्याह -

।। न कर्माविभागादिति चेन्नानादित्वात् ।।२-१-३६।।

पूर्वसूत्रांशोऽनुवर्तते । ईशस्य कर्मसापेक्षत्वाद्वैषम्यनैर्घृण्ये नेति न युक्तम् । यदपेक्ष्य फलं दद्यात् तदपेक्षणीयं कर्म नास्ति । कुतः ? अविभागात् अस्वातन्त्र्यात् । तस्यापीशकृतत्वादिति यावत् । स्वकृतापेक्षया फलदाने वैषम्याद्यनिस्तारात्

ಕರ್ಮವನ್ನು ಉಪೇಕ್ಷಿಸಿ ಫಲವನ್ನು ಕೊಡುತ್ತಾನೆಂದು ಹೇಳಿದ್ದಾಯಿತು. ಇದರ ಮೇಲೆ ಆಕ್ಷೇಪ ಮಾಡಿ ಸಮಾಧಾನ ಹೇಳುವುದಕ್ಕಾಗಿ 'ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್' ಎಂಬ ಸೂತ್ರವು ಹೊರಟಿದೆ. ಹಿಂದಿನ ಸೂತ್ರದ ಅಂಶವು ಇಲ್ಲಿ ಅನುವೃತ್ತವಾಗುತ್ತದೆ. ಈಶ್ವರನು ಕರ್ಮವನ್ನು ಅಪೇಕ್ಷಿಸಿ, ಫಲವನ್ನು ಕೊಡುತ್ತಾನಾದ್ದರಿಂದ ವೈಷಮ್ಯನೈರ್ಘೃಣ್ಯ ಎಂಬೆರಡು ದೋಷಗಳು ಬರುವುದಿಲ್ಲ, ಇದು ಯುಕ್ತವಲ್ಲ. ನ ಕರ್ಮ = ಯಾವುದನ್ನು ಅಪೇಕ್ಷಿಸಿ ಫಲವನ್ನು ಕೊಡುತ್ತಾನೋ, ಅಂಥ ಅಪೇಕ್ಷಿಸಬೇಕಾದ ಕರ್ಮವೇ ಇರುವುದಿಲ್ಲ. ಏಕೆಂದರೆ ಅವಿಭಾಗಾತ್ = ಅಸ್ವತಂತ್ರವಾದ್ದರಿಂದ ಆ ಕರ್ಮಗಳೂ ಕೂಡ ಈಶ್ವರನಿಂದಲೇ ನಿರ್ಮಿತವಾಗಿವೆ ಎಂಬುದು ಅಭಿಪ್ರಾಯ. ತಾನೇ ನಿರ್ಮಿಸಿದ ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡುವುದರಿಂದ ಪುನಃ ವೈಷಮ್ಯನೈರ್ಘೃಣ್ಯದೋಷಗಳು ಬಂದೇ ಬರುತ್ತವೆ.

'ಇತಿ ಚೇನ್ನ ಅನಾದಿತ್ವಾತ್' ಎಂಬ ಸೂತ್ರಭಾಗಕ್ಕೆ ವ್ಯಾಖ್ಯಾನ

इति चेत् न अनादित्वात्कर्मणाम् । प्रवाहतोऽनादित्वादित्यर्थः । पूर्वपूर्वकर्मापेक्ष्य कृतमुत्तरोत्तरं कर्मापेक्ष्य फलं ददातीत्युक्तौ दोषाभावादित्यर्थः ।

ಇತಿ ಚೇತ್ ನ = ಇದು ತಪ್ಪು. ಏಕೆಂದರೆ ಅನಾದಿತ್ವಾತ್ = ಕರ್ಮಗಳು ಅನಾದಿಯಾಗಿವೆ. ಪ್ರವಾಹತಃ ಅನಾದಿಯಾಗಿರುವುದರಿಂದ ಎಂದರ್ಥ. ಯಾವ ಕರ್ಮವನ್ನು ಅಪೇಕ್ಷಿಸಿ ಈಶ್ವರನು ಫಲವನ್ನು ಕೊಡುತ್ತಾನೋ, ಆ ಕರ್ಮವು ತತ್‌ಪೂರ್ವಕರ್ಮಾಧೀನವಾಗಿದೆ. ಇಂಥ ಕರ್ಮವನ್ನು ಅನುಸರಿಸಿಯೇ ಈಶ್ವರನು ಫಲವನ್ನು ನೀಡುತ್ತಾನಾದ್ದರಿಂದ ದೋಷಕ್ಕೆ ಅವಕಾಶವಿಲ್ಲ.

'ಅವಿಭಾಗ' ಪದದ ವ್ಯಾಖ್ಯಾನ

तदनन्यत्वादिनयसिद्धास्वातन्त्र्यजगदविभागादस्वातन्त्र्यमिति सूचनायाविभागादित्युक्तिः । प्रतिज्ञाहानिरव्यतिरेकाच्छब्देभ्य इति वदित्येके।।

ತದನನ್ಯತ್ವಾಧಿಕರಣದಲ್ಲಿ ಹೀಗೆ ಹೇಳಿದ್ದಾರೆ - ಜಗತ್ತು ಅಸ್ವತಂತ್ರವಾಗಿದೆ. ಇದರಲ್ಲಿ ಕರ್ಮಗಳೂ ಕೂಡ ಸೇರಿವೆ. ಆದ್ದರಿಂದ ಕರ್ಮಗಳೂ ಕೂಡ ಅಸ್ವತಂತ್ರವಾಗುತ್ತವೆ. ಇದನ್ನು ಸೂಚಿಸಲು ಈ ಸೂತ್ರದಲ್ಲಿ 'ಅವಿಭಾಗಾತ್' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಆದ್ದರಿಂದ ಈಶ್ವರನು ಅಪೇಕ್ಷಿಸುವ ಕರ್ಮಗಳು ಸ್ವತಂತ್ರವೆಂದು ಭಾವಿಸಬಾರದು, ಈಶ್ವರಾಧೀನವೇ ಆಗಿದೆ ಎಂದು ಭಾವಿಸಬೇಕು.

'ಪ್ರತಿಜ್ಞಾಹಾನಿರವ್ಯತಿರೇಕಾತ್ ಶಬ್ದೇಭ್ಯ' ಎಂಬ ಸೂತ್ರದಲ್ಲಿ ಅವ್ಯತಿರೇಕ ಶಬ್ದಕ್ಕೆ ವ್ಯಾಖ್ಯಾನ ಮಾಡಿದಂತೆ ಈ ಸೂತ್ರದಲ್ಲಿರುವ ಅವಿಭಾಗ ಶಬ್ದಕ್ಕೂ ಕೂಡ ವ್ಯಾಖ್ಯಾನ ಮಾಡಬೇಕೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

ಸ್ವಾಧೀನವಾದ ಕರ್ಮಗಳ ಅಪೇಕ್ಷೆಯಿಂದ ದೋಷಪರಿಹಾರವಾಗಲ್ಲಿಲ್ಲ

**तर्हि कर्मादिसापेक्षस्य स्वातन्त्र्यं न स्यादित्यत आह -**

**।। उपपद्यते चाप्युलभ्यते च ।।२-१-३७।।**

**चोऽवधारणे । स्वातन्त्र्यमिति शेषः । कर्मापेक्षणेऽपि स्वातन्त्र्यमुपपद्यत एव । तस्य स्वाधीनत्वात् । एवं तर्हि तदपेक्षा नामानपेक्षैव । तथा च पुनर्वैषम्याद्यापत्तिरित्यत उक्तम् । उपलभ्यते चेति ।**

ಕರ್ಮಾದಿಗಳನ್ನು ಅಪೇಕ್ಷಿಸುವ ಈಶ್ವರನಲ್ಲಿ ಸ್ವಾತಂತ್ರ್ಯವು ಹೇಗೆ ಬರುತ್ತದೆ ? ಎಂಬ ಪ್ರಶ್ನೆಯಗೆ 'ಉಪಪದ್ಯತೇ ಚಾಪ್ಯುಲಭ್ಯತೇ ಚ' ಎಂಬ ಮುಂದಿನ ಸೂತ್ರವು ಹೊರಟಿದೆ. ಸೂತ್ರದಲ್ಲಿ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. 'ಸ್ವಾತಂತ್ರ್ಯಮ್' ಎಂಬುದನ್ನು ಶೇಷಪೂರಣ ಮಾಡಬೇಕು. ಕರ್ಮವನ್ನು ಈಶ್ವರನು ಅಪೇಕ್ಷಿಸಿಯೇ ಫಲವನ್ನು ನೀಡುತ್ತಾನೆ. ಅಂದಮಾತ್ರಕ್ಕೆ ಅವನು ಅಸ್ವತಂತ್ರನಾಗುವುದಿಲ್ಲ. ಸ್ವತಂತ್ರನೇ ಆಗುತ್ತಾನೆ. ಏಕೆಂದರೆ ಆ ಕರ್ಮವು ಈಶ್ವರಾಧೀನವಾಗಿದೆ. ಹಾಗಾದರೆ ತನ್ನ ಅಧೀನವಾದ ಕರ್ಮವನ್ನು ಅಪೇಕ್ಷಿಸುತ್ತಾನೆಂದು ಹೇಳಿದಾಗ ಕರ್ಮವನ್ನು ಅಪೇಕ್ಷಿಸಲಾರ ಎಂದೇ ಹೇಳಿದಂತಾಯಿತಲ್ಲವೇ?

ಹಾಗಾದಲ್ಲಿ ಪುನಃ ವೈಷಮ್ಯನೈರ್ಘೃಣ್ಯಾದಿದೋಷಗಳು ಬಂದೇ ಬರುತ್ತವೆ. ಈ ಆಕ್ಷೇಪಕ್ಕೆ ಉತ್ತರಿಸಲು 'ಉಪಲಭ್ಯತೇ ಚ' ಎಂದು ಹೇಳಿದ್ದಾರೆ.

ಕರ್ಮವನ್ನು ಅಪೇಕ್ಷಿಸಿದಾಗ ವೈಷಮ್ಯನೈರ್ಘೃಣ್ಯಗಳು ಬರುವುದಿಲ್ಲ

**वैषम्यनैर्घृण्य इत्यस्ति । उपलभ्यते हीदृशं कर्मसापेक्षत्वकृतं वैषम्यं नैर्घृण्यं च । ''स कारयेत्पुण्यमथापि पापं न तावता दोषवान्'' इत्यादाविति प्रत्येकमन्वयः । अतो नेदमनिष्टम् । वेदाप्रामाण्याहेतुत्वादिति भावः ।**

ಸೂತ್ರದಲ್ಲಿ 'ವೈಷಮ್ಯನೈರ್ಘೃಣ್ಯ' ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಕರ್ಮಗಳನ್ನು ಅಪೇಕ್ಷಿಸಿದಾಗ ಯಾವ ವೈಷಮ್ಯನೈರ್ಘೃಣ್ಯ ದೋಷಗಳು ಬರುತ್ತವೋ, ಇವುಗಳು ದೋಷವೇ ಆಗುವುದಿಲ್ಲ. 'ಸ ಕಾರಯೇತ್ ಪುಣ್ಯಮಥಾಪಿ ಪಾಪಂ ನ ತಾವತಾ ದೋಷವಾನೀಶಿತಾಽಪಿ' ('ಈಶೋ ಯತೋ ಗುಣದೋಷಾದಿಸತ್ತ್ವೇ ಸ್ವಯಂ ಪರೋಽನಾದಿರಾದಿಃ ಪ್ರಜಾನಾಮ್' - ಪರಮಾತ್ಮನು ಜೀವರುಗಳ ಪೂರ್ವಕರ್ಮವನ್ನು ಅನುಸರಿಸಿ, ಫಲವನ್ನು ನೀಡುತ್ತಾನೆ. ಹೀಗೆ ಕರ್ಮಗಳಿಗೆ ನಿಯಾಮಕನಾದರೂ ಕೂಡ ಸ್ವತಂತ್ರನೂ, ಸರ್ವಕರ್ತನೂ, ಜನನರಹಿತನೂ ಗುಣದೋಷಗಳಿಗೆ ಕಾರಣನೂ ಆಗಿರುತ್ತಾನೆ. ಇವನಿಗೆ ವೈಷಮ್ಯನೈರ್ಘೃಣ್ಯದೋಷಗಳು ಬರುವುದಿಲ್ಲ.)

ವೈಷಮ್ಯದೋಷವು ಉಪಲಬ್ಧವಾಗಿದೆ, ನೈರ್ಘೃಣ್ಯದೋಷವು ಉಪಲಬ್ಧವಾಗಿದೆ ಎಂಬುದಾಗಿ ಪ್ರತ್ಯೇಕವಾಗಿ ಅನ್ವಯಮಾಡಬೇಕು. ಈಶ್ವರನು ಕರ್ಮಗಳನ್ನು ಅನುಸರಿಸಿ ಫಲವನ್ನು ನೀಡುವುದು ವೇದದ ಅಪ್ರಾಮಾಣ್ಯಕ್ಕೆ ಕಾರಣವಲ್ಲ. ಆದುದರಿಂದ ಅದು ಅನಿಷ್ಟಾಪಾದನೆ ಆಗುವುದಿಲ್ಲ ಎಂದು ತಿಳಿಯಬೇಕು.

ತತ್ತ್ವಪ್ರದೀಪದಲ್ಲಿ ಅನೇಕ ಬಗೆಯ ಯೋಜನೆ

तत्त्वप्रदीपे तु उपपद्यते स्वातन्त्र्यम् । उपलभ्यते च

कर्मादेस्तदधीनत्वमित्येकमर्थमुक्त्वा उपपद्यते च तादृशं वैषम्यादि उपलभ्यमानत्वात् प्रमाणैरित्याद्यावृत्त्याऽनेकधा योजितम् ॥१०॥

ತತ್ತ್ವಪ್ರದೀಪದಲ್ಲಿ ಈ ಸೂತ್ರಕ್ಕೆ ಎರಡು ರೀತಿಯಲ್ಲಿ ವ್ಯಾಖ್ಯಾನ ಮಾಡಲಾಗಿದೆ. 'ಉಪಪದ್ಯತೇ ಸ್ವಾತಂತ್ರ್ಯಮ್' = ಈಶ್ವರನಲ್ಲಿ ಸ್ವಾತಂತ್ರ್ಯವು ಉಪಪನ್ನವಾಗುತ್ತದೆ. 'ಉಪಲಭ್ಯತೇ ಚ' = ಕರ್ಮಾದಿಗಳಿಗೆ ಈಶಾಧೀನ್ಯವು ಪ್ರಮಾಣಗಳಿಂದ ಉಪಲಬ್ಧವಾಗಿದೆ. ಹೀಗೆ ಒಂದು ಅರ್ಥವನ್ನು ಹೇಳಿ, ಮತ್ತೊಂದು ಅರ್ಥವನ್ನು ಹೇಳುತ್ತಾರೆ. 'ಉಪಪದ್ಯತೇ ಚ' = ಆ ಕರ್ಮಗಳನ್ನು ಅಪೇಕ್ಷಿಸಿದಾಗ ಯಾವ ವೈಷಮ್ಯಾದಿಗಳು ಪ್ರಾಪ್ತವಾಗುತ್ತವೋ, ಅವು ದೋಷವೇ ಆಗುವುದಿಲ್ಲ. ಈಶ್ವರನಲ್ಲಿ ಯುಕ್ತವೇ ಆಗುತ್ತವೆ. ಏಕೆಂದರೆ 'ಉಪಲಭ್ಯತೇ ಚ' = ಪ್ರಮಾಣಗಳಿಂದ ಹಾಗೇ ಉಪಲಬ್ಧವಾಗಿದೆ. ಹೀಗೆ ಅನೇಕ ಪದಗಳನ್ನು ಆವೃತ್ತ ಮಾಡಿಕೊಂಡು, ಅನೇಕ ವಿಧವಾಗಿ ಸೂತ್ರಕ್ಕೆ ವ್ಯಾಖ್ಯಾನ ಮಾಡಿದ್ದಾರೆ.

॥ ಇಲ್ಲಿಗೆ ತಂತ್ರದೀಪಿಕಾ ಕನ್ನಡಾನುವಾದದಲ್ಲಿ ವೈಷಮ್ಯನೈರ್ಘೃಣ್ಯಾಧಿಕರಣವು ಮುಗಿಯಿತು ॥

## ಅದ್ವೈತ-ವಿಶಿಷ್ಟಾದ್ವೈತಮತದಲ್ಲಿ ವೈಷಮ್ಯನೈರ್ಘೃಣ್ಯಾಧಿಕರಣ ಮತ್ತು ವಿಮರ್ಶೆ

ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ವೈಷಮ್ಯನೈರ್ಘೃಣ್ಯಾಧಿಕರಣವನ್ನು ಹೀಗೆ ರಚನೆ ಮಾಡಿದ್ದಾರೆ - ಯಾವುದೇ ಸಸ್ಯವು ಹುಟ್ಟುವುದಕ್ಕೆ ಮಳೆಯು ಸಾಧಾರಣಕಾರಣವಾಗಿದೆ. ಅದರಂತೆ ಸಕಲ ಕರ್ಮಗಳಿಗೂ ಈಶ್ವರನೇ ಸಾಧಾರಣಕಾರಣನಾಗಿದ್ದಾನೆ. ಸಸ್ಯಕ್ಕೆ ಬೀಜವು ಅಸಾಧಾರಣಕಾರಣವಾಗಿದೆ. ಅದರಂತೆ ಆಯಾ ಜೀವರ ಕರ್ಮಗಳು ಅಸಾಧಾರಣ-ಕಾರಣವಾಗಿವೆ. ಬೀಜಗಳಲ್ಲಿರುವ ಶಕ್ತಿಯ ವೈಚಿತ್ರ್ಯದಿಂದ ಭತ್ತ, ಗೋಧಿ ಮೊದಲಾದ

ಸಸ್ಯಗಳಲ್ಲಿ ವೈಚಿತ್ರ್ಯವು ಕಾಣಸುತ್ತಿವೆ. ಆದ್ದರಿಂದ ಈಶ್ವರನಿಗೆ ವೈಷಮ್ಯನೈರ್ಘೃಣ್ಯದೋಷವು ಬರುವುದಿಲ್ಲ. ಇದು ಸೂತ್ರದ ಅರ್ಥ ಎಂದು.

ಈಶ್ವರನು ಸಾಧಾರಣಕಾರಣನು ಮಾತ್ರ. ಕರ್ಮಗಳೇ ಅಸಾಧಾರಣ ಕಾರಣಗಳು. ಸಾಧಾರಣಕಾರಣನಾದ ಈಶ್ವರನು ಏಕೆ ಕೆಲವರಿಗೆ ಕೆಟ್ಟದ್ದನ್ನೇ ಮಾಡುತ್ತಾನೆ. ಕೆಲವರಿಗೆ ಒಳ್ಳೇಯದನ್ನೇ ಏಕೆ ಮಾಡುತ್ತಾನೆ ಎಂದು ಪ್ರಶ್ನಿಸುವಂತಿಲ್ಲ. ಆಯಾ ಜೀವರ ಕರ್ಮವೇ ಆದಕ್ಕೆ ಕಾರಣವಾಗಿರುತ್ತದೆ.

ಇವರ ಈ ವ್ಯಾಖ್ಯಾನ ಅಯುಕ್ತವಾಗಿದೆ. ಹೀಗೆ ಹೇಳಿದಾಗಲೂ ಕೂಡ ವೈಷಮ್ಯನೈರ್ಘೃಣ್ಯದೋಷವು ತಪ್ಪಿದ್ದಲ್ಲ. ಏಕೆಂದರೆ ಕರ್ಮವನ್ನು ಇವರು ಅಸಾಧಾರಣ ಕಾರಣವೆಂದು ಹೇಳುತ್ತಾರೆ. ಆದರೆ ಈ ಕರ್ಮವು ಪರಮಾತ್ಮನಿಂದಲೇ ಮಾಡಿಸಲ್ಪಡುತ್ತದೆಂದು 'ಏಷ ಹ್ಯೇವ ಸಾಧುಕರ್ಮ ಕಾರಯತಿ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. 'ಪುಣ್ಯಪಾಪಾದಿಕಂ ವಿಷ್ಣುಃ ಕಾರಯೇತ್' ಪುಣ್ಯಪಾಪಾದಿಗಳನ್ನು ವಿಷ್ಣುವೇ ಮಾಡಿಸುತ್ತಾನೆ ಎಂಬ ಶ್ರುತಿ ಇದನ್ನೇ ಸ್ಪಷ್ಟಪಡಿಸುತ್ತಿದೆ. ಆದ್ದರಿಂದ ಈಶ್ವರನು ಸಾಧಾರಣಕಾರಣನಾಗಿರುವನು. ಕರ್ಮಾದಿಗಳು ಅಸಾಧಾರಣಕಾರಣವಾಗಿದೆ ಎಂಬ ವಿಷಯವು ಅಯುಕ್ತವಾಗಿದೆ.

'ಏಷ ಹ್ಯೇವ' ಇತ್ಯಾದಿ ಶ್ರುತಿಗಳಿಗೆ ಗೌಣಾರ್ಥವನ್ನು ಮಾಡಬಾರದು. ಬಾಧವಿದ್ದರೆ ಮಾತ್ರ ಹಾಗೇ ಗೌಣಾರ್ಥವನ್ನು ಮಾಡಬೇಕು. ಯಾವುದೇ ಬಾಧವಿಲ್ಲದಿದ್ದಾಗ ಔಪಚಾರಿಕವಾದ ಅರ್ಥವನ್ನು ಮಾಡುವುದು ತಪ್ಪಾಗುತ್ತದೆ. ಮತ್ತು ಭಾಮತಿಯಲ್ಲೂ ಕೂಡ 'ಪರಾತ್ತು ತತ್ ಶ್ರುತೇಃ' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಇದನ್ನೇ ಹೇಳಲಾಗಿದೆ - 'ಏಷ ಹ್ಯೇವ ಸಾಧುಕರ್ಮ ಕಾರಯತಿ ಇತ್ಯೇವಮಾದಯಃ ತಾವತ್ ಶ್ರುತಯಃ ಸರ್ವವ್ಯಾಪಾರೇಷು ಜಂತೂನಾಮೀಶ್ವರಪರತಂತ್ರತಾಮಾಹುಃ । ತದಸತಿ ಬಾಧಕೇನ ಪ್ರಶಂಸಾಮಾತ್ರಪರತಯಾ ವ್ಯಾಖ್ಯಾತುಮುಚಿತಮ್' 'ಏಷ ಹ್ಯೇವ ಸಾಧುಕರ್ಮ ಕಾರಯತಿ' ಇವೇ ಮೊದಲಾದ ಶ್ರುತಿಗಳು ಸಕಲ ವ್ಯಾಪಾರಗಳಲ್ಲಿ ಪ್ರತಿಯೊಬ್ಬರೂ ಕೂಡ ಈಶ್ವರನ ಅಧೀನನಾಗಿರುತ್ತಾರೆ ಎಂದು ಹೇಳುತ್ತಿವೆ. ಇಂಥ ಶ್ರುತಿಗಳಿಗೆ ಬಾಧಕವಿಲ್ಲದಿದ್ದಾಗ ಕೇವಲ ಪ್ರಶಂಸಾಮಾತ್ರಪರವೆಂದು ವ್ಯಾಖ್ಯಾನ ಮಾಡುವುದು ತಪ್ಪಾಗುತ್ತದೆ ಎಂದು.

ಹೀಗೆ ಹೇಳಿದ್ದರಿಂದ ರಾಮಾನುಜರು ಹೇಳುವ ಮತ್ತೊಂದು ಪ್ರಮೇಯವನ್ನು ನಿರಾಕರಣೆ ಮಾಡಿದಂತಾಯಿತು. ಅವರು ಹೀಗೆ ಹೇಳುತ್ತಾರೆ - ಜೀವನು ಈಶ್ವರನಿಂದ ಸಾಧಾರಣವಾಗಿ ಸ್ವಾತಂತ್ರ್ಯಶಕ್ತಿಯನ್ನು ಹೊಂದಿರುತ್ತಾನೆ. ಇದರಿಂದ ಸ್ವತಃ ತಾನೇ ಶುಭಕರ್ಮ ಹಾಗೂ ಅಶುಭಕರ್ಮಗಳಲ್ಲಿ ಪ್ರವೃತ್ತಿ ಮಾಡುತ್ತಾನೆ. ಹೀಗೆ ಅಶುಭಕರ್ಮದಲ್ಲಿ ಪ್ರವೃತ್ತಿ ಮಾಡಿರುವ ಜೀವನನ್ನು ಈಶ್ವರನು ಉಪೇಕ್ಷೆ ಮಾಡುತ್ತಾನೆ. ಶುಭಕರ್ಮದಲ್ಲಿ ಪ್ರವೃತ್ತಿ ಮಾಡಿರುವ ಜೀವನಿಗೆ ಅನುಮತಿಯನ್ನು ನೀಡುತ್ತಾನೆ ಆದ್ದರಿಂದ ಅವನು ಏಕೆ ಕೆಟ್ಟಕೆಲಸವನ್ನು ಮಾಡಿ ದುಃಖವನ್ನು ನೀಡುತ್ತಾನೆ ಎಂಬ ವೈಷಮ್ಯದೋಷಕ್ಕೆ ಅವಕಾಶವಿಲ್ಲ. ಇದನ್ನೇ ಹೀಗೆ ಹೇಳಲಾಗಿದೆ -

ಆದಾವೀಶ್ವರದತ್ತಯೈವ ಪುರುಷಃ ಸ್ವಾತಂತ್ರ್ಯಶಕ್ತ್ಯಾ ಸ್ವಯಂ
ತತ್ ಜ್ಞಾನಚಿಕೀರ್ಷಣಪ್ರಯತನಾನ್ಯುತ್ಪಾದಯನ್ ವರ್ತತೇ ।
ತತ್ರೋಪೇಕ್ಷ್ಯ ತತೋಽನುಮನ್ಯ ವಿದಧತ್ತನ್ನಿಗ್ರಹಾನುಗ್ರಹೌ
ತತ್ ತತ್‌ಕರ್ಮಫಲಂ ಪ್ರಯಚ್ಛತಿ ತತಃ ಸರ್ವಸ್ಯ ಪುಂಸೋ ಹರಿಃ ॥

ಮೊದಲು ಈಶ್ವರದತ್ತವಾದ ಸ್ವಾತಂತ್ರ್ಯಶಕ್ತಿಯಿಂದಲೇ ಪುರುಷನು ಸ್ವತಃ ಪ್ರಯತ್ನವನ್ನು ಮಾಡುತ್ತಾನೆ. ಜ್ಞಾನ ಮಾಡಬೇಕೆಂಬ ಇಚ್ಛೆ, ಪ್ರಯತ್ನ ಇವುಗಳನ್ನು ಹೊಂದುತ್ತಾನೆ. ಜೀವನ ಈ ಎಲ್ಲಾ ಕಾರ್ಯಗಳಲ್ಲಿ ಅಶುಭಕರ್ಮಗಳನ್ನು ಪರಮಾತ್ಮನು ಉಪೇಕ್ಷೆ ಮಾಡಿ, ಶುಭಕಾರ್ಯಗಳಲ್ಲಿ ಅನುಮತಿಯನ್ನು ನೀಡಿ, ಅನುಗ್ರಹವನ್ನು ಮಾಡುತ್ತಾನೆ. ಮತ್ತು ಕೆಟ್ಟ ಕೆಲಸಕ್ಕೆ ದುಃಖವನ್ನು ಒಳ್ಳೇ ಕೆಲಸಕ್ಕೆ ಸುಖವನ್ನು ಪ್ರತಿಯೊಬ್ಬರಿಗೂ ನೀಡುತ್ತಾನೆ ಎಂದು.

ರಾಮಾನುಜರ ಈ ಅಭಿಪ್ರಾಯವು ಅಯುಕ್ತವಾಗಿದೆ - ಏಕೆಂದರೆ ಕೆಲವರು ಮಾಡುವ ಶುಭಪ್ರವೃತ್ತಿಗೂ ಈಶ್ವರನು ನೀಡಿದ ಸ್ವಾತಂತ್ರ್ಯವೇ ಕಾರಣವಾಗಿದೆ. ಕೆಲವರು ಮಾಡಿದ ಅಶುಭಪ್ರವೃತ್ತಿಗೂ ಈಶ್ವರನಲ್ಲಿರುವ ಸ್ವಾತಂತ್ರ್ಯವೇ ಕಾರಣವಾಗಿದೆ. ಆದ್ದರಿಂದ ಯಾವ ಶುಭಾಶುಭಕರ್ಮಗಳಿಗೆ ಕಾರಣವಾದ ಸ್ವಾತಂತ್ರ್ಯವಿದೆಯೋ, ಅದನ್ನು ನೀಡಿದವನು ಪರಮಾತ್ಮನೇ ಆಗಿರುವುದರಿಂದ ಅವನಿಗೆ ವೈಷಮ್ಯಾದಿ ದೋಷವು ತಪ್ಪಿದ್ದಲ್ಲ. ಮತ್ತು 'ಯ ಆತ್ಮಾನಮಂತರೋ ಯಮಯತಿ' 'ಯಾವ ಪರಮಾತ್ಮನು ಅಂತರ್ಯಾಮಿಯಾಗಿದ್ದು ಪ್ರೇರಣೆ ಮಾಡುತ್ತಾನೋ', 'ಏಷ ಹ್ಯೇಷ ಸಾಧುಕರ್ಮ ಕಾರಯತಿ' 'ಈ ಪರಮಾತ್ಮನೇ

ಶುಭಕರ್ಮಗಳನ್ನು ಮಾಡಿಸುತ್ತಾನೆ'. 'ನ ಋತೇ ತ್ವತ್ಕ್ರಿಯತೇ ಕಿಂಚನಾರೇ' 'ನಿನ್ನನ್ನು ಬಿಟ್ಟು ಏನನ್ನೂ ಮಾಡಲಾರೆ'. ಇವೇ ಮೊದಲಾದ ಶ್ರುತಿಗಳು ಸಕಲವನ್ನು ಪರಮಾತ್ಮನೇ ಮಾಡಿಸುತ್ತಾನೆ ಎನ್ನುತ್ತಿವೆ.

'ಯಥಾ ದಾರುಮಯೀಂ ಯೋಷಾಂ ನರಃ ಸ್ಥಿರಸಮಾಹಿತಃ ।' ಕಟ್ಟಿಗೆ ಬೊಂಬೆಯೊಳಗೆ ಮನುಷ್ಯನು ಕುಳಿತು ಹೇಗೆ ಚಲನ-ವಲನಗಳನ್ನು ತೋರಿಸುತ್ತಾನೋ, ಅದರಂತೆ ನೀನೇ ನನ್ನೊಳಗೆ ಇದ್ದು ಎಲ್ಲವನ್ನೂ ಮಾಡುವಿ. 'ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥' ದೇಹವೆಂಬ ಯಂತ್ರದಲ್ಲಿರುವ ಸಕಲಭೂತಗಳನ್ನು ತನ್ನ ಮಾಯಾಶಕ್ತಿಯಿಂದ ಪರಮಾತ್ಮನು ನಿಯಂತ್ರಣದಲ್ಲಿ ಇಟ್ಟುಕೊಂಡು ಎಲ್ಲರ ಹೃದಯದಲ್ಲಿ ನೆಲಸಿದ್ದಾನೆ ಎಂಬುದಾಗಿ ಭಗವದ್ಗೀತೆ- ಯಲ್ಲಿಯೂ ಕೂಡ ಹೇಳಲಾಗಿದೆ. ಈ ಸ್ಮೃತಿಗಳ ವಿರೋಧವೂ ಕೂಡ ಬರುತ್ತವೆ.

ಪರಮಾತ್ಮನ ಪ್ರೇರಣೆಯಿಲ್ಲದೇ ಜೀವನು ಪ್ರವೃತ್ತಿಯನ್ನು ಮಾಡುತ್ತಾನೆನ್ನುವುದಾದರೆ ಜೀವನು ಪರಮಾತ್ಮನ ಶರೀರನಾಗುತ್ತಾನೆ ಎಂದು ಹೇಳಲು ಹೇಗೆ ಸಾಧ್ಯವಾಗುತ್ತದೆ ? ಮತ್ತು ತನಗೆ ಅಹಿತವಾದ ಕೆಲಸಗಳಲ್ಲಿ ಜೀವನು ಸ್ವತಃ ತಾನೇ ಹೇಗೆ ಪ್ರವೃತ್ತಿ ಮಾಡಲು ಸಾಧ್ಯ?

ಹಿತವೆಂಬ ಭ್ರಾಂತಿಯಿಂದ ಅಹಿತವಾದ್ದರಲ್ಲಿ ಪ್ರವೃತ್ತಿ ಮಾಡುತ್ತಾನೆಂದು ಹೇಳಿದರೆ, ಜೀವನಿಗಿರುವ ಈ ಭ್ರಾಂತಿಯೂ ಕೂಡ ಈಶ್ವರಕರ್ತೃಕ ಎಂದಂತಾಯಿತು. ಆಗ ವೈಷಮ್ಯಾದಿದೋಷವು ಅಪರಿಹಾರ್ಯವಾಯಿತು.

ಮತ್ತು ಸಮರ್ಥನಾಗಿದ್ದರೂ ಕೂಡ ಈಶ್ವರನು ಸತ್ಕಾರ್ಯವನ್ನು ಮಾಡಿಸಲಾರ ಎನ್ನುವುದಾದರೆ, ವೈರ್ಘೃಣ್ಯದೋಷವು ತಪ್ಪಿದ್ದಲ್ಲ. ಆ ಕೆಲಸಗಳನ್ನು ಮಾಡಿಸಲು ಅವನು ಸಮರ್ಥನಲ್ಲವೆಂದು ಹೇಳಿದರೆ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' 'ಸರ್ವೋಪೇತಾ ಚ ತದ್ದರ್ಶನಾತ್' ಇವೇ ಮೊದಲಾದ ಸೂತ್ರಗಳಿಂದ ವಿರೋಧ ಬರುತ್ತದೆ 'ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ' ಇತ್ಯಾದಿ ಶ್ರುತಿಗಳಿಂದಲೂ ವಿರೋಧವು ಪ್ರಾಪ್ತವಾಗುತ್ತದೆ.

ಹೀಗೆ ಹೇಳಿದ್ದರಿಂದ ಸಾತ್ವಿಕರ್ಮಕವನ್ನು ನಿರಾಕರಣೆ ಮಾಡಿದಂತಾಯಿತು. ಈಶ್ವರನಿಗೆ ಅಸ್ತು ಎಂಬುದು ಸಾಮಾನ್ಯಕಾರವಾದ ಇಚ್ಛೆಯಾಗಿದೆ. ಇವನು ಈ ಕೆಲಸವನ್ನು ಮಾಡಲಿ ಎಂಬ ವಿಶೇಷಾಕಾರದ ಇಚ್ಛೆಯು ಇರುವುದಿಲ್ಲ. ಆದ್ದರಿಂದ ವೈಷಮ್ಯಾದಿದೋಷಗಳು ಈಶ್ವರನಿಗೆ ಬರುವುದಿಲ್ಲ ಎಂದು ತಾರ್ಕಿಕರು ಕಲ್ಪನೆ ಮಾಡುತ್ತಾರೆ. ಇದನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಬ್ರಹ್ಮಸೂತ್ರಗಳಿಗೆ ತಾರ್ಕಿಕರು ವ್ಯಾಖ್ಯಾನವನ್ನು ಮಾಡಿರುವುದಿಲ್ಲ. ಆದರೆ ಬೇರೆ ಗ್ರಂಥಗಳಲ್ಲಿ ಅವರು ಹೇಳಿರುವ ವಿಷಯವನ್ನು ಪ್ರಕೃತ ಖಂಡನೆ ಮಾಡುತ್ತಿದ್ದಾರೆ.

ಯಾರಿಗೆ ಬೇಕಾದರೂ, ಏನೂ ಬೇಕಾದರೂ ಆಗಲಿ ಎಂಬ ಸಾಮಾನ್ಯಾಕಾರದ ಯುಕ್ತಿಯಿಂದಲೇ ಎಲ್ಲವೂ ನಡೆಯುತ್ತದೆ ಎಂದು ಹೇಳುವುದಾದರೆ ಈಶ್ವರನಿಗೂ ಕೂಡ ದುಃಖವು ಬರಬೇಕಾಗುತ್ತದೆ. ಒಳ್ಳೆಯ ಕೆಲಸವನ್ನು ಮಾಡಿದವನಿಗೂ ಕೂಡ ನರಕಾದಿಗಳು ಬರಬೇಕಾಗುತ್ತದೆ. ('ಯಸ್ಯ ಕಸ್ಯಾಪಿ' ಎಂದು ಹೇಳಿದರೆ ಈಶ್ವರನನ್ನು ವ್ಯಾವೃತ್ತಿ ಮಾಡದ ಕಾರಣ, ಈಶ್ವರನಿಗೂ ಕೂಡ ದುಃಖವು ಬರಬೇಕಾಗುತ್ತದೆ. ಯತ್‌ಕಿಂಚಿತ್' ಏನೂ ಬೇಕಾದರೂ ಆಗಲಿ ಎಂದು ಹೇಳಿದಾಗ ಶುಭಕಾರ್ಯವನ್ನು ಮಾಡಿದವನಿಗೆ ದುಃಖವು ಬರಬೇಕಾಗುತ್ತದೆ ಎಂಬ ಆಪತ್ತಿ ಬರುತ್ತದೆ.)

'ನನಗೆ ಇಷ್ಟವಾದದ್ದು ಆಗಲಿ' ಎಂಬುದಾಗಿ ಈಶ್ವರನಿಗೆ ಇಚ್ಛೆಯು ಉಂಟಾಗುತ್ತದೆ. ಆದ್ದರಿಂದ ಹಿಂದಿನ ದೋಷಕ್ಕೆ ಅವಕಾಶವಿಲ್ಲ ಎಂದು ತಾರ್ಕಿಕರು ಸಮಾಧಾನವನ್ನು ಹೇಳಬಹುದು. ಆದರೆ ಈಶ್ವರನ ಇಚ್ಛಾಸ್ವರೂಪವನ್ನು ಇಲ್ಲಿಯತನಕ ತಾರ್ಕಿಕರು ನಿರೂಪಣೆ ಮಾಡಿರುವುದಿಲ್ಲ. ಒಂದು ವೇಳೆ 'ತಸ್ಯ ತಸ್ಯ ತತ್ತತ್ಕರ್ಮಾನುಸಾರೇಣ ಸುಖಾದ್ಯಸ್ತು' ಆಯಾ ಜೀವರಿಗೆ ಅವರವರ ಕರ್ಮಕ್ಕನುಸಾರಿಯಾಗಿ ಸುಖ-ದುಃಖಾದಿಗಳು ಪ್ರಾಪ್ತವಾಗಲಿ ಎಂಬ ಸ್ವರೂಪವನ್ನು ಹೇಳುವುದಾದರೆ ಆ ಕರ್ಮವೂ ಕೂಡ ಈಶ್ವರಾಧೀನವೆಂದೇ ಹೇಳಬೇಕು. ಈಶ್ವರಾಧೀನವಲ್ಲವೆಂದು ಹೇಳಿದರೆ ಶ್ರುತ್ಯಾದಿವಿರೋಧವು ತಪ್ಪಿದ್ದಲ್ಲ.

ಆ ಕರ್ಮವು ಈಶ್ವರನ ಅಧೀನವೆಂದು ಹೇಳಿದರೆ ವೈಷಮ್ಯನೈರ್ಘೃಣ್ಯದೋಷವು ಬಂದೇ ಬರುತ್ತದೆ. ಆದ್ದರಿಂದ ಜೀವಸ್ವರೂಪದಲ್ಲಿ ಅನಾದಿಯಾದ ಯೋಗ್ಯತೆಯನ್ನು ಅಂಗೀಕಾರ ಮಾಡಲೇಬೇಕು. ಇಲ್ಲದಿದ್ದರೆ ವೈಷಮ್ಯನೈರ್ಘೃಣ್ಯದೋಷವನ್ನು ಎದುರಿಸಲೇ ಬೇಕು.

ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಎರಡನೆಯ ಸೂತ್ರಾರ್ಥವನ್ನು ಹೀಗೆ ಹೇಳುತ್ತಾರೆ - ಪ್ರಥಮಸೃಷ್ಟಿಯಲ್ಲಿ ಕರ್ಮವೇ ಇರುವುದಿಲ್ಲ ಎಂದು ಆಶಂಕೆ ಮಾಡಬಾರದು. ಸಂಸಾರವು ಅನಾದಿಯಾದ್ದರಿಂದ ಕರ್ಮವು ಇರುತ್ತದೆ ಎಂದು.

ಈ ವ್ಯಾಖ್ಯಾನವೂ ಕೂಡ ತಪ್ಪು. ನಾವು ಹೇಳುವಂತೆ ಸೂತ್ರಾರ್ಥವನ್ನು ಹೇಳಲು ಬರುವಾಗ ಸ್ವಕಪೋಲಕಲ್ಪಿತವಾದ ನಿಮ್ಮ ಸೂತ್ರಾರ್ಥವು ಅಯುಕ್ತವಾಗಿದೆ. ಸಂಸಾರವು ಅನಾದಿಯಾಗಿದೆ ಎಂದು ಒಪ್ಪಿ, ಅದಕ್ಕೆ ಅಪೇಕ್ಷಿತವಾದ ಕರ್ಮವು ಪರಮಾತ್ಮನಿಂದ ಸೃಷ್ಟವಾಗಿರುವ ಕಾರಣ ವೈಷಮ್ಯನೈರ್ಘೃಣ್ಯದೋಷವು ಬರುತ್ತದಲ್ಲವೇ? ಎಂಬ ಆಕ್ಷೇಪವನ್ನು ಅವಶ್ಯವಾಗಿ ಪರಿಹಾರ ಮಾಡಲೇಬೇಕು. 'ಅನಾದಿತ್ವಾತ್ ಕರ್ಮಣಶ್ಚ' ಎಂಬ ಭಾಷ್ಯದಲ್ಲಿ ಉದಾಹರಿಸಿದ ಶ್ರುತಿಗೆ ಅನುಸಾರಿಯಾಗಿ ಕರ್ಮವೂ ಕೂಡ ಅನಾದಿಯಾಗಿದೆ ಎಂಬುದಾಗಿ ಎರಡನೆಯ ಸೂತ್ರವು ಹೇಳುತ್ತಿದೆ. ಹೀಗೆ ಅರ್ಥವನ್ನು ಸುಲಭವಾಗಿ ಹೇಳಬಹುದು.

ಮೂರನೆಯ ಸೂತ್ರದ ಅರ್ಥವನ್ನೂ ಕೂಡ ನಾವು ಹೇಳುವಂತೆಯೇ ಹೇಳಲು ಬರುವಾಗ ನಿಮ್ಮ ಅರ್ಥವು ಅಯುಕ್ತವಾಗಿದೆ. ಈಶ್ವರನು ಕರ್ಮವನ್ನು ಅಪೇಕ್ಷಿಸುತ್ತಾನೆಂದು ಹೇಳಿದರೆ ಸ್ವಾತಂತ್ರ್ಯವು ಅನುಪಪನ್ನವಾಗುತ್ತದೆ. ಕರ್ಮಗಳು ಈಶಾಧೀನವಾದ್ದರಿಂದ ಸ್ವಾತಂತ್ರ್ಯವು ಉಪಪನ್ನವಾಗುತ್ತದೆ. ಹಾಗಾದರೆ ಪುನಃ ವೈಷಮ್ಯಾದಿದೋಷಗಳು ಬರುತ್ತದಲ್ಲವೇ? ಎಂದು ಆಕ್ಷೇಪ ಮಾಡಬಾರದು. ತನ್ನ ಅಧೀನವಾದ ಕರ್ಮವನ್ನು ಅಪೇಕ್ಷಿಸಿ ವಿಚಿತ್ರಫಲಪ್ರದನಾಗಿದ್ದಾನೆ ಎಂಬುದಾಗಿ ಶ್ರುತ್ಯಾದಿಗಳಲ್ಲಿ ಹೇಳಿರುವುದರಿಂದ ಇದು ನಮಗೆ ಇಷ್ಟಾಪತ್ತಿಯಾಗಿದೆ. ಹೀಗೆ ಅವಶ್ಯವಾಗಿ ಪರಿಹಾರ ಮಾಡಬೇಕಾದ ಎರಡು ಶಂಕೆಗಳನ್ನು ಪರಿಹಾರ ಮಾಡುವುದಕ್ಕಾಗಿಯೇ ಎರಡನೆಯ ಹಾಗೂ ಮೂರನೆಯ ಸೂತ್ರವು ಹೊರಟಿದೆ ಎನ್ನಲು ಬರುವಾಗ ಪರವಾದಿಗಳು ಹೇಳುವಂತೆ ಸಂಸಾರಾನಾದಿತ್ವವನ್ನು ಉಪಪಾದನೆ ಮಾಡುವುದಕ್ಕಾಗಿ ಮೂರನೆಯ ಸೂತ್ರ ಹೊರಟಿದೆ ಎನ್ನುವುದು ತಪ್ಪು. ಸಂಸಾರ ಅನಾದಿಯೆಂದು ಹೇಳಿದಾಗ ಯಾವುದೇ ಅನುಪಪತ್ತಿ ಶಂಕೆಗೆ ಅವಕಾಶವಿಲ್ಲ.

ಪ್ರಶ್ನೆ - ಪ್ರಥಮಸೂತ್ರದಲ್ಲಿ ವೈಷಮ್ಯನೈರ್ಘೃಣ್ಯೇ ಎಂಬುದಾಗಿ ಪ್ರಥಮಾವಿಭಕ್ತಿಯ ದ್ವಿವಚನವನ್ನು ಪ್ರಯೋಗ ಮಾಡಲಾಗಿದೆ. ಅದಕ್ಕನುಸಾರಿಯಾಗಿ ಮುಂದಿನ ಸೂತ್ರದಲ್ಲಿಯೂ

ಕೂಡ ಪ್ರಥಮಾವಿಭಕ್ತಿ ದ್ವಿವಚನವನ್ನೇ ಪ್ರಯೋಗ ಮಾಡಬೇಕು. ಆದರೆ ಉಪಲಭ್ಯತೇ ಎಂಬುದಾಗಿ ಏಕವಚನವನ್ನು ಪ್ರಯೋಗ ಮಾಡಿದ್ದಾರೆ. ಇದು ಹೇಗೆ ಸರಿ ?

ಉತ್ತರ - ಹೌದು ! ಆದರೆ 'ಸ ಕಾರಯೇತ್ ಪುಣ್ಯಮಥಾಪಿ ಪಾಪಮ್' ಎಂಬುದು ಈ ಸೂತ್ರದ ವಿಷಯವಾಕ್ಯ. ಇಲ್ಲಿ ಪುಣ್ಯಕಾರಯಿತೃತ್ವ ಹಾಗೂ ಪಾಪಕಾರಯಿತೃತ್ವವನ್ನು ಪ್ರತ್ಯೇಕವಾಗಿ ಏಕವಚನ ಪ್ರಯೋಗದಿಂದ ಹೇಳಲಾಗಿದೆ. ವಿಷಯವಾಕ್ಯಕ್ಕೆ ಅನುಸಾರಿಯಾಗಿ 'ಉಪಲಭ್ಯತೇ' ಎಂಬುದಾಗಿ ಸೂತ್ರದಲ್ಲೂ ಕೂಡ ಏಕವಚನವನ್ನೇ ಪ್ರಯೋಗ ಮಾಡಿದ್ದಾರೆ. ಉದಾಹರಣೆ - 'ಆತ್ಮನಿ' ಎಂಬುದಾಗಿ ಮುಂದಿನ ಸೂತ್ರದಲ್ಲಿ ಆತ್ಮಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗ ಮಾಡಲಾಗಿದೆ. ಆದರೂ ಕೂಡ 'ಸರ್ವೋಪೇತಾ ಚ' ಎಂಬ ಸೂತ್ರದಲ್ಲಿ ವಿಷಯವಾಕ್ಯದಲ್ಲಿರುವ ದೇವತಾಶಬ್ದಕ್ಕೆ ಅನುಸಾರಿಯಾಗಿ ಸ್ತ್ರೀಲಿಂಗವನ್ನು ಪ್ರಯೋಗ ಮಾಡಲಾಗಿದೆ. ಅದರಂತೆ ಇಲ್ಲಿಯೂ ಕೂಡ ವಿಷಯವಾಕ್ಯಕ್ಕೆ ಅನುಸಾರಿಯಾಗಿ ವಚನವ್ಯತ್ಯಾಸವನ್ನು ತಿಳಿಯಬೇಕು.

ಅದ್ವೈತಿಗಳ ಪ್ರಕಾರ ಈ ಅಧಿಕರಣವೇ ಅಸಂಗತ. ಅದು ಹೀಗೆ - ಬ್ರಹ್ಮನು ಭ್ರಾಂತನಾಗಿ ಅಥವಾ ಭ್ರಮೆಗೆ ಅಧಿಷ್ಠಾನನಾಗಿ, ಅಥವಾ ಮಾಯಾವಿಯಾಗಿ ಹಿಂದೆ ಪ್ರಸಕ್ತನಾಗಿದ್ದಾನೆ. ಭ್ರಾಂತನಾಗಿದ್ದಾನೆ ಅಥವಾ ಭ್ರಮೆಗೆ ಅಧಿಷ್ಠಾನನಾಗಿದ್ದಾನೆ ಎಂಬೆರಡು ಪಕ್ಷಗಳಲ್ಲಿ ವೈಷಮ್ಯನೈರ್ಘೃಣ್ಯದೋಷ ಶಂಕೆಗೆ ಅವಕಾಶವೇ ಇರುವುದಿಲ್ಲ. ಏಕೆಂದರೆ ಸ್ವಪ್ನದಲ್ಲಿ 'ಅಯಂ ಸುಖೀ' 'ಅಯಂ ದುಃಖೀ' ಎಂಬ ಭ್ರಾಂತಿಯಿರುವವನಿಗೆ, ಅಥವಾ ಭ್ರಾಂತಿಗೆ ವಿಷಯನಾದವನಿಗೆ ವೈಷಮ್ಯಾದಿದೋಷಗಳು ಬರಲು ಸಾಧ್ಯವೇ ಇಲ್ಲ. ಆದ್ದರಿಂದ ಭ್ರಾಂತನಿಗೆ ಅಥವಾ ಭ್ರಮೆಯ ಅಧಿಷ್ಠಾನನಿಗೆ ಈ ವೈಷಮ್ಯಾದಿದೋಷವನ್ನು ಆಶಂಕಿಸುವುದೇ ತಪ್ಪಾಗುತ್ತದೆ.

'ಮಾಯಾವಿ' ಎಂಬ ಪಕ್ಷದಲ್ಲಿ ತನ್ನ ಮಾಯೆಯಿಂದ ಸುಖ ಹಾಗೂ ದುಃಖಗಳನ್ನು ಹೊಂದುವಂತೆ ಮಾಡುವವನಾದ್ದರಿಂದ ವೈಷಮ್ಯಾದಿಶಂಕೆಗೆ ಅವಕಾಶವಿದೆ. ಆದರೆ ಈಶ್ವರನು ಯಾವ ಕರ್ಮವನ್ನು ಅಪೇಕ್ಷಿಸಿ, ಸುಖಾದಿಗಳನ್ನು ನೀಡುತ್ತಾನೋ, ಅಂಥ ಕರ್ಮವೇ ತನ್ನ ಮಾಯೆಯಿಂದ ಕಲ್ಪಿತವಾಗಿದೆ. ಯಾವುದು ತನ್ನ ಮಾಯೆಯಿಂದ ಕಲ್ಪಿತವಾಗಿರುತ್ತದೋ, ಅದು ಮಾಯಾವಿಗೆ ಕಾಣಿಸಲು ಸಾಧ್ಯವಿಲ್ಲ. ಆದ್ದರಿಂದ ಈಶ್ವರನಿಗೂ ಕೂಡ ಕರ್ಮಾದಿಗಳ ಜ್ಞಾನವೇ

ಇಲ್ಲದಂತಾಯಿತು. ಆದ್ದರಿಂದ ಮಾಯಾವಿ ಎಂಬ ಪಕ್ಷವೂ ಕೂಡ ಅಯುಕ್ತವಾಗಿದೆ. ಹೀಗೆ ಅದ್ವೈತಿಗಳಲ್ಲಿ ಈ ಅಧಿಕರಣವೇ ವ್ಯರ್ಥವಾಯಿತು. ಆದ್ದರಿಂದ ಭಾಮತಿಕಾರ ಹೀಗೆ ಹೇಳಿದನು - ಅಭ್ಯುಪೇತ್ಯ ಚ ಸೃಷ್ಟೇಃ ತಾತ್ತ್ವಿಕತ್ವಮಿದಮುಕ್ತಮ್ । ಅನಿರ್ವಾಚ್ಯಾ ತು ಸೃಷ್ಟಿಃ' ಸೃಷ್ಟಿಯು ತಾತ್ತ್ವಿಕವೆಂದು ಈ ಅಧಿಕರಣದಲ್ಲಿ ಹೇಳಿರುವುದು ಕೇವಲ ಅಂಗೀಕಾರ ವಾದ. ಸೃಷ್ಟಿಯು ಅನಿರ್ವಾಚ್ಯವೇ ಆಗಿದೆ ಎಂದು. ಹೀಗೆ ಅದ್ವೈತಿಗಳಿಗೆ ಈ ಅಧಿಕರಣವು ಪ್ರತಿಕೂಲವೇ ಆಗಿದೆ ಹೊರತು, ಅನುಕೂಲವಾಗಿರುವುದಿಲ್ಲ.

**ಇಲ್ಲಿಗೆ ವೈಷಮ್ಯನೈರ್ಘೃಣ್ಯಾಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ, ತತ್ತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು**

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಸರ್ವಧರ್ಮೋಪಪತ್ತ್ಯಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ,
ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ
ವಿಶೇಷವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ
ಮತ್ತು
ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

|| ಹರಿಃ ಓಂ ||

|| ಶ್ರೀವೇದವ್ಯಾಸಾಯ ನಮಃ ||

|| ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ||

|| ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ||

|| ಶ್ರೀಗುರುಭ್ಯೋ ನಮಃ ||

# ಸರ್ವಧರ್ಮೋಪಪತ್ತ್ಯಧಿಕರಣ

## ಬ್ರಹ್ಮಸೂತ್ರ

'ಸರ್ವಧರ್ಮೋಪಪತ್ತೇಶ್ಚ' ಎಂಬ ಸೂತ್ರಕ್ಕೆ ವ್ಯಾಖ್ಯಾನ

**ब्रह्मसूत्रम् – सर्वधर्मोपपत्तेश्च ।।**

ಇಲ್ಲಿಯ ತನಕ ಸಮರ್ಥನೆ ಮಾಡಿದಂತೆ ಬ್ರಹ್ಮನಲ್ಲಿ ಸಕಲ ಸದ್ಗುಣಗಳು ಸಿದ್ಧವಾದವು. ಯಾವುದೇ ದೋಷಗಳು ಅವನಲ್ಲಿ ಇರುವುದಿಲ್ಲ. ಸಕಲ ಗುಣಪರಿಪೂರ್ಣತ್ವದ ಸಮನ್ವಯದಲ್ಲಿ ಯುಕ್ತಿವಿರೋಧವನ್ನೂ ಕೂಡ ಆಕ್ಷೇಪಿಸಬಾರದು.

ಅರ್ಥ -- ಸರ್ವಧರ್ಮೋಪಪತ್ತೇಶ್ಚ = ಗುಣ ಹಾಗೂ ದೋಷಗಳ ಇಲ್ಲದಿರುವಿಕೆ ಎಂಬ ಧರ್ಮಗಳು ಸ್ವಾತಂತ್ರ್ಯವೆಂಬ ಪ್ರವೃತ್ತಿ ನಿಮಿತ್ತದಿಂದ ಪರಮಾತ್ಮನಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಪರಮಾತ್ಮನು ಸಕಲ ಗುಣಪರಿಪೂರ್ಣನಾಗಿದ್ದಾನೆ ಎಂಬ ಸಮನ್ವಯಾಧ್ಯಾಯದ ವಿಷಯದಲ್ಲಿ ಯುಕ್ತಿವಿರೋಧವನ್ನು ಆಕ್ಷೇಪ ಮಾಡಬಾರದು.

|| ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಸರ್ವಧರ್ಮೋಪಪತ್ತ್ಯಧಿಕರಣವು ಸಮಾಪ್ತವಾಯಿತು ||

ಇಲ್ಲಿಗೆ ದ್ವಿತೀಯಾಧ್ಯಾಯದ ಪ್ರಥಮ ಪಾದವು ಸಮಾಪ್ತವಾಯಿತು.

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

ಕೊನೆಯಲ್ಲಿ ಉಳಿದೆಲ್ಲಾ ಗುಣಗಳ ಸಮನ್ವಯ

**ब्रह्मसूत्रभाष्यम् – अवशिष्टैरूपसंहरति –**

**।। सर्वधर्मोपपत्तेश्च ।।११।।**

**गुणाः श्रुताः सुविरुद्धाश्च देवे सन्त्यश्रुता अपि नैवात्र शङ्का ।**
**चिन्त्या अचिन्त्याश्च तथैव दोषाः श्रुताश्च नाङ्गैर्हि तथा प्रतीताः ।।**
**इति सर्वगुणोपपत्तिश्रुतेः ।।११।।**

**।। इति सर्वधर्मोपपत्त्यधिकरणम्**

**।। इति श्रीमदानन्दतीर्थभगवत्पादाचार्यविरचिते**
**ब्रह्मसूत्रभाष्ये द्वितीयस्याध्यायस्य प्रथमः पादः ।।**

ಅನುವಾದ - ಸಂಪೂರ್ಣ ಪ್ರಥಮಾಧ್ಯಾಯದಲ್ಲಿ ಜಗತ್ಕರ್ತೃತ್ವವೇ ಮೊದಲಾದ ಗುಣಗಳನ್ನು ಮಹಾವಿಷ್ಣುವಿನಲ್ಲಿ ಸಮರ್ಥಿಸಲಾಯಿತು. ಇನ್ನು ಉಳಿದ ಅನೇಕ ಗುಣಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಾ ಉಪಸಂಹಾರ ಮಾಡುತ್ತಿದ್ದಾರೆ.

ಕ್ರೀಡಾದಿಗುಣವಿಷ್ಟನಾದ ಶ್ರೀಹರಿಯಲ್ಲಿ ಆಪಾತತಃ ವಿರುದ್ಧವಾದ ಅನೇಕ ಗುಣಗಳು ಶ್ರುತಿಯಲ್ಲಿ ಕೇಳಿಬರುತ್ತಿವೆ. ಲಕ್ಷ್ಮೀದೇವಿ, ಚತುರ್ಮುಖ ಮೊದಲಾದವರಿಗೆ ತಿಳಿದಿರುವ ಮತ್ತು ಅವರಿಗೂ ತಿಳಿಯಲಾಗದ ಗುಣಗಳು ಪರಮಾತ್ಮನಲ್ಲಿವೆ. ಈ ವಿಷಯದಲ್ಲಿ ಸ್ವಲ್ಪವೂ ಸಂದೇಹವಿಲ್ಲ. ನಾವು ಯೋಚನೆ ಮಾಡುವ ದೋಷಗಳು ಪರಮಾತ್ಮನಲ್ಲಿ ಸರ್ವಥಾ ಇರುವುದಿಲ್ಲ. ಹೀಗಿರುವಾಗ ಊಹೆಗೆ ಸಿಗದ ದೋಷಗಳು ಅವನಲ್ಲಿ ಇರಲು ಹೇಗೆ ಸಾಧ್ಯ? ಅನೇಕ ಶ್ರುತಿಗಳಿಂದ ಪರಮಾತ್ಮನಲ್ಲಿ ಉತ್ಪತ್ತಿ ಮೊದಲಾದ ದೋಷಗಳು ಇರುವುದಿಲ್ಲವೆಂದು ತಿಳಿಯುತ್ತಿದೆ. ಆದ್ದರಿಂದ ಪರಮಾತ್ಮನಲ್ಲಿ ಅನಂತ ಕಲ್ಯಾಣಗುಣಪರಿಪೂರ್ಣತ್ವವು ಯುಕ್ತವಾಗುತ್ತದೆ.

ಪ್ರತಿಪದಾರ್ಥ -- ವಿಷ್ಣುವಿನ ಸರ್ವಗುಣಪರಿಪೂರ್ಣತ್ವ ವಿಷಯದಲ್ಲಿ
ಮತ್ತು ಸರ್ವದೋಷರಾಹಿತ್ಯವಿಷಯದಲ್ಲಿ ಯುಕ್ತಿಯ ವಿರೋಧವನ್ನು

ಪರಿಹರಿಸುತ್ತಿದ್ದಾರೆ. ಇದುವರೆಗೂ ಎಲ್ಲಾ ಸೂತ್ರಗಳಿಂದ ಈ ವಿಷಯವನ್ನು ಸಮರ್ಥನೆ ಮಾಡಿದ್ದರಿಂದ ಈ ಸೂತ್ರವೇಕೆ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ - ಅವಶಿಷ್ಟ್ಯ: = ಹಿಂದೆ ಸಮನ್ವಯ ಮಾಡಿದ ಗುಣಗಳಷ್ಟೇ ಅಲ್ಲದೆ ಇನ್ನೂ ಅನೇಕ ಗುಣಗಳನ್ನು, ಉಪಸಂಹರತಿ = ಯುಕ್ತಿವಿರೋಧವನ್ನು ಪರಿಹಾರಮಾಡುವ ಮೂಲಕವಾಗಿ ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದಾರೆ -

ದೇವೇ = ಕ್ರೀಡಾದಿಗುಣವಿಶಿಷ್ಟನಾದ ಶ್ರೀಹರಿಯಲ್ಲಿ, ಸುವಿರುದ್ಧಾಃ = ಲೋಕದದೃಷ್ಟಿಯಲ್ಲಿ ಆಪಾತತಃ ವಿರುದ್ಧವಾದಂತೆ ತೋರುವ, ಗುಣಾಃ = ಗುಣಗಳು, ಶ್ರುತಾಃ = ಶ್ರುತಿಯಲ್ಲಿ ಹೇಳಲ್ಪಟ್ಟಿವೆ, ಅಶ್ರುತಾಃ = ಎಲ್ಲೂ ಕೇಳದ ಲಕ್ಷ್ಮೀ, ಚತುರ್ಮುಖ ಮೊದಲಾದವರಿಂದಲೂ ತಿಳಿಯಲು ಸಾಧ್ಯವಾಗದ, ಗುಣಾಃ = ಗುಣಗಳು, ಸಂತಿ = ಶ್ರೀಹರಿಯಲ್ಲಿವೆ. ಅತ್ರ = ಈ ವಿಷಯದಲ್ಲಿ, ನೈವಾಪಿ ಶಂಕ್ಯಾ = ಸ್ವಲ್ಪವೂ ಸಂದೇಹ ಪಡಬಾರದು. ತಥೈವ = ಹಾಗೆಯೇ, ಚಿಂತ್ಯಾಃ = ನಮ್ಮ ಊಹೆಗೆ ಸಿಲುಕುವ, ಚ = ಮತ್ತು, ಅಚಿಂತ್ಯಾಃ = ಊಹೆಗೆ ನಿಲುಕದ ಗುಣಗಳು ಶ್ರೀಹರಿಯಲ್ಲಿವೆ. ತಥೈವ = ಇದರಂತೆ, ದೋಷಾಃ = ಊಹೆಗೆ ಸಿಗುವ ದೋಷಗಳು ಪರಮಾತ್ಮನಲ್ಲಿ, ಸರ್ವಥಾ = ಇರುವುದಿಲ್ಲ. ನ ಶ್ರುತಾಃ = ಶ್ರುತಿಯಲ್ಲಿ ಎಲ್ಲಿಯೂ ಕೇಳಿ ಬರುತ್ತಿಲ್ಲ. ಅಜ್ಞೈರ್ಹಿ = ಅಜ್ಞಜನರಿಂದ, ತಥಾ = ಹಾಗೆ, ಪ್ರತೀತಾಃ = ಪ್ರತೀತವಾದ, ದೋಷಾಃ = ದೋಷಗಳು, ನ = ಸರ್ವಥಾ ಇರುವುದಿಲ್ಲ. ಇತಿ = ಹೀಗೆ, ಸರ್ವಗುಣೋಪಪತ್ತಿಶ್ರುತೇಃ = ಸಕಲವಿಧವಾದ ಅನಂತಗುಣ-ವಿಶಿಷ್ಟನಾದ ಅನಂತಗುಣಗಳನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿರುವುದರಿಂದ ಪರಮಾತ್ಮನಲ್ಲಿ ಅನಂತಗುಣಪರಿಪೂರ್ಣತ್ವವು ಸಿದ್ಧವಾಯಿತು.

ಇಲ್ಲಿಗೆ ವೈಷಮ್ಯನೈರ್ಘೃಣ್ಯಾಧಿಕರಣದ ಭಾಷ್ಯ ಹಾಗೂ
ಭಾಷ್ಯಾನುವಾದ ಮುಗಿಯಿತು.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ ಬ್ರಹ್ಮಸೂತ್ರಭಾಷ್ಯದ
ಎರಡನೆಯ ಅಧ್ಯಾಯದಲ್ಲಿ ಪ್ರಥಮ ಪಾದವು ಸಮಾಪ್ತವಾಯಿತು.

ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

## ಸತ್ತರ್ಕದೀಪಾವಳಿ

ಸಮಸ್ತಪಾದದ ಉಪಸಂಹಾರ

**सत्तर्कदीपावलिः – अवशिष्टशङ्कोद्धारेण पादार्थमुपसंहरत् सूत्रमुपन्यस्य व्याचष्टे – सर्वधर्मोपपत्तेरित्यादिना ।। चिन्त्या अचिन्त्याश्च गुणाः विष्णौ वेदे सन्तीत्यर्थः । तदुक्तम् –**

**'यदधीना गुणाश्चैव दोषा अपि च सर्वशः ।**
**गुणास्तस्य कथं न स्युः स्युर्दोषाश्च कथं पुनः ।।' इति ।**

**इति श्रीमदानन्दतीर्थभगवत्पादाचार्यकृतब्रह्मसूत्रभाष्यटीकायां**
**सत्तर्कदीपावल्यां श्रीपद्मनाभतीर्थभट्टारकविरचितायां**
**द्वितीयाध्यायस्य प्रथमः पादः ।।**

ಉಳಿದ ಎಲ್ಲಾ ಆಕ್ಷೇಪಗಳನ್ನು ಪರಿಹಾರ ಮಾಡುವ ಮೂಲಕ ಸಮಸ್ತ ಪಾದದ ಪ್ರಮೇಯವನ್ನು ಉಪಸಂಹಾರ ಮಾಡುವ ಮೂಲಕ ಸೂತ್ರವನ್ನು ಪಠಿಸಿ, ವ್ಯಾಖ್ಯಾನ ಮಾಡುತ್ತಿದ್ದಾರೆ. 'ಸರ್ವಧರ್ಮೋಪಪತ್ತೇಶ್ಚ' ಇತ್ಯಾದಿ ಭಾಷ್ಯದಿಂದ. ವಿಷ್ಣುವಿನಲ್ಲಿ ಚಿಂತಿಸಲು ಯೋಗ್ಯವಾದ, ಚಿಂತಿಸಲು ಯೋಗ್ಯವಲ್ಲದ ಅನಂತಗುಣಗಳು ವೇದದಲ್ಲಿ ಇರುತ್ತವೆ. ಇದನ್ನೇ

'ಯದಧೀನಾ ಗುಣಾಶ್ಚೈವ ದೋಷಾ ಅಪಿ ಚ ಸರ್ವಶಃ।
ಗುಣಾಸ್ತಸ್ಯ ಕಥಂ ನ ಸ್ಯುಃ ಸ್ಯುರ್ದೋಷಾಶ್ಚ ಕಥಂ ಪುನಃ॥

ಯಾರ ಅಧೀನವಾಗಿ ಸಕಲಗುಣಗಳು, ಸಕಲ ದೋಷಗಳಿವೆಯೋ, ಅಂಥ ಸಕಲಗುಣಗಳು ಅವನಲ್ಲಿ ಇರದೇ ಇರಲು ಸಾಧ್ಯವೇ? ದೋಷಗಳು ಇರಲು ಹೇಗೆ ಸಾಧ್ಯ ?

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಸರ್ವಧರ್ಮೋಪಪತ್ತ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಇಲ್ಲಿಗೆ ದ್ವಿತಿಯಾಧ್ಯಾಯದ ಪ್ರಥಮಪಾದ ಮುಗಿಯಿತು

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

### ಪರಮಾತ್ಮನಲ್ಲಿ ಅಶ್ರುತ ಅಚಿಂತ್ಯ ಗುಣಗಳು

**तत्वप्रदीपः – सर्वधर्मोपपत्तेश्च ।। वेदे श्रुता गुणा लोके विरुद्धा अपि देवे सन्ति । न च तेषां विरुद्धतया मिथ्यात्वमाशङ्कनीयम् । अश्रुता अपि ततश्चिन्त्याः सन्ति । न च यावन्तश्चिन्तयितुं शक्यन्ते रमादीनां तावन्त एव । किन्तु अचिन्त्याश्च तथैव सन्ति, यथा श्रुताश्चिन्त्याश्च ।**

ವೇದದಲ್ಲಿ ಶ್ರುತವಾದ ಗುಣಗಳು ಲೋಕದೃಷ್ಟಿಯಿಂದ ವಿರುದ್ಧವಾದರೂ ಕೂಡ ಪರಮಾತ್ಮನಲ್ಲಿ ಯುಕ್ತವಾಗುತ್ತವೆ. ವಿರುದ್ಧವಾದ ಆ ಗುಣಗಳನ್ನು ಮಿಥ್ಯಾಭೂತವೆಂದು ಆಶಂಕೆ ಮಾಡಬಾರದು. ಅಶ್ರುತವಾದರೂ ಕೂಡ ಚಿಂತಿಸಲು ಅರ್ಹವಾಗಿವೆ. ರಮಾದಿದೇವತೆಗಳಿಂದ ಚಿಂತಿಸಲು ಯೋಗ್ಯವಾದ ಎಷ್ಟು ಗುಣಗಳಿವೆಯೋ, ಅಷ್ಟು ಗುಣಗಳು ಮಾತ್ರ ಪರಮಾತ್ಮನಲ್ಲಿವೆ ಎಂಬುದಾಗಿ ತಿಳಿಯಬಾರದು. ರಮಾದಿದೇವತೆಗಳಿಂದಲೂ ಕೂಡ ಚಿಂತಿಸಲು ಯೋಗ್ಯವಲ್ಲದ ಅನಂತಗುಣಗಳು ಪರಮಾತ್ಮನಲ್ಲಿವೆ. ಹೇಗೆ ಶ್ರುತವಾದ ಚಿಂತ್ಯವಾದ ಗುಣಗಳಿವೆಯೋ, ಅದರಂತೆ ಅಶ್ರುತವಾದ ಅಚಿಂತ್ಯವಾದ ಗುಣಗಳೂ ಕೂಡ ಪರಮಾತ್ಮನಲ್ಲಿವೆ.

### ದೋಷಲೇಶ ಸ್ಪರ್ಶವೂ ಕೂಡ ನಾರಾಯಣನಲ್ಲಿಲ್ಲ

**तत्वप्रदीपः – न च देवे दोषाः श्रुताः नापि चिन्त्याः सन्ति । किं पुनरचिन्त्याः? अज्ञैर्हि श्रुता इति प्रतीताः, नतु ज्ञानिनाम् इति सर्वगुणोपपत्तिश्रुतेः कयाऽपि विधया दोषलेशस्पर्शानुपपत्तिश्रुतेश्च निखिलगुणगणपरिपूर्णो निर्दोषो नारायणः सर्वकारणमिति सिद्धम् ।**

ಇಂಥ ಪರಮಾತ್ಮನಲ್ಲಿ ಯಾವುದೇ ದೋಷಗಳು ಶ್ರುತವಾಗಿಲ್ಲ. ಚಿಂತಿಸಲು ಯೋಗ್ಯವೂ ಕೂಡ ಆಗಿರುವುದಿಲ್ಲ. ಹೀಗಿರುವಾಗ ಅಶ್ರುತವಾದ ದೋಷಗಳಾಗಲೀ, ಅಚಿಂತ್ಯವಾದ ದೋಷಗಳಾಗಲೀ ಇರಲು ಹೇಗೆ ಸಾಧ್ಯ? ಅಜ್ಞಜನರಿಗೆ ದೋಷಗಳಿವೆ ಎಂದು ಪ್ರತೀತವಾಗಬಹುದು. ಆದರೆ ಜ್ಞಾನಿಜನರಿಗೆ ಅಂಥ ಶ್ರುತವಾದ ದೋಷಗಳು ಯಾವುದೂ ಕೂಡ ಪ್ರತೀತವಾಗುತ್ತಿಲ್ಲ. ಇದಕ್ಕೆ ವಿರುದ್ಧವಾಗಿ ಸಕಲಗುಣಗಳು ಪರಮಾತ್ಮನಲ್ಲಿದೆ ಎಂಬುದಾಗಿ ಜ್ಞಾನಿಜನರಿಂದ ಶ್ರುತವಾಗಿದೆ ಎಂಬುದಾಗಿ ವೇದವು ಹೇಳುತ್ತಿದೆ. ಮತ್ತು ಯಾವುದೇ ವಿಧದಿಂದಲೂ ಕೂಡ ದೋಷಲೇಶದ ಸ್ಪರ್ಶವೂ ಕೂಡ ಪರಮಾತ್ಮನಲ್ಲಿ ಇರುವುದಿಲ್ಲ ಎಂಬುದಾಗಿಯೂ ವೇದವು ಹೇಳುತ್ತಿದೆ. ನಾರಾಯಣನು ನಿರ್ದೋಷಿಯಾಗಿದ್ದಾನೆ. ಆದ್ದರಿಂದಲೇ ಸಕಲಗುಣಪರಿಪೂರ್ಣನಾಗಿದ್ದಾನೆ. ಹಾಗಾಗಿ ಸಮಸ್ತ ಜಗತ್ತಿಗೆ ಕಾರಣನಾಗಿದ್ದಾನೆ ಎಂಬ ಪ್ರಮೇಯವು ಸಿದ್ಧವಾಯಿತು.

### ಅದ್ವೈತಿಗಳ ನಿರಾಕರಣೆ

**तत्वप्रदीपः – यत्तु मन्यन्ते, यद्यपि स्रष्टृत्वादयो धर्मा ब्रह्मणः सन्ति, तथाऽप्यनुपपद्यमानत्वेन मायामया न सत्या इति तदप्येतेन परिहृतम् । प्रमाणदृष्टत्वमेव ह्युपपत्तिः । न ततोऽन्योपपत्तिरन्वेषणीया । उक्ता चोपपत्तिरतः सत्या इत्यभिप्रायः ।।**

**इति सर्वधर्मोपपत्त्यधिकरणम् ।।**

**।। इति तत्वप्रदीपे द्वितीयाध्यायस्य प्रथमः पादः ।।**

ಅದ್ವೈತಿಗಳು ಹೀಗೆ ಹೇಳುತ್ತಾರೆ - ಸ್ರಷ್ಟೃತ್ವಾದಿಧರ್ಮಗಳು ಬ್ರಹ್ಮನಲ್ಲಿವೆ. ಆದರೂ ಕೂಡ ಇವು ಅನುಪಪದ್ಯಮಾನವಾಗಿರುವುದರಿಂದ ಮಾಯಿಕವಾಗಿವೆ. ಅರ್ಥಾತ್ ಸತ್ಯವಾಗಿರುವುದಿಲ್ಲ ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಇದನ್ನೂ ಕೂಡ ಈಗ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಸ್ರಷ್ಟೃತ್ವಾದಿಧರ್ಮಗಳು ಅನೇಕ ಪ್ರಮಾಣಗಳಿಂದ ಪರಮಾತ್ಮನಲ್ಲಿದೆ ಎಂಬುದಾಗಿ ಸಿದ್ಧವಾಗಿದೆ. ಹೀಗೆ ಪ್ರಮಾಣದೃಷ್ಟವಾದದ್ದರಲ್ಲಿ ಮತ್ತೊಂದು ಉಪಪತ್ತಿಯನ್ನು ಅನ್ವೇಷಣೆ

ಮಾಡುವ ಅವಶ್ಯಕತೆಯಿಲ್ಲ. ಈ ವಿಷಯದಲ್ಲಿ ಉಪಪತ್ತಿಯನ್ನು ಹೇಳಿದ್ದಾಗಿದೆ. ಆದ್ದರಿಂದಲೇ ಸ್ರಷ್ಟೃತ್ವಾದಿಧರ್ಮಗಳು ಪರಮಾತ್ಮನಲ್ಲಿ ಸತ್ಯಭೂತವಾಗಿವೆ ಎಂಬುದು ಸಿದ್ಧಾಂತಿಗಳ ಅಭಿಪ್ರಾಯ.

॥ ಇಲ್ಲಿಗೆ ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ ತತ್ತ್ವಪ್ರದೀಪದಲ್ಲಿ ಸರ್ವಧರ್ಮೋಪಪತ್ತ್ಯಧಿಕರಣದ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಇಲ್ಲಿಗೆ ದ್ವಿತೀಯಾಧ್ಯಾಯದ ಪ್ರಥಮ ಪಾದವು ಮುಗಿಯಿತು ॥

ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ

## ತತ್ತ್ವಪ್ರಕಾಶಿಕಾ

### ಕೊನೆಯ ಈ ಅಧಿಕರಣ ಏಕೆ ?

**तत्वप्रकाशिका –**

**सर्वेषां युक्तिविरोधानां परिहृतत्वात्किमुत्तरसूत्रेणेत्यतस्तात्पर्यमाह – अवशिष्टैरिति ।।**

ಎಲ್ಲಾ ಯುಕ್ತಿಗಳ ವಿರೋಧವನ್ನು ಪರಿಹರಿಸಿದ್ದಾಯಿತು. ಪುನಃ ಈ ಸೂತ್ರವೇಕೆ ? ಎಂಬ ಪ್ರಶ್ನೆಗೆ ಉತ್ತರಿಸುವ ಸೂತ್ರದ ತಾತ್ಪರ್ಯವನ್ನು 'ಅವಶಿಷ್ಟೈಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

ವಿವರಣೆ - ಇಲ್ಲಿಯ ತನಕ ಆನಂದ ಮೊದಲಾದ ಗುಣಗಳನ್ನು ಮಹಾವಿಷ್ಣುವಿನಲ್ಲಿ ಸಮರ್ಥಿಸಿ ಯಾವುದೇ ಯುಕ್ತಿಗಳ ವಿರೋಧವಿಲ್ಲವೆಂದು ಸಮರ್ಥಿಸಿದ್ದಾಯಿತು. ಪುನಃ ಈ ಅಧಿಕರಣವು ವ್ಯರ್ಥವಲ್ಲವೆ ? ಎಂಬ ಆಕ್ಷೇಪಕ್ಕೆ 'ಅವಶಿಷ್ಟೈಃ ಉಪಸಂಹರತಿ' ಎಂಬ ಭಾಷ್ಯದ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅದನ್ನು ಟೀಕೆಯಲ್ಲಿ 'ಸರ್ವೇಷಾಂ' ಎಂಬುದಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

## ಆನಂದಾದಿಗುಣಗಳಲ್ಲಿ ವಿರೋಧ ಪರಿಹಾರ

**तत्वप्रकाशिका – विशिष्य प्रतिपादितेभ्यः स्रष्टृत्वादिगुणेभ्योऽवशिष्टैः सवगुणैः प्रतिपादितैरुपसंहरति । किमुक्तं भवति । उक्तावशिष्टान् सर्वगुणान् युक्तिविरोधपरिहारेण समर्थ्य विष्णोः पूर्णगुणत्वं निगमयत्यत्र सूत्रकर्तेत्यर्थः। अत एवात्र विष्णोः पूर्णगुणत्वे युक्तिविरोधपरिहारादस्ति शास्त्रादिसङ्गतिः ।**

ಹಿಂದಿನ ಅಧಿಕರಣಗಳಲ್ಲಿ ವಿಶೇಷವಾಗಿ ಪ್ರತಿಪಾದನೆ ಮಾಡಲ್ಪಟ್ಟ ಸ್ರಷ್ಟೃತ್ವಾದಿಗುಣಗಳನ್ನು ಬಿಟ್ಟು ಉಳಿದ ಆನಂದಾದಿ ಸಕಲಗುಣಗಳಿಂದ ಈ ಪಾದವನ್ನು ಉಪಸಂಹಾರ ಮಾಡುತ್ತಿದ್ದಾರೆ.

ಇಷ್ಟು ಹೇಳಿದಂತಾಯಿತು. ಹಿಂದಿನ ಅಧಿಕರಣದಲ್ಲಿ ಹೇಳದೆ ಇರುವ ಸಕಲಗುಣಗಳಿಗೆ ಯುಕ್ತಿ ವಿರೋಧವನ್ನು ಪರಿಹಾರ ಮಾಡುವ ಮೂಲಕ ವಿಷ್ಣುವಿಗೆ ಪೂರ್ಣಗುಣತ್ವವನ್ನು ಈ ಅಧಿಕರಣದಲ್ಲಿ ಸೂತ್ರಕಾರರು ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದಲೇ ವಿಷ್ಣುವಿನ ಪೂರ್ಣಗುಣತ್ವದಲ್ಲೇ ಯುಕ್ತಿವಿರೋಧವನ್ನು ಈ ಅಧಿಕರಣವು ಪರಿಹಾರ ಮಾಡುತ್ತಿರುವುದರಿಂದ ಶಾಸ್ತ್ರಾದಿಸಂಗತಿಗಳು ಇರುತ್ತವೆ .

ವಿವರಣೆ - ಹಿಂದಿನ ಅಧಿಕರಣದಲ್ಲಿ ಜಗತ್‌ಸ್ರಷ್ಟೃತ್ವವಿಷಯದಲ್ಲಿರುವ ಯುಕ್ತಿವಿರೋಧವನ್ನು ಪರಿಹಾರ ಮಾಡಿದ್ದಾಯಿತು. ಆದರೆ ಆನಂದ ಮೊದಲಾದ ಗುಣಗಳಿಗೆ ಬರುವ ಯುಕ್ತಿಯ ವಿರೋಧವನ್ನು ಆಕ್ಷೇಪ ಮಾಡಿ ಪರಿಹಾರ ಮಾಡಿಲ್ಲ. ಹೀಗೆ ಯಾವ ಗುಣಗಳ ವಿಷಯದಲ್ಲಿ ಯುಕ್ತಿವಿರೋಧವನ್ನು ಪರಿಹಾರ ಮಾಡಿಲ್ಲವೋ ಆ ಎಲ್ಲಾ ವಿರೋಧಗಳ ಪರಿಹಾರವನ್ನು ಈ ಅಧಿಕರಣದಲ್ಲಿ ಸೂತ್ರಕಾರರು ಮಾಡಿ ಸಕಲಗುಣ ಪರಿಪೂರ್ಣತ್ವವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದ ಈ ಅಧಿಕರಣಕ್ಕೆ ಶಾಸ್ತ್ರಾದಿಸಂಗತಿಗಳು ಇರುತ್ತದೆ. ವಿಷ್ಣುವಿಷಯಕವಾದ್ದರಿಂದ ಶಾಸ್ತ್ರಸಂಗತಿಗಳು ಯುಕ್ತಿ ವಿರೋಧ ಪರಿಹಾರ ಇರುವುದರಿಂದ ಅಧ್ಯಾಯಸಂಗತಿ ಮತ್ತು ಪಾದಸಂಗತಿಗಳು ಇರುತ್ತವೆಂದು ತಿಳಿಯಬೇಕು. ಹಿಂದಿನ ಅಧಿಕರಣದಲ್ಲಿ ಜಗತ್ಕಾರಣತ್ವವಿಷಯದಲ್ಲಿರುವ ಯುಕ್ತಿವಿರೋಧವನ್ನು ಪರಿಹಾರ ಮಾಡಿದ ಮೇಲೆ ಬ್ರಹ್ಮಶಬ್ದಾರ್ಥವಾದ ಪೂರ್ಣಗುಣತ್ವದ ವಿಷಯದಲ್ಲಿ ಬರುವ ಯುಕ್ತಿ ವಿರೋಧವನ್ನು ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಆನಂತರ್ಯಸಂಗತಿಯು ಕೂಡ ಇರುತ್ತದೆಂದು ತಿಳಿಯಬೇಕು. (ಭಾವಬೋಧ)

ಸಕಲಗುಣಪರಿಪೂರ್ಣತ್ವವು ಅಧಿಕರಣದ ವಿಷಯ

**तत्वप्रकाशिका – समस्तगुणसम्पूर्णो विष्णुरित्युक्तम् । तस्य च युक्तिविरुद्धत्वे पूर्वाध्यायो बाधितः स्यात् । अतोऽसौ परिहर्तव्यः । विष्णोर्गुणपूर्णत्वं विषयः । युक्तमयुक्तं वेति सन्देहः । पूर्वाद्यायोऽन्यत्रादर्शनं च सन्देहबीजम् ।**

ವಿಷ್ಣುವೇ ಸಕಲಗುಣಪರಿಪೂರ್ಣನಾಗಿದ್ದಾನೆಂದು ಹೇಳಲಾಯಿತು. ಇದಕ್ಕೆ ಯುಕ್ತಿವಿರೋಧವು ಪ್ರಾಪ್ತವಾದರೆ ಪ್ರಥಮಾಧ್ಯಾಯವೇ ಬಾಧಿತವಾಗುತ್ತದೆ. ಆದ್ದರಿಂದ ಇದನ್ನು ಪರಿಹಾರ ಮಾಡಲೇ ಬೇಕು. ಹಾಗಾಗಿ ವಿಷ್ಣುವಿನ ಗುಣಪರಿಪೂರ್ಣತ್ವವು ಅಧಿಕರಣದ ವಿಷಯ. ಯುಕ್ತವೋ ಅಯುಕ್ತವೋ ? ಎಂದು ಸಂದೇಹ. ಪೂರ್ವಾಧ್ಯಾಯದಲ್ಲಿ ಹೇಳಲ್ಪಟ್ಟ ಗುಣಪೂರ್ಣತ್ವ ಹಾಗೂ ಇದು ಬೇರೆ ಕಡೆ ಕಾಣದಿರುವಿಕೆಯು ಸಂದೇಹಬೀಜ.

ಮಹಾವಿಷ್ಣುವು ಸಕಲಗುಣಪರಿಪೂರ್ಣನಲ್ಲವೆಂದು ಪೂರ್ವಪಕ್ಷ

**तत्वप्रकाशिका – न युक्तमिति पूर्वः पक्षः । सर्वचेतनानामपूर्णत्वनियमात् । अस्यापि चेतनत्वेनापूर्णताया अवश्यम्भावित्वात् । अन्यथातिप्रसङ्गदिति प्राप्ते सिद्धान्तयत्सूत्रं पठित्वा व्याचष्टे – सर्वेति ।।**

ವಿಷ್ಣುವಿಗೆ ಸಕಲಗುಣಪರಿಪೂರ್ಣತ್ವವು ಯುಕ್ತವಾಗುವುದಿಲ್ಲ ಎಂಬುದು ಅಧಿಕರಣದ ಪೂರ್ವಪಕ್ಷ. ಏಕೆಂದರೆ ಸಕಲಚೇತನರು ಅಪೂರ್ಣರೇ ಆಗಿರುತ್ತಾರೆಂಬ ನಿಯಮವಿದೆ. ಇವನೂ ಕೂಡ ಚೇತನಾಗಿರುವುದರಿಂದ ಅಪೂರ್ಣನಾಗಿರುತ್ತಾನೆಂದೇ ಅವಶ್ಯವಾಗಿ ಒಪ್ಪಬೇಕು. ಇಲ್ಲದಿದ್ದರೆ ಅತಿಪ್ರಸಂಗವು ಪ್ರಾಪ್ತವಾಗುತ್ತದೆ.

ಈ ಆಕ್ಷೇಪವನ್ನು ನಿರಾಕರಣೆ ಮಾಡುತ್ತಾ ಸಿದ್ಧಾಂತಸ್ಥಾಪಕವಾದ ಸೂತ್ರವನ್ನು ಪಠಿಸಿ 'ಸರ್ವ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

ವಿವರಣೆ - 'ಅನ್ಯಥಾ ಅತಿಪ್ರಸಂಗಾತ್' ಎಂಬ ಟೀಕಾಮಾತಿನ ಅಭಿಪ್ರಾಯ ಹೀಗಿದೆ- ಸಕಲ ಚೇತರಲ್ಲಿ ಸಕಲಗುಣಪರಿಪೂರ್ಣತ್ವವು ಕಾಣಸುತ್ತಿಲ್ಲ. ಎಲ್ಲೂ ಕಾಣಸದ ಈ ಗುಣವನ್ನು ಈಶ್ವರನಲ್ಲಿ ಅಂಗೀಕಾರ ಮಾಡಿದರೆ ಬೇರೆಡೆ ಕಾಣಸದ ಜಡತ್ವ ಅನಿತ್ವಾದಿಗಳನ್ನು

ಕೂಡ ಈಶ್ವರನಲ್ಲಿ ಒಪ್ಪಬೇಕಾಗುತ್ತದೆ. ಅಥವಾ ಸಜಾತೀಯವಾದ ವ್ಯಕ್ತಿಗಳ ನಡುವೆ ಒಂದಕ್ಕೆ ಮಾತ್ರ ವೈಲಕ್ಷಣ್ಯವನ್ನು ಒಪ್ಪಲು ಕಾರಣವಿಲ್ಲವೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ. (ಗುರ್ವರ್ಥದೀಪಿಕಾ)

### ಸ್ವಾತಂತ್ರ್ಯದಿಂದ ಸಕಲಗುಣಪರಿಪೂರ್ಣತ್ವದ ನಿಯಮ

**तत्वप्रकाशिका – नायुक्तं विष्णोः पूर्णत्वम् । तस्य चेतनत्वेऽपि स्वातन्त्र्यादिना सर्वगुणोपपत्तेः । स्वातन्त्र्यादिमतः पूर्णगुणत्वनियमात् ।**

ವಿಷ್ಣುವಿನಲ್ಲಿ ಸಕಲಗುಣಪರಿಪೂರ್ಣತ್ವವು ಅಯುಕ್ತವೇ ಅಲ್ಲ. ಇವನು ಚೇತನನಾಗಿದ್ದರೂ ಕೂಡ ಸ್ವಾತಂತ್ರ್ಯವೆಂಬ ಅಸಾಧಾರಣಧರ್ಮ ಇರುವುದರಿಂದ ಸಕಲಗುಣಪರಿಪೂರ್ಣವುಳ್ಳವನು ಆಗುತ್ತಾನೆ. ಸ್ವಾತಂತ್ರ್ಯಾದಿ ಅಸಾಧಾರಣಧರ್ಮವಿರುವವನಲ್ಲ. ಪೂರ್ಣಗುಣತ್ವವು ನಿಯಮೇನ ಇದ್ದೇ ಇರುತ್ತದೆ.

ವಿವರಣೆ - 'ಯತ್ರ ಚೇತನತ್ವಮ್ ನ ತತ್ರ ಸಕಲಗುಣಪರಿಪೂರ್ಣತ್ವಮ್' ವ್ಯಾಪ್ತಿಯನ್ನು ಪೂರ್ವಪಕ್ಷಕಾರರು ಹೇಳಿದರು. ಅದಕ್ಕೆ ವಿರುದ್ಧವಾಗಿ 'ಯತ್ರ ಸ್ವಾತಂತ್ರ್ಯಮ್ ತತ್ರ ಗುಣಪರಿಪೂರ್ಣತ್ವಂ' ಎಂಬ ವ್ಯಾಪ್ತಿಯನ್ನು ನಾವು ಹೇಳುತ್ತಿದ್ದೇವೆ 'ವಿಷ್ಣುಃ ಸಕಲಗುಣಪರಿಪೂರ್ಣಃ ಸ್ವತಂತ್ರತ್ವಾತ್' ಎಂಬುದಾಗಿ ಅನುಮಾನ ಪ್ರಯೋಗ ಮಾಡಿದರೆ ಅಪ್ರಯೋಜಕಾಶಂಕೆಯನ್ನು ಪೂರ್ವಪಕ್ಷಕಾರರಿಗೆ ಮಾಡಲು ಸಾಧ್ಯವಿಲ್ಲ. ಆದರೆ 'ವಿಷ್ಣುಃ ನ ಗುಣಪರಿಪೂರ್ಣಃ ಚೇತನತ್ವಾತ್' ಎಂದು ಪೂರ್ವಪಕ್ಷಾಕರರು ಅನುಮಾನವನ್ನು ಪ್ರಯೋಗ ಮಾಡಿದರೆ ಚೇತನತ್ವವಿದ್ದರೂ ಗುಣಪರಿಪೂರ್ಣತ್ವವೇ ಇರಲಿ ಎಂದು ನಾವು ಅಪ್ರಯೋಜಕ ಶಂಕೆಯನ್ನು ಮಾಡಿದಾಗ ಅವರಲ್ಲಿ ಉತ್ತರವಿಲ್ಲ.

ಪರಮಾತ್ಮನು ಸರ್ವತಂತ್ರಸ್ವತಂತ್ರನಾಗಿರುವುದರಿಂದ ತನ್ನ ಮಹಿಮೆಗೆ ಪೂರಕವಾದ ಸಾರ್ವಜ್ಞ್ಯಾದಿಗುಣಗಳೆಲ್ಲವನ್ನು ಅಪೇಕ್ಷಿಸುತ್ತಾನೆ. ಮತ್ತು ಅಂಥ ಗುಣಗಳನ್ನು ಹೊಂದಲು ಸ್ವಾತಂತ್ರ್ಯ ಇರುವುದರಿಂದ ಸಮರ್ಥನೂ ಕೂಡ ಆಗಿದ್ದಾನೆ. ಹಾಗಾಗಿ 'ಸಕಲಗುಣ-ಪ್ರಯಜ್ಯತೇ ಸತಿ ಸಮರ್ಥತ್ವಾತ್ ಸಕಲಶುಭಗುಣವಾನ್ ಹರಿಃ' ಎಂಬುದಾಗಿ ಮತ್ತೊಂದು ಯುಕ್ತಿಯನ್ನು ಕೂಡ ಇದರಿಂದ ಸೂಚನೆ ಮಾಡಿದಂತಾಯಿತು. 'ಸರ್ವಧರ್ಮೋಪಪತ್ತೇಶ್ಚ' ಎಂಬ ಸೂತ್ರದಿಂದ ಈ ಯುಕ್ತಿಯು ಸೂಚಿತವಾಗಿದೆ. (ಗುರ್ವರ್ಥದೀಪಿಕಾ)

## ಸಕಲಗುಣಪರಿಪೂರ್ಣತ್ವಕ್ಕೆ ಯುಕ್ತಿಯ ಜೊತೆ ಶ್ರುತಿಯ ಆಧಾರ

**तत्वप्रकाशिका – न केवलं युक्त्या सर्वधर्मोपपत्तिः किं तर्हि 'गुणाः श्रुताः' इति सर्वधर्मोपपादकश्रुतेश्चेति भावः । सुविरुद्धा लोकदृष्ट्या । अश्रुता अपि रमादिचिन्त्यास्तदचिन्त्याश्चेत्यर्थः । अतो विष्णोः सर्वगुणपूर्णत्वे युक्तिविरोधगन्धाभावादुक्तं सर्वमुपपन्नमिति सिद्धम् ।। ३८ ।।**

**।। इति श्रीमदानन्दतीर्थभगवत्पादाचार्यविरचितस्य श्रीमद्ब्रह्मसूत्रभाष्यस्य टीकायां श्रीमज्जयतीर्थमुनिविरचितायां तत्त्वप्रकाशिकायां द्वितीयाध्यायस्य प्रथमः पादः ।। श्रीरस्तु ।।**

ಕೇವಲ ಯುಕ್ತಿಯಿಂದಷ್ಟೇ ಸಕಲಧರ್ಮಗಳು ವಿಷ್ಣುವಿನಲ್ಲಿ ಉಪಪನ್ನವಾಗುತ್ತವೆ ಎಂದಲ್ಲ. 'ಗುಣಾಃ ಶ್ರುತಾಃ' ಎಂಬ ಶ್ರುತಿಪ್ರಮಾಣ ಇರುವುದರಿಂದಲೂ ಕೂಡ ಸಕಲಗುಣಗಳುಳ್ಳವನಾಗುತ್ತಾನೆ. ಹೀಗೆ 'ಸುವಿರುದ್ಧಾಃ' ಎಂಬುದಕ್ಕೆ ಲೋಕದೃಷ್ಟಿಯಿಂದಲೂ ವಿರುದ್ಧವಾದ ಧರ್ಮಗಳು ಎಂದರ್ಥ. 'ಅಶ್ರುತಾಃ' ಎಂಬುದಕ್ಕೆ ನಮ್ಮಿಂದ ಅಶ್ರುತವಾಗಿದ್ದರೂ ಕೂಡ ರಮಾದೇವಿ ಮೊದಲಾದವರಿಂದ ಚಿಂತ್ಯವಾದ ಮತ್ತು ಅಚಿಂತ್ಯವಾದ ಗುಣಗಳು ಇರುತ್ತವೆ ಎಂದರ್ಥ.

ಆದ್ದರಿಂದ ಮಹಾವಿಷ್ಣುವಿನಲ್ಲಿರುವ ಸಕಲಗುಣಪರಿಪೂರ್ಣತ್ವಕ್ಕೆ ಯುಕ್ತಿವಿರೋಧದ ಗಂಧವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಸಮರ್ಥನೆ ಮಾಡಿದ ಸಕಲಗುಣ ಪರಿಪೂರ್ಣತ್ವವು ಉಪಪನ್ನವಾಯಿತು.

ವಿವರಣೆ - ಭಾಷ್ಯದಲ್ಲಿ 'ಗುಣಾಃ ಶ್ರುತಾಃ' ಇತ್ಯಾದಿಯಾಗಿ ಶ್ರುತಿಯನ್ನು ಉಲ್ಲೇಖ ಮಾಡಲಿಲ್ಲ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು -

ಲೋಕದೃಷ್ಟಿಯಿಂದ ವಿರುದ್ಧವಾದ ಗುಣಗಳು ಭಗವಂತನಲ್ಲಿ ಅವಿರುದ್ಧವಾಗಿವೆ. ಇದರಂತೆ ವೇದದಲ್ಲಿ ತಿಳಿಸದೆ ಇರುವ ಗುಣಗಳು ಭಗವಂತನಲ್ಲಿ ಇರುತ್ತವೆ. ವಾಸ್ತವಿಕವಾಗಿ ಅನುಕ್ತಂ ಪಂಚಭಿರ್ವೇದ್ಯೈಃ ನ ವಸ್ತು ಅಸ್ತಿ' ಎಂಬ ಮಾತಿನಂತೆ ವೇದದಲ್ಲಿ ಹೇಳದಿರುವ ವಿಚಾರವೇ ಇರುವುದಿಲ್ಲ. ಆದ್ದರಿಂದ 'ಶ್ರುತಾಃ' ಎಂದು ಹೇಳುವುದು ಹೇಗೆ ಸಾಧ್ಯ ? ಎಂಬುದಕ್ಕೆ ಸಾಮಾನ್ಯವಾಗಿ ಶ್ರುತವಾಗಿದ್ದರೂ ವಿಶೇಷವಾಗಿ ಶ್ರುತವಾಗಿರುವುದಿಲ್ಲ ಎಂದರ್ಥ. ಈ ಶ್ರುತವಾಗದ ಗುಣಗಳು ರಮಾದೇವಿ ಚತುರ್ಮುಖ ಮೊದಲಾದವರಿಂದ

ಚಿಂತ್ಯವಾದದ್ದು ಇವೆ. ಅಚಿಂತ್ಯವಾದದ್ದು ಇರುತ್ತವೆ. ಚತುರ್ಮುಖನು ಎಷ್ಟು ಗುಣಗಳನ್ನು ಚಿಂತಿಸುತ್ತಾನೋ ಅದಕ್ಕಿಂತ ಹೆಚ್ಚಿನ ಗುಣಗಳು ಪರಮಾತ್ಮನಲ್ಲಿದೆ. ಚತುರ್ಮುಖನಿಗಿಂತ ಹೆಚ್ಚುಗುಣಗಳನ್ನು ರಮಾದೇವಿಯು ಚಿಂತಿಸುತ್ತಾಳೆ. ಅದಕ್ಕಿಂತ ಹೆಚ್ಚಿನ ಗುಣಗಳು ಭಗವಂತನಲ್ಲಿದೆ. ಎಂಬುದಷ್ಟೇ ಇದರ ಅಭಿಪ್ರಾಯ.

ಇಲ್ಲಿಗೆ ಸರ್ವಧರ್ಮೋಪಪತ್ತ್ಯಧಿಕರಣವು ಮುಗಿಯಿತು

ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ಬ್ರಹ್ಮಸೂತ್ರಭಾಷ್ಯದ ಟೀಕೆಗೆ ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ರಚಿತವಾದ ತತ್ತ್ವಪ್ರಕಾಶಿಕೆಯಲ್ಲಿ ಎರಡನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

### ಸಕಲಗುಣಗಳ ಜೊತೆ ಪಾದದ ಉಪಸಂಹಾರ

**भावदीपः** – ॥ सर्वधर्मोपपत्तेश्च ॥ ३८ ॥ सर्वेषामिति ॥

स्मृतियुक्तिश्रुतिगुणयुक्तयो बहुयुक्तयः ।
एवं चतुर्विधा नैव विरुध्यन्तेऽन्वयं प्रति ॥ इति ॥

समयपादीयानुभाष्योक्तरीत्या सर्वयुक्तिविरोधानामित्यर्थः । एतद्विवेकश्चैतत्पादान्ते चन्द्रिकायां स्पष्टः । प्रतिपादितस्यैवोपसंहार इत्यतः – **प्रतिपादितैरिति** ।। आद्याध्यायेऽनन्तशब्दसमन्वयेनेति भावः ।

'ಸರ್ವೇಷಾಂ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ಸ್ಮೃತಿಯುಕ್ತಿಶ್ರುತಿಗುಣಯುಕ್ತಯೋ ಬಹುಯುಕ್ತಯಃ । ಏವಂ ಚತುರ್ವಿಧಾ ನೈವ ವಿರುಧ್ಯಂತೇಽನ್ವಯಂ ಪ್ರತಿ' ಸ್ಮೃತಿವಿರೋಧ, ಯುಕ್ತಿವಿರೋಧ, ಶ್ರುತಿವಿರೋಧ, ಶ್ರುತಿಸಹಿತವಾದ ಯುಕ್ತಿವಿರೋಧ, ಹೀಗೆ ನಾಲ್ಕು ಬಗೆಯ

## ಸಕಲಗುಣಪರಿಪೂರ್ಣತ್ವಕ್ಕೆ ಯುಕ್ತಿಯ ಜೊತೆ ಶ್ರುತಿಯ ಆಧಾರ

**तत्वप्रकाशिका** – न केवलं युक्त्या सर्वधर्मोपपत्तिः किं तर्हि 'गुणाः श्रुताः' इति सर्वधर्मोपपादकश्रुतेश्चेति भावः । सुविरुद्धा लोकदृष्ट्या । अश्रुता अपि रमादिचिन्त्यास्तदचिन्त्याश्चेत्यर्थः । अतो विष्णोः सर्वगुणपूर्णत्वे युक्तिविरोधगन्धाभावादुक्तं सर्वमुपपन्नमिति सिद्धम् ।। ३८ ।।

।। इति श्रीमदानन्दतीर्थभगवत्पादाचार्यविरचितस्य श्रीमद्ब्रह्मसूत्रभाष्यस्य टीकायां श्रीमज्जयतीर्थमुनिविरचितायां तत्त्वप्रकाशिकायां द्वितीयाध्यायस्य प्रथमः पादः ।। श्रीरस्तु ।।

ಕೇವಲ ಯುಕ್ತಿಯಿಂದಷ್ಟೇ ಸಕಲಧರ್ಮಗಳು ವಿಷ್ಣುವಿನಲ್ಲಿ ಉಪಪನ್ನವಾಗುತ್ತವೆ ಎಂದಲ್ಲ. 'ಗುಣಾಃ ಶ್ರುತಾಃ' ಎಂಬ ಶ್ರುತಿಪ್ರಮಾಣ ಇರುವುದರಿಂದಲೂ ಕೂಡ ಸಕಲಗುಣಗಳುಳ್ಳವನಾಗುತ್ತಾನೆ. ಹೀಗೆ 'ಸುವಿರುದ್ಧಾಃ' ಎಂಬುದಕ್ಕೆ ಲೋಕದೃಷ್ಟಿಯಿಂದಲೂ ವಿರುದ್ಧವಾದ ಧರ್ಮಗಳು ಎಂದರ್ಥ. 'ಅಶ್ರುತಾಃ' ಎಂಬುದಕ್ಕೆ ನಮ್ಮಿಂದ ಅಶ್ರುತವಾಗಿದ್ದರೂ ಕೂಡ ರಮಾದೇವಿ ಮೊದಲಾದವರಿಂದ ಚಿಂತ್ಯವಾದ ಮತ್ತು ಅಚಿಂತ್ಯವಾದ ಗುಣಗಳು ಇರುತ್ತವೆ ಎಂದರ್ಥ.

ಆದ್ದರಿಂದ ಮಹಾವಿಷ್ಣುವಿನಲ್ಲಿರುವ ಸಕಲಗುಣಪರಿಪೂರ್ಣತ್ವಕ್ಕೆ ಯುಕ್ತಿವಿರೋಧದ ಗಂಧವೂ ಕೂಡ ಇರುವುದಿಲ್ಲ. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ಸಮರ್ಥನೆ ಮಾಡಿದ ಸಕಲಗುಣ ಪರಿಪೂರ್ಣತ್ವವು ಉಪಪನ್ನವಾಯಿತು.

ವಿವರಣೆ - ಭಾಷ್ಯದಲ್ಲಿ 'ಗುಣಾಃ ಶ್ರುತಾಃ' ಇತ್ಯಾದಿಯಾಗಿ ಶ್ರುತಿಯನ್ನು ಉಲ್ಲೇಖ ಮಾಡಲಿಲ್ಲ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು -

ಲೋಕದೃಷ್ಟಿಯಿಂದ ವಿರುದ್ಧವಾದ ಗುಣಗಳು ಭಗವಂತನಲ್ಲಿ ಅವಿರುದ್ಧವಾಗಿವೆ. ಇದರಂತೆ ವೇದದಲ್ಲಿ ತಿಳಿಸದೆ ಇರುವ ಗುಣಗಳು ಭಗವಂತನಲ್ಲಿ ಇರುತ್ತವೆ. ವಾಸ್ತವಿಕವಾಗಿ ಅನುಕ್ತಂ ಪಂಚಭಿರ್ವೇದ್ಯೈಃ ನ ವಸ್ತು ಅಸ್ತಿ' ಎಂಬ ಮಾತಿನಂತೆ ವೇದದಲ್ಲಿ ಹೇಳದಿರುವ ವಿಚಾರವೇ ಇರುವುದಿಲ್ಲ. ಆದ್ದರಿಂದ 'ಶ್ರುತಾಃ' ಎಂದು ಹೇಳುವುದು ಹೇಗೆ ಸಾಧ್ಯ ? ಎಂಬುದಕ್ಕೆ ಸಾಮಾನ್ಯವಾಗಿ ಶ್ರುತವಾಗಿದ್ದರೂ ವಿಶೇಷವಾಗಿ ಶ್ರುತವಾಗಿರುವುದಿಲ್ಲ ಎಂದರ್ಥ. ಈ ಶ್ರುತವಾಗದ ಗುಣಗಳು ರಮಾದೇವಿ ಚತುರ್ಮುಖ ಮೊದಲಾದವರಿಂದ

ಚಿಂತ್ಯವಾದದ್ದು ಇವೆ. ಅಚಿಂತ್ಯವಾದದ್ದು ಇರುತ್ತವೆ. ಚತುರ್ಮುಖನು ಎಷ್ಟು ಗುಣಗಳನ್ನು ಚಿಂತಿಸುತ್ತಾನೋ ಅದಕ್ಕಿಂತ ಹೆಚ್ಚಿನ ಗುಣಗಳು ಪರಮಾತ್ಮನಲ್ಲಿದೆ. ಚತುರ್ಮುಖನಿಗಿಂತ ಹೆಚ್ಚುಗುಣಗಳನ್ನು ರಮಾದೇವಿಯು ಚಿಂತಿಸುತ್ತಾಳೆ. ಅದಕ್ಕಿಂತ ಹೆಚ್ಚಿನ ಗುಣಗಳು ಭಗವಂತನಲ್ಲಿದೆ. ಎಂಬುದಷ್ಟೇ ಇದರ ಅಭಿಪ್ರಾಯ.

ಇಲ್ಲಿಗೆ ಸರ್ವಧರ್ಮೋಪಪತ್ತ್ಯಧಿಕರಣವು ಮುಗಿಯಿತು

**ಇಲ್ಲಿಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ಬ್ರಹ್ಮಸೂತ್ರಭಾಷ್ಯದ ಟೀಕೆಗೆ ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ರಚಿತವಾದ ತತ್ತ್ವಪ್ರಕಾಶಿಕೆಯಲ್ಲಿ ಎರಡನೆಯ ಅಧ್ಯಾಯದ ಮೊದಲನೆಯ ಪಾದವು ಸಮಾಪ್ತವಾಯಿತು.**

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ
# ಭಾವದೀಪ

**ಸಕಲಗುಣಗಳ ಜೊತೆ ಪಾದದ ಉಪಸಂಹಾರ**

**भावदीपः –** ॥ सर्वधर्मोपपत्तेश्च ॥ ३८ ॥ सर्वेषामिति॥

स्मृतियुक्तिश्रुतिगुणयुक्तयो बह्वयुक्तयः।
एवं चतुर्विधा नैव विरुध्यन्तेऽन्वयं प्रति॥ इति ॥

समयपादीयानुभाष्योक्तरीत्या सर्वयुक्तिविरोधानामित्यर्थः। एतद्विवेकश्चैतत्पादान्ते चन्द्रिकायां स्पष्टः। प्रतिपादितस्यैवोपसंहार इत्यतः– **प्रतिपादितैरिति।।** आद्याध्यायेऽनन्तशब्दसमन्वयेनेति भावः।

'ಸರ್ವೇಷಾಂ' ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ಸ್ಮೃತಿಯುಕ್ತಿಶ್ರುತಿಗುಣಯುಕ್ತಯೋ ಬಹುಯುಕ್ತಯಃ । ಏವಂ ಚತುರ್ವಿಧಾ ನೈವ ವಿರುಧ್ಯಂತೇಽನ್ವಯಂ ಪ್ರತಿ' ಸ್ಮೃತಿವಿರೋಧ, ಯುಕ್ತಿವಿರೋಧ, ಶ್ರುತಿವಿರೋಧ, ಶ್ರುತಿಸಹಿತವಾದ ಯುಕ್ತಿವಿರೋಧ, ಹೀಗೆ ನಾಲ್ಕು ಬಗೆಯ

ವಿರೋಧಗಳು ಸಮನ್ವಯಕ್ಕೆ ವಿರೋಧಿಗಳಾಗುವುದಿಲ್ಲ ಎಂಬುದಾಗಿ ಸಮಯಪಾದದ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ನಾಲ್ಕುಬಗೆಯ ಯುಕ್ತಿವಿರೋಧಗಳನ್ನು ಇಲ್ಲಿ ಸರ್ವಪದದಿಂದ ವಿವಕ್ಷಿಸಬೇಕು. ಇವುಗಳಲ್ಲಿರುವ ಪರಸ್ಪರವೈಲಕ್ಷಣ್ಯವನ್ನು ಈ ಪಾದದ ತಾತ್ಪರ್ಯಚಂದ್ರಿಕೆಯ ಕೊನೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಪ್ರತಿಪಾದನೆ ಮಾಡಿದವುಗಳನ್ನೇ ಉಪಸಂಹಾರ ಮಾಡಿದಂತಾಗುತ್ತದಲ್ಲವೇ ? ಎಂಬ ಪ್ರಶ್ನೆಗೆ 'ಪ್ರತಿಪಾದಿತೈಃ' ಎಂಬುದರಿಂದ ಉತ್ತರಿಸಿದ್ದಾರೆ. ಪ್ರಥಮಾಧ್ಯಾಯದಲ್ಲಿ ಅನಂತಶಬ್ದಗಳನ್ನು ಸಮನ್ವಯ ಮಾಡಿರುವುದರಿಂದ ಎಂದಭಿಪ್ರಾಯ.

**ವಿವರಣೆ** – ಎಲ್ಲಾ ಯುಕ್ತಿವಿರೋಧಗಳನ್ನೂ ಈಗಾಗಲೇ ಪರಿಹಾರ ಮಾಡಿರುವುದರಿಂದ ಮುಂದಿನ ಸೂತ್ರಗಳೇಕೆ? ಎಂಬುದಾಗಿ ಟೀಕೆಯಲ್ಲಿ ಹೇಳಿದ್ದಾರೆ. ಎಲ್ಲಾ ಬಗೆಯ ಯುಕ್ತಿಗಳೆಂದರೆ ನಾಕು ಬಗೆಯ ವಿರೋಧಗಳನ್ನಷ್ಟೇ ವಿವಕ್ಷಿಸಬೇಕು ಎಂಬುದನ್ನು ತಿಳಿಯಬೇಕು.

ಟೀಕೆಯಲ್ಲಿ ಹಿಂದಿನ ಅಧಿಕರಣಗಳಲ್ಲಿ ಯಾವ ಸ್ರಷ್ಟೃತ್ವಾದಿ ಗುಣಗಳನ್ನು ಪ್ರತಿಪಾದನೆ ಮಾಡಿದರೋ ಅವುಗಳ ಜೊತೆ ಇನ್ನೂ ಉಳಿದ ಆನಂದಾದಿ ಸಕಲಗುಣಗಳಿಂದ ಈ ಪಾದವನ್ನು ಉಪಸಂಹಾರ ಮಾಡುತ್ತಿದ್ದಾರೆಂದು ಹೇಳಿದ್ದಾರೆ. ಆದರೆ ಆ ಆನಂದಾದಿ-ಗುಣಗಳನ್ನು ಪ್ರತಿಪಾದನೆ ಮಾಡದೇ ಉಪಸಂಹಾರ ಮಾಡುವುದು ಹೇಗೆ ಸಾಧ್ಯ ?

ಪ್ರಥಮಾಧ್ಯಾಯದಲ್ಲಿ ಅನಂತಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವುದರ ಮೂಲಕ ಅನಂತಗುಣಗಳನ್ನು ಪ್ರತಿಪಾದನೆ ಮಾಡಿದ್ದಾಗಿದೆ. ಅವುಗಳಲ್ಲೇ ಕೆಲವುಗುಣಗಳನ್ನು ಮಾತ್ರ ವಿಶಿಷ್ಟವಾಗಿ ಈ ಹಿಂದಿನ ಅಧಿಕರಣಗಳಿಂದ ಪ್ರತಿಪಾದನೆ ಮಾಡಲಾಯಿತು. ಉಳಿದ ಗುಣಗಳಲ್ಲೂ ಕೂಡ ಸಮಾನನ್ಯಾಯದಿಂದ ಯಾವ ಯುಕ್ತಿವಿರೋಧವು ಪರಿಹಾರ-ವಾಗುತ್ತದೋ ಅವುಗಳನ್ನು ಕೂಡ ಪರಿಹಾರ ಮಾಡಿ ಅಂತಹ ಉಳಿದೆಲ್ಲಾ ಆನಂದಾದಿಗುಣಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಈ ಅಧಿಕರಣವು ಸಮರ್ಥನೆ ಮಾಡುತ್ತಿದೆ.

ಈ ಅಧಿಕರಣವು ಗುಣೋಪಸಂಹಾರ ಮಾಡುತ್ತಿದೆ.

**भावदीपः** – कथं गुणानामुपसंहारे करणत्वं कथं चास्योपसंहाररूपत्वे न्यायशास्त्रे अध्यायपादयोश्चान्तर्भाव इति भावेन पृच्छति – **किमुक्तं भवतीति** ।। भावार्थमाह– **उक्तेति** ।। विरोधनिरासेन स्थापितेत्यर्थः ।

